# ಕನ್ನಡ ಜೈನ ಹಾಡುಗಳು:

## ಸಾಂಸ್ಕೃತಿಕ ಅಧ್ಯಯನ

ಪಿಹೆಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ




ಸಂಶೋಧಕರು

ರಮೇಶ ಕೆ.

ಮಾರ್ಗದರ್ಶಕರು

ಡಾ. ಕೆ. ರವೀಂದ್ರನಾಥ







ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೩

# ಕನ್ನಡ ಜೈನ ಹಾಡುಗಳು : ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
**ರಮೇಶ ಕೆ.**

ಮಾರ್ಗದರ್ಶಕರು
**ಡಾ. ಕೆ. ರವೀಂದ್ರನಾಥ**
ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ



**ಹಸ್ತಪ್ರತಿಶಾಸ್ತ್ರ ವಿಭಾಗ**
**ಭಾಷಾ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ ೫೮೩ ೨೭೬**

**೨೦೧೩**

ಡಾ. ಕೆ.ರವೀಂದ್ರನಾಥ
ಮಾರ್ಗದರ್ಶಕರು

ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ರಮೇಶ ಕೆ.** ಇವರು **ಕನ್ನಡ ಜೈನ ಹಾಡುಗಳು : ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧದ ಸಮಗ್ರ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರೆ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 31/7/2013

ಮಾರ್ಗದರ್ಶಕರು
(ಡಾ. ಕೆ. ರವೀಂದ್ರನಾಥ)

## ಸಂಶೋಧಕರ ಪ್ರಮಾಣ ಪತ್ರ

ಕನ್ನಡ ಜೈನ ಹಾಡುಗಳು : ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಕೆ. ರವೀಂದ್ರನಾಥ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನ ಮಹಾಪ್ರಬಂಧವನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

(ರಮೇಶ ಕೆ.)

ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಹಾಗೂ ಸ್ವರೂಪ

### ಪ್ರವೇಶ

"ಜಿನಧರ್ಮಾ ವಾಸಮಾದತ್ತಮಳವಿನಯದಾಗಾರಮಾದತ್ತು ಪದ್ಮಾ
ಸನನಿರ್ಪಾ ಪದ್ಮಮಾದತ್ತತಿವಿಶದ ಯಶೋಗಾಧಮಮಾದತ್ತು ವಿದ್ಯಾ
ಧನ ಜನ್ಮಸ್ಥಾನಮಾದತ್ತಸಮ ತರಳ ಗಂಭೀರ ಸಸೋಹಮಾದ
ತ್ತೆನಿಸಲ್ಕಿಂತುಳ್ಳ ನಾನಾ ಮಹಿಮೆಯೊಳೆಸೆಗುಂ ಚಾರು ಕರ್ನಾಟದೇಶಂ"[೧]

೧೫ನೇ ಶತಮಾನದ ಈ ಶಾಸನೋಕ್ತ ಪದ್ಯ ಕರ್ನಾಟಕದಲ್ಲಿ ಜೈನಧರ್ಮದ ಪ್ರಭಾವ, ಪ್ರೇರಣೆ ಎಷ್ಟೆಂಬುದನ್ನು ತಿಳಿಯಲು ಮಹತ್ವದ ದಾಖಲೆಯೆನಿಸಿದೆ. ಗಂಗರಾಜರು ಮೊದಲು ಮಾಡಿ, ಹೊಯ್ಸಳರು, ರಾಷ್ಟ್ರಕೂಟರು, ಚಾಲುಕ್ಯರು, ಕಲಚೂರಿಗಳು, ವಿಜಯನಗರ ಅರಸರ ಕಾಲದವರೆಗೆ ಜೈನಧರ್ಮ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಹೀಗಾಗಿ ಕರ್ನಾಟಕ ಮಾತ್ರವಲ್ಲದೇ ಪ್ರಾಚೀನ ಭಾರತದ ಸಾಂಸ್ಕೃತಿಕ ಇತಿಹಾಸಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಧರ್ಮ, ಸಾಹಿತ್ಯ, ಕಲೆ, ವಾಸ್ತುಶಿಲ್ಪ ಮುಂತಾದ ಕ್ಷೇತ್ರಗಳಿಗೆ ಜೈನರ ಕೊಡುಗೆ ಶ್ರೀಮಂತವಾದುದು. ವಿಶೇಷವಾಗಿ ಆತ್ಮವಿದ್ಯೆ, ಕರ್ಮವಿದ್ಯೆ, ಲೋಕವಿದ್ಯೆ, ಆಚಾರವಿದ್ಯೆಯೆಂಬ ನಾಲ್ಕು ಅಂಗಗಳಲ್ಲಿ ಬೆಳೆದುಬಂದ ಜೈನಧರ್ಮ ಅಹಿಂಸೆಯನ್ನೆ ತನ್ನ ಮೂಲ ಸ್ಥಾಯೀ ಗುಣವಾಗಿ ರೂಪಿಸಿಕೊಂಡಿತು. ಸೃಷ್ಟಿಕರ್ಮದ ವಿವಿಧ ಧರ್ಮಶಾಸ್ತ್ರಗಳು ಮತ್ತು ಆ ಧರ್ಮದ ಸಿದ್ಧಾಂತ ಕೃತಿಗಳು ಜೈನ ಆಗಮ ಸಾಹಿತ್ಯದಲ್ಲಿ ಹೇರಳವಾಗಿ ರಚನೆಗೊಂಡಿವೆ. ಈಗಾಗಲೇ ಭಾರತೀಯ ನೆಲೆಯಲ್ಲಿ ಮತ್ತು ಕರ್ನಾಟಕದ ನೆಲದಲ್ಲಿ ಈ ಧರ್ಮ ಬೆಳೆದುಬಂದ ಇತಿಹಾಸವನ್ನು ಅನೇಕ ವಿದ್ವಾಂಸರು ಅಧ್ಯಯನ ಮಾಡಿದ್ದಾರೆ. ವಿದ್ವಾಂಸರ ಪ್ರಕಾರ "ಜೈನಧರ್ಮವೂ ಕ್ರಿ.ಶ.ಪೂರ್ವ ೨೯೨ರ ಹೊತ್ತಿಗೆ ಕರ್ನಾಟಕದಲ್ಲಿ ಕಾಲಿಟ್ಟು, ರಾಜಾಶ್ರಯವನ್ನು ಪಡೆದು, ಸುಮಾರು ೧೨ನೇ ಶತಮಾನದವರೆಗೆ ಶ್ರೇಯಾಭಿವೃದ್ಧಿಯನ್ನು ಸಾಧಿಸಿತು. ನಂತರ ದಿನಗಳಲ್ಲಿ ರಾಜಾಶ್ರಯ ತಪ್ಪಿದಾದರೂ ಜೈನರ ಧಾರ್ಮಿಕ ಚಟುವಟಿಕೆಗಳು ನಿರಂತರವಾಗಿ ನಡೆದುಕೊಂಡು ಬಂದವು."[೨]

ಜೈನ ಕವಿಗಳ ಸಾಹಿತ್ಯವನ್ನು ಕುರಿತು ಈಗಾಗಲೇ ಅಧ್ಯಯನಗಳು ನಡೆದಿವೆ. ಅದೇ ರೀತಿ ಕರ್ನಾಟಕದಲ್ಲಿ ಜೈನ ಶಾಸನಗಳು ಹೇರಳವಾಗಿ ರಚನೆಯಾಗಿವೆ. ಈ ಶಾಸನಗಳನ್ನು ಕುರಿತು ಬಿಡಿ ಬಿಡಿಯಾಗಿ ಇಲ್ಲವೇ

ಇಡಿಯಾಗಿ ಸಂಪಾದನೆ ಮತ್ತು ಅಧ್ಯಯನಗಳು ನಡೆದಿವೆ. ವಿಶೇಷವಾಗಿ 'ಎಪಿಗ್ರಾಫಿಯ ಕರ್ನಾಟಿಕಾ' ಹೆಸರಿನ ಶ್ರವಣಬೆಳಗೊಳ ಶಾಸನ ಸಂಪುಟ ಪ್ರಕಟವಾಗಿರುವುದನ್ನು ಎತ್ತಿ ಹೇಳಬಹುದು. ಒಂದರ್ಥದಲ್ಲಿ ಶ್ರವಣಬೆಳಗೊಳದ ಶಾಸನಗಳೆಂದರೆ ಕನ್ನಡ ಲಿಪಿಶಾಸ್ತ್ರದ ಪ್ರಯೋಗಶಾಲೆ. ಅಂದರೆ ಆರಂಭದಿಂದ ಹಿಡಿದು ವಿಜಯನಗರ ಕಾಲದವರೆಗಿನ ಎಲ್ಲ ಶಾಸನಗಳು ಶ್ರವಣಬೆಳಗೊಳದಲ್ಲಿ ಇರುವುದನ್ನು ಗಮನಿಸಬಹುದು. ಹೀಗಾಗಿ ಕರ್ನಾಟಕ ಜೈನ ಶಾಸನಗಳು ಎಂಬ ಸಮಗ್ರ ಅಧ್ಯಯನದ ಕಡೆಗೆ ವಿದ್ವಾಂಸರು ಗಮನಹರಿಸಿದ್ದಾರೆ.

ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದಂತೆ ಕರ್ನಾಟಕ ಜೈನ ಶಿಲ್ಪಗಳ ಹೆಸರಿನ ಪ್ರತ್ಯೇಕ ಅಧ್ಯಯನದ ಅಗತ್ಯವಿದೆ. ಅದರ ಮುನ್ಸೂಚನೆಯೆಂಬಂತೆ ಹಲವು ಕೆಲವು ವಿದ್ವಾಂಸರು ಜೈನ ಶಿಲ್ಪಕಲೆ, ಕಲೆಯ ಸ್ವರೂಪ, ವಾಸ್ತುಕಲೆ, ಮೂರ್ತಿಕಲೆ, ಚಿತ್ರಕಲೆ ಮುಂತಾಗಿ ಅಧ್ಯಯನ ಮಾಡಿದ್ದಾರೆ. ಇನ್ನೂ ಅಧ್ಯಯನ ಮಾಡುವ ಅವಕಾಶಗಳು ಆ ಕ್ಷೇತ್ರದಲ್ಲಿರುವುದನ್ನು ಕಡೆಗಣಿಸುವಂತೆ ಇಲ್ಲ. ಕರ್ನಾಟಕ ಜೈನಸಂಸ್ಕೃತಿಗೆ ಕಾವ್ಯ, ಶಾಸನ, ಆಕರಗಳಾದಂತೆ ಜನಪದ ಅಧ್ಯಯನಕ್ಕೆ ಸಂಬಂಧಿಸಿದ ಹಾಗೂ ಶಿಲ್ಪಗಳು ಜೈನ ಜನಪದ ಸಾಹಿತ್ಯ ಹೆಸರಿನ ಕೃತಿಗಳು ರಚನೆಯಾಗಿವೆ. ಅಂದರೆ ಗೀತೆಗಳು, ಕಥೆಗಳು, ಗಾದೆಗಳು, ಒಡಪುಗಳು ಹೀಗೆ ಮೌಖಿಕ ಸಂಪ್ರದಾಯದ ಆಚರಣೆ, ನಂಬಿಕೆಗಳನ್ನು ಪ್ರತಿಪಾದಿಸುವ ಈ ಪ್ರಯತ್ನವೂ ಸ್ತುತ್ಯರ್ಹವಾದುದು. ಈ ಹಿನ್ನೆಲೆಯಲ್ಲಿ ಕರ್ನಾಟಕ ಜೈನಧರ್ಮದ ಸಾಂಸ್ಕೃತಿಕ ಅನನ್ಯತೆಯನ್ನು ಪ್ರತಿಪಾದಿಸುವ ಪ್ರಯತ್ನಗಳು ಕಾಲಕ್ಕೆ ಕಾಲಕ್ಕೆ ವಿದ್ವಾಂಸರಿಂದ ನಡೆದಿವೆ.

೧೨ನೇ ಶತಮಾನ ಕರ್ನಾಟಕದಲ್ಲಿ ಮಹತ್ತರವಾದ ಯುಗ. ಮಹಾಕಾವ್ಯಗಳಿಗೆ ತಿಲಾಂಜಲಿಯನ್ನು ಹಾಡಿ, ಮುಕ್ತಕ ಸಾಹಿತ್ಯವೆನಿಸುವ ವಚನಗಳಿಗೆ ಆದಿಮಾಡಿಕೊಟ್ಟಿದ್ದು, ಈ ಯುಗದ ಸಾಹಿತ್ಯಿಕ ಕೊಡುಗೆ ಎನ್ನಬೇಕು. ಈ ವಚನಗಳ ಜೊತೆಗೆ ಸ್ವರವಚನವೆಂಬ ಮತ್ತೊಂದು ಪ್ರಕಾರ ರೂಪಗೊಂಡು ಕನ್ನಡ ಹಾಡುಗಬ್ಬ ಪರಂಪರೆಗೆ ನಾಂದಿಮಾಡಿತು. ಇದರಿಂದ ಸಾಹಿತ್ಯದ ಜೊತೆಗೆ ಸಂಗೀತಕ್ಕೂ ತನ್ನದೇ ಆದ ಕೊಡುಗೆಯನ್ನು ನೀಡಿತು. ಅಂದ ಮಾತ್ರಕ್ಕೆ ಹಾಡುಗಬ್ಬ ಸಾಹಿತ್ಯ ಪ್ರವರ್ತಕರು ವಚನಕಾರರು ಎಂದಲ್ಲ. ಜೈನರ ಮೊದಲ ಗ್ರಂಥ 'ಕವಿರಾಜಮಾರ್ಗ'ದಲ್ಲಿ ಹಾಡುಗಬ್ಬ ಉಲ್ಲೇಖಿತ ಚತ್ತಾಣ-ಬೆದಂಡೆ ಪ್ರಭೇದಗಳು, ಒವನಿಗೆ-ಒನಕೆವಾಡು ಪ್ರಭೇದಗಳು, ವಸ್ತುಕ-ವರ್ಣಕ ಹೆಸರಿನ ಕಾವ್ಯ ಪ್ರಭೇದಗಳು ಹುಟ್ಟಿ ಬಂದಿರುವುದನ್ನು ಗಮನಿಸಬಹುದು. ಕನ್ನಡ ಹಾಡುಗಬ್ಬ ಸಾಹಿತ್ಯ ವಚನ, ಸ್ವರವಚನ, ಕೀರ್ತನ ಸುಳಾದಿ, ಉಗಾಭೋಗ, ತತ್ವಪದ, ಕೈವಲ್ಯಪದ ಮುಂತಾದ ರೂಪಗಳಲ್ಲಿ ರಚನೆಯಾಯಿತು.

ಇಂಥ ಹಾಡುಗಬ್ಬ ಸಾಹಿತ್ಯ ಪರಂಪರೆಗೆ ಜೈನರ ಕೊಡುಗೆಯು ಗಮನಾರ್ಹವಾಗಿದೆ. ಮಹಾಕಾವ್ಯಗಳಲ್ಲಿ ಗೇಯಗುಣವುಳ್ಳ ದೇಶಿ ಛಂದೋಮಟ್ಟುಗಳನ್ನು ಹೊರತುಪಡಿಸಿದರೆ ಅಖಂಡವಾಗಿ ಸಿಗುವ ಹಾಡುಗಳೆಂದರೆ ರತ್ನಾಕರನ ಹಾಡುಗಳು. ಕಾವ್ಯಗಳ ಆಶಯ ಚಂಪೂ ರಚನಾ ಶೈಲಿಯಿಂದ ಶ್ರೀಸಾಮಾನ್ಯರಿಗೆ ತಲುಪದೇ ಇದ್ದಾಗ, ಈ ರೀತಿಯ ಹಾಡುಗಳು ಸೃಷ್ಟಿಗೊಂಡವು. ಶರಣರ ವಚನಗಳು ದಾಸರ ಕೀರ್ತನೆಗಳು ಜನರನ್ನು ಸುಲಭವಾಗಿ ತಲುಪುತ್ತಿರುವುದನ್ನು ಅರಿತ ಜೈನರು ಹಾಡುಗಳನ್ನು ರಚಿಸಲು ಮುಂದಾದಂತೆ ತೋರುತ್ತದೆ.

## ಅಧ್ಯಯನದ ಉದ್ದೇಶ

ಜೈನಧರ್ಮದ ಮೂಲ ಆಧಾರಗ್ರಂಥಗಳೆಲ್ಲ ಪ್ರಾಕೃತ ಭಾಷೆಯಲ್ಲಿವೆ. ಧರ್ಮದ ತತ್ವಗಳೆಲ್ಲ ನೀರಸ, ಕ್ಲಿಷ್ಟ ಹಾಗೂ ಬಹುಸೂಕ್ಷ್ಮ. ಇದನ್ನು ಜನಸಾಮಾನ್ಯರಿಗೆ ಸರಳವಾಗಿ, ಸುಲಭ ಗ್ರಾಹ್ಯವಾಗುವಂತೆ ಬೋಧಿಸಬೇಕು. ಅವರ ಮನಸ್ಸಿನಲ್ಲಿ ಸ್ಥಾಯಿಯಾಗಿ ನಿಲ್ಲುವಂತೆ ಮಾಡಬೇಕು. ಆದ್ದರಿಂದ ಜೈನಧರ್ಮ ಬೋಧಕರೆಲ್ಲ ಅಂದಿನಿಂದ ಇಂದಿನವರೆಗೂ ಜನಭಾಷೆಯಲ್ಲಿ ಪ್ರಚಲಿತವಿರುವ ಉಪಮೆ, ದೃಷ್ಟಾಂತ ಕಥೆಗಳನ್ನು ಧಾರಳವಾಗಿ ಬಳಸಿಕೊಂಡರು. ನೀತಿಯ ನೆಲೆಗಟ್ಟಿನ ಮೇಲೆ ಜೈನಧರ್ಮ ನಿಂತಿದೆ ಎಂಬುದಕ್ಕೆ ಸದ್ಗುಣ-ಸದ್ಭಾವನೆಗಳು ಇದರ ತಾಯಿಬೇರು. ಜನರಲ್ಲಿ ಭಕ್ತಿಯನ್ನೂ ಮೂಡಿಸುವುದರ ಜೊತೆಗೆ ಧರ್ಮದ ವರ್ತುಲದೊಳಗೆ ಬರಮಾಡಿಕೊಳ್ಳಲು ಸರಳ ಹಾಗೂ ಜನಪ್ರಿಯವಾದ ಹಾಡುಗಬ್ಬ ಸಾಹಿತ್ಯ ಸೃಷ್ಟಿಸಿದರು. ಇಂಥ ಹಾಡುಗಳನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಿರುವುದು ಇಲ್ಲಿಯ ಉದ್ದೇಶವಾಗಿದೆ.

ಜೈನ ಹಾಡುಗಳಲ್ಲಿ ಒಂದು ಮುಕ್ತ ಬಂಧ, ಗೇಯಗುಣ, ಧಾರ್ಮಿಕ ಸಿದ್ಧಾಂತಗಳು, ಸಾಹಿತ್ಯ ಮತ್ತು ಚರಿತ್ರೆಯ ಸಂಬಂಧ, ಮೌಖಿಕ ಪರಂಪರೆಯ ಭಾಂದವ್ಯ. ಲಿಖಿತ ಪರಂಪರೆಗೆ ಒಂದು ಹೊಸತನ ತಂದುಕೊಡುವ ಗುಣ. ಪ್ರಧಾನ ಲಕ್ಷಣಗಳಾಗಿ ಕಂಡುಬರುತ್ತವೆ. ಇಂಥ ಗೇಯಗುಣ, ಮುಕ್ತಬಂಧ ಹಾಗೂ ಐತಿಹಾಸಿಕ ಸಂಗತಿಗಳಿಂದ ಕೂಡಿದ ಜೈನ ಹಾಡಿನ ಇತಿಹಾಸವನ್ನು ಕುರಿತು ಚರ್ಚಿಸುವ ಮತ್ತೊಂದು ಉದ್ದೇಶವನ್ನು ಈ ಪ್ರಬಂಧ ಒಳಗೊಂಡಿದೆ. ಹಾಗೆಯೇ ನಡುಗನ್ನಡ ಸಂದರ್ಭದ ಹೊತ್ತಿಗೆ ಸಾಂಗತ್ಯ ಕೃತಿಗಳು, ದೇಸಿ ಛಂದಸ್ಸಿನ ಪ್ರಕಾರಗಳು ರಚನೆಗೊಂಡಿದ್ದವು. ಇದಕ್ಕೆ ಪೂರಕವೆನ್ನುವ ಹಾಗೆ ಜೈನಕವಿಗಳು ರಾಗ, ತಾಳ ಬದ್ಧವಾದ ಹಾಡುಗಳನ್ನು ರಚಿಸಲು ಮುಂದಾದುದನ್ನು ದಾಖಲಿಸುವುದು ಹಾಗೆಯೇ ಅನುಭಾವಗೀತೆ, ಕೈವಲ್ಯಪದ, ಭಜನೆಹಾಡು ಮುಂತಾದ ಹಾಡುಗಬ್ಬ ಪರಂಪರೆ ಮಾನವನಲ್ಲಿ ಧಾರ್ಮಿಕತೆ ಒಲವು ಮೂಡುವಂತೆ ಮಾಡಲು ಅನುಭಾವದ ಮಾತುಗಳಿಂದ ಅಭಿವ್ಯಕ್ತಗೊಂಡವು. ಇಂಥ ಕಾವ್ಯೋಕ್ತ ಕಥಾವಸ್ತುವನ್ನೇ ಒಬ್ಬ ಹಾಡುಗಾರನ ಕೈಯಲ್ಲಿ ಒಂದು ಕಥನಕಾವ್ಯವಾಗಿ ರೂಪುಗೊಂಡ ಬಗೆಯನ್ನು ಶೋಧಿಸುವುದು ಈ ಮಹಾಪ್ರಬಂಧದ ಮೊಗದೊಂದು ಉದ್ದೇಶವಾಗಿದೆ.

ಜೈನ ಸಾಹಿತ್ಯದ ರಚನೆ ಮತ್ತು ಸಂಶೋಧನೆಗಳನ್ನು ಕುರಿತು "ಆ.ನೆ.ಉಪಾಧ್ಯ, ಟಿ.ಜಿ.ಕಲಘಟಗಿ, ಮಿರ್ಜಿ ಅಣ್ಣಾರಾಯ, ಭುಜೇಂದ್ರ, ಮಹೀಶವಾಡಿ, ಡಾ. ಹಂಪ ನಾಗರಾಜಯ್ಯ, ಡಾ.ಎಂ.ಎಂ.ಕಲಬುರ್ಗಿ, ಜಿ.ಬ್ರಹ್ಮಪ್ಪ, ಡಾ. ಕಮಲ ಹಂಪನಾ, ಪದ್ಮಪ್ರಸಾದ್, ಎಸ್.ಪಿ. ಪಾಟೀಲ ಇನ್ನು ಮುಂತಾದವರು ಚರ್ಚಿಸಿದ್ದಾರೆ, ಮಾರ್ಗ ಸಾಹಿತ್ಯದ ಅಧ್ಯಯನದ ಜೊತೆಗೆ ದೇಶೀ ಸಾಹಿತ್ಯ ಶೋಧ, ಸಂಗ್ರಹಗಳಿಂದ ಗಾಯನ ಅಭಿವ್ಯಕ್ತಿಯು ಹಾಡುಗಬ್ಬಗಳಲ್ಲಿನ ಲಯ, ರಾಗ, ತಾಳಗಳ ಪ್ರಾಮುಖ್ಯತೆ ಇವುಗಳ ಲಕ್ಷಣ ಕುರಿತು ಚರ್ಚಿಸಿದ್ದಾರೆ. ಹೀಗೆ ಕನ್ನಡದಲ್ಲಿ ಜೈನ ಹಾಡುಗಳ ಸಂಗ್ರಹ-ಸಂಪಾದನ ಹಾಗೂ ಪ್ರಕಟಣಾ ಇತಿಹಾಸವನ್ನು ಸೈದ್ಧಾಂತಿಕವಾಗಿ ನಿರೂಪಿಸುವುದು ಈ ಮಹಾಪ್ರಬಂಧದ ಇನ್ನೊಂದು ಉದ್ದೇಶವಾಗಿದೆ.

ವಿಶೇಷವಾಗಿ ಜೈನ ಹಾಡುಗಳನ್ನು ರತ್ನಾಕರನ ಹಾಡುಗಳು, ತೀರ್ಥಂಕರರ ಹಾಡುಗಳು, ಯಕ್ಷಿಣಿಯರ ಹಾಡುಗಳು, ಜೋಗುಳದ ಹಾಡುಗಳು, ಶೋಭಾನದ ಹಾಡುಗಳು, ಮಂಗಳಾರತಿಯ ಹಾಡುಗಳು ಮತ್ತು ಸಂಕೀರ್ಣ ಹಾಡುಗಳು ಎಂದು ವರ್ಗೀಕರಿಸಿಕೊಂಡು ಹಾಡುಗಳ ವಸ್ತು-ವೈವಿಧ್ಯತೆಯನ್ನು ಈ ಮಹಾಪ್ರಬಂಧ ದಲ್ಲಿ ಚರ್ಚಿಸಲಾಗಿದೆ.

ಹಸ್ತಪ್ರತಿಗಳಲ್ಲಿ ಬಹುದೊಡ್ಡ ಪ್ರಮಾಣದಲ್ಲಿ ಹಾಡುಗಳು ದೊರೆಯುತ್ತವೆ. ಇವುಗಳನ್ನು ಈಗಾಗಲೇ ಹಲವಾರು ವಿದ್ವಾಂಸರು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಆದರೂ ಇನ್ನೂ ಕೆಲವು ಹಾಡುಗಳು ಅಪ್ರಕಟಿತವಾಗಿ ಉಳಿದುಕೊಂಡಿವೆ. ಅಪ್ರಕಟಿತ ಹಾಡುಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಳ್ಳುವುದರ ಮೂಲಕ ಜೈನ ಹಾಡುಗಳ ಗಾತ್ರಬಾಹುಳ್ಯವನ್ನು ನಿರ್ಧರಿಸುವ ಪ್ರಯತ್ನ ಮಾಡಲಾಗಿದೆ. ಮತ್ತು ಜೈನ ತೀರ್ಥಂಕರರನ್ನು, ಯಕ್ಷ-ಯಕ್ಷಿಣಿಯರನ್ನು, ಪುಣ್ಯಕ್ಷೇತ್ರಗಳನ್ನು ಹಾಗೂ ಧಾರ್ಮಿಕ ನೋಂಪಿಗಳನ್ನು ಕುರಿತು ಹೇರಳವಾದ ಜೈನಸಾಹಿತ್ಯ ಪರಂಪರೆ ನಿರ್ಮಾಣಗೊಂಡಿದೆ. ಈ ಎಲ್ಲ ಅಂಶಗಳನ್ನು ತಮ್ಮ ಬದುಕಿನ ಭಾಗವೆಂಬಂತೆ ಹಾಡಿ ಹೊಗಳಿದ್ದಾರೆ. ಇಂತಹ ಹಾಡುಗಳನ್ನು, ರಾಗ-ತಾಳಯುಕ್ತವಾಗಿ ಸ್ಥಳೀಯ ಜನ ಸಮ್ಮುಖದಲ್ಲಿ ಸೃಷ್ಟಿಗೊಂಡವು. ಇಂತಹ ಹಾಡುಗಳು ಜನ ಸ್ಥಳೀಯ ಚರಿತ್ರೆಯನ್ನು ಹೇಳುವುದರ ಜೊತೆಗೆ ಜೈನಧರ್ಮದ ಸಂಪ್ರದಾಯ, ನಂಬಿಕೆ, ಆಚರಣೆ, ರೀತಿ-ನೀತಿಗಳು, ಸ್ಥಳನಾಮಗಳು, ಸಾಮಾಜಿಕ ಸ್ಥಿತ್ಯಂತರಗಳನ್ನು ಕುರಿತು ಜೈನ ಹಾಡುಗಳ ಮೂಲಕ ನಿರ್ವಚಿಸುವ ಉದ್ದೇಶ ಈ ಮಹಾಪ್ರಬಂಧದ್ದಾಗಿದೆ.

## ಅಧ್ಯಯನದ ವ್ಯಾಪ್ತಿ

ಅಧ್ಯಯನ ವ್ಯಾಪ್ತಿ ಎಂದರೆ ಅಧ್ಯಯನದ ಚೌಕಟ್ಟು ಎಂದರ್ಥ. ಯಾವುದೇ ಸೈದ್ಧಾಂತಿಕ ಅಥವಾ ವೈಚಾರಿಕ ಅಧ್ಯಯನಕ್ಕೆ ಒಂದು ನಿರ್ದಿಷ್ಟವಾದ ಚೌಕಟ್ಟು ಬಹಳ ಮುಖ್ಯ. ಇದರಿಂದ ಅಧ್ಯಯನದ ನಿಶ್ಚಿತ ಫಲಿತವನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಪ್ರಸ್ತುತ ಕನ್ನಡ ಜೈನ ಹಾಡುಗಳು ಮಹಾಪ್ರಬಂಧದಲ್ಲಿ ಜೈನ ಜನಪದ ಹಾಡುಗಳನ್ನು ಹೊರತುಪಡಿಸಿ ಶಿಷ್ಟ ಮೂಲದ ಹಾಡುಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದು ಈ ಮಹಾಪ್ರಬಂಧದ ಹಾಡುಗಳ ಆಕರ ವ್ಯಾಪ್ತಿ.

ಮತ್ತೊಂದು ಅಂಶವೆಂದರೆ ಕರ್ನಾಟಕದಲ್ಲಿ ಇರುವ ಹಸ್ತಪ್ರತಿಗಳನ್ನು ಮಾತ್ರ ಅನುಲಕ್ಷಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಂದರೆ ಕರ್ನಾಟಕದ ಹೊರಗೆ ಇರುವ ಕೊಲ್ಲಾಪುರ ಮತ್ತು ಇತರೆ ಜೈನ ಕೇಂದ್ರಗಳಲ್ಲಿ ಲಭ್ಯವಿರುವಂತಹ ಹಾಡುಗಳನ್ನು ನಮ್ಮ ಅಧ್ಯಯನಕ್ಕೆ ಬಳಸಿಕೊಂಡಿಲ್ಲ. ಈಗಾಗಲೇ ಡಾ. ಹಂಪನಾಗರಾಜಯ್ಯ ಮುಂತಾದವರು ಜೈನ ಹಾಡುಗಳ ಸಂಗ್ರಹವನ್ನು ಮಾಡಿದ್ದಾರೆ. ಅದೇ ರೀತಿ ಕನ್ನಡ ವಿಶ್ವವಿದ್ಯಾಲಯದಿಂದ ಕನ್ನಡ ಜೈನ ಹಾಡುಗಳು ಹೆಸರಿನ ಕೃತಿಯೊಂದನ್ನು ಡಾ. ಎಫ್.ಟಿ. ಹಳ್ಳಿಕೇರಿ, ಡಾ. ಕೆ. ರವೀಂದ್ರನಾಥ ಅವರು ಸಂಪಾದಿಸಿಕೊಟ್ಟಿದ್ದಾರೆ. ಇವರು ಸಂಪಾದಿಸಿ ಕೊಟ್ಟ ಹಾಡುಗಳು ಜೊತೆಗೆ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಕೆಲವು ಹಾಡುಗಳನ್ನು ಅಧ್ಯಯನಕ್ಕೆ ಬಳಸಲಾಗಿದೆ.

ಕೇವಲ ಹಾಡುಗಳ ವ್ಯಾಕರಣ, ಛಂದಸ್ಸು, ರೂಪದ ರಾಚನಿಕ ಅಧ್ಯಯನಕ್ಕೆ ಹೊತ್ತು ಕೊಡದೆ, ಆ ಹಾಡುಗಳ ಸಾಂಸ್ಕೃತಿಕ ಸಂರಚನೆಗೆ ಗಮನಕೊಡಲಾಗಿದೆ. ಅಂದರೆ ಒಂದು ಹಾಡಿನ ರಚನೆಯ ಹಿಂದೆ ಜೈನ ಕಥಾವಸ್ತುವಿದೆ, ತತ್ವವಿದೆ, ಸಿದ್ಧಾಂತವಿದೆ, ಆ ಧರ್ಮದ ಆಚರಣೆ-ನಂಬಿಕೆಗಳಿವೆ. ಮತ್ತು ಕರ್ನಾಟಕದಲ್ಲಿರುವ ಜೈನ ಸ್ಥಳಪುರಾಣಮಹಾತ್ಮೆಗಳ ಉಲ್ಲೇಖಗಳಿವೆ. ಇವುಗಳೆಲ್ಲವುಗಳನ್ನು ಪರಿಶೋಧಿಸುವ ಸಾಂಸ್ಕೃತಿಕ ಅನನ್ಯತೆಯನ್ನು ಈ ಮಹಾಪ್ರಬಂಧದ ವ್ಯಾಪ್ತಿಗೆ ಒಡ್ಡಲಾಗಿದೆ. ಅಂದರೆ ಹಾಡುಗಳು ಪ್ರತಿನಿಧಿಸುವ ಅಭೌತಿಕ ವಾದಂತಹ ಆತ್ಮಪರಿಕಲ್ಪನೆ, ಜೈನದರ್ಶನ, ಲೋಕನೀತಿತತ್ತ್ವ ಮತ್ತು ತೀರ್ಥಂಕರ ಸ್ತುತಿ, ಯಕ್ಷಿಣಿಯರ

ಸ್ತುತಿಗಳನ್ನು ನಿರೂಪಿಸುವುದಲ್ಲದೇ ಆ ಧರ್ಮದಲ್ಲಿರುವ ಸಂಪ್ರದಾಯಗಳನ್ನು ಹಬ್ಬ-ಹರಿದಿನಗಳನ್ನು ಕುರಿತು ಚರ್ಚಿಸಲಾಗಿದೆ. ಹಾಗೆಯೇ ಕರ್ನಾಟಕದ ಜೈನ ಸ್ಮಾರಕಗಳು ಬಸದಿಗಳನ್ನು, ಕ್ಷೇತ್ರಕಾರ್ಯದ ಮೂಲಕ ಪರಿಶೋಧಿಸಿ ವಿಶ್ಲೇಷಿಸುವ ಪ್ರಯತ್ನವನ್ನು ಈ ಮಹಾಪ್ರಬಂಧದಲ್ಲಿ ಮಾಡಲಾಗಿದೆ. ಒಟ್ಟಿನಲ್ಲಿ ಒಂದು ಮಹಾಕಾವ್ಯ ಅಥವಾ ಮಹಾಕಾವ್ಯ ಪ್ರತಿನಿಧಿಸಬಹುದಾದ ಜೈನ ಧಾರ್ಮಿಕ ಆಚರಣೆಗಳಾದ ಪಂಚಾಣುವ್ರತ, ಸಪ್ತವ್ಯಸನ, ತಪಸ್ಸು, ದಾನ, ಧರ್ಮ ಮತ್ತು ಸ್ಥಳಪುರಾಣ ಮಹಾತ್ಮೆಗಳು, ತೀರ್ಥಂಕರರು ಚರಿತ್ರೆಗಳನ್ನು ಕುರಿತಂತೆ ಒಂದು ಹಾಡು ಈ ಎಲ್ಲ ಸಂಗತಿಗಳನ್ನು ಹೇಗೆ ವಿವರಿಸುತ್ತದೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸುವುದರ ಮೂಲಕ ಕರ್ನಾಟಕ ಜೈನ ಸಂಸ್ಕೃತಿಯನ್ನು ಪುನರ್ ರಚನೆಗೊಳಿಸುವ ಮತ್ತು ಇಂತಹ ಹಾಡುಗಬ್ಬ ಸಾಹಿತ್ಯವೂ ಕೂಡ ಒಂದು ಸಮುದಾಯದ ಸಾಂಸ್ಕೃತಿಕ ಅಧ್ಯಯನಕ್ಕೆ ಆಕರಗಳಾಗಬಲ್ಲವು ಎಂಬುದನ್ನು ನಿರೂಪಿಸುವ ಅಧ್ಯಯನವಾಗಿದೆ "ಕನ್ನಡ ಜೈನ ಹಾಡುಗಳು".

**ಅಧ್ಯಯನದ ವಿಧಾನ**

ಜೈನ ಸಾಹಿತ್ಯ ಸಂಸ್ಕೃತಿ, ಕಲೆ, ವಾಸ್ತುಶಿಲ್ಪ, ಶಾಸನ ಇತ್ಯಾದಿ ಕ್ಷೇತ್ರಗಳಲ್ಲಿ ಈಗಾಗಲೇ ಅಧ್ಯಯನಗಳು ನಡೆದಿವೆ. ಈ ಅಧ್ಯಯನಗಳ ವಿಶೇಷತೆಯೆಂದರೆ ಸಾಹಿತ್ಯ ಕ್ಷೇತ್ರ ಹಾಗೂ ಪುರಾತತ್ವ ಕ್ಷೇತ್ರಗಳ ಅನಾವರಣ. ಈ ಹಿನ್ನೆಲೆಯಲ್ಲಿ "ಕರ್ನಾಟಕ ಜೈನ ಸಂಸ್ಕೃತಿಯ ಅಧ್ಯಯನವೆಂದರೆ ಕನ್ನಡ ಸಾಹಿತ್ಯದ ವಿವಿಧ ಮುಖಗಳ ಅಧ್ಯಯನ" ಎನಿಸಿಕೊಳ್ಳುತ್ತದೆ. ಪ್ರಸ್ತುತ ಕನ್ನಡ ಜೈನ ಹಾಡುಗಳು ಎಂಬ ಮಹಾಪ್ರಬಂಧ ಜೈನ ಹಾಡುಗಳ ಮೂಲಕ ಕನ್ನಡ ಜೈನ ಸಾಹಿತ್ಯವನ್ನು, ಕರ್ನಾಟಕ ಜೈನ ಕ್ಷೇತ್ರಗಳನ್ನು ಮತ್ತು ಕನ್ನಡಿಗರಾಗಿ ಬದುಕುತ್ತಿರುವ ಜೈನ ಸಮುದಾಯದ ಆಚರಣೆ ಮತ್ತು ನಂಬಿಕೆಗಳನ್ನು ಶೋಧಿಸುವ ಕಡೆಗೆ ಗಮನಹರಿಸಿದೆ. ಒಂದರ್ಥದಲ್ಲಿ ಕರ್ನಾಟಕ ಜೈನ ಸಾಂಸ್ಕೃತಿಕ ಚರಿತ್ರೆಯ ಅನಾವರಣ ಹಾಡುಗಳ ಮೂಲಕ ಹೇಗೆ ಅಭಿವ್ಯಕ್ತಗೊಂಡಿದೆ ಎಂಬುದನ್ನು ಈ ಮಹಾಪ್ರಬಂಧ ವಿಶ್ಲೇಷಿಸುತ್ತದೆ. ಈ ಕಾರಣವಾಗಿ ಪ್ರಸ್ತುತ ಮಹಾಪ್ರಬಂಧ ವಿಶ್ಲೇಷಣಾತ್ಮಕ ಅಧ್ಯಯನ ಮಾದರಿಯನ್ನು ಹೆಚ್ಚು ಅಳವಡಿಸಿಕೊಂಡಿದೆ.

ಸಂಶೋಧನೆಯಲ್ಲಿ ಆಕರಗಳಿಗೆ ಪ್ರಥಮ ಪ್ರಾಶಸ್ತ್ಯ. ಎಲ್ಲಿ ಆಕರಗಳು ಇಲ್ಲ, ಅಲ್ಲಿ ಸಂಶೋಧನೆಯೂ ಇಲ್ಲ. ಅಂದರೆ ಸಂಶೋಧನೆಯ ಮೂಲ ದ್ರವ್ಯ ಆಕರಗಳು. ಕನ್ನಡ ಜೈನ ಹಾಡುಗಳು ಹೆಸರಿನ ಈ ಸಂಶೋಧನ ಮಹಾಪ್ರಬಂಧ ರಚನೆಗೆ ಆಕರಗಳ ಬಳಕೆಯನ್ನು ಎರಡು ವಿಧಾನದಲ್ಲಿ ರೂಪಿಸಿಕೊಳ್ಳಲಾಗಿದೆ. ಒಂದು ಪ್ರಧಾನ ಆಕರಗಳು, ಎರಡು ಪ್ರಾಸಂಗಿಕ ಆಕರಗಳು. ಪ್ರಧಾನ ಆಕರಗಳಲ್ಲಿ ಜೈನ ಹಾಡುಗಳು ಮುಖ್ಯವಾದವುಗಳು. ಈ ಹಾಡುಗಳ ವಿಷಯವನ್ನು ಚರ್ಚಿಸಲು ಕನ್ನಡ ಜೈನ ಕಾವ್ಯಗಳನ್ನು ಪೂರಕ ಸಾಮಗ್ರಿಯಾಗಿ ಬಳಸಿಕೊಳ್ಳಲಾಗಿದೆ. ಉದಾ: ಭರತ-ಬಾಹುಬಲಿ ಪ್ರಸಂಗವನ್ನು ನಿರೂಪಿಸುವ ಒಂದು ಜೈನ ಹಾಡು ಇಲ್ಲಿ ಪ್ರಮುಖ ಆಕರವಾದರೆ, ಈ ಭರತ-ಬಾಹುಬಲಿಯ ಪ್ರಸಂಗ ಕನ್ನಡ ಕಾವ್ಯಗಳಾದ ಪಂಪನ ಆದಿಪುರಾಣದಲ್ಲಿ, ರತ್ನಾಕರನ ಭರತೇಶ ವೈಭವದಲ್ಲಿ ಒಂದು ಸನ್ನಿವೇಶವಾಗಿ ಅಥವಾ ಒಂದು ಆಶ್ವಾಸವಾಗಿ ಚಿತ್ರಣಗೊಂಡಿರುವುದನ್ನು, ಆ ಮೂಲಕ ಹಾಡುಗಾರನ ಸಂಗ್ರಹ ಶಕ್ತಿಯನ್ನು ನಿರೂಪಿಸಲು ಬಳಸಿಕೊಂಡ ಜೈನ ಕಾವ್ಯ-ಪುರಾಣಗಳು ಪೂರಕ ಆಕರಗಳಾಗಿ ಬಳಕೆಗೊಂಡಿವೆ.

ಪ್ರಮುಖ ಆಕರಗಳ ಶೋಧಕ್ಕಾಗಿ ಕ್ಷೇತ್ರಕಾರ್ಯವನ್ನು ಕೈಗೊಂಡಿರುವುದು ಸಂಶೋಧನೆಯ ವೈಧಾನಿಕತೆ ಯಲ್ಲಿ ಪ್ರಮುಖವಾದುದು. ಈಗಾಗಲೇ ಪ್ರಕಟಗೊಂಡ ಜೈನ ಹಾಡುಗಳ ಸಂಗ್ರಹ ಕೃತಿಗಳಿಗಾಗಿ ನಾಡಿನ

ಜೈನಗ್ರಂಥ ಭಂಡಾರಗಳನ್ನು ಮತ್ತು ಆ ಕ್ಷೇತ್ರದಲ್ಲಿ ದುಡಿದ ವಿದ್ವಾಂಸರನ್ನು ಸಂದರ್ಶಿಸಲಾಗಿದೆ. ವಿಶೇಷವಾಗಿ ಹಬ್ಬ-ಹರಿದಿನಗಳಂತಹ ವಿಶೇಷ ಸಂದರ್ಭಗಳಲ್ಲಿ ಈ ಹೊತ್ತಿಗೂ ಜೈನಮಠ-ಮಂದಿರಗಳಲ್ಲಿ ಹಾಡುಗಳನ್ನು ಹಾಡುವ ಪರಂಪರೆ ಕಂಡುಬರುತ್ತದೆ. ಇಂತಹ ಹಾಡುಗಾರರನ್ನು ಕ್ಷೇತ್ರಕಾರ್ಯದ ಮೂಲಕ ಸಂದರ್ಶಿಸುವ ವಿಧಾನವನ್ನು ಈ ಸಂಶೋಧನೆ ಒಳಗೊಂಡಿದೆ. ಬಹಳ ಮುಖ್ಯವಾದ ಸಂಗತಿಯೆಂದರೆ ಹಾಡುಗಳಲ್ಲಿ ಪ್ರಸ್ತಾಪಿಸಲಾಗಿರುವ ಜೈನ ಪುಣ್ಯಕ್ಷೇತ್ರಗಳ, ಬಸದಿಗಳ ಹಾಗೂ ಸ್ಮಾರಕಗಳ ಸ್ಥಳಪುರಾಣ ಚರಿತ್ರೆಯ ನಿರೂಪಣೆಗಾಗಿ ಕ್ಷೇತ್ರಕಾರ್ಯ ಮಾದರಿಯನ್ನು ಹೆಚ್ಚು ಅನುಲಕ್ಷಿಸಲಾಗಿದೆ.

ಪ್ರಾಸಂಗಿಕ ಆಕರಗಳ ಹಿನ್ನೆಲೆಯಲ್ಲಿ ಜೈನ ಹಾಡುಗಳಲ್ಲಿ ಬರುವ ತೀರ್ಥಂಕರರ ಪಂಚಕಲ್ಯಾಣ ಯಕ್ಷ-ಯಕ್ಷಿಯರ ಉಲ್ಲೇಖ ಮುಂತಾದವುಗಳ ಧಾರ್ಮಿಕ ಹಾಗೂ ಪೌರಾಣಿಕ ಹಿನ್ನೆಲೆಯನ್ನು ಸಮೀಕ್ಷಿಸುವ ದೃಷ್ಟಿಯಿಂದ ಈ ಕ್ಷೇತ್ರದಲ್ಲಿ ನಡೆದ ಅಧ್ಯಯನಗಳನ್ನು ಮತ್ತು ಗ್ರಂಥಗಳನ್ನು ಅವಲೋಕಿಸಲಾಗಿದೆ.

ಯಾವುದೇ ಸಂಶೋಧನೆ ತನ್ನ ಹಿಂದಿನ ಅಧ್ಯಯನವನ್ನು ಸಿಂಹಾವಲೋಕನ ಮಾಡಿಕೊಳ್ಳುವುದು, ಆ ಮೂಲಕ ಅಲ್ಲಿಯ ಇತಿ-ಮಿತಿಗಳನ್ನು, ವ್ಯಾಪ್ತಿ-ಅವ್ಯಾಪ್ತಿ ದೋಷಗಳನ್ನು ಗಮನಿಸಿ ಮುಂದಿನ ಅಧ್ಯಯನ ಹೇಗೆ ಸಾಗಬೇಕಾಗಿದೆ ಎಂಬುವುದು ಮುಖ್ಯ. ಈ ದೃಷ್ಟಿಯಿಂದ ಕನ್ನಡ ಜೈನ ಹಾಡುಗಳು ಎಂಬ ಅಧ್ಯಯನಕ್ಕೆ ಕರ್ನಾಟಕದಲ್ಲಿ ಜೈನ ಹಾಡುಗಳ ಕುರಿತು ನಡೆದ ಸರ್ವೇಕ್ಷಣೆ, ಸಂಗ್ರಹ ಹಾಗೂ ಪ್ರಕಟನೆಯ ಚರಿತ್ರೆಯನ್ನು ಸಮೀಕ್ಷಿಸಲಾಗಿದೆ. ಇದರಿಂದ ಕನ್ನಡ ಜೈನ ಹಾಡುಗಳು ಪ್ರಕಟನ ಮತ್ತು ಅಪ್ರಕಟನ ಸಂಖ್ಯಾ ನಿರ್ಣಯ ಗೊತ್ತಾಗುತ್ತದೆ. ಈಗಾಗಲೇ ಡಾ.ಹಂಪನಾಗರಾಜಯ್ಯ, ಡಾ.ಕೆ.ರವೀಂದ್ರನಾಥ ಮತ್ತು ಡಾ. ಎಫ್.ಟಿ. ಹಳ್ಳಿಕೇರಿ, ಶ್ರೀ ವರ್ಧಮಾನ ಹೆಗ್ಡೆ ಮುಂತಾದವರು ಈ ಕ್ಷೇತ್ರದಲ್ಲಿ ಕೃಷಿ ಮಾಡಿದ್ದಾರೆ. ಅವರು ಸಂಗ್ರಹಿಸಿದ ಹಾಡುಗಳಲ್ಲಿ ಕೆಲವು ಕವಿ ನಿರ್ಮಿತ ಹಾಡುಗಳು ಇವೆ. ಇನ್ನೂ ಕೆಲವು ಲಿಪಿಕಾರ ನಿರ್ಮಿತ ಹಾಡುಗಳು ಇವೆ. ಕವಿ ನಿರ್ಮಿತ ಹಾಡುಗಳಿಗೆ ರತ್ನಾಕರವರ್ಣಿ ಬರೆದ "ಅಣ್ಣನ ಪದಗಳು", "ರತ್ನಾಕರನ ಕೀರ್ತನೆ"ಗಳನ್ನು ಗಮನಿಸಬಹುದು. ಉಳಿದಂತೆ ಒಂದು ಕಾವ್ಯವನ್ನು ಪ್ರತಿಮಾಡುವ ಪ್ರತಿಕಾರ ಕಾವ್ಯದ ಮೊದಲೊಲ್ಲೋ ಅಥವಾ ಕೊನೆಯಲ್ಲೋ ಹಾಡುಗಳನ್ನು ರಚಿಸುತ್ತಾನೆ. ಹೀಗೇ ಕವಿ ನಿರ್ಮಿತ ಹಾಡುಗಳು ಮತ್ತು ಪ್ರತಿಕಾರ ನಿರ್ಮಿತ ಹಾಡುಗಳು ಎಂಬ ಸಂಗತಿಯನ್ನು ತಿಳಿದುಕೊಳ್ಳಲು ಈವರೆಗೂ ಸಂಗ್ರಹಿಸಿ, ಸಂಪಾದಿಸಿದ ಕೃತಿಗಳ ಅಧ್ಯಯನವು ಈ ಸಂಶೋಧನೆಯ ವೈಧಾನಿಕತೆ ಎನ್ನಿಸಿದೆ.

ಒಟ್ಟಿನಲ್ಲಿ ಆಕರ ಸಂಗ್ರಹ, ಆಕರ ಸರ್ವೇಕ್ಷಣೇ, ಆಕರಗಳ ಸಂಪಾದನೆ ಮತ್ತು ಅವುಗಳ ಅಧ್ಯಯನವನ್ನು ಪ್ರಬಂಧದಲ್ಲಿ ಚರ್ಚಿಸುವುದರ ಮೂಲಕ ಕನ್ನಡ ಜೈನ ಹಾಡುಗಳು ಕೂಡ ಇತರೆ ಆಕರಗಳಂತೆ ಗಂಭೀರವಾದ ಸಂಶೋಧನೆಗೆ ವಾಸ್ತುವಾಗಬಲ್ಲವು. ಇಂತಹ ವಸ್ತುವಿನ ಹುಡುಕಾಟ ಬಹುಶಿಸ್ತೀಯ ನೆಲೆಯಲ್ಲಿ ಅಧ್ಯಯನಗೊಳ್ಳುವ ಉಪಕ್ರಮವನ್ನು ಅಥವಾ ವಿಧಾನವನ್ನು ಬಯಸುತ್ತದೆ ಎಂಬುದನ್ನು ನನ್ನ ಅಧ್ಯಯನದಲ್ಲಿ ರೂಢಿಸಿಕೊಂಡಿದ್ದೇನೆ.

**ಅಧ್ಯಯನದ ಸ್ವರೂಪ**

ಕನ್ನಡ ಜೈನ ಹಾಡುಗಳು: ಸಾಂಸ್ಕೃತಿಕ ಅಧ್ಯಯನ ಪ್ರಬಂಧವನ್ನು ಅಧ್ಯಯನದ ದೃಷ್ಟಿಯಿಂದ ಒಟ್ಟು ಆರು ಅಧ್ಯಾಯಗಳಲ್ಲಿ ವಿಸ್ತರಿಸಿಕೊಳ್ಳಲಾಗಿದೆ. ಅವುಗಳು ಈ ಕೆಳಗಿನ ವಿಷಯಗಳನ್ನು ಒಳಗೊಂಡಿರುತ್ತವೆ.

**ಅಧ್ಯಾಯ ೧ : ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಹಾಗೂ ಸ್ವರೂಪ**

ಅಧ್ಯಾಯ ಒಂದರಲ್ಲಿ ಮಹಾಪ್ರಬಂಧದ ತಾನು ಹಾಕಿಕೊಂಡ ಉದ್ದೇಶಗಳ ತಾತ್ವಿಕ ಅಂಶಗಳನ್ನು ವಿವರಿಸುತ್ತದೆ. ಜೊತೆಗೆ ಅಧ್ಯಯನದ ಸ್ವರೂಪ, ವ್ಯಾಪ್ತಿ ಹಾಗೂ ವಿಧಾನವನ್ನು ಖಚಿತಪಡಿಸುತ್ತದೆ.

**ಅಧ್ಯಾಯ ೨ : ಕನ್ನಡ ಹಾಡುಗಬ್ಬ ಸಾಹಿತ್ಯ**

ಕನ್ನಡ ಸಾಹಿತ್ಯದಲ್ಲಿ ಓದುಗಬ್ಬ ಮತ್ತು ಹಾಡುಗಬ್ಬಗಳೆಂಬ ಎರಡು ಪ್ರಕಾರಗಳು. ಅವುಗಳಲ್ಲಿ ಹಾಡುಗಬ್ಬಗಳಾದ ಜಾನಪದ ತ್ರಿಪದಿಗಳು, ಕೀರ್ತನೆಗಳು, ಸ್ವರವಚನಗಳು, ತತ್ವಪದ ಇತ್ಯಾದಿ ಪ್ರಕಾರದ ಸಾಹಿತ್ಯ ಕುರಿತು ಅರ್ಥ, ಉಗಮ, ಸ್ವರೂಪ ಹಾಗೂ ಲಕ್ಷಣಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು, ಆ ಮೂಲಕ ಕನ್ನಡ ಜೈನ ಹಾಡುಗಳ ರಚನೆಯ ಹಿಂದೆ ಇಂಥ ಹಾಡುಗಬ್ಬ ಪರಂಪರೆಯ ಮಹತ್ವವನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ೩: ಕನ್ನಡ ಜೈನ ಹಾಡುಗಳು : ಉಗಮ-ವಿಕಾಸ**

ಕನ್ನಡ ಸಾಹಿತ್ಯವನ್ನು ಪೋಷಿಸಿ ಬೆಳೆಸಿದವರು ಜೈನ ಕವಿಗಳು. ಸಾಹಿತ್ಯ ಸೃಷ್ಟಿ, ಸಂರಕ್ಷಣೆ ಮತ್ತು ಪ್ರಸಾರಗಳಲ್ಲಿ ಜೈನರು ಮೊದಲಿಗರು. ಈ ದೃಷ್ಟಿಯಿಂದ ಲೌಕಿಕ, ಆಗಮಿಕ, ದೇಸಿ-ಮಾರ್ಗ, ಪುರಾಣ-ಇತಿಹಾಸ, ಸಮನ್ವಯತೆಯನ್ನು ಏಕಕಾಲದಲ್ಲಿ ಪ್ರಚುರಪಡಿಸಿದ ಹೆಗ್ಗಳಿಕೆಯೂ ಇವರದು. ಅದೇ ರೀತಿ ಹಾಡುಗಳನ್ನು ಕಟ್ಟಿ ಹಾಡುವುದರ ಮೂಲಕ ಕನ್ನಡ ಗೀತಾ ಸಾಹಿತ್ಯಕ್ಕೆ ಬಹುದೊಡ್ಡ ಕೊಡುಗೆಯನ್ನು ನೀಡಿದ್ದಾರೆ. ಪ್ರಸ್ತುತ ಅಧ್ಯಾಯದಲ್ಲಿ ಕನ್ನಡ ಜೈನ ಹಾಡುಗಳು ಉಗಮ, ವಿಕಾಸ, ನೆಲೆಗಳನ್ನು ಕುರಿತು ಸ್ಥೂಲವಾಗಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ ೪: ಜೈನ ಹಾಡುಗಳು ವಸ್ತು ವೈವಿಧ್ಯತೆ**

ಜೈನ ಹಾಡುಗಳು ಧಾರ್ಮಿಕ ಆಚಾರ-ವಿಚಾರಗಳಲ್ಲದೆ, ತೀರ್ಥಂಕರರ ಹಾಗೂ ಆ ಧರ್ಮದಲ್ಲಿ ಆಗಿ ಹೋದ ಮಹಾಪುರುಷರ ಜೀವನ, ಇತಿ ವೃತ್ತಾಂತ, ಸ್ತುತಿ ಮೊದಲಾದ ವೈವಿಧ್ಯಮಯ ವಸ್ತು ವಿಷಯಗಳನ್ನು ಒಳಗೊಂಡಿದೆ. ಹಾಡುಗಳ ವಸ್ತುವೈವಿಧ್ಯತೆಯನ್ನು ಅನುಲಕ್ಷಿಸಿ ರತ್ನಾಕರನ ಹಾಡುಗಳು, ತೀರ್ಥಂಕರರ ಹಾಡುಗಳು, ಯಕ್ಷ-ಯಕ್ಷಿಣಿಯರ ಹಾಡುಗಳು, ಜೋಗುಳ ಹಾಡುಗಳು, ಶೋಭಾನ ಹಾಡುಗಳು, ಮಂಗಳಾರತಿಯ ಹಾಡುಗಳು ಮತ್ತು ಸಂಕೀರ್ಣ ಹಾಡುಗಳೆಂದು ವರ್ಗೀಕರಿಸಿಕೊಂಡು ಅವುಗಳ ಮಹತ್ವ ಹಾಗೂ ಸಾಹಿತ್ಯಿಕ ಅಂಶಗಳನ್ನು ಕುರಿತು ಇಲ್ಲಿ ವಿವರಿಸಲಾಗಿದೆ.

**ಅಧ್ಯಾಯ ೫: ಜೈನ ಹಾಡುಗಳು : ಸಾಂಸ್ಕೃತಿಕ ನಿರ್ವಚನ**

ಜೈನಧರ್ಮದಲ್ಲಿ ಮೊದಲಿನಿಂದಲೂ ಮಹಾಕಾವ್ಯಗಳು ರಚನೆಯಾಗಿರುವಂತೆ ಹಾಡುಗಳೂ ಸಹ ರಚನೆಯಾಗಿವೆ. ಈ ಹಾಡುಗಳು ತೀರ್ಥಂಕರರ ಚರಿತ್ರೆ, ಸ್ಥಳಪುರಾಣ, ಆಚಾರ-ವಿಚಾರಗಳನ್ನು ಕುರಿತಾದ ವಿಷಯಗಳನ್ನು ಒಳಗೊಂಡಿದೆ. ಬದುಕಿನ ಜಂಜಡಗಳಿಂದ ಪಾರಾಗಲು ಧ್ಯಾನ-ಜಪ-ತಪಗಳ ಮಹತ್ವವನ್ನು ಇವು ಬೋಧಿಸುತ್ತವೆ. ಸಾಮಾಜಿಕ ವ್ಯವಸ್ಥೆಯ ಮೇಲೆ ಈ ಹಾಡುಗಳ ಪ್ರಭಾವ ಉಂಟಾಗಿದೆ. ವಿಶೇಷವಾಗಿ ಕರ್ನಾಟಕ ಜೈನಸಂಸ್ಕೃತಿ, ತೀರ್ಥಂಕರರ ಚರಿತ್ರೆ ಹಾಗೂ ಸ್ಥಳಪುರಾಣಗಳನ್ನು ಹಾಡುಗಳ ಮೂಲಕ

ನಿರ್ವಚಿಸಿಕೊಂಡ ಬಗೆಯನ್ನು ಮತ್ತು ಇದರ ಜೊತೆಗೆ ಈ ಹಾಡುಗಳ ಶೈಲಿ, ಭಾಷೆ, ಛಂದಸ್ಸು, ಲಕ್ಷಣ ಮೊದಲಾದ ಸಾಹಿತ್ಯಿಕ ಅಂಶಗಳನ್ನು ಈ ಅಧ್ಯಾಯದಲ್ಲಿ ನಿರ್ವಚಿಸಲಾಗಿದೆ.

**ಅಧ್ಯಾಯ ೬: ಸಮಾರೋಪ**

ಈ ಅಧ್ಯಾಯ ಸಮಾರೋಪವಾಗಿದ್ದು, ಒಟ್ಟಾರೆ ಅಧ್ಯಯನದಿಂದ ಕಂಡುಕೊಂಡಂತಹ ಫಲಿತಗಳನ್ನು ವಿಶ್ಲೇಷಿಸಲಾಗಿದೆ. ಮತ್ತು ಅನುಬಂಧಗಳಲ್ಲಿ ವಕ್ತೃ ವಿವರ, ಜೈನ ಹಾಡುಗಳ ಪಾರಿಭಾಷಿಕ ಪದಕೋಶ, ಪರಾಮರ್ಶನ ಗ್ರಂಥಗಳು, ಛಾಯಾಚಿತ್ರಗಳನ್ನು ಕೊಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಶಾಸನ ಪದ್ಯ ಮಂಜರಿ, ಮಿರ್ಜಿ ಅಣ್ಣಾರಾಯ, ಪುಟ ೨೫೦.

೨. ಕರ್ನಾಟಕದ ಮಠಗಳು ಮತ್ತು ಕನ್ನಡ ಸಾಹಿತ್ಯ, ಡಾ. ಕೆ. ರವೀಂದ್ರನಾಥ, ಪುಟ ೩.

□□□

ಅಧ್ಯಾಯ : ಎರಡು

# ಕನ್ನಡ ಹಾಡುಗಬ್ಬ ಸಾಹಿತ್ಯ

---

## ಅಧ್ಯಾಯ : ಎರಡು

# ಕನ್ನಡ ಹಾಡುಗಬ್ಬ ಸಾಹಿತ್ಯ

ಸಾಹಿತ್ಯ ಮತ್ತು ಜೀವನದ ಸಂಬಂಧ ಅವಿನಾಭಾವದ್ದು. ಮಾನವನ ಸಹಜ ಆಸೆ-ಆಕಾಂಕ್ಷೆಗಳ ಅರ್ಥ ಸೃಷ್ಟಿಯೇ ಜೀವನ. ಅದರ ಅನುಭವಗಮ್ಯವಾದ ಶಬ್ದ ಸೃಷ್ಟಿಯೇ ಸಾಹಿತ್ಯ. ಆದ್ದರಿಂದ ಸಾಹಿತ್ಯವೆಂಬುದು ಜನಜೀವನದ ಗತಿಬಿಂಬವೂ ಹೌದು, ಪ್ರತಿಬಿಂಬವೂ ಹೌದು. ಅದು ಯಾವಾಗಲೂ ಸಮಾಜಮುಖಿ ಪರಿವರ್ತನಾಶೀಲತೆಯನ್ನು ತನ್ನ ಗುಣವಾಗಿಸಿಕೊಂಡಿರುವ ಸಾಹಿತ್ಯ ಸಮಾಜದಲ್ಲಿ ನಡೆಯುವ ಸ್ಥಿತ್ಯಂತರಗಳನ್ನು ಬಹಿರಂಗಗೊಳಿಸಲು ಹವಣಿಸುತ್ತದೆ. ಆ ಮೂಲಕ ಅಭಿವ್ಯಕ್ತವಾಗುವಾಗ ಹಲವು ರೂಪಗಳಿಗೆ ತನ್ನನ್ನು ತೆರೆದುಕೊಳ್ಳುತ್ತದೆ. ಅದು ಮಾನವನ ಭಾವಗಳಲ್ಲಿ ಕಾವ್ಯವಾಗಬಹುದು, ನಾಟಕ, ಕಥೆಯಾಗಬಹುದು. ಭಾವಸತ್ವವನ್ನು ಒರೆಗಲ್ಲಿಗೆ ಹಚ್ಚುವ ವಿಮರ್ಶೆಯೂ ಆಗಬಹುದು. ಬೇಂದ್ರೆಯವರು ಹೇಳುವಂತೆ 'ಬುದ್ಧಿಭಾವಗಳ ವಿದ್ಯುದಾಲಿಂಗನವೂ, ಓಂಕಾರದ ನಾದಕ್ಕಿಂತ ಕಿಂಚಿದೂನ'ವೂ ಆಗಿರಬೇಕಾಗುತ್ತದೆ. ಸಾಹಿತ್ಯವೆಂಬುದು ಆಗಿಹೋದ ಕ್ರಿಯೆಯಾಗದೆ ನಿರಂತರವಾಗಿ ಆಗುವ ಕ್ರಿಯೆಯಾಗಬೇಕು. ಸಾಹಿತ್ಯವಾಹಿನಿಯು ಯುಗಧರ್ಮಕ್ಕನುಗುಣವಾಗಿ ತನ್ನ ಪ್ರವಾಹವನ್ನು ವಿವಿಧ ಬಣ್ಣಗಳಾಗಿ ಪ್ರವಹಿಸಿ ಸಹಜ ಸತ್ಯ, ಸುಂದರ ಮತ್ತು ರಮಣೀಯವಾಗುತ್ತದೆ.

ಸಾಹಿತ್ಯ ಜನಮುಖಿಯಾಗಿ ಸ್ಪಂದಿಸುವ ಕೆಲಸ ಮಾಡುತ್ತ ಜನರಿಗೆ ಸನಿಹವಾಗುವ ವಿವಿಧ ಬಗೆಯ ರೂಪಗಳಿಗೆ ಅನುವು ಮಾಡಿಕೊಡುತ್ತದೆ. ಯಾವುದೇ ಪ್ರತಿಭಾವಂತ ಕವಿಯು ಭುವನದ ಭಾಗ್ಯವೆನ್ನುವಂತೆ ಕಾಲಮಾನದ ಅರಿವಿನೊಂದಿಗೆ ತನ್ನಲ್ಲಿರುವ ಜ್ವಾಲಾಮುಖಿ ಸ್ವರೂಪದ ಅನುಭವವನ್ನು ಏಕಾಂತದೊಳಗಿರಿಸಿ ಸಾಹಿತ್ಯ ರೂಪಗಳಿಗೆ ಕಾರಣಕರ್ತನಾಗುತ್ತಾನೆ. ಒಂದೊಂದು ಕಾಲದಲ್ಲಿ ಒಂದೊಂದು ರೂಪವು ಜನಪ್ರಿಯತೆ ಯನ್ನು, ಕವಿಪ್ರಿಯತೆಯನ್ನು ಪಡೆದುಕೊಳ್ಳಲು ಹಂಬಲಿಸುವಂತೆ ಮಾಡುತ್ತಾನೆ. ತನ್ನ ಕಾಲದಂತೆಯೇ ಮುಂದೆ ಬರುವ ಕವಿ ಪರಂಪರೆಯು ಅದರಲ್ಲಿ ಕೃಷಿಗೈದು ಅದನ್ನು ಭದ್ರಗೊಳಿಸಲು ಪ್ರಯತ್ನಪಡುತ್ತ ಶಾಶ್ವತವಾಗಿ ನಿಲ್ಲುವಂತೆ ಮಾಡುತ್ತಾನೆ. ತದನಂತರ ಅದು ದೊಡ್ಡ ರೀತಿಯಲ್ಲಿ ಪ್ರಭಾವಿಸುತ್ತ ಪ್ರಕಾರವೊಂದರ ಅಸ್ತಿತ್ವ ಪಡೆಯುತ್ತದೆ. ಹೀಗೆ ಅನೇಕ ಸಾಹಿತ್ಯ ಪ್ರಕಾರಗಳು ಕನ್ನಡ ಸಾಹಿತ್ಯ ಚರಿತ್ರೆಯ ಪುಟಗಳನ್ನು ತಿರುವಿದಾಗ ದೃಗ್ಗೋಚರವಾಗುತ್ತವೆ. ಒಂದೊಂದು ಪ್ರಕಾರವೂ ತನ್ನದೇ ಆದ ವಿಶಿಷ್ಟತೆ, ಶೈಲಿ, ವಸ್ತು, ಭಾಷೆ, ತಂತ್ರ,

ನಿರೂಪಣೆಯ ವೈವಿಧ್ಯತೆಯೊಂದಿಗೆ ಬೆಳೆದಿರುವುದನ್ನು ಕಾಣುತ್ತೇವೆ. ಯಾವುದೇ ಸಾಹಿತ್ಯ ಚರಿತ್ರೆಯನ್ನು ತೆಗೆದುಕೊಂಡರೂ ಸಾಹಿತ್ಯ ಸ್ಥಿತ್ಯಂತರಗಳು ಸಂಭವಿಸಿರುವುದರಿಂದ ಕನ್ನಡ ಸಾಹಿತ್ಯವೂ ಇದಕ್ಕೆ ಹೊರತಾಗಿಲ್ಲ.

ಕ್ರಿ.ಶ.೮೧೪-೮೭೭ರಲ್ಲಿದ್ದ ರಾಷ್ಟ್ರಕೂಟರ ಅಮೋಘವರ್ಷ ನೃಪತುಂಗನ ಕಾಲದಲ್ಲಿ ಅವನ ಅಭಿಮತದ ಮೇರೆಗೆ ರಚಿತವಾದ ಶ್ರೀವಿಜಯನ 'ಕವಿರಾಜಮಾರ್ಗ'ದಲ್ಲಿ 'ಬಾಜನಗಬ್ಬ ಮತ್ತು ಹಾಡುಗಬ್ಬ' ಎಂಬ ಸಾಹಿತ್ಯ ರೂಪಗಳು ನಮಗೆ ಉಲ್ಲೇಖಿತ ರೂಪದಲ್ಲಿ ಲಭಿಸುತ್ತವೆ. ಅಲ್ಲಿಯವರೆಗೆ ಈ ರೀತಿಯ ಸಾಹಿತ್ಯಕ್ಕೆ ಅವಕಾಶವಿರಲಿಲ್ಲವೇ? ಎಂಬ ಪ್ರಶ್ನೆಯೊಂದು ಎದುರು ನಿಲ್ಲುತ್ತದೆ. ಹೆಸರಿಲ್ಲದ, ಹೆಸರೊಲ್ಲದ, ಕಾಲಾತೀತವಾದ ಜನಪದ ಸಾಹಿತ್ಯವು ಮನುಷ್ಯನ ಹುಟ್ಟಿನೊಂದಿಗೇ ಆರಂಭವಾಗುತ್ತದೆ. 'ಜನವಾಣಿ ಬೇರು, ಕವಿವಾಣಿ ಹೂವು' ಎನ್ನುವಾಗಲೂ ಒಂದು ಸಂಸ್ಕೃತಿಯ ಮೂಲ ಬೇರುಗಳು ಜನಪದರಲ್ಲಿಯೇ ಅಡಕಗೊಂಡಿವೆ. ಪ್ರಕೃತಿಯ ಮಡಿಲೇ ಪ್ರೇರಣೆಯೊದಗಿಸಿದ್ದು ದೈನಂದಿನ ಬದುಕು ನೀಡಿದ ಅನುಭವ ಸಂಪತ್ತನ್ನು ಸಮೃದ್ಧ ಸಾಹಿತ್ಯವಾಗಿಸಿದರು. ಅವರು ಆಡುವಾಗ, ಹಾಡುವಾಗ ಎರಡರಲ್ಲೂ ಅನುಭವಿಸಿದ ಅನುಭವಗಳಿಗೆ ಮೂರ್ತರೂಪ ನೀಡುತ್ತಲೇ ಅಮೂರ್ತವಾಗಿಸಿದ ಸಾಹಿತ್ಯ ಪ್ರಕಾರಗಳುಂಟು.

ಕನ್ನಡ ಸಾಹಿತ್ಯವನ್ನು ಅವಲೋಕಿಸಿದರೆ ಪ್ರೇರಣೆ ನೀಡಿದ ಧರ್ಮ, ಸಾಹಿತ್ಯ, ಸಮಾಜ, ಪ್ರಭುತ್ವ ಮುಂತಾದ ವಿಷಯಗಳು ಗ್ರಾಹ್ಯವಾಗುತ್ತವೆ. ಕನ್ನಡ ಸಾಹಿತ್ಯ ಸಂಸ್ಕೃತದ ಎಂಜಲು ಎಂದೆನಿಸಿದಾಗ್ಯೂ, ಸಂಸ್ಕೃತ ಭಾಷೆಯ ಹಿಡಿತದಿಂದ ತಪ್ಪಿಸಿಕೊಂಡು, ಕನ್ನಡದ ದೇಸೀಯತೆ ರೂಢಿಸಿಕೊಂಡು ಬೆಳೆದ ಸಾಹಿತ್ಯ ಪರಂಪರೆಯೊಂದಿದೆ. ಒಂದು ಕಾಲದ ಬಾಜನಗಬ್ಬವು ಹಾಡುಗಬ್ಬವಾಗುವ ಸಂಕ್ರಮಣದ ಹಾದಿ ತುಳಿದಿರಬೇಕೆ ನಿಸುತ್ತದೆ. ಕನ್ನಡ ಸಾಹಿತ್ಯವು ತನ್ನ ಸ್ವರೂಪವನ್ನು ಪಡೆಯುವ ಮುನ್ನವೇ ಹಾಡುಗಬ್ಬದ ಉಲ್ಲೇಖಗಳು ಲಭಿಸುತ್ತವೆ. ಮನುಷ್ಯನ ಉದಯವು ಪ್ರಕೃತಿಯ ನಡುವೆ ಇದ್ದ ಕಲರವಗಳು ಹಾಡುಗಳಿಗೆ ಪ್ರೇರಣೆಯೊದಗಿಸಿರ ಬಹುದು. ಮಾನವನ ಅಂತಸ್ಸತ್ವ ಪ್ರಕಟವಾಗುವ ತಾಯಿಯ ಜೋಗುಳ ಹಾಡಿನಿಂದಿಡಿದು ಇಂದಿನ ಶಾಸ್ತ್ರೀಯ ಸಂಗೀತ ಪರಂಪರೆಯವರೆಗೆ ಈ ಹಾಡುಗಬ್ಬದ ಹಾದಿ ತನ್ನ ವಿಸ್ತಾರವನ್ನು ಹರಹಿಕೊಂಡಿದೆ. ಜನಪದರಲ್ಲಿಯೇ ಇದರ ಮೂಲವಿರುವುದರಿಂದ ಮನುಷ್ಯನ ಬುದ್ಧಿ ವಿಕಸನದ ಜೊತೆಯಲ್ಲಿಯೇ ಸಾಂಸ್ಕೃತಿಕ ಮನೋಭಾವದ ವಿಕಾಸವಾಗಿ ಹಾಡಿನ ಕಲ್ಪನೆಗೆ ನಾಂದಿ ಹಾಡಿದೆ. ಪ್ರಪಂಚದ ಸಾಹಿತ್ಯವನ್ನು ಗಮನಕ್ಕೆ ತಂದುಕೊಂಡರೆ ಗ್ರಂಥಸ್ಥ ಸಾಹಿತ್ಯಕ್ಕಿಂತ 'ತೋಂಡಿ ಸಾಹಿತ್ಯ'ವು ಪ್ರಧಾನ ನೆಲೆಗೆ ಬಂದು ನಿಲ್ಲುತ್ತದೆ. ಶಿಷ್ಟ ಸಾಹಿತ್ಯದ ಉಗಮ, ವಿಕಾಸಕ್ಕೆ ಈ ಸಾಹಿತ್ಯವೇ ಮೂಲವೆಂಬಲ್ಲಿ ಯಾವುದೇ ಶಂಕೆಯಿಲ್ಲ.

ಸಿಂಪಿ ಲಿಂಗಣ್ಣನವರು ಅಭಿಪ್ರಾಯಿಸುವಂತೆ "ಬಹಳ ಪ್ರಾಚೀನ ಕಾಲದಿಂದಲೂ ಹಾಡುವಂತಹ ರಚನೆಗಳು ಗೇಯ ರಚನೆಗಳೆನಿಸಿಕೊಂಡಿವೆ. ಹಾಡುವಂತಹ ಪದಗಳು ಮನುಷ್ಯನ ಹುಟ್ಟಿನೊಂದಿಗೆ ಜನ್ಮ ತಾಳಿದವೆಂದು, ಜೀವ ಮತ್ತು ಗೀತೆಗಳು ಕೈ ಕೈ ಹಿಡಿದುಕೊಂಡು ಬಂದವೆಂದು ಪದ್ಯಕ್ಕಿಂತ ಮೊದಲು 'ಪದ' ಹುಟ್ಟಿದೆ"[೧] ಎಂದಿದ್ದಾರೆ. ಈ ಹೇಳಿಕೆಯನ್ನು ನೋಡಿದಾಗ 'ಹಾಡು' ಅಥವಾ 'ಪದ' ಎಂಬ ಪರಿಕಲ್ಪನೆ ಬಹಳ ಪ್ರಾಚೀನವಾದುದು. ಮನುಷ್ಯನು ತನ್ನ ದೈನಂದಿನ ಬದುಕು ನೀಡಿದ ಸುಖ-ದುಃಖ ಸಂದರ್ಭಗಳೆರಡರಲ್ಲೂ ಹಾಡುತ್ತಲೇ ಬಂದಿರುವುದು ಇಂದಿಗೂ ಗೋಚರಿಸುವುದು.

## ೨.೧. ಹಾಡುಗಬ್ಬ ಸಾಹಿತ್ಯ: ಅರ್ಥ

ಸಾಹಿತ್ಯವು ಸಹಜವಾಗಿದ್ದರೆ ಅದು ಸತ್ಯಸುಂದರವೆನಿಸುತ್ತದೆ. ಯುಗಾಂತರದಲ್ಲಿ ಅದು ಅಚ್ಚಳಿಯದ ತನ್ನ ಪ್ರಭಾವವನ್ನುಳಿಸಿಕೊಂಡು ಸಾಂಸ್ಕೃತಿಕ ಬದುಕಿನ ಮೇಲೂ ಇದರ ಛಾಯೆ ಕಾಣಸಿಗುತ್ತದೆ. ಮಾನವನ ಭಾವಗಳಿಗೆ ಅಮೂರ್ತವಾದ ಆಕಾರವನ್ನು ನೀಡುತ್ತಾ ಸಾಗಿದಂತೆ ಅದು ಬಾಜನಗಬ್ಬವಾಗಿಯೋ, ಹಾಡುಗಬ್ಬ ವಾಗಿಯೋ ರೂಪಾಂತರ ಹೊಂದುತ್ತದೆ. ನಿರಾಭರಣ ಸೌಂದರ್ಯವೇ ಪ್ರಧಾನ ಗುಣವಾಗಬೇಕು. ಅದು ಸ್ವಚ್ಛಂದವಾಗಿ ಹರಿಯುವ ನಿರ್ಮಲವಾದ ಪ್ರವಾಹದಂತಿರಬೇಕು. ಅನುಭವದ ಕಣ್ಣಿಂದ ನಡೆ ನುಡಿಯು ಉಸಿರಾಗಬೇಕು.

ಜನಪದ ಸಾಹಿತ್ಯದಲ್ಲಿಯೇ ಇಂತಹ ಬಿಡಿಪದ, ಪದ್ಯಗಳ ಹುಲುಸಾದ ಬೆಳೆಯಿದೆ. ಪದ, ಪದ್ಯಗಳ ಮೂಲಕವೇ ಬದುಕು ಕಟ್ಟಿಕೊಂಡವರಿದ್ದಾರೆ. ಈ ಹಾಡುಗಳಿಗೆ ಗೇಯತೆ ಮತ್ತು ರಾಗ, ತಾಳ, ಲಯಗಳು ಯಾವುದೇ ಶಾಸ್ತ್ರೀಯ ಕೃತಿಗಳಿಂದ ಅಧ್ಯಯನ ಮಾಡುವ ಮೂಲಕ ಬಂದವುಗಳಲ್ಲ. ಅವೆಲ್ಲವೂ ನಿಸರ್ಗವಿತ್ತ ಕೊಡುಗೆಯೆಂದೇ ಭಾವಿಸಿದವರು ಜನಪದರಾಗಿದ್ದಾರೆ.

"ಕಾವ್ಯವಲ್ಲ ಕಥೆಯಲ್ಲ ನಾಡ ಶರಣರ ಹಾಡು
ಹಾಡುಗಬ್ಬವ್ವ ಸಬಗಾಗ |ಶಿ| ಏಜಾಣಿ
ದನಿಗೊಟ್ಟು ಹಾಡ ಕಲಿಯವ್ವ"

ಹಾಡುವುದು ಹಾಡುಗಬ್ಬ ಬೇಡುವುದು ಉಡಿಯಕ್ಕಿ
ಮಾಡುವುದು ನಿತ್ಯ ಶಿವಕಾಯಕ ||ಶಿ|| ಹರಿಹರನೆ
ನೀಡುವುದು ನಿತ್ಯ ಶಿವದಾನ"[೨]

ಈ ಎರಡು ಪದ್ಯಗಳಿಂದ ಹಾಡುಗಬ್ಬದ ರೂಪುರೇಷೆಗಳನ್ನು ನೋಡಬಹುದು. ಹಾಡುಗಬ್ಬವು ಪಂಡಿತರ ಕಾವ್ಯವಲ್ಲ. ಕಟ್ಟುಕಥೆಯಲ್ಲ, ನಾಡಿನವರ ಸತ್ಯಕಥಾನಕ, ಬದುಕಿನ ನಿಜ ಸಾರಸ್ವತ. ಇವುಗಳನ್ನು ಹಾಕಿದವರು ಓದು ಬರಹ ಬಾರದವರು. ದೈನಂದಿನ ಬದುಕಿಗೆ ದನಿಗೊಟ್ಟು ಹಾಡು ಕಲಿತವರು. ಹಾಡುವುದಕ್ಕೆ ಇರುವ ಹಾಡುಗಳೇ 'ಹಾಡುಗಬ್ಬ' ಎಂಬ ಮಾತು ಸರ್ವವಿದಿತವಾಗಿದೆ. ಹಾಡುಗಬ್ಬದಲ್ಲಿ ಬರುವ ಸೊಲ್ಲುಗಳು ಆಕರ್ಷಣೀಯವಾಗಿರುತ್ತವೆ. ಅವುಗಳ ಛಂದಸ್ಸು ಜನಪದರೇ ರೂಪಿಸಿದ್ದು, ಅವುಗಳ ಗಮ್ಯತೆ, ಗಂಭೀರತೆ ಹಾಡುವುದರಲ್ಲಿ, ಸೊಲ್ಲು ಸೊಲ್ಲಿಗೆ ರಾಗ ಪ್ರಾಧಾನ್ಯ, ಶಬ್ದವು ಅದರಲ್ಲಿ ಹಿಗ್ಗಬಹುದು ಅಥವಾ ಕುಗ್ಗಬಹುದು. ಹುಸಿಪೆಟ್ಟ ತಾಳಲಯದೊಡನೇ ರಾಗ ಕೊನೆಗೊಳ್ಳುವುದು. ಕನ್ನಡ ಹಾಡುಗಬ್ಬಗಳು ಬೆಳಕಿಗೆ ಬಂದರೆ ಕನ್ನಡ ಸಂಸ್ಕೃತಿಯ ಹೊಸ ಬೆಳಕು ವಿಸ್ತರಿಸುತ್ತದೆ. ಕನ್ನಡ ಸಾಹಿತ್ಯ ಪರಂಪರೆಯನ್ನು ಅವಲೋಕಿಸಿದರೆ ಹಾಡುಗಬ್ಬದ ಉಲ್ಲೇಖವು ಅನೇಕ ಕೃತಿಗಳಲ್ಲಿ ಕಂಡುಬರುತ್ತದೆ.

ಒಂದನೇ ನಾಗವರ್ಮನು ಹಾಡುಗಬ್ಬದ ವಿವರಣೆಯನ್ನು ನೀಡುತ್ತಾ "ಪಾಡುಗಳಿಂದಂ ತಜಿಸಲೆ ಮಾಡಿದುದಂ ಪಾಡುಗಬ್ಬವೆಂದು ಬುಧರ್ಕೊಂಡಾಡುವರ್"[೩] ಅಂದರೆ ಹಾಡುಗಳಿಂದ ಕೂಡಿದುದೇ ಹಾಡುಗಬ್ಬ ವಾಗಿದ್ದು ಇದನ್ನು ಗೇಯಕಾವ್ಯವೆಂದು ವಿದ್ವಾಂಸರು ಕೊಂಡಾಡುತ್ತಾರೆಂದು ಹೇಳಿದ್ದಾನೆ.

ಕನಕದಾಸರು 'ಮೋಹನತರಂಗಿಣಿ'ಯಲ್ಲಿ ಹಾಡುಗಬ್ಬವ ಕುರಿತು,

"ನಾಡೊಳಗುಳ್ಳ ಜಾಣರು ಜಾಣೆಯರೊಡ
ನಾಡುವ ಸವಿಮಾತುಗಳು
ಪಾಡುಗಬ್ಬವ ಪರುಠವಿಸಿದ ಬಗೆ"[೪]

ಎಂದಿದ್ದಾರೆ. ಸಮುದಾಯವೊಂದರ ಜನರು ಪರಸ್ಪರ ಹಿತವಾದ ಮಾತುಗಳನ್ನಾಡಿದರೆ ಅವುಗಳೇ ಮುಂದೆ ಹಾಡುಗಬ್ಬಗಳೆಂದು ತಿಳಿಯುವುದು ಎಂದು ವಿವರಿಸಿದ್ದಾರೆ. 'ಸವಿಮಾತು' ಎನ್ನುವಲ್ಲಿ ಕಿವಿಗೆ ಹಿತವಾಗುವ, ಇಂಪಾದ, ಸೊಂಪಾದ ಮಾತುಗಳನ್ನೆಬಹುದು. ಯಾವುದೇ ಕಾವ್ಯವು ಜನರಿಗೆ ಗೇಯಗುಣದಿಂದ ಕೂಡಿದ್ದಾಗಿರ ಬೇಕೆನ್ನುತ್ತಾರೆ. ಪ್ರಾದೇಶಿಕವಾಗಿ ವಿಭಿನ್ನವಾದ ದೇಸೀಯತೆ ಪ್ರಮುಖ ಲಕ್ಷಣವೆನಿಸುತ್ತದೆ.

ರತ್ನಾಕರವರ್ಣಿಯು ತನ್ನ 'ಭರತೇಶ ವೈಭವ'ದಲ್ಲಿ ಹಾಡುಗಬ್ಬದ ಉಲ್ಲೇಖ ಮಾಡುತ್ತ,

"ಕಬ್ಬಿಗರೋದುಗಬ್ಬವ ಹಾಡುಗಬ್ಬವ
ಕಬ್ಬರೊಳೆರೆವರಿವೆರಡು
ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ
ಕಬ್ಬೆ ಹೇಳಲೆ ಸರಸ್ವತಿಯೆ"

"ರಳ ಕುಳ ಶಿಥಿಲ ಸಮಾಸ ಮುಂತಾದವ
ರೊಳಗಿಲ್ಲಿ ಕೆಲವುಳ್ಳುರುಂಟು
ಕೆಲವಿಲ್ಲಾದರುವಿಲ್ಲವೇಕೆಂದವರ ಕೋ
ಟಲೆಯೇಕೆ ಹಾಡುಗಬ್ಬದೋಳ್"[೫] ಎಂದಿದ್ದಾನೆ.

ಪ್ರತಿಭಾವಂತ ಕವಿಗಳು ಓದು(ವಾಚನ, ಭಾಜನ)ಗಬ್ಬವನ್ನಾದರೂ ರಚಿಸಲಿ; ಹಾಡುಗಬ್ಬವನ್ನಾದರೂ ರಚಿಸಲಿ, ಅದು ಕಬ್ಬಿನಿಂದ ಒಸರುವ ರಸವಾಗಬೇಕು. ಅದು ಬಿದಿರಂತೆ ಟೊಳ್ಳಾಗಿರಬಾರದು. ಅಂತಸ್ಸತ್ವದಿಂದ ಕವಿಯ ಮನೋಭಾವನೆಗಳು ಪ್ರಕಾಶಿಸುವಂತಿರಬೇಕು. ಅವುಗಳಿಗೆ ಶಾಸ್ತ್ರೀಯವಾದ ವಿಧಿ-ನಿಯಮಗಳನ್ನು ಅಳವಡಿಸಿ ಸೊರಗಿ ಕೊರಗುವಂತಿರಬಾರದು. ಬದಲಿಗೆ ರಸಾನಂದವುಂಟು ಮಾಡಬೇಕೆನ್ನುತ್ತಾನೆ. ಮೂರನೇ ಮಂಗರಸನು ಹಾಡುಗಬ್ಬವನ್ನು ಕುರಿತು 'ನೇಮಿಜಿನೇಶ ಸಂಗತಿ' ಕೃತಿಯಲ್ಲಿ

"ಜಿನಪದ ಭಕ್ತ ಮಂಗರಸನಾನೀ ಮುಕ್ತಿ
ವನಿತೇಶ ನೇಮಿತೀರ್ಥಂಕರ
ಎನುತಮಪ್ಪ ಕಥನವ ಪಾಡುಗಬ್ಬ
ದೊಳನುಗೆಯ್ದು ತಾನದಂತೆನಲು"[೬]

ಮೋಕ್ಷದಾಯಕವೆನಿಸುವ ನೇಮಿನಾಥನ ಕೃತಿಯನ್ನು ವಿಶಿಷ್ಟವಾಗಿ ಹೊಸದೆನಿಸುವಂತಹ ಕಥಾನಕವನ್ನು ರಚಿಸಲು ಬಾಜನಗಬ್ಬಕ್ಕಿಂತಲೂ ಹಾಡುಗಬ್ಬ ಹಿತವೆನಿಸಿದ್ದರಿಂದ ಅದರಂತೆ ಜಿನಧರ್ಮನಿಷ್ಠನಾದ ಮಂಗರಸನು

ನೇಮಿಜಿನೇಶ ಸಂಗತಿಯನ್ನು ರಚಿಸುವೆನೆಂದು ಹೇಳಿಕೊಂಡಿದ್ದಾನೆ. ನನ್ನಯ್ಯನ ಚರಿತ್ರೆಯಲ್ಲಿ "ಈ ಕೃತಿಯನ್ನು ಪಾಡುಗಬ್ಬವು ಪೇಳಿದ ಭೂಕಾಂತ ಮೇದಿನಿರಾಯ" ಎಂದಿರುವುದರಿಂದ ನನ್ನಯ್ಯ ಚರಿತ್ರೆಯು ಹಾಡುಗಬ್ಬದಲ್ಲಿ ರಚಿಸಿರುವುದು ತಿಳಿಯುತ್ತದೆ. ಹಾಡುಗಬ್ಬವನ್ನು ಕುರಿತು "ಅರವತ್ತು ಮೂರು ಪುರಾತನರ ಚರಿತ್ರೆ"ಯಲ್ಲಿ

"ಗೂಢಾರ್ಥ ಚಿತ್ರಶಬ್ದಾಡಂಬರಗಳೇ
ಹಾಡುಗಬ್ಬ ದೊಳೇತಕೆಂದು
ನಾಡೆ ಕನ್ನಡ ದೇಶೀಯ ಭಾಷೆಗಳಿಂದ
ಪಾಡೆದೆನೀ ಶಿವಕೃತಿಯ"[೭]

ಕಾವ್ಯವೊಂದು ಅಭಿವ್ಯಕ್ತಿಸುವ ವಾಚ್ಯಾರ್ಥ, ಲಕ್ಷ್ಯಾರ್ಥ, ವ್ಯಂಗ್ಯಾರ್ಥ, ಚಿತ್ರಕವಿತ್ವ, ಶಬ್ದಾಡಂಬರಗಳಿಂದ ಮುಕ್ತವಾದ ಜನರ ಮನಕ್ಕೆ ಹತ್ತಿರವಾಗುವ, ನಾಟುವ, ದೇಸೀಯತೆ ಪ್ರಧಾನವಾದ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿ ಶಿವಶರಣರ ಅರವತ್ತೂರುಜನ ಸಿದ್ಧಿ ಸಾಧನೆ ಕುರಿತು ಹೇಳುತ್ತಿದ್ದೇನೆ ಎಂದಿದ್ದಾನೆ ಕವಿ.

'ಕನ್ನಡ ಸಾಹಿತ್ಯ ಪರಿಷತ್ತು' ಪ್ರಕಟಿಸಿರುವ 'ಸಂಕ್ಷಿಪ್ತ ಕನ್ನಡ ನಿಘಂಟು'ವಿನಲ್ಲಿ "ಹಾಡುಗಬ್ಬ ವೆನ್ನುವುದಕ್ಕೆ, ಹಾಡುವುದಕ್ಕೆ ಅನುಕೂಲವಾದ ಕಾವ್ಯ, ಗೇಯ ಕಾವ್ಯ' ಎಂಬರ್ಥವನ್ನು ಸೂಚಿಸಿದೆ".[೮] ಓ.ಎಲ್.ನಾಗಭೂಷಣ ಸ್ವಾಮಿಯವರು ತಮ್ಮ 'ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ'ಯಲ್ಲಿ "ಬಾಜನ ಎಂಬ ಮಾತಿನ ಅರ್ಥ ವಾದನ ವಿಶೇಷ. ಇದು ಮೂಲತಃ ಹಾಡುಗಬ್ಬದ ಒಂದು ಮಾದರಿ' ಎನ್ನುತ್ತಾರೆ."[೯]

ಹೀಗೆ ಹಲವಾರು ಪೂರ್ವಸೂರಿಗಳಿಂದ ಇತ್ತೀಚಿನವರೆಗೆ 'ಹಾಡುಗಬ್ಬ'ದ ಅರ್ಥ ಮತ್ತು ವ್ಯಾಖ್ಯಾನವನ್ನು ನೀಡಿದ್ದಾರಾದರೂ 'ಇದಮಿತ್ಥಂ' ಎಂಬಂತೆ ಹೇಳುವುದು ಕಷ್ಟಸಾಧ್ಯ. ಕನ್ನಡ ಸಾಹಿತ್ಯದ ಉಗಮವಾದಂದಿನಿಂದಲೂ ಇಲ್ಲಿಯವರೆಗೆ ಎರಡು ಬಗೆಯ ಕಾವ್ಯಪ್ರವಾಹಗಳು ಹರಿಯುತ್ತ ಬಂದಿವೆ. ಬಾಜನ(ಓದು)ಗಬ್ಬ ಒಂದು ಬಗೆಯಾದರೆ, ಮತ್ತೊಂದು ಹಾಡುಗಬ್ಬ. ಒಂದು ಶಿಷ್ಟ ಸಾಹಿತ್ಯ ಪರಂಪರೆಯ ಪ್ರವಾಹವಾದರೆ; ಮತ್ತೊಂದು ದೇಸಿ ಸಾಹಿತ್ಯ ಪರಂಪರೆಯ ಸಾತತ್ಯ ಪ್ರವಾಹ. ಬಹುಬೇಗ ಜನರ ಮನೆ ಮನಗಳಿಗೆ ತಲುಪಿದ್ದು, ಮುಟ್ಟಿದ್ದು ಎರಡನೇ ಬಗೆಯದು ಎಂಬುದರಲ್ಲಿ ಅತಿಶಯೋಕ್ತಿಯಿರದು.

### ೨.೨. ಹಾಡುಗಬ್ಬ ಸಾಹಿತ್ಯ : ಉಗಮ-ಪ್ರಕಾರ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹಾಡುಗಬ್ಬ ಎಂಬ ಸಾಹಿತ್ಯ ಪ್ರಕಾರವು ಬಹು ಪ್ರಾಚೀನವೆನಿಸಿದ ದೇಶೀ ಮಟ್ಟು. ಇದರ ಪ್ರಾಚೀನತೆಯನ್ನು ಅವಲೋಕಿಸಿದರೆ ಇದು ಕವಿರಾಜಮಾರ್ಗಕ್ಕೂ ಪೂರ್ವದ್ದು. ಕವಿರಾಜಮಾರ್ಗದಲ್ಲಿ ಗದ್ಯಪದ್ಯ ಕವಿಗಳ ಉಲ್ಲೇಖ, ಗದ್ಯಕಥಾ ಪ್ರತೀತಿ, ಚತ್ತಾಣ-ಬೆದಂಡೆ, ಪಗರಣ ಮುಂತಾದ ವಿವಿಧ ಸಾಹಿತ್ಯ ಪ್ರಕಾರಗಳ ಉಲ್ಲೇಖವಿದೆ. ಮೇಲೆ ಹೆಸರಿಸಿದ ಕೆಲ ಕವಿಗಳು ಸಂಸ್ಕೃತ ಪದ್ಯಕವಿಗಳಾಗಿದ್ದು ಹಾಡುಗಬ್ಬ ಸಾಹಿತ್ಯ ಪ್ರಕಾರವನ್ನು ಸಂಸ್ಕೃತದಲ್ಲೂ ರಚಿಸಿರಬಹುದಾದ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಇದಕ್ಕೆ ಪೂರಕವಾಗಿ ಸಂಸ್ಕೃತದಲ್ಲಿ ರಚನೆಯಾದಂತಹ ಸಂಗೀತಶಾಸ್ತ್ರ ಗ್ರಂಥಗಳು, ಭರತನ ನಾಟ್ಯಶಾಸ್ತ್ರ, ಬೃಹದ್ದೇಶಿ, ನಾರದನ ಸಂಗೀತ ಮಕರಂದ, ಮೂರನೇ ಸೋಮೇಶ್ವರನ ಅಭಿಲಾಷಿತಾರ್ಥ ಚಿಂತಾಮಣಿ, ಈ ಎಲ್ಲಾ ಕೃತಿಗಳಿಂದಲೂ ಸಂಸ್ಕೃತದಲ್ಲೂ ಹಾಡುಗಬ್ಬವಿರಬಹುದೆಂದು ಊಹಿಸಲು ಶಕ್ಯವಿದೆ.

'ಕವಿರಾಜಮಾರ್ಗ'ದಲ್ಲಿ ಮೊಟ್ಟಮೊದಲ ಬಾರಿಗೆ ಹಾಡುಗಬ್ಬದ ಉಲ್ಲೇಖವನ್ನು ಮಾಡಲಾಗಿದೆ. ಚತ್ತಾಣ-ಬೆದಂಡೆ, ಓವನಿಗೆ-ಒನಕೆವಾಡು, ಮೆಲ್ವಾಡು, ಪಗರಣ ಮುಂತಾದ ಪದ್ಯಜಾತಿಗಳ ಉಲ್ಲೇಖವಿದ್ದು, ಹಾಡುಗಬ್ಬಕ್ಕೆ ಸುದೀರ್ಘ ಇತಿಹಾಸವಿದೆಯೆನ್ನುವುದು ಮನವರಿಕೆಯಾಗುತ್ತದೆ. ಕನ್ನಡದ ಮೊದಲ ಲಾಕ್ಷಣಿಕ ಗ್ರಂಥವೆನಿಸಿದರೂ ಅದರಲ್ಲಿರುವ ಕಾವ್ಯಪ್ರಭೇದಗಳಿಂದಲೂ ಮಹತ್ವದ ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ. ಕವಿರಾಜಮಾರ್ಗವು ತನ್ನ ಕಾಲದ ಭಾಷಾ ಸಾಹಿತ್ಯವನ್ನು ಕುರಿತು ಅಮೂಲ್ಯವಾದ ವಿಷಯಗಳನ್ನು ತಿಳಿಸುತ್ತದೆ. ಕನ್ನಡದಲ್ಲಿ ಚತ್ತಾಣ-ಬೆದಂಡೆ ಎಂಬ ಕಾವ್ಯರೂಪಗಳಿಗೆ ಕೆಲವು ಲಕ್ಷಣಗಳನ್ನು ವಿವರಿಸಲಾಗಿದೆ.

| **ಚತ್ತಾಣ(ಚಿತ್ರಾಯತನ)** | **ಬೆದಂಡೆ(ವಾದಂತಿಕ)** |
|---|---|
| ೧. ಇದು ಬಾಜನೆಗಬ್ಬ(ವಾಚಿಸತಕ್ಕದ್ದು) | ೧. ಪಾಡುಗಬ್ಬ(ಹಾಡತಕ್ಕದ್ದು) |
| ೨. ಇದರಲ್ಲಿ ಕಂದ, ಹಲವು ಸಂಸ್ಕೃತ ವೃತ್ತಗಳು ದೇಶೀಯ ಪದ್ಯ ಜಾತಿಗಳು ಬರುತ್ತವೆ | ೨. ಇದರಲ್ಲಿ ಕಂದಪದ್ಯ, ಒಂದೇ ಬಗೆಯ ಪ್ರಸಿದ್ಧ ವೃತ್ತ ಕಂಡುಬರುತ್ತದೆ. |
| ೩. ಇದು ಅಖಿಲ ವರ್ಣನೆಗಳಿಂದ ಕೂಡಿದ ಕಾವ್ಯ. ಬಹುಶಃ ದೀರ್ಘವಾಗಿರುತ್ತದೆ. | ೩. ಇದರಲ್ಲಿ ಇಡೀ ದೀರ್ಘವೂ ಅಲ್ಲದ ಅತಿ ಹ್ರಸ್ವವೂ ಅಲ್ಲದ ಅಡಕ ಕಾವ್ಯವಾಗಿರುತ್ತದೆ. |

'ನುಡಿಗೆಲ್ಲಂ ಸಲ್ಲುವ" ಎಂಬ ಪದ್ಯದ ಆಧಾರದಿಂದ ಈ ಚತ್ತಾಣ-ಬೆದಂಡೆಗಳು ಬೇರೆ ಭಾಷೆಯಲ್ಲಿ ಇಲ್ಲದೆ ಕನ್ನಡದಲ್ಲಿ ಮಾತ್ರ ಇರುವಂತಹವೆಂದು ತೀ.ನಂ.ಶ್ರೀ. ಅವರು ಹೇಳುತ್ತಾರೆ.

ಮುಳಿಯ ತಿಮ್ಮಪ್ಪಯ್ಯನವರು ಕನ್ನಡ ನುಡಿಯಲ್ಲಿ ಎಲ್ಲಕ್ಕೂ ಇದು ಸಲ್ಲದೆ ಕೆಲವಕ್ಕೆ ಮಾತ್ರ ಸಲ್ಲುತ್ತಿದ್ದಿರಬೇಕು. ಅಂದರೆ ಪೂರ್ವದ ಹಳಗನ್ನಡ ಬಳಕೆ ಮಾರ್ಗಕಾರನ ಕಾಲಕ್ಕಾಗಲೇ ಕಡಿಮೆಯಾಗಿದ್ದು, ತನ್ನ ಕಾಲಕ್ಕೆ ಹೊಂದದ ಹಳೆಯ ನುಡಿಗೆ ಇದು ಹೊಂದುವುದಿಲ್ಲ ಎಂದು ಅಭಿಪ್ರಾಯಿಸುತ್ತಾರೆ. ಕನ್ನಡ ಭಾಷೆ ಎಲ್ಲ ಸಾಹಿತ್ಯ ರೂಪಗಳಿಗೆ ಹೊಂದಿಕೆಯಾಗದೆ ಕೆಲವೇ ಪ್ರಕಾರಗಳಿಗೆ ಹೊಂದಾಣಿಕೆಯಾಗುತ್ತಿತ್ತು. ಅದು ಕವಿರಾಜಮಾರ್ಗಕಾರನ ಕಾಲಕ್ಕಾಗಲೇ ಪೂರ್ವದ ಹಳಗನ್ನಡವು ಬದಲಾವಣೆಯನ್ನು ಕಂಡುಕೊಳ್ಳಲು ತವಕಿಸುತ್ತಿತ್ತು. ಆದ್ದರಿಂದ ಕವಿರಾಜಮಾರ್ಗಕಾರನ ಕಾಲದ ಭಾಷೆಗೆ ಈ ಉಕ್ತಿ ಹೊಂದುವುದಿಲ್ಲ ಎಂದು ಅಭಿಪ್ರಾಯ ಪಡುತ್ತಾರೆ.

ಡಾ. ಎಂ.ಎಂ. ಕಲಬುರ್ಗಿಯವರು ಸಾಮಾನ್ಯರ ಮಟ್ಟದಲ್ಲಿ ತಂತಮ್ಮ ಪ್ರಾಂತಗಳಿಗೆ ವಿಶಿಷ್ಟವಾದ ಆಡುಭಾಷೆಯೊಂದು ಇರುತ್ತದೆ. ಇದು ನುಡಿಗೆಲ್ಲ ಸಲ್ಲದು ಭಾಷೆ ಎಂದು ಮೊದಲು ಗ್ರಂಥಸ್ಥ ಭಾಷೆಯಿಂದ ಭಿನ್ನವಾದ ಒಂದು ವಿವರಣೆಯನ್ನು ಕೊಟ್ಟು ಚತ್ತಾಣ-ಬೆದಂಡೆಗಳು ಕವಿರಾಜಮಾರ್ಗಕಾರನಿಗೆ ಹಿಂದೆ ಆಡುಮಾತಿನಲ್ಲಿದ್ದು ಜನಪದ ಕೃತಿಗಳಿಗೆ ಸಂಬಂಧಪಟ್ಟ ಕಾವ್ಯಜಾತಿಗಳಾಗಿದ್ದವು. ಇವುಗಳನ್ನು ಈಚಿನ ಕಾಲದಲ್ಲಿ ಪರಿಷ್ಕರಿಸಿ ಕಾವ್ಯದ ಅಂತಸ್ತಿಗೆ ಏರಿಸಲಾಯಿತು ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಹೀಗೆ ಅನೇಕ ವಿದ್ವಾಂಸರು ಕವಿರಾಜಮಾರ್ಗ ಪೂರ್ವದಲ್ಲಿ ಹಾಡುಗಬ್ಬ ಎಂಬ ಸಾಹಿತ್ಯ ಪ್ರಕಾರವಿತ್ತೇ, ಇಲ್ಲವೇ ಎಂಬ ಬಗ್ಗೆ ಚರ್ಚೆ ನಡೆಸಿದ್ದಾರೆ. ಈ ಕಾಲದ ಸುಪ್ರಸಿದ್ಧ ಕಾವ್ಯಗಳನ್ನೇ ಜನಪದ ಭಾಷೆಯ ಚತ್ತಾಣ-ಬೆದಂಡೆಗಬ್ಬಗಳ ಮೂಲಕ ರೂಪಿಸಿಕೊಂಡರೆಂಬ ಸುರಕ್ಷಿತವಾದ ಅರ್ಥ ಪ್ರಕಟವಾಗುತ್ತದೆ.

ಎರಡನೇ ನಾಗವರ್ಮ ತನ್ನ ಕಾವ್ಯಾವಲೋಕನದಲ್ಲಿ(ಆಶ್ವಾಸ? ಪದ್ಯ?) ಬೆದಂಡೆ ಬಗ್ಗೆ ವಿವರಿಸುತ್ತಾನೆ. ಕಂದಪದ್ಯ ಮತ್ತು ಒಂದು ಸುಪ್ರಸಿದ್ಧ ವೃತ್ತ ಒಟ್ಟುಗೂಡಿದರೆ 'ಪದ' ಎನಿಸಿಕೊಳ್ಳುತ್ತದೆ. ಈ ಪದಗಳು ಹನ್ನೆರಡಿದ್ದರೆ 'ಮೆಲ್ಪಾಡು' ಎನ್ನುತ್ತಾನೆ. ಅದೇ ಪದಗಳು ಯಥೋಚಿತವಾಗಿ ಹದಿನೈದು ಅಥವಾ ಇಪ್ಪತ್ತೈದು ಬಂದರೆ 'ಪಾಡು' ಎನಿಸಿಕೊಳ್ಳುತ್ತದೆ. ಪಾಡುಗಳಿಂದ ಕೂಡಿದುದೇ ಪಾಡುಗಬ್ಬ ಎನಿಸಿಕೊಳ್ಳುತ್ತದೆ.

ಡಾ.ಎಲ್.ಬಸವರಾಜು ಅವರು 'ಜಾತಿ' ಎಂಬುದನ್ನು 'ವಿಧ' ಎಂದು ಒಪ್ಪದೇ ಲೀಲಾವತಿಯ ಪದ್ಯವೊಂದರಿಂದ 'ಜಾತಿ' ಎಂದರೆ 'ಹಾಡು' ಎಂದು ಋಜುವಾತು ಮಾಡುವುದರ ಜೊತೆಗೆ ಸಂಸ್ಕೃತ ನಿಘಂಟುವಿನ ಅರ್ಥ ಕೂಡ ಇದೆ ಎಂದಿದ್ದಾರೆ. ನಾಗವರ್ಮನ ಪದ್ಯಗಳನ್ನು ವಿಶ್ಲೇಷಿಸುತ್ತ 'ಪದ' ಎಂದು ಬಳಸಿರುವುದು 'ಹಾಡು' ಎಂಬರ್ಥದಲ್ಲಿಯೇ ಎಂದಿದ್ದಾರೆ. ಶಿವದಾಸರು, ಹರಿದಾಸರು ಕೂಡ 'ಪದ' ಎಂದೇ ಕರೆಯುತ್ತಿದ್ದರೆಂಬ ಅಂಶವನ್ನು ನೆನಪಿಸಿ ಹೀಗೆ ಒಂದು ತೀರ್ಮಾನಕ್ಕೆ ಬರುತ್ತಾರೆ. ಬೆದಂಡೆಯೆನಿಸ ಬೇಕಾದರೆ ಕಂದ ವೃತ್ತಗಳ ಜೊತೆಗೆ ಜಾತಿ ಕೂಡಿಕೊಂಡು ಬರಬೇಕೆಂದು ಹೇಳುತ್ತಾರೆ.

ಅದರಿಂದ 'ಜಾತಿ' ಎಂಬ ಪದಕ್ಕೆ ಪರ್ಯಾಯ 'ವಾಚಿ' ಎಂಬುದು ಸತ್ಯವಾದುದು. ಬೆದಂಡೆಯಲ್ಲಿ ರುವುದೆಲ್ಲ ಕಂದ ವೃತ್ತಗಳು ಮಾತ್ರವೇ ಅಲ್ಲ, ಅದರಲ್ಲಿ ಹಾಡುಗಳು ವೃಂದ ವೃಂದವಾಗಿಯೇ ಬರುತ್ತವೆ. ಅಂದರೆ ಜಾತಿ ಎನ್ನುವ ಪದಕ್ಕೆ ವಿಧ ಅಥವಾ ನಮೂನೆ ಅರ್ಥವಲ್ಲ. ಅದೊಂದು ಹಾಡಿನ ರೂಪ ಎಂದು ಆಧಾರಸಹಿತವಾಗಿ ವಿವರಿಸಿದ್ದಾರೆ. ಒಟ್ಟಾರೆ 'ಜಾತಿ' ಎಂಬ ಪದ 'ಹಾಡು' ಎಂಬರ್ಥದಲ್ಲಿ ಬಳಕೆಯಲ್ಲಿತ್ತು ಎಂದು ಪರಿಗಣಿಸಬಹುದಾಗಿದೆ.

ಜನ್ನನ 'ಅನಂತನಾಥ ಪುರಾಣ'ದಲ್ಲಿ 'ಚಿತ್ರಾಯತನ ಹಾಗೂ ತ್ರಿದಂಡಿಕ' ಎಂಬ ಪದ್ಯಕಾವ್ಯಗಳ ಉಲ್ಲೇಖವಿದೆ. ಇದನ್ನು ವಿದ್ವಾಂಸರು ಚತ್ತಾಣ-ಬೆದಂಡೆ ಎಂದು ಗುರುತಿಸಿದ್ದಾರೆ. ಚಂದ್ರರಾಜನ 'ಮದನ ತಿಲಕ'ದಲ್ಲಿ 'ಕೊವಿಲ ಬೆದಂಡೆ'ಯ(೮-೨೯) ಎಂಬ ಪದ್ಯ ಶಾಂತಿನಾಥನ 'ಸುಕುಮಾರ ಚರಿತೆ'ಯ 'ವೀಣೆಯ ಕೊಳಲು'(೨-೨೪) ಎಂಬ ಪದ್ಯಗಳನ್ನು ಆಧರಿಸಿ ಎರಡು ಅಭಿಪ್ರಾಯಗಳನ್ನು ಹೊಸದಾಗಿ ವ್ಯಕ್ತಪಡಿಸುತ್ತಾರೆ.

೧. ಇದು ಚಂಚಲ ಸ್ವಭಾವದ ಅಥವಾ ಲಘು ಸ್ವಭಾವದ ಜನರಿಗೆ ಪ್ರಿಯವಾಗಿದ್ದಿತು. ಅಂದರೆ ಆ ಕಾಲದವರು ಬೆದಂಡೆ ಅಥವಾ ಗೇಯಕೃತಿಗಳನ್ನು ಅಶ್ಲೀಲ ಸಾಹಿತ್ಯಕ್ಕೆ ಸೇರಿಸಿದ್ದರೆಂದು ಕಾಣುತ್ತದೆ.

೨. 'ಬೆದಂಡೆ' ಹಾಡುವವರು ಗೌರವಸ್ಥರಲ್ಲ. ಅದನ್ನು ಹಾಡುವುದು, ಕೇಳುವುದು ಎರಡೂ ಮರ್ಯಾದೆ ತರತಕ್ಕವಲ್ಲ ಎಂದು ಹೇಳುತ್ತಾರೆ. ಇದಕ್ಕೆ ಪ್ರತಿಯಾಗಿ ಇದು ಪಂಡಿತರ ಕಾವ್ಯಗೋಷ್ಠಿಯಿಂದ ವಂಚಿತರಾದ ಜನಸಾಮಾನ್ಯರಿಗೆ ಪ್ರಿಯವಾಗಿದ್ದಿತು. ಆ ಕಾಲದ ಜನರು ಬೆದಂಡೆಯನ್ನು ಜನಪ್ರಿಯ ಸಾಹಿತ್ಯಕ್ಕೆ ಸೇರಿಸಿದ್ದ ರೆಂದು ಕಾಣುತ್ತದೆ.

ಕಲಾವಿದರು ಗೌರವಸ್ಥರಲ್ಲ ಎಂಬ ಅರ್ಥರಹಿತ ಭಾವನೆಯನ್ನು ಎಲ್ಲಾ ವಾದಕರು ಕೂಡ ಬೆದಂಡೆ (ವೀಣೆ) ವಾದಕರಿಗೆ ಅನ್ವಯಿಸಿ ಹೇಳುವುದನ್ನು ಬೆದಂಡೆ ಗಬ್ಬದ ವಸ್ತು, ಕವಿ, ಆರೋಪಿಸಿರುವುದು ತೀರ ಎಳೆಯದಾದಂತಹ ಅಭಿಪ್ರಾಯವಾಗಿದೆ. ಈ ವಾದವನ್ನು ವಿದ್ವಾಂಸರು ತಿರಸ್ಕರಿಸಿ, ಹಾಡುಗಬ್ಬ ಎನ್ನುವುದು ಜನಪದ ಮುಖಾಂತರ ಅಥವಾ ಜಾನಪದರು ಹಾಡುವಂತಹ ಹಾಡುಗಳು ಆಗಿರಬೇಕು. ಅದರಿಂದ ಪಂಡಿತ

ಪಾಮರರು ಹಾಡುಗಬ್ಬ ಶ್ರೇಷ್ಠವಲ್ಲವೆಂದು ಈ ಮೇಲಿನಂತೆ ಅಶ್ಲೀಲ ಸಾಹಿತ್ಯವೆಂದು ಹೇಳಿರಬಹುದೆನಿಸುತ್ತದೆ. ಇದರ ಸರಿ ತಪ್ಪುಗಳನ್ನು ವಿವೇಚಿಸಬೇಕಾಗುತ್ತದೆ.

ಕಿಟೆಲ್ ನಿಘಂಟುವಿನಲ್ಲಿ ಬೆದಂಡೆ ಎಂಬುದು ವೈದಂಡಿಕದ ತದ್ಭವ ರೂಪ ಎಂದು ತೋರಿಸಿ; ಚತ್ತಾಣವು 'ಷಟ್‌ಸ್ಥಾನ'ದ ತದ್ಭವರೂಪ ಎಂದು ಹೇಳಿದೆ. ಬೆದಂಡೆಯ ಅರ್ಥವನ್ನು Criticism, critical skill, exactness ಎಂದಿದೆ. ಮುಂದುವರಿದು Skill full song, poetry ಎಂದು ಹೆಸರಿಸುತ್ತಾರೆ. ಹೀಗಾಗಿ ಹಾಡುಗಬ್ಬವು ತನ್ನದೇ ಸ್ವರೂಪದಲ್ಲಿ ಉಗಮಗೊಂಡಿರುವುದನ್ನು ಪ್ರಾಚೀನ ಕಾವ್ಯ-ಪುರಾಣ ಹಾಗೂ ನಿಘಂಟುಗಳಿಂದ ವಿದ್ವಾಂಸರು ಪರಿಶೋಧಿಸುವ ಪ್ರಯತ್ನ ಮಾಡಿರುವುದನ್ನು ಕಾಣಬಹುದಾಗಿದೆ.

### ೨.೨.೧. ಓವನಿಗೆ-ಒನಕೆವಾಡು

ಕವಿರಾಜಮಾರ್ಗದಲ್ಲಿ ಉಲ್ಲೇಖಿಸಲಾದ ಓವನಿಗೆ-ಒನಕೆವಾಡುಗಳೂ ಕೂಡ ಪ್ರಾಚೀನ ಜಾನಪದ ಹಾಡಿನ ಮಟ್ಟುಗಳೆಂದು ಗುರುತಿಸಲಾಗಿದೆ. ಕವಿರಾಜಮಾರ್ಗ ಕೃತಿಯು ಹುಟ್ಟುವ ಮುನ್ನವೇ ಕೆಲವು ಶಾಸನಗಳು ಮತ್ತು ಜನಸಾಮಾನ್ಯರ ದೈನಂದಿನ ಕೆಲಸಕಾರ್ಯಗಳಲ್ಲಿ ಬಳಕೆಯಾಗುತ್ತಿದ್ದವು. ಓವನಿಗೆಯು ಪ್ರಾಚೀನ ಹಾಡಿನ ಸ್ವರೂಪದ್ದಾಗಿದ್ದು ಇದರ ಉಲ್ಲೇಖವು ಶಿವಮೊಗ್ಗ ಜಿಲ್ಲೆಯ ನಗರ ೩೫ರ ಶಾಸನ ಮತ್ತು ಆಚಣ್ಣನ ವರ್ಧಮಾನ ಪುರಾಣದಲ್ಲಿ ಮಾತ್ರ ಕಂಡುಬರುತ್ತದೆ. ಇದರ ಬಗ್ಗೆ ರಂ.ಶ್ರೀ.ಮುಗಳಿಯವರು "ಓವೀ" ಎಂಬ ಪದ್ಯ ಪ್ರಕಾರವು ಮರಾಠಿಯಲ್ಲಿ ಪ್ರಸಿದ್ಧವಾದುದು. ೧೨ನೇ ಶತಮಾನದ ಚಾಲುಕ್ಯರ ದೊರೆ ಮೂರನೇ ಸೋಮೇಶ್ವರನು ತನ್ನ 'ಅಭಿಲಾಷಿತಾರ್ಥ ಚಿಂತಾಮಣಿ'ಯಲ್ಲಿ "ತಥಾ ಮಹಾರಾಕ್ಷ್ಕೇಕ್ಷ ಯೇಷಿದ್ಭರ್ ಓಂವೀಗೆಯಾತುಕಂಠನೇ" ಎಂದಿದೆ. ಕಂಠನ ಎಂದರೆ "ಕಟ್ಟುವಿಕೆ" ಓಂವಾ ಇದು ಕುಟ್ಟುವ ಹಾಡು, ಓವನಿಗೆ ಬೀಸುವ ಹಾಡಾದರೆ; ಒನಕೆವಾಡು ಕುಟ್ಟುವ ಹಾಡು ಎರಡೂ ಸೇರಿ ಬೀಸುವ, ಕುಟ್ಟುವ ಹಾಡು ಎಂದು ಅರ್ಥವಾಗುತ್ತದೆ. ಒಟ್ಟಾರೆ ಓವನಿಗೆ ಎಂದರೆ 'ಕುಟ್ಟುವ ಹಾಡು' ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಡಾ. ಎಂ.ಎಂ. ಕಲಬುರ್ಗಿಯವರು ಶಬ್ದ ನಿಷ್ಪತ್ತಿಯ ಆಧಾರದ ಮೇಲೆ "ಇದು 'ಜೋಗುಳದ ಹಾಡು' ಆಗಿರಬಹುದೆಂದು ಊಹಿಸಿದ್ದಾರೆ. ಓವನಿಗೆ ಪ್ರಾಚೀನರೂಪ ಓರಣಿಗೆ ಇರಬಹುದು. ಓವಣಿಗೆಯ ಎಂದರೆ ಪಾಲಸಿಯ ಬಟ್ಟೆ, ಅಂದರೆ ಜೋಳಿಗೆ(ಜೋವಳಿಗೆ>ಓವಳಿಗೆ>ಓವಣಿಗೆ>ಓವನಿಗೆ) ತೊಟ್ಟಿಲು ಎಂದು ಹೇಳಬಹುದೇನೋ ಎಂಬ ಸಂದೇಹಾಸ್ಪದ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಈ ಪ್ರಸಂಗದ ಓವನಿಗೆ ಹಾಡು ಮುಂದೆ ಓವನಿಗೆ ಎಂದೇ ನಿಂತಿರಬಹುದು. ಅದಕ್ಕಾಗಿ ಜೋಗುಳದ ಹಾಡು-ಓವನಿಗೆ ಎಂಬ ಊಹೆಯ ಮೂಲಕ ಹಾಡುಗಬ್ಬ ಇದರಲ್ಲಿ ಗುರ್ತಿಸಬಹುದಾಗಿದೆ. ಒಟ್ಟಿನಲ್ಲಿ ಓವನಿಗೆಯೆಂಬುದು ಕುಟ್ಟುವ ಹಾಡು, ಬೀಸುವ ಹಾಡು, ಕೇರುವ ಹಾಡು, ಜೋಗುಳದ ಹಾಡು ಎಂದು ವಿವಿಧ ವಿದ್ವಾಂಸರು ವಿವಿಧ ಅರ್ಥಗಳನ್ನು ಹೇಳಿದ್ದಾರೆ. ಮುಂದೆ ಒನಕೆವಾಡು ಜನಪ್ರಿಯವಾದಂತೆ ಓವನಿಗೆ ಜನಪ್ರಿಯವಾಗಲಿಲ್ಲ.

ಒನಕೆವಾಡಿನ ಬಗ್ಗೆ ಶಾಸನಗಳಲ್ಲಿ ಹಾಗೂ ಕನ್ನಡ ಕಾವ್ಯಗಳಲ್ಲಿ ಸಾಕಷ್ಟು ಆಧಾರಗಳು ಸಿಗುವುದರಿಂದ ಒನಕೆವಾಡು ಎಂಬುದು ಧಾನ್ಯವನ್ನು ಸುರಿದು ಒನಕೆಯಿಂದ ಕುಟ್ಟುವಾಗ ಕುಟ್ಟುತ್ತಿದ್ದವರು ಹಾಡುವ ಹಾಡು

ಎಂದು ಅರ್ಥೈಸಬಹುದಾಗಿದೆ. ಇದರ ಪ್ರಾಚೀನತೆಯು ಋಗ್ವೇದದಲ್ಲಿಯೇ ಆರಂಭವಾಗುತ್ತದೆ. ಸೋಮೇಶ್ವರನ ಮಾನಸೋಲ್ಲಾಸ, ನೇಮಿಚಂದ್ರನ ಲೀಲಾವತಿ ಪ್ರಬಂಧ, ಸೋಮರಾಜನ ಉದ್ಭಟಕಾವ್ಯ ಮೊದಲಾದವುಗಳಲ್ಲಿ ಒನಕೆವಾಡಿನ ಉಲ್ಲೇಖವಾಗಿದೆ. ಈ ಕೃತಿಗಳ ನಿದರ್ಶನದಿಂದ ಒನಕೆವಾಡು ತ್ರಿಪದಿ ರೂಪದಲ್ಲಿತ್ತೆಂದು ವಿದ್ವಾಂಸರ ನಿರ್ಣಯ. ಒನಕೆವಾಡನ್ನು ಶೃಂಗಾರಮಯ, ಹಾಸ್ಯಮಯ ಸಂದರ್ಭದಲ್ಲಿ ಬಳಸುತ್ತಿದ್ದರು ಎಂದು ಅಭಿಪ್ರಾಯಪಡುತ್ತಾರೆ. ಜಾನಪದ ಮಟ್ಟೊಂದನ್ನು ಶಿಷ್ಟಸಾಹಿತ್ಯ ರಚನಾ ಸಂದರ್ಭದಲ್ಲೂ ಬಳಸಿರಬಹುದು.

### ೨.೨.೨. ವಸ್ತುಕ-ವರ್ಣಕ

ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಹೆಚ್ಚು ಚರ್ಚೆಗೊಳಗಾದ ಕಾವ್ಯಪ್ರಭೇದಗಳೆಂದರೆ; ವಸ್ತುಕ-ವರ್ಣಕ. ಇವುಗಳ ಸ್ವರೂಪವನ್ನು ಅರ್ಥೈಸಲು ಹಲವಾರು ವಿದ್ವಾಂಸರು ಯತ್ನಿಸಿದ್ದಾರೆ. ರಂ.ಶ್ರೀ.ಮುಗಳಿಯವರು 'ವಸ್ತುಕ' ಎಂಬುದು ಹೆಚ್ಚಾಗಿ ಕಂದ ಮತ್ತು ಅಕ್ಷರ ವೃತ್ತಗಳಲ್ಲಿ ರಚಿತವಾದ ಮಾರ್ಗಕಾವ್ಯಕ್ಕೆ ರೂಢ ವಾದುದು. ಇದನ್ನು ವಸ್ತುಕವೆಂದು ಕರೆಯುತ್ತೇವೆ. ಮಾರ್ಗಕಾವ್ಯವಲ್ಲದ ಮತ್ತು ಲಯಬದ್ಧವಾದ, ಗೇಯವೂ ಆದ ಛಂದೋರೂಪಗಳಲ್ಲಿ ರಚಿತವಾದ ಕೃತಿಗಳಿಗೆ 'ವರ್ಣಕ' ಎಂದು ಕರೆಯುತ್ತೇವೆ. ಈ ಹೇಳಿಕೆಯನ್ನು ಇನ್ನೊಂದು ಬಗೆಯಲ್ಲಿ ಅರ್ಥೈಸಬಹುದು. ವಸ್ತುಕ ಎಂಬುದು ಓದುಗಬ್ಬ. ಇದು ಸಂಸ್ಕೃತ ಮೂಲಕಾವ್ಯ ಲಕ್ಷಣಗಳನ್ನು ಅನುಸರಿಸಿಕೊಂಡು ರಚಿತವಾಗಿರುತ್ತವೆ. 'ವರ್ಣಕ' ಎಂಬ ಪ್ರಭೇದವನ್ನು 'ಹಾಡುಗಬ್ಬ'ವೆಂದೂ ಮಾರ್ಗಕಾವ್ಯವಲ್ಲದ ದೇಸಿ ಛಂದೋರೂಪಗಳನ್ನೊಳಗೊಂಡು ಲಯಬದ್ಧವಾಗಿ ರಚಿತವಾಗಿರುವಂತಹದು.

ವಸ್ತುಕ ಪದದ ನಿಷ್ಪತ್ತಿ ವಸ್ತುವಿನಿಂದ ಆಗಿದೆ. ಆದರೆ ಕೇವಲ ಕಥಾವಸ್ತು ಅಥವಾ ಕಥಾ ಸಂವಿಧಾನವಲ್ಲ. ಅಂದರೆ ಪೂರ್ವದ ಶಿಷ್ಟಕಾವ್ಯಗಳಿಂದ ಪ್ರೇರಣೆ ಮತ್ತು ಎಲ್ಲಾ ಲಕ್ಷಣಗಳನ್ನು ಅಳವಡಿಸಿ ಕೊಂಡು ಬಂದ ಕಾವ್ಯವಿಧ ವರ್ಣಕ. ವರ್ಣ ಎಂದರೆ ಸಂಗೀತ ಪರಿಭಾಷೆಯಲ್ಲಿ ಗೀತಕ್ರಮ. ಗೀತಪದ್ಧತಿ, ಗೇಯವಾದ ದೇಸಿ ಛಂದಸ್ಸಿನಿಂದ ನಿರ್ಮಿತವಾದ ಕಾವ್ಯಪ್ರಕಾರ. ವಸ್ತುಕ ವರ್ಣಕಗಳು ಎರಡು ಕಾಲಘಟ್ಟಗಳಲ್ಲಿ ಬೆಳೆದು ಬಂದಿರುತ್ತವೆ. ಜನಾಭಿಮುಖವಾದ ಹರಿಹರನ ರಗಳೆ, ರಾಘವಾಂಕನ ಷಟ್ಪದಿಯಲ್ಲಿ ರಚನೆಯಾದ ಕಾವ್ಯಗಳು ಧರ್ಮನಿಷ್ಠೆಯನ್ನು ಕಾಯ್ದುಕೊಂಡವು. ದೇಸಿ ಛಂದಸ್ಸುಗಳಾದ ಸಾಂಗತ್ಯ, ತ್ರಿಪದಿಗಳಲ್ಲಿ, ಲಕ್ಷ್ಮೀಶ, ವಿರೂಪಾಕ್ಷ ಪಂಡಿತರಲ್ಲಿ ವಸ್ತುಕದ ಲಕ್ಷಣಗಳೊಂದಿಗೆ ವರ್ಣಕ ಕಾವ್ಯಗಳು ಬುದ್ಧಿಪೂರ್ವಕವಾಗಿ ರಚನೆಯಾದವು. ಈ ಕೃತಕ ಲಕ್ಷಣವು ತಾತ್ಕಾಲಿಕವೆನಿಸಿದ್ದರಿಂದ ರತ್ನಾಕರವರ್ಣಿಯು ಹಾಡುಗಬ್ಬವೆಂದು ಭರತೇಶ ವೈಭವವನ್ನು ಬರೆದಿದ್ದಾನೆ. ರತ್ನಾಕರವರ್ಣಿಯು ಗೇಯಗುಣ ಸಾಧನೆಗಾಗಿ ಅಂಶಗಣಬದ್ಧವಾದ ಸಾಂಗತ್ಯವನ್ನು ಅಳವಡಿಸಿಕೊಂಡು ತನ್ನ ಕಾವ್ಯವನ್ನು ಹಾಡುಗಬ್ಬವೆಂದು ಕರೆದಿರುವುದರಲ್ಲಿ ಔಚಿತ್ಯವಿದೆ.

> ಸಕಲ ಲಕ್ಷಣವೂ ವಸ್ತುಕಕೆ ವರ್ಣಕಕಿಷ್ಟು
> ವಿಕಳಾವಾದರೂ ದೋಷವಿಲ್ಲ ||
> ಸಕಲಲಕ್ಷಣವಾಗಿ ಬಿರುಸು ಮಾಡಿದರೆ ಪು
> ಸ್ತಕದ ಬದನೆಕಾಯಹುದು ||[೨೦]

ಅಂದರೆ ವಸ್ತುಕಕಾವ್ಯ ಪ್ರಧಾನವಾಗಿ ವರ್ಣನಾತ್ಮಕವಾಗಿದ್ದು ಅಷ್ಟಾದಶವರ್ಣನೆಗಳು ಮುಂತಾದವುಗಳಿಂದ ಅಡಕವಾಗಿರಬೇಕು. ಆದರೆ ವರ್ಣಕಕ್ಕೆ ಇದರ ಹಂಗಿಲ್ಲದಿರುವುದೇ ಇದರ ವೈಶಿಷ್ಟ್ಯ. ಇವೆಲ್ಲವನ್ನು ಗಮನಿಸಿದರೆ ಎಲ್ಲಾ ಕಾಲಕ್ಕೂ ಎಲ್ಲಾ ಕಾವ್ಯಗಳಿಗೂ ಅನ್ವಯಿಸುವ ಏಕಮೇವ ಅರ್ಥ ದೊರೆಯಲಾರದು. ಕಾವ್ಯಗಳು ಬೆಳೆದಂತೆ ಕಾವ್ಯಾರ್ಥಗಳು ವಿಸ್ತರಿಸಿವೆ. ಇದರಿಂದ ಮನನವಾಗುವ ವಿಚಾರಗಳೆಂದರೆ ೫ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಹಾಡುಗಬ್ಬದ ರಚನೆಗಳು ಲಭ್ಯವಿಲ್ಲವಾದರೂ ಉಲ್ಲೇಖಿತ ಪದ್ಯಗಳಿಗೇನೂ ಅಭಾವವಿಲ್ಲ. ಈ ಅವಧಿಯಲ್ಲಿ ತ್ರಿಪದಿ, ಅಕ್ಕರ, ಚೌಪದಿ, ಗೀತಿಕೆಗಳು ಗೇಯತೆಯನ್ನು ಮೈಗೂಡಿಸಿ ಕೊಂಡಿರುವ ಛಂದೋರೂಪಗಳಾಗಿವೆ.

ಹತ್ತನೇ ಶತಮಾನವು ಚಂಪೂಕಾವ್ಯ ಪರಂಪರೆಯನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದು; ಗುಣವರ್ಮನಿಂದ ಆರಂಭವಾಗಿ ಮಧುರನೇ ಚಂಪೂಸೀಮೆಯ ಗಡಿಗಲ್ಲು. ಅಲ್ಲಿಂದ ಮುಂದೆ ಚಂಪೂಕಾವ್ಯಗಳೇ ಹುಟ್ಟಲಿಲ್ಲ ವೆಂದು ಭಾವಿಸಬೇಕಾಗಿಲ್ಲ. ಅದಕ್ಕೆ ಬೇಕೆನಿಸುವ ಸಿದ್ಧತೆ, ವ್ಯುತ್ಪತ್ತಿ ಪರಿಶ್ರಮಗಳು ಕಡಿಮೆಯಾದವು. ಪಂಡಿತರಿಗೆ ಮಾತ್ರವೇ ಸೀಮಿತವಾಗಿದ್ದ ರಚನೆಗಳು ಪಾಮರರಿಗೂ ಬೇಕೆನಿಸುವ ಕಾವ್ಯರಚನೆಗೆ ಕೈ ಹಾಕಿದ ಕಾಲಮಾನ ೧೨ನೇ ಶತಮಾನದ ಉತ್ತರಾರ್ಧ ಗಾಯನ/ಗೇಯತೆಯನ್ನೇ ಪ್ರಧಾನವಾದ ದೇಸಿ ಛಂದೋರೂಪಗಳಿಗೆ ವಿಶೇಷ ಅಸ್ತಿತ್ವ ಪ್ರಾಪ್ತವಾಯಿತು.

**೨.೨.೩. ಹಾಡುಗಬ್ಬ-ಹಾಡುಗಳು**

ಕನ್ನಡ ಹಾಡುಗಬ್ಬ ಸಾಹಿತ್ಯ ೧೨ನೇ ಶತಮಾನದಲ್ಲಿ ಮುಖ್ಯ ವೇದಿಕೆಯಾಗಿ ಸೃಷ್ಟಿಗೊಂಡಿತು. ಹಾಡುಗಬ್ಬ ಮತ್ತು ಹಾಡುಗಳು ಇವೆರಡರ ನಡುವೆ ಇರುವಂತಹ ವ್ಯತ್ಯಾಸವನ್ನು ಗುರುತಿಸಬಹುದಾಗಿದೆ. ಒಂದು ದೃಷ್ಟಿಯಲ್ಲಿ ಬೇರೆಯಾಗಿರುವುದು ವಿಶೇಷವಾದ ಸಂಗತಿ. ಹಾಡುಗಬ್ಬ ಸಾಹಿತ್ಯವೂ ಕನ್ನಡ ಸಾಹಿತ್ಯ, ಅಸ್ತಿತ್ವ ಅಥವಾ ರೂಪವನ್ನು ಪಡೆಯುವುದಕ್ಕೆ ಮುಂಚೆಯೇ 'ಕವಿರಾಜಮಾರ್ಗಕಾರ' ಹಾಡುಗಬ್ಬಗಳಾದ ಚತ್ತಾಣ-ಬೆದಂಡೆ-ಒವನಿಗೆ, ಒನಕೆವಾಡು ಮುಂತಾದ ಪ್ರಕಾರಗಳನ್ನು ಉಲ್ಲೇಖಿಸುತ್ತಾನೆ. ಜೊತೆಗೆ ವಿದ್ವಾಂಸರು ಗಹನವಾದ ಚರ್ಚೆಯಿಂದ ಚತ್ತಾಣ-ಬೆದಂಡೆ ಸ್ವರೂಪ ಮತ್ತು ಉಗಮದ ಬಗ್ಗೆ ವಿವರಿಸಿದ್ದಾರೆ.

ಹಾಡುಗಬ್ಬವು ವಸ್ತು, ಛಂದಸ್ಸಿನಿಂದ ಏಕತೆಯಿಂದ ಕೂಡಿರುತ್ತದೆ. ಏಕೆಂದರೆ ಹಾಡುಗಬ್ಬದಲ್ಲಿ ಕಥೆಯನ್ನು ಆರಂಭದಿಂದ ಕೊನೆಯವರೆಗೂ ಒಂದು ವಸ್ತುವಾಗಿ ನಿರೂಪಿಸುವುದು ವಿಶೇಷ ಮತ್ತು ವಸ್ತು ವಿಷಯಗಳು ಬಿಡಿಬಿಡಿಯಾಗಿರುವುದಿಲ್ಲ. ಉದಾಹರಣೆಗೆ ಕುಮಾರವ್ಯಾಸ, ಹರಿಹರ, ರಾಘವಾಂಕ, ಲಕ್ಷ್ಮೀಶ, ರತ್ನಾಕರವರ್ಣಿ ಇವರ ಕೃತಿಗಳಲ್ಲಿ ಒಂದು ವಸ್ತುವನ್ನು ತೆಗೆದುಕೊಂಡು ಕಥೆಯನ್ನು ನಿರೂಪಿಸುತ್ತ ಹೋಗುತ್ತಾರೆ. ಪ್ರತಿಯೊಬ್ಬ ಕವಿಯು ಒಂದು ಛಂದೋಪ್ರಕಾರವನ್ನು ಬಳಸಿಕೊಂಡು ಪೂರ್ತಿಯಾಗಿ ಕೃತಿಯನ್ನು ಆ ಛಂದೋ ಪ್ರಕಾರದಲ್ಲಿ ಮುಗಿಸುತ್ತಾನೆ. ಉದಾಹರಣೆಗೆ ರಾಘವಾಂಕನ-ಷಟ್ಪದಿ, ಹರಿಹರ-ರಗಳೆ, ರತ್ನಾಕರವರ್ಣಿ-ಸಾಂಗತ್ಯ ಹೀಗೆ ಮಧ್ಯಕಾಲೀನ ಎಲ್ಲಾ ದೇಸಿ ಕಾವ್ಯಗಳು ಹಾಡುಗಬ್ಬ ಸಾಹಿತ್ಯ ಪ್ರಕಾರಗಳಾಗಿವೆ ಪ್ರಮುಖವಾಗಿ ಈ ಕಾಲಘಟ್ಟದಲ್ಲಿ ಷಟ್ಪದಿ, ರಗಳೆ, ತ್ರಿಪದಿ, ಸಾಂಗತ್ಯ, ಅಕ್ಕರ ಮುಂತಾದ ಛಂದೋ ಪ್ರಕಾರಗಳು ತಮ್ಮದೇ ಆದಂತಹ ವೈವಿಧ್ಯತೆ ಹಾಗೂ ಛಂದೋಬಂಧವನ್ನು ಹೊಂದುತ್ತ ಸಾಗಿರುವುದು ವಿಶೇಷವಾಗಿದೆ.

ಹಾಡುಗಳು ವಸ್ತು ಹಾಗೂ ಭಿನ್ನವಾದ ಛಂದೋರೂಪಗಳನ್ನು ಹೊಂದಿರುವಂತಹವು. ಇದರಲ್ಲಿ ಬಿಡಿ ಬಿಡಿಯಾದ ವಸ್ತು ವಿಷಯ ನಿರೂಪಣೆಯಾಗಿರುತ್ತದೆ. ಕಥೆಯ ರೀತಿಯಲ್ಲಿ ನಿರೂಪಿಸುವುದು ಕಂಡು ಬರುವುದಿಲ್ಲ. ಹಾಡುಗಳಲ್ಲಿ ವಸ್ತು-ವಿಚಾರಗಳು ಬಿಡಿಬಿಡಿಯಾಗಿ ಹೇಳುವುದನ್ನು ನೋಡಬಹುದು. ಉದಾಹರಣೆಗೆ ಮೋಕ್ಷ, ಆಧ್ಯಾತ್ಮಿಕತೆ, ಭಕ್ತಿಯ ನಿಷ್ಠೆ, ಲೌಕಿಕ ಬದುಕಿನ ದುಃಖಮಯ ಸನ್ನಿವೇಶಗಳು, ಧ್ಯಾನ-ದಾನ-ಪೂಜೆ ಮುಂತಾದ ವಿಷಯ ಹಾಡುಗಳಲ್ಲಿ ಬಿಡಿ-ಬಿಡಿಯಾಗಿ ಒಳಗೊಂಡಿರುತ್ತದೆ. ಹಾಗೆಯೆ ಹಾಡುಗಳಲ್ಲಿ ಒಂದು ನಿರ್ದಿಷ್ಟವಾದ ಛಂದೋರೂಪ ಕಂಡುಬರುವುದಿಲ್ಲ. ಸಂದರ್ಭಕ್ಕೆ ಅನುಗುಣವಾಗಿ ಹಿಗ್ಗಿಸುತ್ತ-ಕುಗ್ಗಿಸುತ್ತ ಹಾಡುವುದು ಕಂಡುಬರುತ್ತದೆ. ಸಾಂಗತ್ಯ, ತ್ರಿಪದಿ, ಚೌಪದಿ ಹಾಗೂ ಗುರುತಿಸಲಾಗ ದಂತಹ ಛಂದೋ ವೈವಿಧ್ಯತೆ ಕಂಡುಬರುತ್ತದೆ. ಒಟ್ಟಿನಲ್ಲಿ ಹಾಡುಗಬ್ಬ ಮತ್ತು ಹಾಡುಗಳು ವಸ್ತು ವಿಚಾರಗಳಲ್ಲಿ ಬೇರೆಯಾದರೂ ಸಹ ಗೇಯತೆಯ ಲಕ್ಷಣವನ್ನು ಒಳಗೊಂಡಿರುವುದು ವಿಶೇಷವಾದ ಸಂಗತಿಯಾಗಿದೆ.

೧೨ನೇ ಶತಮಾನ ಸಾಹಿತ್ಯದ ಮಹತ್ತರವಾದ ಪರಿವರ್ತನೆಯ ಕಾಲವೆಂದು ಹಲವಾರು ವಿದ್ವಾಂಸರು ಗುರುತಿಸಿದ್ದಾರೆ. ವಚನ ಸಾಹಿತ್ಯವೆಂಬ ಪ್ರಕಾರ ಹುಟ್ಟಿಕೊಂಡು ಸಾಹಿತ್ಯದಲ್ಲಿ ಕ್ರಾಂತಿಯನ್ನುಂಟು ಮಾಡಿದಂತಹ ಕಾಲಘಟ್ಟವೆಂದು ಗುರುತಿಸುತ್ತೇವೆ. ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕ ದೃಷ್ಟಿಯಿಂದ ಮಹತ್ತರವಾದ ಬದಲಾವಣೆಯನ್ನು ಕಂಡುಕೊಂಡ ಕಾಲಘಟ್ಟ. ಈ ಕಾಲದಲ್ಲಿ ವಚನವೆಂಬ ಅಪೂರ್ವ, ಅಮೂಲ್ಯ ರಚನೆಯನ್ನು ಸಾಹಿತ್ಯದಲ್ಲಿ ತಂದರು. ಇದರ ಮೂಲಕ ಸಮಾಜ ಹಾಗೂ ರಾಜಕೀಯವನ್ನು ಪ್ರಶ್ನಿಸುತ್ತ ಉತ್ತಮ ಸಮಾಜಕ್ಕೆ ಮತ್ತು ಸಮಾನತೆಯ ಅಂಶಗಳನ್ನು ಇಟ್ಟುಕೊಂಡು ಭದ್ರವಾದ ತಳಪಾಯ ಹಾಕಿದರು. ಸಾಹಿತ್ಯ ಕ್ಷೇತ್ರದಲ್ಲಿ ವಸ್ತು, ಶೈಲಿ, ಭಾಷೆ ನಿರೂಪಣೆಯಲ್ಲಿ ಮಹತ್ತರವಾದ ಬದಲಾವಣೆ ಕಂಡುಕೊಂಡು ಜನಸಾಮಾನ್ಯರಿಗೆ ತಲುಪುವ ಸಾಹಿತ್ಯ ಪ್ರಕಾರವಾಗಿ ಬೆಳೆಯಿತು. ವಚನಕಾರರು ತಮ್ಮ ವಚನಗಳ ಮೂಲಕ ಹಾಡುಗಬ್ಬ ಸಾಹಿತ್ಯಕ್ಕೆ ತಮ್ಮ ವೈಶಿಷ್ಟ್ಯಪೂರ್ಣವಾದ ಸ್ವರವಚನಗಳನ್ನು ರಚಿಸಿ, ಮುಂದೆ ಹಾಡುಗಬ್ಬ ಸಾಹಿತ್ಯವನ್ನು ವಿಪುಲವಾಗಿ ಬೆಳೆಯುವಂತೆ ಶ್ರೀಮಂತವಾಗಿಸಿದ್ದಾರೆ. ಕನ್ನಡ ಹಾಡುಗಬ್ಬ ರಚನೆಯಲ್ಲಿ ಈ ಹಿಂದೆ ಇಲ್ಲದಂತಹ ಸುಲಭ ಸುಭದ್ರ ಸ್ವರವಚನಗಳು ಶರಣರಿಂದ ರೂಪುಗೊಂಡಿವೆ.

"ಸ್ವರವಚನ ೧೨ನೇ ಶತಮಾನದ ಹಾಡುಗಬ್ಬ ದೃಷ್ಟಿಯಿಂದ ಬಹುಸಂಖ್ಯಾತ ಜನರ ಮೇಲೆ ಮೋಡಿ ಹಾಕಿದ ಅವರ ವ್ಯಕ್ತಿತ್ವವನ್ನು ತೀಡುತ್ತ ಬಂದ ಸಾಹಿತ್ಯ ಸಮುದಾಯದಲ್ಲಿಯೇ ಹಾಡುಗಬ್ಬದ ಪ್ರಕಾರ ಗಣ್ಯವಾದುದು. ಕನ್ನಡ ಸಾಹಿತ್ಯದಲ್ಲಿ ಮೊದಲಿಗೆ ದೇಶೀ ಪರಂಪರೆಯನ್ನು ಸ್ಥಾಪಿಸುವ ಮೂಲಕ ಮೂಲೆಗುಂಪಾಗಿದ್ದ ಹಾಡುಗಬ್ಬದ ಪರಂಪರೆಯನ್ನು ಹರಡಿದರು. ಅದಕ್ಕೆ ಲಿಖಿತ ಸಾಹಿತ್ಯದಲ್ಲಿ ನ್ಯಾಯವಾದ ಸ್ಥಾನವನ್ನು ಒದಗಿಸಿಕೊಟ್ಟರು. ಇದರಿಂದಾಗಿ ಜೇಡರ ದಾಸಿಮಯ್ಯ, ಬಸವಣ್ಣ, ಅಕ್ಕಮಹಾದೇವಿ ಮೊದಲಾದ ಶರಣರು ರಚಿಸಿದ ಹಾಡುಗಬ್ಬ ಪ್ರಕಾರ ಸ್ವರವಚನವೆಂಬ ಹೆಸರಿನಲ್ಲಿ ಪ್ರಸಿದ್ಧಿ ಪಡೆಯಿತು. ಬಳಿಕ ನಿಜಗುಣ ಶಿವಯೋಗಿಗಳಲ್ಲದೆ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಸಪ್ತಕಾವ್ಯದ ಗುರುಬಸವ, ಮೊಗ್ಗೆಯ ಮಾಯಿದೇವ, ಕರಸ್ಥಲನಾಗಿದೇವ ಮೊದಲಾದ ವೀರಶೈವ ಅನುಭಾವಿಗಳು ಸ್ವರವಚನ ಪ್ರಕಾರದಲ್ಲಿ ಕೃಷಿ

ಮಾಡಿದರು. ಪ್ರೌಢದೇವರಾಯನ ತರುವಾಯ ನೂರು ವರ್ಷ ಗತಿಸುವಲ್ಲಿ ಪಟ್ಟಕ್ಕೆ ಬಂದ ಕೃಷ್ಣದೇವರಾಯನ ಪರಿಸರದ ಪುರಂದರದಾಸರು, ಕನಕದಾಸ ಮೊದಲಾದವರೆಲ್ಲಾ ಈ ಹಾಡುಗಬ್ಬ ಪ್ರಕಾರವನ್ನು ಹರಿಸರ್ವೋತ್ತಮ ನೆಲೆಯಲ್ಲಿ ದುಡಿಸಿ, ಕೀರ್ತನೆ ಹೆಸರಿನಲ್ಲಿ ಪ್ರಸಿದ್ಧಿಪಡಿಸಿದರು. ಈ ದಾಸ ಸಂಪ್ರದಾಯದ ಮೂರನೇ ಕಾಲಘಟ್ಟದಲ್ಲಿ ಪ್ರಸನ್ನ ವೆಂಕಟದಾಸ, ವಿಜಯದಾಸ ಮೊದಲಾದವರು ಕೀರ್ತನೆ ಪ್ರಕಾರವನ್ನು ವಿಪುಲ ಪ್ರಮಾಣದಲ್ಲಿ ಬೆಳೆಸಿ, ಪ್ರೋತ್ಸಾಹಿಸಿದರು. ರತ್ನಾಕರವರ್ಣಿ ಮೊದಲಾದ ಜೈನಕವಿಗಳು ಹಾಡುಗಳನ್ನು ಬರೆದರು. ಜೈನರ ಹಾಡು, ದಾಸರ ಕೀರ್ತನೆಯ ಜೊತೆಜೊತೆಗೆ ಕೆಸ್ತೂರದೇವ, ಜಿಗುನಿ-ಮರುಳದೇವ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಮೈಲಾರ ಬಸವಲಿಂಗ ಶರಣರು, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗ ಶರಣರು ಮೊದಲಾದ ವೀರಶೈವ ಅನುಭಾವಿಗಳು ಸ್ವರವಚನ ಪರಂಪರೆಯನ್ನು ಮುಂದು ವರೆಸಿದರು."[೧೧]

ಶಿವಶರಣರ ಹಾಡುಗಬ್ಬ ರಚನೆಯು ವೈಶಿಷ್ಟ್ಯತೆಯಿಂದ ಕೂಡಿದೆ. ವಚನಕಾರರು, ವಚನ, ವಚನಗೀತೆ ಅಥವಾ ಸ್ವರವಚನ, ಮಂತ್ರಗೋಪ್ಯ, ಮಿಶ್ರಾರ್ಪಣಾ, ಸ್ವರಬೊಲ್ಲಿಗಳಂತಹ ಹಾಡುಗಬ್ಬದ ರಚನೆಯನ್ನು ಮಾಡಿದರು. ಹೀಗೆ ಸಮೃದ್ಧವಾಗಿ ರಚನೆಗೊಳ್ಳುತ್ತಾ ಸಾಹಿತ್ಯದಿಂದ ಸ್ವರವಚನ ಕ್ಷೇತ್ರವನ್ನು ವಿಸ್ತಾರವನ್ನಾಗಿಸಿದೆ. ಮುಂದೆ ಬಂದ ಹರಿಹರ, ರಾಘವಾಂಕ ೧೨ನೇ ಶತಮಾನದಲ್ಲಿ ತಮ್ಮ ಅಮೋಘವಾದಂತಹ ರಗಳೆ, ಷಟ್ಪದಿಗಳ ಮೂಲಕ ಹಾಡುಗಬ್ಬದ ಸೊಗಸನ್ನು ಇನ್ನಷ್ಟು ಹೆಚ್ಚಿಸುವಲ್ಲಿ ಯಶಸ್ವಿಯಾದರು. ಬಸವಾದಿ ಪ್ರಮಥರ ವಿಚಾರಗಳನ್ನು ಹಾಡುಗಳ ಮೂಲಕ ಜನತೆಗೆ ಪ್ರಥಮವಾಗಿ ನೀಡಿದ ಹೆಗ್ಗಳಿಕೆ ಇವರದಾಗಿದೆ.

### ೨.೨.೪. ತ್ರಿಪದಿ ಸಾಹಿತ್ಯ

ಕನ್ನಡ ಸಾಹಿತ್ಯ ತನ್ನ ರೂಪವನ್ನು ಪಡೆಯುವುದಕ್ಕೂ ಮುಂಚೆ 'ಹಾಡುಗಬ್ಬ' ಎನ್ನುವ ರೂಪದ ಉಲ್ಲೇಖಗಳು ಸಿಗುತ್ತವೆ. ಮನುಷ್ಯ ಹುಟ್ಟಿನೊಂದಿಗೆ, ತಾಯಿಯ ಜೋಗುಳದೊಂದಿಗೆ 'ಹಾಡು' ಜನಪದ ಮಾರ್ಗವಾಗಿ ಪ್ರವಹಿಸಿದೆ. ಮನುಷ್ಯ ಕಾಲಾನುಕ್ರಮದಲ್ಲಿ ಬುದ್ಧಿವಿಕಾಸದೊಡನೆ ಸಾಂಸ್ಕೃತಿಕ ಮನೋಭಾವದ ವಿಕಾಸವೂ ಆಗಿ 'ಹಾಡುವ' ಪರಿಕಲ್ಪನೆ ಬೆಳೆದಿರುವುದೆಂದು ಗಮನಿಸಬಹುದು. ಪ್ರಪಂಚದಲ್ಲಿ ಯಾವುದೇ ಸಾಹಿತ್ಯ ಲಿಖಿತ ರೂಪವನ್ನು ಪಡೆಯುವುದಕ್ಕೂ ಮೊದಲು ಜನಪದೀಯವಾಗಿರುತ್ತದೆ. ಇದರ ಪ್ರೇರಣೆ, ಪ್ರಭಾವಗಳಿಂದ ಲಿಖಿತ ಸಾಹಿತ್ಯ ರೂಪಕ್ಕೆ ಬರುತ್ತದೆ. ಇಂತಹ ಜಾನಪದ ಹಾಡುಗಳು ಶಿಷ್ಟ ಸಾಹಿತ್ಯದಲ್ಲಿ ರಚನೆಗೊಂಡ ಜನಪ್ರಿಯ ಮಟ್ಟು ತ್ರಿಪದಿಯಾಗಿದೆ. "ತ್ರಿಪದಿಯನ್ನು ಕನ್ನಡ ಸಾಹಿತ್ಯದಲ್ಲಿ "ಕನ್ನಡ ದೇಸೀ ಮಟ್ಟು"ವೆಂದು ಕರೆಯುವ ವಾಡಿಕೆ ನಮ್ಮ ಸಾಹಿತ್ಯದಲ್ಲಿದೆ. ಹಾಗೆಯೇ ಹಲವಾರು ವಿದ್ವಾಂಸರು, ಕವಿಗಳು ತ್ರಿಪದಿಯನ್ನು ಹೊಗಳಿ ಈ ರೀತಿ ಕರೆದಿದ್ದಾರೆ. ದ.ರಾ.ಬೇಂದ್ರೆಯವರು "ಕನ್ನಡ ವೃತ್ತಗಳ ಗಾಯತ್ರಿ" ಮತ್ತು "ಕನ್ನಡ ಛಂದಸ್ಸಿನ ತಾಯಿಬೇರು" ಎಂದು ಗುರುತಿಸಿರುವುದು ವಿಶೇಷ."[೧೨] ಅಂದರೆ ತ್ರಿಪದಿಯು ಕನ್ನಡ ಛಂದೋಮಟ್ಟುಗಳ ತಾಯಿಯೆಂದು, ತ್ರಿಪದಿಯಿಂದ ಹಲವಾರು ಛಂದೋರೂಪಗಳು ಉಗಮವಾದವು ಎಂದು ಹೇಳುವುದು ಸತ್ಯವಾದರೂ ಜಾನಪದೀಯರಲ್ಲಿ ನಲಿದಾಡಿ ಲಿಖಿತಸಾಹಿತ್ಯದಲ್ಲಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುತ್ತ ವಿಶಿಷ್ಟ ದೇಸೀ ರೂಪವಾಗಿ ಹೊರಹೊಮ್ಮಿದೆ. ನಾಡಿನ ಪ್ರತಿಯೊಂದು ಜನಾಂಗೀಯರಲ್ಲಿ

ಪಸರಿಸಿ ತಮ್ಮ ದಿನನಿತ್ಯದ ಕೆಲಸಕಾರ್ಯಗಳಲ್ಲಿ ಭಾವ ತುಂಬಿಕೊಂಡು ಹಾಡಿಕೊಂಡ ಸಾವಿರಾರು ತ್ರಿಪದಿಗಳು ಕೇಳುವ ಕಿವಿಗಳ ಇಂಪಾದ ಸಾಹಿತ್ಯವಾಗಿದೆ.

'ತ್ರಿಪದಿ'ಯನ್ನು ತಿಪಡಿ, ತ್ರಿವುಡಿ, ತ್ರಿವುಡೆ, ತ್ರಿಪದಿನಾ ಎಂಬ ಹೆಸರುಗಳಲ್ಲಿ ಕರೆಯುವುದನ್ನು ನೋಡಬಹುದು. ಮೊಟ್ಟ ಮೊದಲಿಗೆ ತ್ರಿಪದಿಯ ರೂಪ ಗೋಚರಿಸುವುದು ಕ್ರಿ.ಶ.೭೦೦ ಬಾದಾಮಿಯ ಶಾಸನದಲ್ಲಿ. ಮುಂದೆ ಸುಮಾರು ಹನ್ನೆರಡು ಶಾಸನಗಳಲ್ಲಿ ತ್ರಿಪದಿಯ ರೂಪಗಳನ್ನು ವಿದ್ವಾಂಸರು ಪತ್ತೆ ಹಚ್ಚಿರುವುದು ವಿಶೇಷವಾಗಿದೆ.[೧೩] ಉದಾಹರಣೆಗೆ ಬಾದಾಮಿ ಶಾಸನದಲ್ಲಿ ತ್ರಿಪದಿಯನ್ನು ಗಮನಿಸಬಹುದಾಗಿದೆ.

"ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆರನಲ್ಲ"[೧೪]

ಇದು ಅಚ್ಚಗನ್ನಡ ಮಟ್ಟುಗಳಲ್ಲಿ ಹೆಚ್ಚು ಪ್ರಾಚೀನವಾದ ತ್ರಿಪದಿಯಾಗಿದೆ. ಮುಂದೆ ಕಾವ್ಯರೂಪಗಳಲ್ಲಿ ಬಳಕೆಗೊಂಡದ್ದು ವಿಶೇಷವಾಗಿದೆ. ಪಂಪ, ನಾಗವರ್ಮ, ಚಂದ್ರರಾಜ, ಚಾವುಂಡರಾಯ, ದುರ್ಗಸಿಂಹ, ಅಕ್ಕಮಹಾದೇವಿ, ನೇಮಿಚಂದ್ರ, ಜನ್ನ ಮುಂತಾದ ಕವಿಗಳ ಕಾವ್ಯಗಳಲ್ಲಿ ತ್ರಿಪದಿಯನ್ನು ಬಳಸಿರುವುದು ಅದರ ವಿಶಿಷ್ಟತೆಯೇ ಕಾರಣವೆನ್ನಬಹುದು. "ನಾಗವರ್ಮ ಮೊಟ್ಟ ಮೊದಲ ಬಾರಿಗೆ ಇದರ ಲಕ್ಷಣವನ್ನು ಪ್ರಸ್ತಾಪಿಸುತ್ತಾನೆ. ಮೂರು ಪಾದಗಳಿಂದ ಕೂಡಿದ್ದು ಒಟ್ಟು ಹನ್ನೊಂದು ಹನ್ನೊಂದು ಗಣಗಳಿರುತ್ತವೆ. ಆರು ಮತ್ತು ಹತ್ತನೇ ಗಣಗಳು ಬ್ರಹ್ಮಗಣಗಳು ಆಗಿರುತ್ತವೆ. ಉಳಿದ ಗಣಗಳೆಲ್ಲ ವಿಷ್ಣುಗಣಗಳಾಗಿರುತ್ತವೆ. ಕೆಲವು ಸಲ ವಿಷ್ಣುಗಣಗಳಿಗೆ ಬದಲಾಗಿ ಪರ್ಯಾಯ ಗಣಗಳು ಬರಬಹುದು.

ಒಂದನೇ ಮತ್ತು ಎರಡನೇ ಸಾಲಿನಲ್ಲಿ ನಾಲ್ಕು-ನಾಲ್ಕು ಗಣಗಳು ಬಂದರೆ, ಮೂರನೇ ಸಾಲಿನಲ್ಲಿ ಮೂರು ಗಣಗಳು ಬರುತ್ತವೆ. ಎರಡನೇ ಪಾದದ ಮೂರನೇ ಗಣದಲ್ಲಿ 'ಯತಿ' ಬರುತ್ತದೆ ಎಂದು ತ್ರಿಪದಿ ಲಕ್ಷಣವನ್ನು ನಾಗವರ್ಮ ತನ್ನ ಛಂದೋಬುಧಿ ಕೃತಿಯಲ್ಲಿ ವಿವರಿಸುತ್ತಾನೆ.[೧೫]

ತ್ರಿಪದಿಯು ಅಂಶಗಣಾತ್ಮಕವಾದುದರಿಂದ ಹೆಚ್ಚು ಜನಪ್ರಿಯತೆ ಪಡೆಯಲು ಮಾಧುರ್ಯತೆ ಮತ್ತು ಸರಳವಾಗಿರುವ ಛಂದೋರೂಪ ಆಗಿದ್ದರಿಂದ; ಇದು ಜನಪದರಲ್ಲಿ ಹಾಗೂ ಶಿಷ್ಟ ಸಾಹಿತ್ಯದಲ್ಲಿ ವಿಪುಲವಾಗಿ ಬೆಳವಣಿಗೆಯನ್ನು ಕಂಡುಕೊಂಡಿತು. ಹೀಗೆ ಅಂಶಗಣಾವಲಂಬಿಯಾದ ತ್ರಿಪದಿ ಹನ್ನೆರಡನೆಯ ಶತಮಾನದ ಹೊತ್ತಿಗೆ ಮಾತ್ರಗಣಾತ್ಮಕವಾಗಿ ಪರಿವರ್ತನೆಗೊಂಡಿತು. ಅಕ್ಕಮಹಾದೇವಿಯ 'ಯೋಗಾಂಗ ತ್ರಿವಿಧಿ'ಯಲ್ಲಿ ಇದನ್ನು ನೋಡಬಹುದು.

"ಮಾಘ ಮಾಸವು ಪೋಗೆ ಮೇಲೆ ಬಂದಿತು ಚೈತ್ರ
ಬೇಗ ಮಾಮರವು ವಳಿದೇರೆ ಅದ ಕಂಡು
ಕೂಗಿ ಕರೆಯಿತ್ತು ಕೆಳಕಂಠ"[೧೬]

ತ್ರಿಪದಿ ಮುಂದೆ ಬರಬರುತ್ತಾ ಸಂಪೂರ್ಣವಾಗಿ ಮಾತ್ರಾಗಣವಾಗಿ ಪರಿಣಮಿಸಿತು. ಸರ್ವಜ್ಞನು ವಚನಗಳಲ್ಲಿ ಸಾರ್ವಭೌಮತ್ವವನ್ನು ಪಡೆಯಲು ಹಾಗೂ 'ಯೋಗಾಂಗ ತ್ರಿವಿಧಿ' ಬಿಟ್ಟು ತ್ರಿಪದಿಯನ್ನು ಒಂದು ಕೃತಿಯು ಪೂರ್ತಿಯಾಗಿ ಛಂದೋರೂಪವಾಗಿ ಬೆಳೆಸಿಕೊಂಡಿಲ್ಲ. ಜನಭಾಷೆಯಲ್ಲಿ ತನ್ನ ಅಚ್ಚು

ಮೂಡಿಸಿ ಗಾದೆ-ಮಾತುಗಳಿಂದ ಅದರ ಶ್ರೀಮಂತಿಕೆಯನ್ನು ಹೆಚ್ಚಿಸಿದ ಶ್ರೇಯಸ್ಸು ತ್ರಿಪದಿಗೆ ಸಲ್ಲುತ್ತದೆ. ಜನಪದೀಯರಲ್ಲಿ ತ್ರಿಪದಿಯ ರಾಗ ಹೃದಯದಿಂದ ಹೊಮ್ಮಿ ಬರುವಂತಹುದು.

"ಅಡ್ಡಡ್ಡ ಮಳೆ ಬಂದು ದೊಡ್ಡಡ್ಡ ಕೆರೆತುಂಬಿ
ಗೊಡ್ಡುಗಳೆಲ್ಲ ಹೈನಾಗಿ ಗೌಡರ
ಸೆಡ್ಡೆಯ ಮೇಲೆ ಸಿರಿಬರಲಿ"[೧೭]

"ಸರದಾರ ಬರುವಾಗ ಸುರಿದಾವ ಮಲ್ಲಿಗಿ
ದೊರೆ ನನ್ನ ತಮ್ಮ ಬರುವಾಗ ಯಾಲಕ್ಕಿ
ಗೊನಿ ಬಾಗಿ ಹಾಲ ಸುರಿದಾವ"[೧೮]

ಜಾನಪದ ತ್ರಿಪದಿಗಳು ರಾಗವಾಗಿ ಹಾಡುವ ಪರಿಪಾಟ ಬಹಳ ಹಿಂದಿನಿಂದಲೂ ನಡೆದು ಬಂದಿದೆ. ಹೆಣ್ಣುಮಕ್ಕಳು ತಮ್ಮ ದಿನನಿತ್ಯದ ಕೆಲಸ ಕಾರ್ಯಗಳಲ್ಲಿ ಬೀಸುವಾಗ, ಕುಟ್ಟುವಾಗ, ಹೊಲ-ಮನೆ ಕೆಲಸ ಮಾಡುವಾಗ ಹಾಡುತ್ತ ಬಂದಿದ್ದಾರೆ. ಜನಮನದಲ್ಲಿ ಹಚ್ಚ ಹಸುರಾಗಿ ಯುಗ, ಯುಗಗಳಿಂದ ನಮ್ಮ ಹಾಡುಗಳು ಬಾಯಿಂದ-ಬಾಯಿಗೆ ಹರಡುತ್ತ ಬಂದಿವೆ. ಜನಪದ ತ್ರಿಪದಿ ತುಂಬ ಸುಗಮವಾದುದು ಸಹಜವಾದುದು. ಸ್ವರಗಳ ಮಿಶ್ರಣದಿಂದ ಗೇಯತೆಯಿಂದ ಕೂಡಿದ್ದಾಗಿದೆ. ಸಹಜತೆ, ಸುಗಮತೆ ಹಾಗೂ ಗೇಯತೆ ಇವು ಜಾನಪದ ತ್ರಿಪದಿ ಗೀತೆಗಳ ವಿಶಿಷ್ಟ ಗುಣಗಳಾಗಿವೆ.

"ತೋಟಕ ಹೋದಣ್ಣ ಊಟಕ ಬರಲಿಲ್ಲ
ತೋಟದ ಹೂವ ತಲೆ ತುಂಬ|| ಇಟಗೊಂಡು
ಊಟದ್ಹಂಬಲ ಮರತನ"[೧೯]

"ಹಾಲುಂಡು ತವರೀಗೆ ಏನೆಂದು ಹಾಡಲಿವೆ
ಹೊಳೆಯ ದಂಡೆಲಿರುವ ಕರಕೀಯ| ಕುಡಿಯಂಗ
ಹಬ್ಬಲೀ ಅವರ ರಸಬಳ್ಳಿ"[೨೦]

"ತ್ರಿಪದಿ ಇಲ್ಲಿ ಎಷ್ಟು ಸಹಜವಾಗಿ ಆಡುಭಾಷೆಯಲ್ಲಿ ಗೇಯತೆಯಿಂದ ಕೂಡಿದೆ ಹಾಗೂ ಪ್ರಾಸವಿನ್ಯಾಸ ಗಳು ಭಾವಾಭಿವ್ಯಕ್ತಿಯಾಗಿ ನಿಂತಿವೆ ಎನ್ನುವುದು ವಿಶೇಷ. ತ್ರಿಪದಿಯು ಭಾವಗೀತೆಯಾಗಿ, ಜೀವನದ ಅನುಭವದ ಹದವನ್ನು ಸರಳವಾಗಿ ಆಡುಭಾಷೆಯಲ್ಲಿ ಸುಗಮ ರಾಗಲಹರಿಯಿಂದಾಗಿ ಜೀವನವನ್ನು ಸುಂದರವಾಗಿ ಭಾವನಾತ್ಮಕವಾಗಿ ಕಟ್ಟಿಕೊಟ್ಟಿದೆ. ಜಾನಪದ ತ್ರಿಪದಿಯ ಹಾಡುಗಳು ಕನ್ನಡದಲ್ಲಿ ಒಂದು ಸೊಗಸಾದ ಗೀತ ಸಂಪ್ರದಾಯವಾಗಿ ಉಳಿದು, ಭಾವಗೀತೆಗಳ ಸಂಪದವಾಗಿ ಸುಳಿದು ಬಂದಿವೆ."[೨೧] ಹೀಗೆ ತ್ರಿಪದಿ ಸಾವಿರಾರು ವರ್ಷಗಳಿಂದ ಜನತೆಯಲ್ಲಿ ಗರ್ಭೀಕರಿಸಿಕೊಂಡು ಹೊರಹೊಮ್ಮಿದೆ. "ಸೋಮೇಶ್ವರನ ಮಾನಸೋಲ್ಲಾಸ" ಕೃತಿಯಲ್ಲಿ ತ್ರಿಪದಿಯನ್ನು ಹಾಡುವ ರೀತಿಯನ್ನು ವಿವರವಾಗಿ ಹೇಳಿದ್ದಾನೆ. ಇಂದಿಗೂ ಬೀಸುವಾಗ, ಕುಟ್ಟುವಾಗ ನಮ್ಮ ನಾಡಿನ ಹೆಣ್ಣುಮಕ್ಕಳು ಹಾಡುವ ಕ್ರಮಕ್ಕೆ ಸಂವಾದಿಯಾಗಿದ್ದು ಸಾವಿರಾರು ವರ್ಷಗಳಿಂದ ಈ ಜನಪದ ಗೀತ ಪರಂಪರೆ ಬೆಳೆದುಬಂದಿದೆ ಎಂಬುದನ್ನು ಗಮನಿಸಬಹುದು".[೨೨]

ಹೀಗೆ ಜಾನಪದ ತ್ರಿಪದಿ ಜನಸಾಮಾನ್ಯರಲ್ಲಿ ಉದಯಿಸಿ, ಹಾಡುಗಬ್ಬ, 'ಬಣ್ಣವಾಡು' 'ವರ್ಣಕ' ಎಂಬ ಮುಂತಾದ ಹೆಸರುಗಳಿಂದ ಗುರುತಿಸಿಕೊಂಡಿತು. ಮುಂದೆ ಶಾಸನಗಳಲ್ಲಿ ತನ್ನ ಸ್ವರೂಪವನ್ನು ಕಂಡುಕೊಳ್ಳುತ್ತ ಪಂಪ, ಪೊನ್ನ, ನಾಗವರ್ಮ, ಜನ್ನ, ಅಕ್ಕಮಹಾದೇವಿ ಮುಂತಾದ ಹಲವಾರು ಕವಿಗಳ ಕಾವ್ಯಗಳಲ್ಲಿ ಬಳಕೆಗೊಂಡಿತು. ಹರಿಹರ, ರಾಘವಾಂಕ, ರತ್ನಾಕರವರ್ಣಿ ಇವರ ಕಾವ್ಯಗಳಲ್ಲಿ ತ್ರಿಪದಿ ಬೇರೊಂದು ಛಂದೋರೂಪವಾಗಿ ಮಾರ್ಪಟ್ಟಿತು. ರಗಳೆ, ಷಟ್ಪದಿ, ಸಾಂಗತ್ಯ ಮುಂತಾದ ಛಂದೋರೂಪಗಳು ತ್ರಿಪದಿಯಿಂದ ಹೊರಹೊಮ್ಮಿದಂತಹವುಗಳು. ಶರಣರ ವಚನ, ದಾಸರ ಕೀರ್ತನೆ, ತತ್ವಪದಗಳಲ್ಲಿ ತ್ರಿಪದಿ ಹೆಚ್ಚು ಜನಪ್ರಿಯತೆಯನ್ನು ಕಂಡುಕೊಂಡಿತು. ತ್ರಿಪದಿಗಳಲ್ಲಿ ಸರ್ವಜ್ಞ ತನ್ನ ಸಾರ್ವಭೌಮತೆಯನ್ನು ಪಡೆದುಕೊಂಡಂತವನು. ಹೀಗೆ ಪ್ರಾಚೀನ ಕಾಲದಿಂದ ಆಧುನಿಕ ಕಾಲಘಟ್ಟದವರೆಗೆ ತ್ರಿಪದಿ ಪ್ರಖ್ಯಾತಿಯನ್ನು ಮತ್ತು ಜನಪ್ರಿಯತೆಯನ್ನು ಪಡೆದುಕೊಂಡು ನವೋದಯದ ಸಾಹಿತ್ಯದಲ್ಲಿಯೂ ಇದರ ಪ್ರಭಾವ ಕಂಡು ಬಂದಿತು. ದ.ರಾ. ಬೇಂದ್ರೆ, ಮಧುರಚೆನ್ನ, ಚದುರಂಗ ಮೊದಲಾದವರು ಜಾನಪದ ತ್ರಿಪದಿ ಅಥವಾ ಜಾನಪದೀಯ ಸೊಗಡನ್ನು ತಮ್ಮ ಕಾವ್ಯಗಳಲ್ಲಿ ತುಂಬಿದರು. ಹಾಗೆಯೇ ಕಂಬಾರರು, ಗಿರೀಶ ಕಾರ್ನಾಡ್, ಚಂದ್ರಶೇಖರ ಪಾಟೀಲ, ಲಂಕೇಶ ಮುಂತಾದವರಿಂದ ಮುಂದುವರೆದು ಇತ್ತೀಚಿನ ಜಯದೇವಿ ತಾಯಿ ಲಿಗಾಡೆವರೆಗೆ ಅವಿಸ್ಮರಣೀಯವಾಗಿ ರಚನೆಯಾಗುತ್ತ ಬಂದಿದೆ. ಒಟ್ಟಿನಲ್ಲಿ ಜಾನಪದ ತ್ರಿಪದಿ ಜನಸಾಮಾನ್ಯ ರಲ್ಲೂ-ಶಿಷ್ಟಕವಿಗಳಲ್ಲೂ ಬಳಕೆಗೊಂಡು ಅತ್ಯಂತ ಜನಪ್ರಿಯತೆಯನ್ನು ಗಳಿಸಿಕೊಂಡು ಹಾಡಿನ ಮಟ್ಟು ಅಥವಾ ದೇಸಿಯ ಮಟ್ಟುಗಳಲ್ಲಿ ಹೊರಹೊಮ್ಮಿತು.

**೨.೨.೫. ಸ್ವರವಚನ ಸಾಹಿತ್ಯ**

"ಸ್ವರವಚನ' ಎಂಬ ಪದ 'ಸ್ವರ' ಮತ್ತು 'ವಚನ' ಎಂಬೆರಡು ಜೋಡಣೆಗಳಿಂದ ಉಂಟಾದುದು. ಶಿವಶರಣರು ವಚನ-ಸ್ವರವಚನವೆಂಬ ಎರಡು ರೀತಿಯ ಸಾಹಿತ್ಯವನ್ನು ಸೃಷ್ಟಿಸಿದರು. ವಿದ್ವಾಂಸರು ಅನುಭಾವಗೀತೆ, ಹಾಡು ಎಂತಲೂ ಆಧ್ಯಾತ್ಮಿಗಳು ಕೈವಲ್ಯಪದವೆಂತಲೂ ಜನಪದರು ಭಜನೆ ಹಾಡುಗಳೆಂತಲೂ ಕರೆದಿದ್ದಾರೆ. ಸ್ವರವಚನ ಪದದಲ್ಲಿ ಸ್ವರ ಹಾಗೂ ವಚನ ಎಂಬೆರಡು ಶಬ್ದಗಳಿವೆ. ಸ್ವರವೆಂದರೆ ಧ್ವನಿ, ರಾಗ, ಧಾಟಿ ಎಂದರ್ಥ. ಅಂದರೆ ರಾಗ ಹಿಡಿದು ಹಾಡಲು ಬರುವ ವಚನ ಸ್ವರವಚನ ಕನ್ನಡದಲ್ಲಿ ರಾಗ-ತಾಳಗಳನ್ನು ಭಕ್ತಿಪಂಥದ ಶರಣರು, ದಾಸರು, ತತ್ವಪದಕಾರರು ಭಿನ್ನವಾಗಿ ಬೇರೆಬೇರೆ ಹೆಸರುಗಳಿಂದ ಗುರುತಿಸಿಕೊಂಡರು."[೨೩] ಸ್ವರವಚನವೆಂಬುದು ವೀರಶೈವ ವಚನಕಾರರಿಂದ ಸೃಷ್ಟಿಗೊಂಡಂತಹ ಸಾಹಿತ್ಯಿಕ ಪರಿಭಾಷೆ. ಇದು ಗಾನಯೋಗ್ಯವಾದುದು ಮತ್ತು ಶಿವಶಕ್ತಿಯನ್ನು ಆರಾಧಿಸುವಂತಹ ಪ್ರಕಾರವಾಗಿ ಬೆಳೆದಿರುವಂತಹದು. ಹೀಗೆ ೧೨ನೇ ಶತಮಾನದಲ್ಲಿ ಉದಯಿಸಿದಂತಹ ಸ್ವರವಚನಗಳು ಕಾಲದಿಂದ ಕಾಲಕ್ಕೆ ಅನೇಕ ರೂಪಗಳಾಗಿ ಹಾಡುಗಬ್ಬ ಕ್ಷೇತ್ರವನ್ನು ಶ್ರೀಮಂತಗೊಳಿಸಿದರು. ಜೊತೆಗೆ ಅನ್ಯ ಧರ್ಮೀಯರ ಸಾಹಿತ್ಯದ ಮೇಲೂ ಪ್ರಭಾವವನ್ನು ಬೀರುತ್ತ ಸಾಹಿತ್ಯ ಕ್ಷೇತ್ರದಲ್ಲಿ ತನ್ನ ಮಹತ್ತರವಾದ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು.

'ಸ್ವರವಚನ' ಎಂಬ ಪದ ಸ್ವರ ಮತ್ತು ವಚನ ಎಂಬೆರಡು ಪದಗಳಿಂದ ಜೋಡಣೆಯಾದಂತಹುದು. ಇವೆರಡು ಅರ್ಥ, ಧ್ವನಿ, ರಾಗದಿಂದ ಹಾಡಲು ಬರುವ ವಚನ-ಸ್ವರವಚನ. ನಿಘಂಟಿನ ಪ್ರಕಾರ ಸ್ವರವೆಂದರೆ ನಾದಧ್ವನಿ, ಸ್ವನ ಮುಂತಾದ ಅರ್ಥಗಳಿವೆ. ಅಂದರೆ ಸ್ವರ ಕಂಠದಿಂದ ಹೊರಡುವ ನಾದ, ಧ್ವನಿ ಹಾಗೂ

ಧ್ವನಿ, ಧಾಟಿ, ರಾಗ, ಕವಿತೆಯನ್ನು ಹಾಡುವ ಪದ್ಧತಿ ಮುಂತಾದ ಅರ್ಥಗಳನ್ನು ಒಳಗೊಂಡಿದೆ. ಸ್ವರವಚನದಲ್ಲಿನ 'ಸ್ವರ' ಪದವು ಗಾಯನ ಕ್ರಿಯೆಯ ಸೂಚಕವಾಗಿಯೂ, 'ವಚನ' ಪದವೂ ವಚನಕಾರರು ಅಥವಾ ಶಿವಶರಣರು ಸಾಹಿತ್ಯರೂಪವನ್ನು ಸೂಚಿಸುವ ಸೂಚಕವಾಗಿಯೂ ನಿರ್ದೇಶಿತಗೊಂಡಿದೆ. ಈ ರೀತಿಯ ಗಾನಯೋಗ್ಯದಿಂದೊಡಗೂಡಿದ ವಚನವೇ ಸ್ವರವಚನವಾಗಿದೆ.

ಸ್ವರವಚನವೆಂಬುದು ಪದಗೀತೆ, ಸ್ವರಪದ, ಸ್ವರವಚನ ಮುಂತಾದ ರೂಪಗಳನ್ನು 'ಹಾಡು' ಎಂಬ ಪದಕ್ಕೆ ಸಂವಾದಿಯಾಗಿ ಬಂದಿರುವಂತಹ ಪದಗಳಾಗಿವೆ. 'ಸ್ವರ' ಎಂಬ ಪದವೇ ಹಾಡಿನ ಮೂಲ ಲಕ್ಷಣವನ್ನು ಸೂಚಿಸುವಂತಹ ಪದವಾಗಿ ನಿರ್ಮಿತಗೊಂಡಿದೆ. ಸ್ವರವಚನಗಳನ್ನು ವಿವಿಧ ಬಗೆಯಲ್ಲಿ ಕರೆಯುವ ವಾಡಿಕೆ ನಮ್ಮಲ್ಲಿ ಕಂಡುಬರುತ್ತದೆ. ಸ್ವರಪದ, ವಚನಗೀತೆ, ಪದ, ಪದನು, ಪದಂಗಳು, ಸ್ವರಲೊಲ್ಲ, ಅನುಭಾವಪದ, ತತ್ವಪದ, ರಾಗಲಲಿತ, ಹಾಡುಗಬ್ಬ, ಭಜನ'ಪದ' ಎಂಬುದಾಗಿ ವಿವಿಧ ಹೆಸರುಗಳಿಂದ ಕರೆದಿರುವುದು ಕಂಡುಬರುತ್ತದೆ.[೨೪] ಹೀಗೆ ಪ್ರಕಾರ ಮತ್ತು ನಾಮನಿರ್ದೇಶನಗಳಿಂದ ಕರೆಯಲ್ಪಟ್ಟಿತು. ತತ್ತ್ವಪದ, ಕೈವಲ್ಯಪದ, ಭಕ್ತಿಯ ಪದ, ಜನಪ್ರಿಯ ಹಾಡು, ಭಜನೆ ಹಾಡು ಮುಂತಾದ ಪ್ರಕಾರಗಳಲ್ಲಿ ಹಾಡಿನ ರೂಪವನ್ನು ಪಡೆದುಕೊಂಡು ವಿಸ್ತಾರವಾಗಿ ಬೆಳೆಯಿತು. ಈ ಮೇಲಿನ ಎಲ್ಲಾ ಅಂಶಗಳು ಹಾಡುಗಬ್ಬದ ಇತಿಹಾಸ ಹಾಗೂ ಬೆಳೆದ ಹಂತಗಳನ್ನು ವಿವರಿಸುತ್ತವೆ.

"ಸ್ವರವಚನ' ಶರಣರು ಕೊಟ್ಟಂತಹ ಕನ್ನಡ ಹಾಡುಗಬ್ಬ ಪರಂಪರೆಗೆ ವಿಶಿಷ್ಟ ಕೊಡುಗೆ ನೀಡಿದ್ದಾರೆ. ೧೨ನೇ ಶತಮಾನದಲ್ಲಿ ಆರಂಭಗೊಂಡಂತಹ ಸ್ವರವಚನ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದ ಪ್ರಕಾರವಾಗಿದೆ. ಏಕೆಂದರೆ ಕನ್ನಡದಲ್ಲಿ ಅದುವರೆಗೂ ಹಾಡುಗಬ್ಬಕ್ಕೆ ಸ್ಪಷ್ಟವಾದ ನಿಲುವು ಇಲ್ಲದಿರುವುದು ಮತ್ತು ಹಾಡುಗಬ್ಬ ಪರಂಪರೆಗೆ ಸ್ಪಷ್ಟವಾದ ವೇದಿಕೆಯನ್ನು ಸ್ವರವಚನ ಸಾಹಿತ್ಯ ಸೃಷ್ಟಿಸಿಕೊಟ್ಟಿತು. ಅದರಿಂದ ಸ್ವರವಚನ ಸಾಹಿತ್ಯ ಉಗಮ, ವಿಕಾಸವನ್ನು ತಿಳಿಯುವುದು ಅತ್ಯವಶ್ಯಕವಾಗಿದೆ. ಸ್ವರವಚನದ ಉಗಮ ಮತ್ತು ವಿಕಾಸದ ಬಗ್ಗೆ ಹಲವಾರು ವಿದ್ವಾಂಸರು ಹಲವಾರು ರೀತಿಯಲ್ಲಿ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಡಾ.ಎಲ್.ಬಸವರಾಜು ಅವರು "ಇಡೀ ಭಾರತೀಯ ಸಾಹಿತ್ಯಕ್ಕೆ ವಚನವೆಂಬ ಅಭೂತಪೂರ್ವ ಕಾಣಿಕೆಯನ್ನು ಕೊಟ್ಟ ಶಿವದಾಸರು ತಮ್ಮ ಕಾಲಕ್ಕೆ ಅಥವಾ ತತ್ಪೂರ್ವಕ್ಕೆ ಕನ್ನಡದಲ್ಲಿಲ್ಲದಿದ್ದ ಹಾಡುಗಳನ್ನು ಬರೆಯಲೂ ಮೊದಲಿಗರಾದರು. ಶಿವಶರಣರು ಬರೆದ ಈ ಹಾಡುಗಳು ಪಲ್ಲವಿಯಿಂದ ಕೂಡಿ ಬೇರೆ-ಬೇರೆ ರಾಗಗಳಲ್ಲಿ ಹಾಡಲು ರಚಿತವಾದಂತಹ ಗೇಯ ಕೃತಿಗಳು."[೨೫]

ಪ್ರೊ. ಶಿ.ಶಿ. ಬಸವನಾಳ ಪ್ರಕಾರ ಕನ್ನಡ ಸಾಹಿತ್ಯದ ಆರಂಭ ಕಾಲದಿಂದಲೂ ವೀರಶೈವ ಸಾಹಿತ್ಯದ ಉದಯದವರೆಗೂ ನಿಜವಾದ ಹಾಡುಗಬ್ಬಗಳು ಕಾಣಿಸಿಕೊಳ್ಳುವುದಿಲ್ಲ. ಅದರಿಂದ ಹಾಡುಗಳ ರಚನೆಯಲ್ಲಿಯೇ ವೀರಶೈವ ಬರಹಗಾರರಿಗೆ ಅಗ್ರಸ್ಥಾನ ಸಲ್ಲುವುದು ಎಂದು ಹೇಳುತ್ತಾರೆ. ಈ ಮೇಲಿನ ಇಬ್ಬರು ವಿದ್ವಾಂಸರು ನೀಡಿದಂತಹ ಅಭಿಪ್ರಾಯಗಳು ಸೂಕ್ತವೆನಿಸುತ್ತವೆ. ಏಕೆಂದರೆ ಕನ್ನಡ ಸಾಹಿತ್ಯದ ಆರಂಭದಿಂದಲೂ ನಮಗೆ ಸ್ಪಷ್ಟವಾದ ಹಾಡಿನ ಅಥವಾ ಹಾಡುಗಬ್ಬದ ಸ್ಪಷ್ಟವಾದ ರಚನೆ ಸಿಗುವುದಿಲ್ಲ. ಕೇವಲ ಉಲ್ಲೇಖಗಳು ಕಂಡುಬರುತ್ತವೆ. ಕ್ರಿ.ಶ.೧೨ನೇ ಶತಮಾನದ ಹೊತ್ತಿಗೆ ಸಾಹಿತ್ಯವಲಯದಲ್ಲಿ ಹೊಸ ಕ್ರಾಂತಿಯ ಪ್ರಕಾರವೇ

ಒಟ್ಟಿನಲ್ಲಿ ೧೨ನೇ ಶತಮಾನದಲ್ಲಿ ಸ್ವರವಚನ ಸಾಹಿತ್ಯ ಹುಟ್ಟಿತು ಎನ್ನುವುದನ್ನು ಹಲವಾರು ವಿದ್ವಾಂಸರ ಚರ್ಚೆ ಹಾಗೂ ಆಧಾರಗಳಿಂದ ಗುರುತಿಸಬಹುದಾಗಿದೆ. ಸ್ವರವಚನ ಹಾಡುಗಬ್ಬ ಸಾಹಿತ್ಯಕ್ಕೆ ಒಂದು ವೇದಿಕೆಯನ್ನು ನಿರ್ಮಿಸಿಕೊಟ್ಟಿತು. ಮುಂದೆ ಹಲವಾರು ರೂಪಗಳನ್ನು ಪಡೆದುಕೊಳ್ಳುತ್ತ ಸಾಹಿತ್ಯ ವಲಯದಲ್ಲಿ ಹಾಡುಗಬ್ಬ ಶ್ರೀಮಂತಿಕೆಗೆ ಕಾರಣವಾಯಿತು. ಹೀಗೆ ೧೨ನೇ ಶತಮಾನದಲ್ಲಿ ಸಿಗುವಂತಹ ಲಿಖಿತ ರೂಪದ ಹಾಡುಗಳು, ಶಿವಶರಣರ ರಚನೆಗಳು ಸಾಹಿತ್ಯವಲಯದಲ್ಲಿ ಒಂದು ಹೊಸ ಕ್ರಾಂತಿಯನ್ನು ಎಬ್ಬಿಸಿದವು. ಹಾಗೆಯೇ ತನ್ನ ಹಳೆಯ ಮಾದರಿಯನ್ನು ಕಳೆದುಕೊಂಡು ಹೊಸ ಮಾದರಿಯ ಕಡೆಗೆ ದಾಪುಗಾಲು ಹಾಕುತ್ತ ಬಂದಿತು. ಹಿಂದೆ ಜನಪದರಲ್ಲಿ ಇದ್ದಿರಬಹುದಾದ ಈ ಗೀತಪ್ರಕಾರವೂ ಒಂದು. ಮೊದಲು ಹಗುರವಾದ ಶೃಂಗಾರ, ಅತಿಯಾದ ಅಶ್ಲೀಲಭಾವಗಳನ್ನು ಪ್ರಕಟಿಸಲು ತನ್ನನ್ನು ಒಡ್ಡಿಕೊಂಡು ಇದನ್ನು ಶರಣರು ತಮ್ಮ ಶಿವಾನುಭವ, ಶಿವತತ್ವ, ಶಿವಸ್ತುತಿಗಳಿಗೆ ಮಾಧ್ಯಮವನ್ನಾಗಿ ಮಾಡಿಕೊಂಡು ಅದಕ್ಕೊಂದು ಗಂಭೀರತೆಯನ್ನು, ಮಹತ್ವವನ್ನು ತಂದುಕೊಟ್ಟರು. ಅವರ ಶುದ್ಧ ಚಾರಿತ್ರ್ಯ, ನಡೆನುಡಿ, ಆಚಾರ-ವಿಚಾರಗಳಿಗನುಗುಣವಾಗಿ ಭಕ್ತಿ, ತತ್ತ್ವ-ಅಧ್ಯಾತ್ಮಾನುಭಾವಗಳನ್ನು ಅಳವಡಿಸಿಕೊಂಡು 'ಸ್ವರವಚನ'ವೆಂಬುದು ಹೆಚ್ಚು ಘನತೆ, ಗೌರವಗಳೊಂದಿಗೆ ಅಧ್ಯಯನದ ಮಹತ್ವ ಪಡೆದುಕೊಂಡಿತು.

ಈಗ ಉಪಲಬ್ಧವಾದ ಸ್ವರವಚನ ಸಾಹಿತ್ಯವನ್ನು ಗಮನಿಸಿ ಹೇಳುವುದಾದರೆ ಜೇಡರ ದಾಸಿಮಯ್ಯನಿಂದ ರಚಿತವಾದ ಒಂದು ಸ್ವರವಚನ ಎಡೆಪಡೆದ ಹಾಗೇ ಅತ್ಯಂತ ಪ್ರಾಚೀನವಾದುದೆಂದು ತಿಳಿದುಬರುತ್ತದೆ. ನಂತರ ಸಕಲೇಶ ಮಾದರಸ, ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವ, ಸಿದ್ಧರಾಮ, ಮಹಾದೇವಿಯಕ್ಕ, ನೀಲಮ್ಮ, ಆಂಡಯ್ಯ, ಮಡಿವಾಳ ಮಾಚಿದೇವ ಮೊದಲಾದ ಸು.೨೫ ಜನ ಹನ್ನೆರಡನೆಯ ಶತಮಾನದ ಶಿವಶರಣರಿಂದ ೨೫೦ಕ್ಕೂ ಹೆಚ್ಚು ಸ್ವರವಚನಗಳು ಸೃಷ್ಟಿಯಾಗಿರುವುದು ಕಂಡುಬರುತ್ತವೆ. ಇದನ್ನು ಬಸವಯುಗವೆಂದು ಕರೆಯುವುದು ಸೂಕ್ತವೆನಿಸುತ್ತದೆ. ಏಕೆಂದರೆ ಇವು ಶಿವಯೋಗದ ನೆಲೆಯನ್ನು ಅಷ್ಟಾವರಣ, ಷಟ್‌ಸ್ಥಲ, ಸಕೀಲಗಳು ಹಾಗೂ ವೀರಶೈವ ಧರ್ಮ ಪ್ರಕ್ರಿಯೆಗೆ ತತ್ತ್ವ ವಿಚಾರಗಳನ್ನು, ಲಿಂಗಾಂಗ ಸಾಮರಸ್ಯ ಅರಿವು-ಆಚಾರ ಆಧ್ಯಾತ್ಮಿಕ ವಿಚಾರಗಳನ್ನು ಗಾಢವಾಗಿ ವಿವೇಚಿಸುತ್ತವೆ. ಹೀಗೆ ೧೨ನೇ ಶತಮಾನದ ಬಸವಾದಿ ಶರಣರಿಂದ ಕಿರುತೊರೆಯಾಗಿ ಆರಂಭವಾದ ಈ ಸ್ವರವಚನವಾಹಿನಿ, ಮುಂದೆ ನೂರೊಂದು ವಿರಕ್ತರ ಕಾಲದಲ್ಲಿ ದೊಡ್ಡನದಿಯಾಗಿ ನಿಜಗುಣಾದಿ ತತ್ವಪದಕಾರರ ಕಾಲಕ್ಕೆ ಮಹಾಪೂರವಾಗಿ ಮುಂದುವರೆದು ಬಸವಯುಗ, ನೂರೊಂದು ವಿರಕ್ತರಯುಗ, ತೋಂಟದ ಸಿದ್ಧಲಿಂಗರಯುಗ ಹಾಗೂ ನಿಜಗುಣಾದಿ ತತ್ವಪದಕಾರರ ಯುಗ ಎಂದು ಗುರುತಿಸಬಹುದಾಗಿದೆ.

ಸ್ವರವಚನ ಹಾಡುವಂಥ ಗೇಯ ರಚನೆಗಳು. ಇವು ಪಲ್ಲವಿಯಿಂದ ಕೂಡಿರುತ್ತದೆ. ಇದರಲ್ಲಿ ಅನುಪಲ್ಲವಿ ಬರುವುದಿಲ್ಲ. ಇದು ಒಂದು ಪಾದದಿಂದ ನಾಲ್ಕು ಪಾದದವರೆಗೂ ಕೂಡಿರುತ್ತದೆ. ಎರಡು ಪಾದದ ನುಡಿಗಳಿದ್ದರೆ ಒಂದು ಪಾದದ ಪಲ್ಲವಿ, ನಾಲ್ಕು ಪಾದದ ನುಡಿಗಳಿದ್ದರೆ ಹೆಚ್ಚಾಗಿ ಎರಡು ಪಾದದ ಪಲ್ಲವಿ. ಕ್ವಚಿತ್ತಾಗಿ ನಾಲ್ಕು ಪಾದಗಳ ಪಲ್ಲವಿ ಷಟ್ಪದಿಯಾಗಿದ್ದರೆ ಅದರ ಅರ್ಧದಷ್ಟು ಅಂದರೆ ಮೂರು ಪಾದದ ಪಲ್ಲವಿ ಇರುವುದುಂಟು.

ಪಲ್ಲವಿಯ ನಂತರ ನುಡಿಗಳಿರುತ್ತವೆ. ಅವುಗಳಿಗೆ 'ಪದ' ಎಂದು ಕರೆಯುತ್ತಾರೆ. ಅವು ಇಂತಿಷ್ಟೇ ಇರಬೇಕೆಂದು ನಿಯಮವಿಲ್ಲ. ಅತಿ ಕಡಿಮೆಯೆಂದರೆ ಮೂರು-ಅತಿ ಹೆಚ್ಚೆಂದರೆ ಹಿರಿಯ ಮಂತ್ರಗೋಪ್ಯವನ್ನು, ಸ್ವರವಚನವೆಂದು ಅಂಗೀಕರಿಸುವುದಾದರೆ-೨೭ ನುಡಿಗಳಿರುತ್ತವೆ. ನುಡಿಗಳು ೩, ೫, ೭, ೯, ೧೧, ೧೩, ೧೫, ೧೭, ೧೯, ೨೧, ೨೩, ೨೫, ೨೭ ಹೀಗೆ ಬೆಸ ಸಂಖ್ಯೆಯಲ್ಲಿ ಕಂಡುಬರುವುದು ವಿಶೇಷ. ಒಂದು ಸ್ವರವಚನದಲ್ಲಿರುವ ಪ್ರತಿ ನುಡಿಯೂ ಒಂದೇ ಪ್ರಮಾಣದ ಚರಣ ಸಂಖ್ಯೆಯನ್ನು ಹೊಂದಿರುತ್ತದೆ. ಅವು ೨, ೩, ೪, ೬ ಪಾದದವರೆಗೆ ಕಂಡುಬರುತ್ತವೆ. ಇದರಲ್ಲಿ ನಾಲ್ಕು ಪಾದಗಳೇ ಹೆಚ್ಚಾಗಿ ಕಂಡುಬರುತ್ತವೆ. ನುಡಿಗಳಲ್ಲಿ ಆದಿಪ್ರಾಸ ಕಡ್ಡಾಯವಾಗಿರುತ್ತದೆ. ಅಂತ್ಯಪ್ರಾಸ ಕ್ವಚಿತ್ತಾಗಿ ಬರಬಹುದು. ಕೊನೆಯ ನುಡಿಯಲ್ಲಿ ಅಂಕಿತ ಬರುತ್ತದೆ. ಕೆಲವೊಮ್ಮೆ ಅದು ಪಲ್ಲವಿಯ ಪಾದದಲ್ಲಿಯೇ ಕಂಡುಬರುವುದು.

ಸಾಮಾನ್ಯವಾಗಿ ಎಲ್ಲಾ ಸ್ವರವಚನಗಳ ಮೇಲೆ ರಾಗ, ತಾಳ ಸೂಚನೆ ಇರುವುದು ಮತ್ತು ರಾಗ ಕಡ್ಡಾಯವಾಗಿರುತ್ತದೆ. ತಾಳ ಸೂಚನೆ ಕೆಲವಕ್ಕೆ ಇರದೇ ಇರಬಹುದು. ಅಂಶಗಣ ಘಟಿತ ಛಂದೋಬಂಧ ಗಳಲ್ಲಿ ಕೇವಲ ರಾಗ ಸೂಚನೆ ಮಾತ್ರ ಇದ್ದು, ಮಾತ್ರಾಗಣ ಘಟಿತ ಛಂದೋಬಂಧಗಳಲ್ಲಿ ರಾಗ-ತಾಳ ಎರಡೂ ಕಡ್ಡಾಯವಾಗಿರುವುದು ಕಂಡುಬರುತ್ತದೆ. ಕೆಲವು ಸ್ವರವಚನಗಳಲ್ಲಿ, ರಾಗ-ತಾಳ ಸೂಚನೆಗಳು ಕಂಡುಬರುವುದಿಲ್ಲ. ಇವುಗಳಿಗೆ ಸ್ವರವಚನಕಾರರೇ ರಾಗ-ತಾಳ ಸೂಚನೆಗಳನ್ನು ಬರೆಯದೇ ಇದ್ದಿರಬಹುದು. ಒಂದು ಪಕ್ಷ ಪ್ರತಿ ಮಾಡುವವರು ಇದನ್ನು ಬಿಟ್ಟಿರಬಹುದು.

ಸ್ವರವಚನಗಳು ಹೆಚ್ಚಾಗಿ ವೀರಶೈವ ತತ್ವಗಳನ್ನು ಪ್ರತಿಪಾದಿಸುತ್ತವೆ. ಜೊತೆಗೆ ಸಮಾಜ ವಿಮರ್ಶೆ, ಲೋಕನೀತಿ, ಭಕ್ತಿಯ ಪಾರಮ್ಯ ಮುಂತಾದ ತಾತ್ವಿಕತೆಗಳನ್ನು ಹೇಳುತ್ತವೆ. ೧೨ನೇ ಶತಮಾನದಲ್ಲಿ ರಚಿಸಿದಂತಹ ಸ್ವರವಚನಗಳು ಬಹಳ ಮುಖ್ಯವಾಗಿ ತತ್ವಪ್ರತಿಪಾದನೆಯಾಗಿತ್ತು. ನಂತರ ಬಂದಂತಹ ಅನುಭಾವ ಕವಿಗಳು ರಚನೆಗಳಲ್ಲಿ ಹೆಚ್ಚಿನದಾಗಿ ಲೋಕನೀತಿ, ಸಮಾಜದ ನ್ಯೂನ್ಯತೆಗಳನ್ನು ಹೇಳುವುದೇ ಹೆಚ್ಚಾಗಿ ಕಾಣಿಸುತ್ತದೆ.

ಸ್ವರವಚನಗಳ ಭಾಷೆ ನಡುಗನ್ನಡದ್ದಾಗಿದ್ದು, ಸರಳವಾದ ಭಾಷೆಯನ್ನು ಬಳಸಿರುವುದು ಕಂಡುಬರುತ್ತದೆ. ಬೆಡಗು, ಸಾಂಕೇತಿಕತೆಯಿಂದ ಕೂಡಿ ಮುಂದೆ ವಿರಕ್ತರು ಅನುಭಾವಿಗಳು ಕಾಲಕ್ಕೆ ಇನ್ನೂ ಸರಳವಾದ ಭಾಷೆಯಲ್ಲಿ ಸ್ಪಷ್ಟವಾಗಿ ಜನರಿಗೆ ನಿಲುಕುವಂತೆ ಶಿಷ್ಟ ಮತ್ತು ದೇಶೀಯ ಭಾಷೆಯಲ್ಲಿ ರಚಿಸಿರುವುದು ಮುಖ್ಯವಾದ ಸಂಗತಿ.

ಸ್ವರವಚನಗಳಲ್ಲಿ ವಿವಿಧ ಛಂದೋ ಪ್ರಕಾರಗಳನ್ನು ಅಥವಾ ಕರ್ನಾಟಕ ವಿಷಯಜಾತಿ ಮಟ್ಟುಗಳನ್ನು ಬಳಸಿರುವುದು ಕಂಡುಬರುತ್ತದೆ. ಷಟ್ಪದಿ, ಅಕ್ಕರ, ಏಳೆ, ಸಾಂಗತ್ಯ, ಚೌಪದಗಳಂತಹ ದೇಸಿಯ ಮಟ್ಟುಗಳನ್ನು ಬಳಸಿರುವುದು ವಿಶೇಷ. ಜೊತೆಗೆ ಅನೇಕ ಗುರುತಿಸಲಾಗದಂತಹ ನಾಲ್ಕು ಪಾದಗಳು-ಜಾನಪದ ಮಟ್ಟುಗಳು ಬಳಕೆಯಾಗಿವೆ ಮತ್ತು ಇವು ಹೆಚ್ಚಾಗಿ ಅಂಶಗಣ ಛಂದಸ್ಸಿನಲ್ಲಿ ರಚಿತವಾಗಿವೆ. ದ್ವಿತೀಯ ಸ್ಥಾನದಲ್ಲಿ ಮಾತ್ರ ಛಂದಸ್ಸು ಸಹ ಬಳಕೆಯಾಗಿರುವುದು ನೋಡಬಹುದು. ಹೀಗೆ ಸ್ವರವಚನಗಳು ರಾಗ-ತಾಳಗಳ ರಮ್ಯತೆಯ ಮೂಲಕ ಜನರ ಮನಸ್ಸನ್ನು ಆಕರ್ಷಿಸಿಕೊಂಡಿರುವುದು ವಿಶೇಷ ಸಂಗತಿ. ಇವು ಶಿವಸ್ತುತಿ,

ಶರಣಸ್ತುತಿ ಪರವಾದ ರಚನೆಗಳು. ಶರಣಸತಿ-ಲಿಂಗಪತಿ ಭಾವವನ್ನು ಅಳವಡಿಸಿಕೊಂಡು ಸ್ವರವಚನಗಳು ಮಧುರ-ಭಾವ-ಭಾಷೆ-ನೂತನ ಅಲಂಕಾರಗಳಿಂದ ತುಂಬಿಕೊಂಡು ಭಾವಗೀತೆಗಳಂತೆ ತೋರುತ್ತವೆ. ಕನ್ನಡ ಸಾಹಿತ್ಯಕ್ಕೆ ಸ್ವರವಚನವೆಂಬ ವಿಶಿಷ್ಟ ಪ್ರಕಾರ ಸೇರಿಕೊಂಡು ಮುಂದೆ ಹಲವಾರು ಪ್ರಕಾರಗಳಾಗಿ ಒಡಮೂಡಿತು. ಸ್ವರವಚನ ಬಹಳ ಮುಖ್ಯವಾಗಿ ಭಕ್ತಿ, ವೈರಾಗ್ಯ, ಆಧ್ಯಾತ್ಮ ವಿಷಯಗಳನ್ನು ಒಳಗೊಂಡ ಸಮಾಜಕ್ಕೆ ಆದರ್ಶಪ್ರಾಯವಾಗುವುದರ ಜೊತೆಗೆ ಸಮಾಜದಲ್ಲಿರುವ ಡಾಂಭಿಕತೆ, ಅರ್ಥಹೀನ ಬದುಕು, ಆಚರಣೆ, ಜಾತಿ, ಕುಲ, ಮಡಿ-ಮೈಲಿಗೆ ಮುಂತಾದ ವಿಷಯಗಳನ್ನು ಖಂಡಿಸಿತು. ಹೀಗೆ ಜನಮನ್ನಣೆ ಪಡೆದುಕೊಂಡು ವಿಪುಲವಾಗಿ ಬೆಳೆಯತೊಡಗಿತು. ಸ್ವರವಚನ ಇತರ ಧರ್ಮಗಳ ಸಾಹಿತ್ಯಕ್ಕೂ ಪ್ರೇರಣೆ ಪ್ರಭಾವವನ್ನು ಬೀರಿತು.

### ೨.೨.೬. ಕೀರ್ತನ ಸಾಹಿತ್ಯ

ಕನ್ನಡ ಸಾಹಿತ್ಯದಲ್ಲಿ ಕೀರ್ತನೆ ಮಹತ್ವಪೂರ್ಣವಾದ ಕಾಲಘಟ್ಟವಾಗಿದ್ದಿತು. "೧೨ನೇ ಶತಮಾನದಲ್ಲಿ ನಡೆದಂತಹ ಶಿವಶರಣರ ಕ್ರಾಂತಿಯ ಫಲವಾಗಿ ಸಾಹಿತ್ಯಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಮಹತ್ತರ ವಾದ ಪರಿವರ್ತನೆಯ ಕಾಲ. ಈ ಪರಿಣಾಮದಿಂದಾಗಿ ಮಧ್ಯಕಾಲೀನ ಸಾಹಿತ್ಯ, ವಸ್ತು, ಶೈಲಿ, ಭಾಷೆ ಆಶಯದಲ್ಲಿ ಹಾಗೂ ಮುಂತಾದ ಅಂಶಗಳಲ್ಲಿ ಗಣನೀಯವಾದ ಬದಲಾವಣೆ ಕಂಡುಕೊಂಡಿತು. ಇದಕ್ಕೆ ಕೀರ್ತನ ಸಾಹಿತ್ಯವೂ ಹೊರತಲ್ಲ. ಕೀರ್ತನ ಪರಂಪರೆಯಿಂದ ನಾಡು ಸಂಗೀತ ಸಾಮ್ರಾಜ್ಞೆಯಾಗಿ ಮೆರೆಯಿತು ಎಂದರೆ ತಪ್ಪಾಗಲಾರದು. ಪ್ರತಿ ಹಳ್ಳಿಗಾಡು ಪ್ರದೇಶಗಳ ಜನರ ಬಾಯಿಯಲ್ಲಿ ಸುಳಿದಾಡುವ ಸಾಹಿತ್ಯ ರೂಪವಾಗಿ ಹೊರಹೊಮ್ಮಿತು. ಮಧ್ಯಕಾಲೀನ ಸಾಹಿತ್ಯದಲ್ಲಿ ಹರಿದಾಸರ ಹಾಡುಗಳು ವಚನಕಾರ ಭಾವನಿಷ್ಠ ಗೀತೆಗಳ ಮುಂದುವರಿಕೆಯಾದರೂ ಸಂಗೀತಶಾಸ್ತ್ರದ ದೃಷ್ಟಿಯಿಂದ ಕೀರ್ತನೆಗಳು ಪ್ರತ್ಯೇಕ ಸ್ಥಾನವನ್ನು ಗಳಿಸಿಕೊಂಡಿವೆ. ಕರ್ನಾಟಕ ಸಂಗೀತದಲ್ಲಿ ಇರುವ ಸ್ಥಾನಕ್ಕಿಂತಲೂ ಕನ್ನಡ ಹರಿದಾಸ ಕೀರ್ತನೆಗಳಿಗೆ ಅನುಭವದ ಅಭಿವ್ಯಕ್ತಿಯಾಗಿ ವಿಶೇಷವಾದ ಸ್ಥಾನವಿದೆ."[೨೬] ಮಧ್ಯಕಾಲೀನದಲ್ಲಿ ರಚಿತವಾದಂತಹ ಎಲ್ಲಾ ಸಾಹಿತ್ಯ ರೂಪಗಳು ಸಹ ಕನ್ನಡ ದೇಸಿ ಮಟ್ಟುಗಳನ್ನು ಬಳಸಿಕೊಂಡಿರುವುದನ್ನು ಕಾಣಬಹುದು. ಏಕೆಂದರೆ ಇವು ಹೆಚ್ಚು ಹಾಡುವುದಕ್ಕೆ ಮತ್ತು ಶ್ರವ್ಯಗುಣಕ್ಕೆ ಪೂರಕವಾಗಿ ಇರುವಂತಹವುಗಳು. ಹೀಗೆ ಸ್ವರವಚನ ಉಗಮದೊಂದಿಗೆ ಕೀರ್ತನ ಸಾಹಿತ್ಯವೂ ಆಸುಪಾಸಿನಲ್ಲಿ ಉದಯಿಸಿ ಕನ್ನಡ ಸಾಹಿತ್ಯ ಲೋಕವನ್ನು ನಾದಮಯ ಪ್ರಪಂಚವನ್ನಾಗಿ ಮಾಡಿತು.

ಕೀರ್ತನ ಸಾಹಿತ್ಯ ಹರಿದಾಸರಿಂದ ರಚಿತವಾದಂತಹ ವಿಶಿಷ್ಟ ಸಾಹಿತ್ಯ ಪ್ರಕಾರ. 'ಕೀರ್ತನೆ' ಎಂದಾಕ್ಷಣ ಭಗವಂತನನ್ನು ತನ್ಮಯವಾಗಿ ಭಕ್ತಿಯಿಂದ ಹಾಡಿ ಹೊಗಳುವುದು ಎಂದರ್ಥ. ಕೀರ್ತನೆಗಳನ್ನು ಜನರು ಭಯ, ಭಕ್ತಿ, ಗೌರವ ದೃಷ್ಟಿಯಿಂದ ನೋಡುವ ಒಂದು ವಿಶಿಷ್ಟ ಪ್ರಕಾರ. ಕೀರ್ತನೆ ಹಾಡಲು ಯೋಗ್ಯ ವಾದುದು. ಭಕ್ತನು ಭಗವಂತನಲ್ಲಿ ತನ್ಮಯನಾಗಿ ಹಾಡಿ ಹೊಗಳುವ ತೀವ್ರವಾದ ಭಾವವಾಗಿರುತ್ತದೆ. ಇಲ್ಲಿ ಭಕ್ತ ಮತ್ತು ಭಗವಂತನ ನಡುವಿನ ಸಂಬಂಧ ಗಾಢವಾಗಿ ಭಕ್ತಿಯಲ್ಲಿ ಲೀನವಾಗಿರುವಂತಹುದು. ಕೀರ್ತನೆ ಹಾಡಿ ಹೊಗಳುವ ನುಡಿಗಟ್ಟಾಗಿದೆ. ಈ ಬಗೆಯ ಹಾಡಿ ಹೊಗಳುವ ವಿಧಾನವೇ ಕೀರ್ತನೆಯಾಗಿದೆ.

ಭಕ್ತ ಲೌಕಿಕ ಸುಖಗಳಿಂದ ಮುಕ್ತವಾಗಿ ಬದುಕುವ ಮತ್ತು ಶಾಶ್ವತವಾದ ಸುಖವನ್ನು ಪಡೆಯುವ ವಿಧಾನಗಳೇ ಕೀರ್ತನೆಯ ಬಹಳ ಮುಖ್ಯ ಆಶಯವಾಗಿರುತ್ತದೆ. ಪ್ರತಿಯೊಂದು ಕೀರ್ತನೆಗಳು ಏಕದೈವ ನಿಷ್ಠೆಯಿಂದ ಕೂಡಿರುವಂತಹುದು. ತನ್ನ ಇಷ್ಟದೇವನನ್ನು ಪರಿಪರಿಯಾಗಿ ಕೊಂಡಾಡುತ್ತ ಲೀನವಾಗುವುದಾಗಿದೆ. ಸಮಾಜದಲ್ಲಿ ಆದರ್ಶಪ್ರಾಯವಾದ ಜೀವನ ನಡೆಸುವಂತೆ ಸೂಚಿಸುವುದರ ಜೊತೆಗೆ ಇಹಲೋಕದ ಸುಖಕ್ಕಿಂತ, ಪರಲೋಕದ ಸುಖ ಶಾಶ್ವತ ಎಂದು ಹೇಳುವ ಮೂಲಕ ಶಾಶ್ವತ ಸುಖದ ಕಡೆಗೆ ಕೀರ್ತನೆಗಳು ಕೊಂಡೊಯ್ಯುತ್ತವೆ.

ಕನ್ನಡದಲ್ಲಿ ಕೀರ್ತನ ಸಾಹಿತ್ಯದ ಉಗಮವನ್ನು ವಿದ್ವಾಂಸರು ಪ್ರಾಚೀನತೆಯ ಕಡೆ ಕೊಂಡೊಯ್ಯುತ್ತಾರೆ. “ಕೀರ್ತನೆ ಎಂಬುದು ಕನ್ನಡದಲ್ಲಿ ಮೊದಲಿನಿಂದ ನಡೆದುಬಂದ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರ. ನಾವು ಯಾವುದನ್ನು ‘ಗೀತ ಸಾಹಿತ್ಯ’ ಅಥವಾ “ಹಾಡುಗಬ್ಬ”ವೆಂದು ಕರೆಯುತ್ತೇವೆ, ಅದೆಲ್ಲವೂ ಇದರಲ್ಲಿ ಸಮಾವೇಶಗೊಳ್ಳುತ್ತದೆ. ಇದಕ್ಕೆ ಮೂಲ ಜನಪದ ಸಾಹಿತ್ಯವೆಂದೇ ಹೇಳಬೇಕಾಗುತ್ತದೆ. ನಾಗವರ್ಮ ಹೆಸರಿಸಿರುವ ಪಾಡು, ಮೆಲ್ವಾಡು, ಪಾಡುಗಬ್ಬಗಳೆಂದು ಪೂರ್ವಸಾಹಿತ್ಯ ರೂಪಗಳನ್ನು ಸೂಚಿಸುವಂತಿದೆ. ಅದರ ಸ್ವರೂಪ ನಮಗೆ ೧೨ನೇ ಶತಮಾನ ಶಿವಶರಣರ ಹಾಡುಗಳಲ್ಲಿ ಕಂಡುಬರುತ್ತದೆ. ಇದೇ ಮುಂದೆ ಹರಿದಾಸರಿಂದ ಕೀರ್ತನೆ ಎಂಬ ಹೊಸರೂಪವನ್ನು ಪಡೆದುಕೊಂಡು ಪ್ರಸಿದ್ಧಿಯನ್ನು ಪಡೆಯಿತು”[೨೭] ಎಂದು ಹಲವಾರು ವಿದ್ವಾಂಸರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಂದರೆ ಕವಿರಾಜಮಾರ್ಗಕಾರ ಉಲ್ಲೇಖಿಸಿ ದಂತಹ ಚತ್ತಾಣ-ಬೆದಂಡೆ, ಒನಕೆವಾಡು, ಓವನಿಗೆ ಮುಂತಾದ ಪ್ರಕಾರಗಳನ್ನು ಹಾಡುಗಬ್ಬ ಪ್ರಕಾರಗಳೆಂದು ವಾದ-ವಿವಾದಗಳ ಮೂಲಕ ಗುರುತಿಸುತ್ತ ಬಂದಿದ್ದಾರೆ. ಇದನ್ನು ಒಪ್ಪಿಕೊಂಡು ಸಹ ಈ ರೀತಿ ಅಭಿಪ್ರಾಯ ಕೆಲವು ಶಿಷ್ಟ ಕವಿಗಳು ತಮ್ಮ ಕಾವ್ಯಗಳಲ್ಲಿ ಬಳಸಿಕೊಂಡಿರುವುದು ವಿಶೇಷ. ಅದರಿಂದ ಹಾಡುಗಬ್ಬ ಮೌಖಿಕ ಪರಂಪರೆಯಿಂದ ಲಿಖಿತ ಪರಂಪರೆಯಲ್ಲಿ ರೂಪುಪಡೆದು ಮುಂದೆ ಸ್ವರವಚನಗಳಲ್ಲಿ ಹಾಡುಗಬ್ಬ ದೊಡ್ಡ ಪ್ರಕಾರವಾಗಿ ಬೆಳೆಯಿತು. ಕೀರ್ತನ ಸಾಹಿತ್ಯ ಇದರ ಜೊತೆಯಲ್ಲಿ ವಿಪುಲವಾಗಿ ಬೆಳೆಯತೊಡಗಿತು. ಅಷ್ಟೇ ಅಲ್ಲದೇ ಇತರ ಭಾಷೆಗಳ ಸಾಹಿತ್ಯವೂ ಪ್ರಭಾವ ಬೀರಿರುವುದು ಗಮನಿಸಬೇಕಾದ ಅಂಶ. ಈ ಕಾಲಾವಧಿಯಲ್ಲಿ ತಮಿಳುನಾಡಿನ ನಾಯನ್ಮಾರರು ಮತ್ತು ಆಳ್ವಾರರು, ತೇವಾರಂ ಗೀತೆಗಳನ್ನು ಮತ್ತು ದಿವ್ಯ ಪ್ರಬಂಧವೆಂಬ ಭಕ್ತಿಗೀತೆಗಳನ್ನು ರಚಿಸಿದ್ದರು. ಹೀಗೆ ಇತರ ಭಾಷೆಗಳಲ್ಲೂ ಭಕ್ತಿವಾಹಿನಿ ಪ್ರಚಾರದಲ್ಲಿ ಇದ್ದಿತು. ಮೀರಾಬಾಯಿ, ಕಬೀರದಾಸ, ಚೈತನ್ಯರಂತಹ ಭಕ್ತಿ ಕವಿಗಳು ಸಾಕಷ್ಟು ಪ್ರಖ್ಯಾತಿಯನ್ನು ಪಡೆದಿದ್ದರು. ಈ ಎಲ್ಲಾ ಪ್ರೇರಣೆ, ಪ್ರಭಾವಗಳಿಂದ ಕೀರ್ತನ ಸಾಹಿತ್ಯ ಒಂದು ರೂಪ ಪಡೆಯಿತು. ಅದು ಹರಿದಾಸರ ಮೂಲಕ ಎಂದು ತಿಳಿದುಬರುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯ ಅವಿಸ್ಮರಣೀಯ ಘಟ್ಟಗಳನ್ನೆನಿಸುವ ಕೀರ್ತನ ಸಾಹಿತ್ಯ ಮತ್ತು ವಚನ ಸಾಹಿತ್ಯ “ಸಾಹಿತ್ಯ ಶಾರದೆಯ ಎರಡು ಕಣ್ಣುಗಳು ಇದ್ದಂತೆ” ಎಂದು ಹೇಳಬಹುದು. ವಚನ ಸಾಹಿತ್ಯ ೧೨ನೇ ಶತಮಾನದಲ್ಲಿ ಪ್ರವರ್ಧಿಸಿ ಬೆಳೆದರೆ; ಹರಿದಾಸ ಸಾಹಿತ್ಯವು ೧೪ನೇ ಶತಮಾನದಲ್ಲಿ ಉದಯಿಸಿ ೨೦೦ ವರ್ಷಗಳ ಕಾಲ ಬೆಳೆದು ಅನಂತರ ಒಂದು ಶತಮಾನ ಸ್ವಲ್ಪ ಮಂಕಾಗಿ ಅಂದರೆ ರಚನೆಗಳು ಆಗದೆ ಮತ್ತೆ ಹದಿನೇಳನೇ ಶತಮಾನದಿಂದ ೧೯ನೇ ಶತಮಾನದ ಆರಂಭ ಘಟ್ಟದವರೆಗೆ ವ್ಯಾಪಿಸಿತು.

ಕೀರ್ತನ ಸಾಹಿತ್ಯ ಪರಂಪರೆಯನ್ನು ವಿದ್ವಾಂಸರು ಹನ್ನೆರಡನೆಯ ಶತಮಾನದಲ್ಲಿ ಶಿವಶರಣರ ಸಮ್ಮುಖದಲ್ಲಿ ಗುರುತಿಸುತ್ತಾರೆ ಹಾಗೂ ಕನ್ನಡ ಕೀರ್ತನ ಸಾಹಿತ್ಯ ಮೊದಲ ಕೀರ್ತನಕಾರನೆಂಬ ಸಕಲೇಶ ಮಾದರಸರನ್ನು ಗುರುತಿಸುವುದರ ಜೊತೆಗೆ ಕೀರ್ತನ ಪರಂಪರೆ ಅಧಿಕೃತವಾಗಿ ಪ್ರಾರಂಭವಾಯಿತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಈ ಮಾತು ವಿವಾದಾತ್ಮಕವಾಗಿ ಇರುವುದರಿಂದ ನಮಗೆ ಆಧಾರಸಹಿತವಾಗಿ ಸಿಗುವ ನರಹರಿತೀರ್ಥರ ದಾಸಸಾಹಿತ್ಯ ಪರಂಪರೆಗೆ ಸ್ಪಷ್ಟವಾದ ರೂಪವನ್ನು ಕೊಡುವುದರ ಮೂಲಕ ಆದ್ಯಪ್ರವರ್ತಕರಾಗಿದ್ದಾರೆ. ಸುಮಾರು ೧೩-೧೪ನೇ ಶತಮಾನದಿಂದ ೧೫ನೇ ಶತಮಾನದವರೆಗೂ ನರಹರಿತೀರ್ಥರನ್ನು ಬಿಟ್ಟರೆ ಯಾವ ದಾಸರೂ ಕಂಡುಬರುವುದಿಲ್ಲ. ನಂತರ ೧೬ನೇ ಶತಮಾನದ ಹೊತ್ತಿಗೆ ವ್ಯಾಸರಾಯರ ಸಮ್ಮುಖದಲ್ಲಿ ದಾಸಪಡೆ ಸೃಷ್ಟಿಗೊಂಡು ಕೀರ್ತನ ಸಾಹಿತ್ಯ ಪರಂಪರೆಯನ್ನು ಹೆಚ್ಚು ಶ್ರೀಮಂತಗೊಳಿಸಿದರು. ಈ ಕಾಲಘಟ್ಟದಲ್ಲಿ ಪ್ರಖ್ಯಾತರಾದಂತಹ ಪುರಂದರದಾಸ, ಕನಕದಾಸರು ಮುಂತಾದವರು ಕೀರ್ತನೆ ಮುಖಾಂತರ ಸಮಾಜದ ಹಲವು ಮಗ್ಗಲುಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಸಮಾಜ ದಲ್ಲಿರುವಂತಹ ಆಚಾರ-ವಿಚಾರ ಸಂಪ್ರದಾಯ ಮಡಿ ಮೈಲಿಗೆ ಜಾತಿ ಮುಂತಾದ ಪ್ರಶ್ನೆಗಳನ್ನು ಎತ್ತಿಕೊಂಡು ಕೀರ್ತನೆಗಳ ಮೂಲಕ ಜನಮನಕ್ಕೆ ತಲುಪಿದರು. ಇಂತಹ ಅರ್ಥಪೂರ್ಣವಾದ ಕೀರ್ತನೆಗಳನ್ನು ಜನರ ಆಡುಭಾಷೆಯಲ್ಲಿಯೇ ರಚಿಸಿ ಜನಮನದಲ್ಲಿ ಹಚ್ಚ ಹಸುರಾಗಿ ಉಳಿದರು.

ಈ ಕಾಲಘಟ್ಟದ ಮತ್ತೊಂದು ವಿಶೇಷವೆಂದರೆ ವಿಜಯನಗರ ಸಾಮ್ರಾಜ್ಯ ಉತ್ತುಂಗದ ಶಿಖರದಲ್ಲಿ ಮೆರೆಯುತ್ತಿದ್ದಂತಹ ಕಾಲ. ಇಲ್ಲಿ ಎಲ್ಲ ಧರ್ಮಗಳು ಸಮನ್ವಯತೆಯಿಂದ ಕೂಡಿದ್ದವು ಮತ್ತು ಅವುಗಳಿಗೆ ಮಾನ್ಯತೆ, ಪೋಷಣೆಯನ್ನು ದೊರಕಿದ್ದವು. ಈ ಸಮಯದಲ್ಲಿ ಹರಿದಾಸರು ಅಸಂಖ್ಯಾತ ಕೀರ್ತನೆಗಳನ್ನು ರಚಿಸುವುದರ ಮೂಲಕ ಹಾಡುಗಬ್ಬದ ಸಾಹಿತ್ಯಕ್ಕೆ ಕಾರಣರಾದರು. ವಿಜಯನಗರದ ಅವನತಿಯ ನಂತರ ಸುಮಾರು ಒಂದು ಶತಮಾನ ಹರಿದಾಸ ಪರಂಪರೆ ಸ್ತಬ್ಧಗೊಂಡಿತು. ೧೭ನೇ ಶತಮಾನದ ಹೊತ್ತಿಗೆ ರಾಘವೇಂದ್ರ ತೀರ್ಥರ ಸಮ್ಮುಖದಲ್ಲಿ ಮುಂದುವರೆಯಿತು. ಜಗನ್ನಾಥದಾಸರು, ಗೋಪಾಲದಾಸರು, ಮೋಹನದಾಸರು, ವಿಜಯದಾಸರು ಮುಂತಾದವರು ಕೀರ್ತನ ಸಾಹಿತ್ಯ ಮುಂದುವರೆಸುವಲ್ಲಿ ಪ್ರಮುಖರಾದರು. ಸುಮಾರು ೮೦೦ ವರ್ಷಗಳ ಕಾಲ ಹಾಡುಗಬ್ಬವನ್ನು ವಿಸ್ತರಿಸುವುದರ ಜೊತೆಗೆ ಇತರೆ ಸಾಹಿತ್ಯ ಹಾಗೂ ಧರ್ಮಗಳ ಮೇಲೆ ಮೋಡಿ ಹಾಕಿ ತನ್ನ ಮಹೋನ್ನತಿಯನ್ನು ಕಂಡುಕೊಂಡಿತು. ಮುಂದೆ ಮೈಸೂರು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತಿರುಮಲಾರ್ಯ ಮೊದಲಾದ ವೈಷ್ಣವರು ಕೀರ್ತನೆಗಳನ್ನು ರಚಿಸಿದರು. ಹೀಗೆ ಕೀರ್ತನ ಸಾಹಿತ್ಯ ತನ್ನ ಸುದೀರ್ಘವಾದ ಇತಿಹಾಸದಲ್ಲಿ ಆಂತರಿಕ ಮತ್ತು ಬಾಹ್ಯಸ್ವರೂಪವನ್ನು ಬದಲಾಯಿಸಿಕೊಳ್ಳುತ್ತ ಸಾಗಿ ಬಂದಿದೆ. ಅಂತೆಯೇ ಜೈನ, ಮುಸ್ಲಿಂ, ಕ್ರೈಸ್ತರು ಸಹ ಕೀರ್ತನ ಸಾಹಿತ್ಯ ಪ್ರಭಾವದಿಂದ ಹಾಡುಗಳನ್ನು ರಚಿಸಲು ಆರಂಭಿಸಿದರು. ಒಟ್ಟಿನಲ್ಲಿ ದಾಸಸಾಹಿತ್ಯ ಪರಂಪರೆ 'ಕೀರ್ತನೆ' ಎಂಬ ಅಮೂಲ್ಯವಾದ ಗೇಯಪ್ರಕಾರವನ್ನು ನೀಡಿ ಮಧ್ಯಕಾಲೀನ ಸಾಹಿತ್ಯವೆಲ್ಲವನ್ನು ಸಂಗೀತ ಸುಧೆಯಲ್ಲಿ ಮುಳುಗಿಸಿತು.

"ದಾಸ ಸಾಹಿತ್ಯ ಎಂದ ಕೂಡಲೇ ಮೊದಲು ದೇವರ ನಾಮಗಳು ಅಥವಾ ಕೀರ್ತನೆಗಳು ನಮ್ಮ ಮನಸ್ಸಿನಲ್ಲಿ ಸುಳಿಯುತ್ತವೆ. ದಾಸ ಸಾಹಿತ್ಯದಲ್ಲಿ ಕೀರ್ತನೆ, ಸುಳಾದಿ, ಉಗಾಭೋಗ ಪ್ರಮುಖವಾದಂತವು.

ಇವು ವಿಷಯಾನುಗುಣವಾದ ರೂಪವನ್ನು ಆಯ್ದುಕೊಳ್ಳುವಲ್ಲಿ ಒಂದು ರೀತಿಯ ಭಾವಗೀತೆಯ ಲಕ್ಷಣವನ್ನು ಹೊಂದಿವೆ. ಸ್ವಯಂಪೂರ್ಣವಾದ ಏಕಮೇವ ಭಾವದ ನಿರೂಪಣೆಯಿಂದಲೂ ಅದು ಭಾವಗೀತೆಯ ಸ್ವರೂಪ ತಾಳಿದೆ. ಕೀರ್ತನೆಯಲ್ಲಿ ರಾಗ, ತಾಳಬದ್ಧವಾಗಿ ಪಲ್ಲವಿ, ಅನುಪಲ್ಲವಿ, ನುಡಿಗಳ ಸಂಯೋಜನೆಯಿರುತ್ತದೆ. ಕೊನೆಯಲ್ಲಿ ದಾಸರ ಅಂಕಿತವಿರುವುದು ಸಹಜವಾಗಿದೆ. ಇವು ಪ್ರಮುಖವಾಗಿ ಭಕ್ತಿ, ಜ್ಞಾನ, ವೈರಾಗ್ಯ, ನೀತಿ ಹಾಗೂ ಬದುಕು ಇತ್ಯಾದಿಗಳನ್ನು ಕುರಿತು ಉಪದೇಶಿಸುತ್ತವೆ. ಪ್ರಾಸಗಳಿಂದ ಅಂತ್ಯಪ್ರಾಸಗಳಿಂದಲೂ ಕೂಡಿರುವುದು ಕಂಡುಬರುತ್ತದೆ. ಇವು ಸರಳ ಸುಂದರ ಆಡುಭಾಷೆಯಲ್ಲಿರುತ್ತದೆ. ಕೀರ್ತನೆಯಲ್ಲಿ ಭಕ್ತಿ, ಸಂಗೀತ ಮತ್ತು ಸಾಹಿತ್ಯ ತ್ರಿವೇಣಿ ಸಂಗಮದಂತೆ ಮಿಲನಗೊಂಡಿರುತ್ತದೆ. ಹರಿದಾಸರ ಪ್ರಮುಖವಾದಂತಹ ಸುಳಾದಿ ಉಗಾಭೋಗಗಳು ವಿಶಿಷ್ಟವಾದ ರಚನೆಗಳಾಗಿವೆ. ಸುಳಾದಿ ರಚನೆಗಳು ಸುಮಾರು ೧೨-೧೫ನೇ ಶತಮಾನದಲ್ಲಿ ಇತ್ತೆಂದು ಮತ್ತು ಕರ್ನಾಟಕದಲ್ಲಿ ಪ್ರಚಲಿತವಾಗಿತ್ತೆಂದು ಅಭಿಪ್ರಾಯಪಡುತ್ತಾರೆ.”[೨೮]

“ಹಲವು ಕೀರ್ತನೆಗಳು ಷಟ್ಪದಿ, ಸಾಂಗತ್ಯ, ಚೌಪದಿ ಇವುಗಳ ಬೇರೆ ಬೇರೆ ಜೋಡಣೆಯಿಂದ ಒಳಗೊಂಡಿರುತ್ತದೆ. ಹಾಗೆಯೇ ದಾಸರು ಸಾವಿರಾರು ರಸಾನುಗುಣವಾದ ತಾಳಭೇದವುಳ್ಳ ಪ್ರಬಂಧಗಳನ್ನು ಒದಗಿಸಿಕೊಟ್ಟರು. ಒಟ್ಟಿನಲ್ಲಿ ಕೀರ್ತನೆಗಳು ಸಹಜತೆಯಿಂದ ಗೇಯತೆಯನ್ನು ಪಡೆದುದು ಹರಿದಾಸ ಸಾಹಿತ್ಯದ ವೈಶಿಷ್ಟ್ಯತೆ ಎಂದು ತೋರುತ್ತದೆ.”[೨೯] ಹೀಗೆ ಕೀರ್ತನ ಸಾಹಿತ್ಯ ಮಧ್ಯಕಾಲೀನ ಸಂದರ್ಭದಲ್ಲಿ ಸುಪ್ರಸಿದ್ಧವಾದ ಹಾಡುಗಬ್ಬದ ಪ್ರಕಾರವಾಗಿ ಜನಮನದಲ್ಲಿ ಹಸುರಾಗಿ ನೆಲೆ ನಿಂತಿತು.

### ೨.೨.೭. ತತ್ತ್ವಪದ ಸಾಹಿತ್ಯ

ವೀರಶೈವ ಸ್ವರವಚನ ಮತ್ತು ಹರಿದಾಸ ಪರಂಪರೆಯ ಅವಧಿಯಲ್ಲಿ ನವೀನವಾದ ರೂಪವನ್ನು ಪಡೆದುಕೊಂಡು ವಿಸ್ತಾರವಾಗಿ ಜನಪ್ರಿಯತೆಯನ್ನು ಕಂಡುಕೊಂಡಿದ್ದು ವಿಶೇಷ. ತತ್ವಪದ ಕೇವಲ ಒಂದು ಧರ್ಮಕ್ಕೆ ಸೀಮಿತವಾಗದೇ ಹಲವು ಧರ್ಮಗಳ ಅನುಯಾಯಿಗಳು ತತ್ತ್ವಪದಗಳನ್ನು ರಚಿಸುವಲ್ಲಿ ಮಹತ್ತರ ಪಾತ್ರ ವಹಿಸಿರುವುದು ಗಮನೀಯವಾದುದು. ಧರ್ಮ-ಧರ್ಮಗಳ ನಡುವೆ ಅನೇಕ ಬಗೆಯ ಕೊಡುಕೊಳೆಗಳು ನಡೆದು ಹೊಸದೊಂದು ಸೌಹಾರ್ದ ಸಮನ್ವಯ ಪರಿಸರ ನಮ್ಮ ನಾಡಿನ ಸಂಸ್ಕೃತಿಯಲ್ಲಿ ಮೊದಲ ಸಲ ಕಾಣಿಸಿಕೊಂಡದ್ದು ವಿಶೇಷ. ಬಹುಶಃ ವಚನ ಚಳುವಳಿಯ ನಂತರ ಎಲ್ಲಾ ವರ್ಗದ ಜನರು ತತ್ವಪದ ಸಾಹಿತ್ಯ ರಚನೆಯಲ್ಲಿ ಭಾಗವಹಿಸಿದ್ದು, ತತ್ವಪದ ಸಾಹಿತ್ಯದ ವಿಶಿಷ್ಟತೆ ಎಂದು ಹೇಳಬಹುದು. ಮುಂದೆ ಅಭಿವ್ಯಕ್ತಿಯ ಮಾರ್ಗವನ್ನು ಹುಡುಕಿಕೊಂಡಿದ್ದು ಇದೇ ಮೊದಲು. ಶಿಷ್ಟ ಸಾಹಿತ್ಯದಂತೆ ಮೇಲ್ವರ್ಗದ ಜನತೆಗೆ ಸೀಮಿತವಾಗದೆ ಭಾರತೀಯ ಸಂಸ್ಕೃತಿಯ ಅತ್ಯಂತ ವಿಶಿಷ್ಟ ಅಭಿವ್ಯಕ್ತಿ ರೂಪವಾದ ಮೌಖಿಕ ಮಾಧ್ಯಮದ ಮೂಲಕ ಅನೇಕ ಸಾಧ್ಯತೆಗಳನ್ನು ಪರಿಣಾಮಕಾರಿಯಾಗಿ ದುಡಿಸಿಕೊಂಡ ರಚನೆಗಳಿವು. ತತ್ತ್ವಪದಗಳು ಹಾಡಿನ ಮೂಲಕ ಭಜನೆಯ ಮೂಲಕ ಹಳ್ಳಿಗಾಡಿನ ಮೂಲೆ ಮೂಲೆಗಳಲ್ಲಿ ಇಂದಿಗೂ ಕಂಡುಬರುವ ಹಾಡುಗಳೇ ತತ್ವಪದಗಳು ಅಥವಾ ಭಜನೆ ಪದಗಳಾಗಿವೆ. ತತ್ವಪದವು ಇಡೀ ಗ್ರಾಮೀಣ ಜನತೆಯಲ್ಲಿ ಬಹುದೊಡ್ಡ ಸಂಖ್ಯೆಯಲ್ಲಿ ಸಂಸ್ಕೃತಿ ಪ್ರಸಾರದ ಮಹತ್ವದ ಕೆಲಸ ಮಾಡುತ್ತದೆ.”[೩೦] ತತ್ವಪದವನ್ನು ಹಾಡುವವರು ಬಹುಶಃ ಹೆಚ್ಚಾಗಿ ಅನಕ್ಷರಸ್ಥರೇ. ಅಕ್ಷರದ ನೆರವಿಲ್ಲದೇ ಒಂದು ಜನಾಂಗ ಹೀಗೆ ತನ್ನ ಸಂಸ್ಕೃತಿಯನ್ನು ಅರ್ಥಪೂರ್ಣವಾಗಿ ಬೆಳೆಸಿಕೊಳ್ಳಬಲ್ಲದೆಂಬುದಕ್ಕೆ ಇದು ದೊಡ್ಡ ನಿದರ್ಶನವಾಗಿದೆ.

"ತತ್ವಪದ ಈ ಪದದಲ್ಲಿಯೇ ಎರಡು ಅರ್ಥಗಳಿರುವುದು ವಿಶೇಷ. 'ತತ್ವ' ಎಂದರೆ ಸಿದ್ಧಾಂತ, 'ಪದ' ಎಂಬುದು 'ಹಾಡು' ಹದಗೊಂಡ ಶಬ್ದ ಎಂಬ ಅರ್ಥ ಬರುತ್ತದೆ. ಅಂದರೆ ಪರಮಾತ್ಮನಿಗೆ ಸಂಬಂಧಿಸಿದ ಸಿದ್ಧಾಂತವನ್ನು ಹಾಡಿನ ಮೂಲಕ ಅಭಿವ್ಯಕ್ತಿಸುವ ಕ್ರಿಯೆ 'ತತ್ತ್ವಪದ' ಎನ್ನುತ್ತಾರೆ. ತತ್ವಪದದಲ್ಲಿ 'ತತ್ವ' ವಸ್ತುವಾದರೆ, 'ಪದ' ಅಭಿವ್ಯಕ್ತಿ ಮಾಧ್ಯಮ. ವಸ್ತುಸಾಹಿತ್ಯದ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗುತ್ತಿರುವುದರ ಜೊತೆಗೆ ಸಂಸ್ಕೃತಿಯೊಂದರ ಪ್ರತೀಕವೂ ಆಗಿದೆ. ತತ್ವಪದಗಳು ಹರಸಂಸ್ಕೃತಿಯನ್ನು ಹೇಳಿದರೆ, ಕೀರ್ತನೆಗಳು ಹರಿಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ."[೩೧] ತತ್ವಪದವು ಆಧ್ಯಾತ್ಮಿಕ ವಿಷಯವನ್ನು ಒಳಗೊಂಡು ಧರ್ಮದ ಚೌಕಟ್ಟಿನಲ್ಲಿ ಬೆಳೆದು ಬಂದಿರುವುದನ್ನು ಗುರುತಿಸಬಹುದು. ತತ್ವ ಪದವನ್ನು ಹಲವು ನಾಮನಿರ್ದೇಶನಗಳಿಂದ ವಿದ್ವಾಂಸರು ಗುರುತಿಸುತ್ತಾರೆ. ಅವು ಅನುಭಾವ ಪದ, ಸ್ವರವಚನ, ಕೀರ್ತನೆ, ಭಾಜನಪದ, ಕೈವಲ್ಯಪದ ಇವು ಒಂದಕ್ಕೊಂದು ಹೆಚ್ಚಿನ ಸಾಮ್ಯತೆಯನ್ನು ಪಡೆದಿರುವ ಕಾರಣದಿಂದಾಗಿ ಈ ಎಲ್ಲ ಪದಗಳು ಒಂದು ಹಾಗೂ ಮತ್ತೊಂದು ಬಾರಿ ಪ್ರಯೋಗಗೊಂಡಿರುವುದನ್ನು ಕಾಣುತ್ತೇವೆ. ಇವೆಲ್ಲವು ಹಾಡುಗಬ್ಬದ ರಚನೆಗಳಾಗಿ ಒಂದಕ್ಕೊಂದು ನಿಕಟ ಸಂಬಂಧವನ್ನು ಪಡೆದಿವೆ.

ತತ್ವಪದಗಳು ಭಜನೆ ಪದಗಳೆಂದು ಹೆಚ್ಚು ಪ್ರಸಿದ್ಧಿಗೊಂಡಿರುವುದು ವಿಶೇಷ. ದೇವರನ್ನು ಪ್ರಾರ್ಥಿಸಲು ಗಾಯನವುಳ್ಳ ಅಭಿವ್ಯಕ್ತಿ ಕ್ರಮವೇ ಭಜನೆ. ನಮ್ಮಲ್ಲಿ ಭಜನೆಯನ್ನು ಎರಡು ರೀತಿಯಲ್ಲಿ ಹಾಡುವ ಕ್ರಮವಿದೆ. ಒಂದು ವ್ಯಕ್ತಿಗತ ಭಜನೆ, ಎರಡನೆಯದು ಸಾಮೂಹಿಕ ಭಜನೆ. ಇಲ್ಲಿ ಹಲವಾರು ಭಕ್ತರು ಸೇರಿ ಹಲವು ವಾದ್ಯಗಳ ಮುಖಾಂತರ ಸಾಮೂಹಿಕವಾಗಿ ಮುಮ್ಮೇಳ, ಹಿಮ್ಮೇಳವಾಗಿ ಹಾಡುತ್ತಾರೆ. ವ್ಯಕ್ತಿಗತವಾಗಿ ಹಾಡುತ್ತಾರೆ. ವ್ಯಕ್ತಿಗತ ಭಜನೆಯಲ್ಲಿ ಒಬ್ಬ ವ್ಯಕ್ತಿಯೇ ಹಾಡುವುದಾಗಿದೆ. ಹೀಗೆ ಬಂದಂತಹ ತತ್ವಪದ ಭಜನ ಮೇಳದ ಮೂಲಕ ಪರಿಣಾಮಕಾರಿಯಾದ ಸಮೂಹ ಮಾಧ್ಯಮವಾಯಿತು. ಹಾಗೆಯೇ ತತ್ವಪದಗಳನ್ನು ಸ್ವರವಚನಗಳೆಂದು ಕರೆಯಲಾಯಿತು."[೩೨]

ತತ್ವಪದವು ಶಿಷ್ಟ ಸಾಹಿತ್ಯ ಹಾಗೂ ಜನಪದ ಸಾಹಿತ್ಯ ಎಂಬ ಎರಡು ಸಾಹಿತ್ಯದ ಪರಂಪರೆಗೆ ಸೇರಿದ್ದಾಗಿದೆ. ಧರ್ಮ ಸಮನ್ವಯ, ಭಾಷಾ ಸಮನ್ವಯ, ಪ್ರಾದೇಶಿಕವಾಗಿ ಸಮನ್ವಯ ಒಳಗೊಳ್ಳುವುದರ ಜೊತೆಗೆ ತತ್ವಪದ ಸಾಹಿತ್ಯದ ಸಮನ್ವಯವನ್ನು ಸಾಧಿಸಿದೆ. ಇದರ ತತ್ವ ಪ್ರೌಢವಾದರೂ, ಶಿಷ್ಟ ಪರಂಪರೆಗೆ ಸೇರಿದರೂ, ಇದರ ಅಭಿವ್ಯಕ್ತಿ ಕ್ರಮ ಜನಪದವಾಗಿದೆ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ.

ತತ್ವಪದ ಸಾಹಿತ್ಯದ ಉಗಮವನ್ನು ವಿದ್ವಾಂಸರು ೧೨ನೇ ಶತಮಾನದ ಶಿವಶರಣರಿಂದ ರಚಿಸ ಲಾಯಿತೆಂದು ಗುರುತಿಸುತ್ತಾರೆ. ಅಂದರೆ ೧೨ನೇ ಶತಮಾನದಲ್ಲಿ ರಚಿತವಾದಂತಹ ವಚನ, ಸ್ವರವಚನ ಇವು ತತ್ವಪದಗಳೆಂದು ಭಾವಿಸುತ್ತಾರೆ. ಮುಂದೆ ಕೀರ್ತನ ಸಾಹಿತ್ಯ ಪರಂಪರೆ, ಕೈವಲ್ಯ ಸಾಹಿತ್ಯ, ತತ್ವಪದ ಸಾಹಿತ್ಯ ಹೀಗೆ ಹಲವು ಹೆಸರುಗಳನ್ನು ಪಡೆದುಕೊಂಡು ಬಂದಿರುವುದೆಂದು ಸೂಚಿಸುತ್ತಾರೆ. ಹೀಗೆ ತತ್ವಪದಗಳನ್ನು, ಸ್ವರವಚನಗಳೆಂದು ಗುರುತಿಸುವುದರ ಮೂಲಕ ಸ್ವರವಚನಗಳನ್ನು ರಚಿಸಿದ ಕೀರ್ತಿ ಮೊಟ್ಟ ಮೊದಲಿಗೆ ಶಿವಶರಣರಿಗೆ ಸಲ್ಲುತ್ತದೆ. ಸಕಲೇಶ ಮಾದರಸ ಕನ್ನಡದ ಮೊಟ್ಟ ಮೊದಲನೇ ಸ್ವರವಚನಕಾರರೆಂದು ಗುರುತಿಸಲಾಗಿದೆ. ಇದೇ ಸಾಹಿತ್ಯ ಪ್ರಕಾರವನ್ನು ಕೀರ್ತನೆ ಎಂಬ ಹೆಸರಿನಲ್ಲಿ ರಚಿಸಿ ಇಡೀ ಜನಮನದಲ್ಲಿ

ಹಸುರಾಗಿ ಉಳಿಯುವಂತೆ ಮಾಡಿದ್ದು ದಾಸರಿಗೆ ಸಲ್ಲುತ್ತದೆ. "ತತ್ವಪದಗಳು ಶರಣರ ಸ್ವರವಚನದಂತೆ ಮತ್ತು ದಾಸರ ಕೀರ್ತನೆಗಳಂತೆ ಕಂಡರೂ, ಅಭಿವ್ಯಕ್ತಿಯಲ್ಲಿ ಇವು ಸ್ವರವಚನ, ಕೀರ್ತನೆಗಳಿಗಿಂತ ಭಿನ್ನವೆನಿಸಿವೆ. ಶರಣರ ಸ್ವರವಚನದಲ್ಲಿರುವ ಆಧ್ಯಾತ್ಮ ವಿಚಾರಗಳು ಜನತೆಗೆ ತಲುಪುವಲ್ಲಿ ವಿಫಲವಾದವು. ಹಾಗೆಯೇ ಕೀರ್ತನೆಗಳು ಸಮೂಹ ಮಾಧ್ಯಮವಾಗಿ ಹೊರಹೊಮ್ಮಲಿಲ್ಲ. ಇಂತಹ ಎಲ್ಲಾ ಕೊರತೆಯನ್ನು ನೀಗಿಸಿಕೊಂಡ ತತ್ವಪದ, ಭಜನೆಯಂತಹ ಸಮೂಹ ಮಾಧ್ಯಮದ ಮೂಲಕ ಬಹುಬೇಗ ಜನಮನವನ್ನು ತಲುಪಿತು. ನಿಜಗುಣ ಶಿವಯೋಗಿಗಳಿಂದ ತತ್ವಪದ ಸಾಹಿತ್ಯಕ್ಕೆ ಸ್ಪಷ್ಟವಾದ ರೂಪವನ್ನು ಕೊಡುವುದರ ಮೂಲಕ ಆದ್ಯಪ್ರವರ್ತಕರೆನಿಸಿದರು. ಕ್ರಿ.ಶ. ೧೫, ೧೬ನೇ ಶತಮಾನದ ಆಸುಪಾಸಿನಲ್ಲಿದ್ದ ನಿಜಗುಣ ಶಿವಯೋಗಿಗಳು ತತ್ವಪದಗಳ ಭಾಷೆಯ ಬಿಗುವನ್ನು ಸಡಿಲಿಸಿ ಆಡುಭಾಷೆಯ ಸೊಗಡನ್ನು ತತ್ವಪದಗಳಲ್ಲಿ ಬರೆಯಲು ಅಥವಾ ಹೇಳುವಲ್ಲಿ ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿಕೊಂಡರು.[೩೩] ಚಂದ್ರಶೇಖರ ಕಂಬಾರರು ಹೇಳುವಂತೆ 'ತತ್ವಪದ' 'ಜನಪ್ರಿಯ ಸಾಹಿತ್ಯ'ವೆಂದು ಕರೆದರು"

೧೬ನೇ ಶತಮಾನದಲ್ಲಿ ನಿಜಗುಣರಿಂದ ಅಧಿಕೃತವಾಗಿ ಪ್ರಾರಂಭವಾಗಿ ಮುಂದೆ ಅನೇಕ ಅನುಭಾವಿಗಳು ಅಧಿಕ ಸಂಖ್ಯೆಯಲ್ಲಿ ಸಾಹಿತ್ಯ ರಚನೆಯಲ್ಲಿ ಮುಂದಾದರು. ಬಾಲಲೀಲಾ ಮಹಾಂತ ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು, ಮುಪ್ಪಿನಾರ್ಯ್ಯರು ಮೈಲಾರ ಬಸವಲಿಂಗ ಶರಣರು ಮುಂತಾದ ಅನುಭಾವಿಗಳು ತತ್ವಪದ ಸಾಹಿತ್ಯವನ್ನು ಬೆಳೆಸಿದರು. "೧೮-೧೯ನೇ ಶತಮಾನವನ್ನು ತತ್ವಪದಗಳ ಸುಗ್ಗಿಯ ಕಾಲವೆಂದು ಹೇಳಬೇಕಾಗುತ್ತದೆ. ಏಕೆಂದರೆ ಈ ಕಾಲಾವಧಿಯಲ್ಲಿ ಸುಮಾರು ೫೦೦ಕ್ಕೂ ಹೆಚ್ಚು ತತ್ವಪದಕಾರರು ಸಾವಿರಾರು ಸಂಖ್ಯೆಯಲ್ಲಿ ತತ್ವಪದದ ಹಾಡುಗಳನ್ನು ರಚಿಸಿದ್ದಾರೆ. ಈ ಕಾಲಘಟ್ಟದಲ್ಲಿ ರಚನೆಯಾದಂತಹ ತತ್ವಪದಗಳು ಒಂದು ಧರ್ಮಕ್ಕೆ, ಒಂದು ಜಾತಿಗೆ ಸೀಮಿತವಾದುದಲ್ಲ. ಇಲ್ಲಿ ಎಲ್ಲಾ ಧರ್ಮೀಯರು ಜಾತ್ಯತೀತ ಭಾವನೆಯಲ್ಲಿ ಐಕ್ಯತೆ ಮನೋಭಾವನೆಗಳನ್ನು ಇಟ್ಟುಕೊಂಡು ರಚಿಸಿದಂತಹ ಕಾಲವಾಗಿತ್ತು. ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗ, ರಾಮಪುರದ ಬಕ್ಕಪ್ಪ, ಶಿಶುನಾಳ ಶರೀಫ, ಕರಿಬಸವಾರ್ಯ ಮುಂತಾದವರು ಪದ ರಚನೆಯಲ್ಲಿ ತೊಡಗಿದಂತಹವರು. ಇವರ ತತ್ವಪದಗಳು ಗೇಯತೆ ಹಾಗೂ ಸರಳ ಆಡುಭಾಷೆಯಿಂದ ಜನಮನದಲ್ಲಿ ಹಸುರಾಗಿ ಉಳಿದವು. ಸಂಸಾರದ ನಶ್ವರತೆ ಎಂದು ಹೇಳಿ ಗುರುವೇ ಶ್ರೇಷ್ಠವೆಂದು ಲೋಕದ ರೀತಿ-ನೀತಿಗಳನ್ನು ವಿಮರ್ಶೆ ಮಾಡುತ್ತ ಸರ್ವಧರ್ಮ ಒಂದೇ ಎಂಬ ಭಾವನೆ ಬೆಳೆಸುತ್ತ ನೆಮ್ಮದಿಯ ಬದುಕನ್ನು ಕಟ್ಟಿಕೊಳ್ಳಲು ಈ ತತ್ವಪದ ಸಾಹಿತ್ಯವನ್ನು ಅಭಿವ್ಯಕ್ತಿ ಮಾಧ್ಯಮವಾಗಿ ದುಡಿಸಿಕೊಂಡರು."

ತತ್ವಪದ ಸಾಹಿತ್ಯ ಜನಸಾಮಾನ್ಯರನ್ನು ಬಹುಬೇಗ ತಲುಪಲು ಅವರು ಆರಿಸಿಕೊಂಡ ಬಹುಮುಖ್ಯ ಮಾಧ್ಯಮ ಹಾಡುಗಬ್ಬ ಪ್ರಕಾರ. ಹಾಡು ಎನ್ನುವಂತಹದು ಮನುಷ್ಯನನ್ನು ಅಥವಾ ಯಾವುದೇ ಪ್ರಜ್ಞಾವಂತ ಜೀವಿಯನ್ನು ಒಂದು ಕ್ಷಣ ಮೂಕವಿಸ್ಮಿತನನ್ನಾಗಿ ಮಾಡುವ ಲಕ್ಷಣ ಹೊಂದಿರುವಂತಹುದು. ತತ್ವಪದ ಮೇಲುನೋಟಕ್ಕೆ ಇವು ಹಾಡುವ ಗೇಯರಚನೆಗಳು. ಇದರಲ್ಲಿ ಅನುಭಾವದ ತತ್ವಗಳು ತುಂಬಿಕೊಂಡಿವೆ. ಇವುಗಳನ್ನು ರಾಗ, ತಾಳಗಳ ಮೂಲಕ ಅಭಿವ್ಯಕ್ತಿಸುವ ಕ್ರಮವಾಗಿದೆ. ತತ್ವಪದಗಳಲ್ಲಿ ಪಲ್ಲವಿ ಪದ್ಯದ ಕೊನೆಯ ಸಾಲಿನಲ್ಲಿ ಬರುತ್ತದೆ. ಕೆಲವು ತತ್ವಪದಗಳಲ್ಲಿ ಪಲ್ಲವಿ ಕೊನೆಯಲ್ಲೂ ಕಂಡುಬರುವುದು ವಿಶೇಷವಾದ

ಸಂಗತಿ. ಬಹುತೇಕ ತತ್ವಪದಗಳು ಚೌಪದಿಗಳಲ್ಲಿ ರಚನೆಯಾಗಿವೆ. ದೇಶಿ ಭಾಷೆಯ ಸೊಗಡು, ಪ್ರಾದೇಶಿಕ, ಸಾಮಾಜಿಕ, ಚಾರಿತ್ರಿಕ ಸಂಗತಿಗಳ ಅಭಿವ್ಯಕ್ತಿ ಉತ್ಕಟವಾಗಿ ಕಂಡುಬರುತ್ತದೆ. ತತ್ವಪದಗಳನ್ನು ಭಜನಾ ಪದಗಳೆಂದು ಕರೆಯುತ್ತಾರೆ. ಬಹುತೇಕ ಗ್ರಾಮೀಣ ಪ್ರದೇಶಗಳಲ್ಲಿ ಭಜನಾ ಪದವೆಂದೇ ಪ್ರಖ್ಯಾತಿಯನ್ನು ಪಡೆದುಕೊಂಡಿದೆ. ಭಜನಾ ಪದಗಳು ಏಕವ್ಯಕ್ತಿ ಗಾಯಕನಿಂದ ಭಜನೆ ನಡೆದರೆ ಮತ್ತೊಂದು ಸಾಮೂಹಿಕ ಭಜನೆಗಳು ನಡೆಯುತ್ತವೆ. ಇದರಲ್ಲಿ ಹಲವಾರು ಭಕ್ತರು ಸೇರಿ ವಿಭಿನ್ನವಾದ ಶೈಲಿಗಳಲ್ಲಿ ವಾದ್ಯ-ಲಯ ಮೇಳಗಳೊಂದಿಗೆ ಅಭಿವ್ಯಕ್ತಿಗೊಳಿಸುತ್ತಾರೆ. ಇವರು ಹಾಡುವಾಗ ಸಂಗೀತ ಪರಿಕರಗಳಾಗಿ ಏಕತಾರಿ, ದಮ್ಮಿ, ಕೈತಾಳ, ಚಾರಿಗೆ, ಚಳ್ಳವತ ಮುಂತಾದ ವಾದ್ಯಗಳನ್ನು ಬಳಸುವುದು ಕಂಡುಬರುತ್ತದೆ. ಹೀಗೆ ತತ್ವಪದಗಳು ಹಾಡುಗಬ್ಬವನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡು ಜನಮನವನ್ನು ಸೂರೆಗೊಂಡಿತು. ಹೀಗೆ ಹಾಡುಗಬ್ಬ ಎಂಟು ಶತಮಾನಗಳ ಕಾಲ ಸಾಹಿತ್ಯದಲ್ಲಿ ವಿಶಿಷ್ಟ ಸಾಹಿತ್ಯ ಪ್ರಕಾರಗಳ ಜೊತೆ ಜೊತೆಯಲ್ಲಿ ಬೆರೆತು ಬಂದಿರುವುದನ್ನು ಗಮನಿಸಿದರೆ ಜನತೆಯ ಮೇಲೆ ಎಂತಹ ಮೋಡಿಯನ್ನು ಮಾಡಿರಬಹುದೆಂದು ಊಹಿಸಬಹುದಾಗಿದೆ.

ಸಾಹಿತ್ಯ ಎಂಬುದು ನಿತ್ಯಪರಿವರ್ತನಶೀಲವಾದುದು ಮತ್ತು ಸಮಾಜಮುಖಿಯಾಗಿರುವಂತಹದು. ಕನ್ನಡ ಸಾಹಿತ್ಯ ಇಂದಿಗೂ ಸೃಜನಶೀಲತೆಯಿಂದ ಕೂಡಿರುವುದು. ಇದರ ಕೊಡು ಕೊಳ್ಳುವಿಕೆಯ ಗುಣದಿಂದಲೇ ಪ್ರಾಚೀನ ಕಾಲದಿಂದಲೂ ಕನ್ನಡ ಸಾಹಿತ್ಯ ಅನೇಕ ಪ್ರಕಾರಗಳನ್ನು ಆಹ್ವಾನಿಸುತ್ತ ಹೊಸ-ಹೊಸ ಆಶಯ, ಚಿಂತನ, ಶೈಲಿ, ಭಾಷೆ ಅಳವಡಿಸಿಕೊಂಡು ರಚಿಸುತ್ತ ಬಂದಿರುವುದು ಕನ್ನಡ ಸಾಹಿತ್ಯದ ವಿಶಿಷ್ಟ ಗುಣ. ಕನ್ನಡ ಸಂಸ್ಕೃತಭೂಯಿಷ್ಠ ಭಾಷೆಯಿಂದ ಸಾಹಿತ್ಯವನ್ನು ರಚಿಸಲು ಮುಂದಾಯಿತು. ಇಂತಹ ಸಂದರ್ಭದಲ್ಲಿ ಸಂಸ್ಕೃತದಲ್ಲಿದ್ದಂತಹ ಮಾರ್ಗ ಅಥವಾ ಓದುಗಬ್ಬ ಪ್ರಕಾರವನ್ನು ತ್ಯಜಿಸಿ ದೇಸೀಯ ಹಾಡುಗಬ್ಬದಲ್ಲಿ ಸಾಹಿತ್ಯವನ್ನು ರಚಿಸಲು ಮುಂದಾಯಿತು.

ಕನ್ನಡ ಸಾಹಿತ್ಯದಲ್ಲಿ ಗೇಯತೆಯ ವಿಶಿಷ್ಟ ರಚನೆ ರೂಪವಾಗಿ ಹಾಡುಗಬ್ಬ ಕಾಣಿಸಿಕೊಂಡಿತು. ಇದರ ಪ್ರಾಚೀನತೆಯನ್ನು ಕೆದುಕುತ್ತ ಹೋದರೆ, ಕವಿರಾಜಮಾರ್ಗಕಾರನ ಪೂರ್ವಕ್ಕೆ ಇದರ ವ್ಯಾಪ್ತಿ ವಿಸ್ತರಿಸುತ್ತದೆ. ಕನ್ನಡ ಹಾಡುಗಬ್ಬವೂ ಮೊದಲು ಜನಪದೀಯರಲ್ಲಿ ಬಳಕೆಯಾಗುತ್ತಿತ್ತು. ನಂತರ ಶಿಷ್ಟಕವಿಗಳು ತಮ್ಮ ಕಾವ್ಯಗಳಲ್ಲಿ ಬಳಸಿಕೊಂಡರು. ಕವಿರಾಜಮಾರ್ಗ ಕೃತಿಯಲ್ಲಿ ಉಲ್ಲೇಖಿಸಲಾದ ಓವನಿಗೆ, ಒನಕೆವಾಡು, ಬೆದಂಡೆ-ಪಗರಣ ಮುಂತಾದವು ಹಾಡುಗಬ್ಬದ ಪ್ರಕಾರಗಳೆಂದು ವಿದ್ವಾಂಸರು ಸಾಕ್ಷ್ಯಾಧಾರವಾಗಿ ತೋರಿಸಿದ್ದಾರೆ. ಓವನಿಗೆ ಮತ್ತು ಒನಕೆವಾಡು ಎಂಬೆರಡು ಪ್ರಕಾರಗಳು ಜನಸಾಮಾನ್ಯರಲ್ಲಿ ಬಳಕೆಯಾಗುತ್ತಿದ್ದಂತಹ ರಚನೆಗಳು. ಇವರು ಕುಟ್ಟುವಾಗ, ಬೀಸುವಾಗ, ಲಾಲಿ ಹಾಡುವಾಗ, ಸುಖದುಃಖಗಳಲ್ಲಿ ಹಾಡುಗಳನ್ನು ಹಾಡುತ್ತಿದ್ದಾರೆ ಎಂಬ ಪ್ರತೀತಿ ಇದೆ. ಇವನ್ನು ಸಾಹಿತ್ಯದಲ್ಲಿ ಬಳಸಿಕೊಂಡಿರುವುದನ್ನು ಕವಿರಾಜಮಾರ್ಗ ಕೃತಿಯಲ್ಲಿ ಉಲ್ಲೇಖ ಮಾಡಲಾಗಿದೆ. ಇವು ಅಪ್ಪಟ ದೇಸಿ ಹಾಡುಗಬ್ಬ ಪ್ರಕಾರಗಳೆಂದು ತಿಳಿದುಬರುತ್ತದೆ.

ಚತ್ತಾಣ-ಬೆದಂಡೆ ಈ ಎರಡು ಪ್ರಕಾರಗಳು ಬಹು ಚರ್ಚೆಗೆ ಒಳಗಾದಂತಹ ರಚನೆಗಳು. ವಿದ್ವಾಂಸರು ಇವುಗಳ ಸ್ವರೂಪ ಲಕ್ಷಣಗಳನ್ನು ವಿವರಿಸುತ್ತ 'ಚತ್ತಾಣ'ವನ್ನು ಓದುಗಬ್ಬವೆಂದು ಇದು ಸಂಸ್ಕೃತ ಮಾರ್ಗ ಕಾವ್ಯದ ಲಕ್ಷಣಗಳನ್ನು ಅಳವಡಿಸಿಕೊಂಡು ರಚನೆಯಾದಂತಹ ಪ್ರಕಾರ. 'ಬೆದಂಡೆ' ಯಾವುದೇ ಸಂಸ್ಕೃತ

ಲಕ್ಷಣಗಳನ್ನು ಅಳವಡಿಸಿಕೊಳ್ಳದೇ ದೇಸಿ ಛಂದೋರೂಪಗಳಾದ ತ್ರಿಪದಿ, ಷಟ್ಪದಿ, ಅಕ್ಕರ, ಸಾಂಗತ್ಯ ಮುಂತಾದವುಗಳಿಂದ ರಚಿತವಾದುದೆಂದು ನಿರ್ಣಯಿಸಿದ್ದಾರೆ. ಚತ್ತಾಣವನ್ನು ಓದುಗಬ್ಬ, ಬೆದಂಡೆಯನ್ನು-ಹಾಡುಗಬ್ಬವೆಂತಲೂ ಕರೆದಿರುವುದು ಸಮಂಜಸವೆನಿಸುತ್ತದೆ. ಇಂತಹ ಸಂದರ್ಭದಲ್ಲಿ ಜೈನಕವಿಗಳು ಮಾರ್ಗಕಾವ್ಯದ ಲಕ್ಷಣಗಳನ್ನು ಅಳವಡಿಸಿಕೊಂಡೇ ಅಲ್ಲಲ್ಲಿ ದೇಸಿ ಚಹರೆಗಳನ್ನು ಕಾಣಿಸುತ್ತಿದ್ದರು. ಇವರು ಸಂಪೂರ್ಣವಾಗಿ ಚಂಪೂವನ್ನೇ ತೊರೆಯದೇ ಧರ್ಮನಿಷ್ಠವಾಗಿ ಕಾವ್ಯವನ್ನು ರಚಿಸಿದವರು. ಕನ್ನಡದ ನಾಣ್ನುಡಿಗಳನ್ನು, ಕನ್ನಡ ಪದಗಳನ್ನು ತಮ್ಮ ಕಾವ್ಯಗಳನ್ನು ಬಳಸುವಲ್ಲಿ ಯಶಸ್ವಿಯಾದರು.

ವಸ್ತುಕ, ವರ್ಣಕ ಈ ಎರಡು ಕಾವ್ಯ ಪ್ರಭೇದಗಳು ಸಾಕಷ್ಟು ಚರ್ಚೆಗೆ ಒಳಪಟ್ಟಂತಹವು. ವಿದ್ವಾಂಸರು ಕವಿಗಳು ಈ ಪ್ರಭೇದಗಳ ಬಗ್ಗೆ ಅರ್ಥ ವಿವರಣೆಯನ್ನು ನೀಡಿದ್ದಾರೆ. 'ವಸ್ತುಕ' ಎನ್ನುವುದು ಹೆಚ್ಚಾಗಿ ಕಂದ ಮತ್ತು ಅಕ್ಷರ ವೃತ್ತಗಳಲ್ಲಿ ರಚಿತವಾದ ಮಾರ್ಗಕಾವ್ಯವೆಂದು, 'ವರ್ಣಕ' ಮಾರ್ಗಕಾವ್ಯವಲ್ಲದ ಲಯಬದ್ಧವಾದ, ಗೇಯವೂ ಆದ ಛಂದೋರೂಪಗಳಲ್ಲಿ ಆದ ಕೃತಿ ಎಂದು ತಿಳಿದುಬರುತ್ತದೆ. ಹೀಗೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸಿಗುವಂತಹ ಹಾಡುಗಬ್ಬದ ಪ್ರಭೇದಗಳು ಕನ್ನಡ ದೇಸೀಯತೆ ಹಾಗೂ ಹಾಡುಗಬ್ಬದ ಸಾಹಿತ್ಯ ಕೃತಿಗಳಲ್ಲಿ ಬಳಸುತ್ತಿದ್ದರು ಎಂದು ತಿಳಿದುಬರುತ್ತದೆ. ಈ ಸಂದರ್ಭದಲ್ಲಿ ಹಾಡುಗಬ್ಬದ ವಿರಳತೆ ಕಂಡುಬರುತ್ತದೆ. ಕಾರಣ ಆಗ ಕನ್ನಡ ಸಾಹಿತ್ಯ ಸಂಸ್ಕೃತ ಭೂಯಿಷ್ಠತೆಯಿಂದ ಕೂಡಿದಂತಹ ಸಂದರ್ಭವಾಗಿತ್ತು. ಕ್ರಿ.ಶ.೯-೧೦ನೇ ಶತಮಾನದ ತನಕ ಚಂಪೂ ಕಾವ್ಯಗಳು ಅತಿ ಹೆಚ್ಚಾಗಿ ಕಂಡುಬಂದರೂ ಸಹ ನಮ್ಮ ದೇಸಿ ಕವಿಗಳು ದೇಸಿ ಚಹರೆಯನ್ನು ಅಲ್ಲಲ್ಲಿ ಮೂಡಿಸಿರುವುದು ಮರೆಯುವಂತಿಲ್ಲ. ಕ್ರಿ.ಶ.೧೧-೧೨ನೇ ಶತಮಾನದ ಹೊತ್ತಿಗೆ ಚಂಪೂ ಕಾವ್ಯಗಳು ತಮ್ಮ ಮಾನ್ಯತೆಯನ್ನು ಕಳೆದುಕೊಂಡವು. ಏಕೆಂದರೆ ಈ ಹೊತ್ತಿಗೆ ಜನಸಾಮಾನ್ಯರಲ್ಲಿ ಚಂಪೂಕಾವ್ಯ ಆಸಕ್ತಿ ಉಳಿಯದೇ ಹೋಯಿತು. ದೇಸಿಯ ಒಲವು ಜನರಲ್ಲಿ ಮೂಡಿತ್ತು. ಚಂಪೂ ಕಾವ್ಯ ರಚನೆಗೆ ಅವಶ್ಯಕವಾಗಿ ಬೇಕಾದ ವ್ಯುತ್ಪತ್ತಿ, ಸಿದ್ಧತೆ, ಕಾವ್ಯಾಭ್ಯಾಸ, ಶ್ರಮ ಇವು ತಪ್ಪಿ ಹೋದವು. ಇತರೆ ದೇಸಿ ಛಂದೋರೂಪಗಳು ಸರಳವಾದ ಭಾಷೆ, ಹಾಡಲು ಯೋಗ್ಯವಾದಂತಹುದು. ಜನರಿಗೆ ಬಹುಬೇಗ ತಲುಪುವಂತೆ ಇದ್ದ ಕಾರಣ ಹಾಡುಗಬ್ಬ ಪ್ರಕಾರ ಹೆಚ್ಚು ಪ್ರಚಲಿತಗೊಂಡಿತು.

ಕ್ರಿ.ಶ. ೧೨ನೇ ಶತಮಾನ ಕನ್ನಡದಲ್ಲಿ ಗೇಯ ರಚನೆಗಳ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾದ ಕಾಲವಾಗಿದ್ದಿತು. ಈ ಕಾಲದಲ್ಲಿ ಪೂರ್ವದಲ್ಲಿ ಇಲ್ಲದಿದ್ದಂತಹ ಕನ್ನಡ ಭಾಷೆಯ ಪ್ರಥಮ ಉಪಲಬ್ಧ ಹಾಡುಗಬ್ಬಗಳು ರಚನೆಗೊಂಡವು. ಇವು ಕನ್ನಡ ಸಾಹಿತ್ಯದಲ್ಲಿ ಖಚಿತವಾದ ಹಾಡುಗಬ್ಬ ರೂಪಕ್ಕೆ ವೇದಿಕೆಯನ್ನು ರೂಪಿಸಿದವು. ಶರಣರು ವಚನ ಅಥವಾ ಸ್ವರವಚನಗಳಲ್ಲಿ ಇವನ್ನು ಅಳವಡಿಸಿಕೊಂಡು ರಚಿಸಲು ಮುಂದಾದರು. ಶರಣರಿಗೆ ಮಾರ್ಗ ಸಾಹಿತ್ಯದ ಶುಷ್ಕ ನಿಯಮಗಳು ಬೇಕಾಗಿರಲಿಲ್ಲ. ಜನತೆಗೆ ಸರಳವಾಗಿ ಆಡುಭಾಷೆಯ ಧಾಟಿಯಲ್ಲಿ, ರಾಗಬದ್ಧವಾದಂತಹ ಮಾರ್ಗದಲ್ಲಿ ನೀಡಲು ಪ್ರಾರಂಭಿಸಿದರು. ಹೀಗೆ ಹಾಡುಗಬ್ಬ ಸಾಹಿತ್ಯವೂ ಸ್ವರವಚನ ಮತ್ತು ಸ್ವರವಚನೇತರ ಸಾಹಿತ್ಯದಲ್ಲಿ ಹಾಡುಗಬ್ಬ ಪ್ರವಹಿಸಿತು. ಮುಂದೆ ದಾಸಸಾಹಿತ್ಯದಲ್ಲಿ 'ಕೀರ್ತನೆ' ಎನ್ನುವ ಗಾನಯೋಗ್ಯವಾದಂತಹ ಭಕ್ತಿಪ್ರಧಾನ ಗೀತೆಯಾಗಿ ಹೊರಹೊಮ್ಮಿತು. ಇದರಲ್ಲಿ ಅನೇಕ ಪ್ರಕಾರಗಳಾದ ಸುಳಾದಿ, ಉಗಾಭೋಗ ಮುಂತಾದವು ಸಂಗೀತ ಸುಧೆಯನ್ನು ಹರಿಸಿದವು. ಜೊತೆಗೆ ಇತರೆ ಧರ್ಮಗಳ ಮೇಲೂ ಪ್ರೇರಣೆ-ಪ್ರಭಾವವನ್ನು ಬೀರಿದವು.

ಜೈನ ಧರ್ಮೀಯರು ಇದರ ಪ್ರಭಾವಕ್ಕೆ ಹೆಚ್ಚು ಒಳಗಾಗಿ ತಮ್ಮ ಕಾವ್ಯಕೃತಿಗಳಲ್ಲಿ ಶರಣರ ವಚನ, ದಾಸರ ಕೀರ್ತನೆಗಳು, ಚಿಂತನೆ, ವಸ್ತು, ಶೈಲಿ ಮುಂತಾದವು ನೇರವಾದ ಪ್ರಭಾವವನ್ನು ಬೀರಿರುವುದು ಕಾಣಬಹುದು. ಉದಾಹರಣೆಗೆ ರತ್ನಾಕರವರ್ಣಿಯ ಎಲ್ಲಾ ಕೃತಿಗಳಲ್ಲೂ ಶರಣರ, ದಾಸರ ಪ್ರಭಾವವನ್ನು ಗುರುತಿಸಬಹುದಾಗಿದೆ. ಜೊತೆಗೆ ತನ್ನ ಕೃತಿಯಾದ ಭರತೇಶ ವೈಭವವನ್ನು ಸಂಪೂರ್ಣವಾಗಿ ಹಾಡುಗಬ್ಬದಲ್ಲಿ ರಚಿಸಿರುವುದು ವಿಶೇಷ. ಸ್ವರವಚನ ಪರಂಪರೆ ಮತ್ತು ಹರಿದಾಸ ಪರಂಪರೆ ಮತ್ತೊಂದು ರೂಪವಾಗಿ ವ್ಯಾಪಕ ಜನಾಂದೋಲನವಾಗಿ ಬೆಳೆದ ತತ್ವಪದ ಈ ಕಾಲಾವಧಿಯ ವಿಶೇಷವೆನ್ನಬಹುದು. ವೈಷ್ಣವ ಮತ್ತು ವೀರಶೈವರ ಜೊತೆಗೆ ಸಮಾಜದ ಕೆಳವರ್ಗಗಳಿಗೆ ಸೇರಿದ ಅನೇಕ ಜನರು ಇದರಲ್ಲಿ ಭಾಗವಹಿಸಿದ್ದರು. ಮೊದಲ ಬಾರಿಗೆ ದೊಡ್ಡ ಸಂಖ್ಯೆಯಲ್ಲಿ ಸೂಫಿಗಳು ಮತ್ತು ಮುಸ್ಲಿಮರು ಆಂದೋಲನದಲ್ಲಿ ಭಾಗವಹಿಸಿದ್ದು ವಿಶಿಷ್ಟ. ಧರ್ಮ-ಧರ್ಮಗಳ ನಡುವೆ ಕೊಡು-ಕೊಳೆಗಳು ನಡೆದು ಹೊಸದೊಂದು ಸೌಹಾರ್ದ ಸಮನ್ವಯ ಸಂಸ್ಕೃತಿಯತ್ತ ಮೊದಲ ಸಲ ಕಾಣಿಸಿಕೊಂಡಿತು. ಶಿಷ್ಟ ಸಾಹಿತ್ಯದಂತೆ ಕೇವಲ ಮೇಲ್ವರ್ಗದ ಜನರಿಗೆ ಸೀಮಿತವಾಗದೆ ಭಾರತೀಯ ಸಂಸ್ಕೃತಿಯ ಅತ್ಯಂತ ವಿಶಿಷ್ಟ ಅಭಿವ್ಯಕ್ತಿ ರೂಪವಾಯಿತು. ಈ ತತ್ವ ಪದಗಳು ಮೌಖಿಕ ಮಾಧ್ಯಮದ ಮೂಲಕ ಪರಿಣಾಮಕಾರಿಯಾಗಿ ಜನರಲ್ಲಿ ಪ್ರಭಾವ ಬೀರಿದಂತವು. ತತ್ವಪದಗಳನ್ನು ಹಾಡಿನ ಮೂಲಕ, ಭಜನೆಗಳ ಮೂಲಕ ಮಠ, ಗುಡಿಗಳ ಅನುಭಾವ ಗೋಷ್ಠಿಗಳು, ಭಜನೆ ಮೇಳಗಳು ಹಳ್ಳಿಗಾಡಿನ ಮೂಲೆ-ಮೂಲೆಗಳಲ್ಲಿ ಇಂದಿಗೂ ಕ್ರಿಯಾಶೀಲವಾಗಿರುವಂತಹ ವಿಶಿಷ್ಟವಾದ ಸಂಸ್ಕೃತಿ ತತ್ವಪದ ವಾಗಿದೆ. ಬಹುದೊಡ್ಡ ಸಂಖ್ಯೆಯಲ್ಲಿ ಅನಕ್ಷರಸ್ಥರಲ್ಲಿ ಸಂಸ್ಕೃತಿ ಪ್ರಸಾರದ ಮಹತ್ವ ಕೆಲಸ ಮಾಡುತ್ತಿದೆ.

ಹೀಗೆ ಕನ್ನಡ ಹಾಡುಗಬ್ಬ ಸಾಹಿತ್ಯ ಆರಂಭದಲ್ಲಿ ವಿರಳವಾಗಿ ಕಾಣಿಸಿಕೊಂಡು ೧೨ನೇ ಶತಮಾನದ ಹೊತ್ತಿಗೆ ಶರಣರ ಸಮ್ಮುಖದಲ್ಲಿ ಮಹೋನ್ನತಿಯನ್ನು ಪಡೆದುಕೊಂಡಿತು. ವಚನ, ಸ್ವರವಚನ, ಕೀರ್ತನೆ, ಕೈವಲ್ಯ ಸಾಹಿತ್ಯ, ತತ್ವಪದಗಳು ಮತ್ತು ಜಾನಪದೀಯ ಹಾಡುಗಳಾಗಿ ಹೊರಹೊಮ್ಮಿತು. ಸುಮಾರು ೮೦೦ ವರ್ಷಗಳ ಕಾಲ ಕನ್ನಡ ಸಾಹಿತ್ಯ ಹಾಡುಗಬ್ಬದ ವಿಶಿಷ್ಟ ರಚನೆಯಲ್ಲಿ ರಚನೆಗೊಂಡಿತು.

**ಕೊನೆಯ ಟಿಪ್ಪಣಿಗಳು**

೧. ಜನಪದ ಗೀತೆಗಳು ಮತ್ತು ಲಾವಣಿಗಳು, ಸಿಂಪಿ ಲಿಂಗಣ್ಣ, ಪುಟ ೩೫.

೨. ಜನಪದ ಸಾಹಿತ್ಯಾವಲೋಕನ, ಡಾ. ಬಿ.ಎಸ್. ಗದ್ದಿಗಿಮಠ, ಪುಟ ೧೩೦.

೩. ನಾಗವರ್ಮನ ಕಾವ್ಯಾವಲೋಕನ, ಪುಟ ೨೪೨.

೪. ಮೋಹನ ತರಂಗಿಣಿ, ಸಂಪಾದಕರು, ಡಾ. ಆರ್.ಸಿ. ಹಿರೇಮಠ, ಪುಟ ೮.

೫. ಭರತೇಶ ವೈಭವ, ಜಿ.ಬ್ರಹ್ಮಪ್ಪ, ಪುಟ ೧ ಮತ್ತು ೩.

೬. ನೇಮಿಜಿನೇಶನ ಸಂಗತಿ, ಮಹಿಷವಾಡಿ, ಪುಟ ೧೨.

೭. ಅರತ್ತೂರು ಪುರಾತನರ ಪುರಾಣ, ಶಾಂತರಸ, ಪುಟ ೩೦.

೮. ಸಂಕ್ಷಿಪ್ತ ಕನ್ನಡ ನಿಘಂಟು, ಶ್ರೀಮತಿ ಉಮಾದೇವಿ ಎಂ.ಎ., ಕನ್ನಡ ಸಾಹಿತ್ಯ ಪರಿಷತ್ತು, ಪುಟ ೧೩೮೦.

೯. ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ, ಮಲ್ಲೇಪುರಂ ಜಿ.ವೆಂಕಟೇಶ, ಪುಟ ೨೫೫.

೧೦. ರತ್ನಾಕರವರ್ಣಿ ಸಂಪುಟ, ಸಂಪಾದಕರು ಪ್ರೊ.ಬಿರಾದಾರ್ ಎಂ.ಜಿ, ಪುಟ ೩.

೧೧. ಸ್ವರವಚನ ಸಂಪುಟ.೧, ಶಿವಣ್ಣ, ಪ್ರಸ್ತಾವನೆ, ಪುಟ VI-VII.

೧೨. ಪ್ರಾಚೀನ ಕನ್ನಡ ರೂಪಗಳು, ರಂ.ಶ್ರೀ.ಮುಗಳಿ, ಪುಟ ೨೨೫.

೧೩. ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ, ಪುಟ ೨.

೧೪. ಕನ್ನಡ ಛಂದಸ್ಸಿನ ಪ್ರವೇಶಿಕೆ, ಡಾ.ನೀ.ಗಿರಿಗೌಡ, ಪುಟ ೪೨.

೧೫. ಕನ್ನಡ ಛಂದಸ್ಸಿನ ಪ್ರವೇಶಿಕೆ, ಪುಟ.೪೨.

೧೬. ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ರಂ.ಶ್ರೀ.ಮುಗಳಿ, ಪುಟ ೨೩೪.

೧೭. ಗರತಿಯ ಹಾಡು, ಸಂಗ್ರಹಕಾರರು, ಹಲಸಂಗಿ ಗೆಳೆಯರು, ಪುಟ ೧೨.

೧೮. ಗರತಿಯ ಹಾಡು, ಸಂಗ್ರಹಕಾರರು, ಹಲಸಂಗಿ ಗೆಳೆಯರು, ಪುಟ ೧೫.

೧೯. ಗರತಿಯ ಹಾಡು, ಸಂಗ್ರಹಕಾರರು, ಹಲಸಂಗಿ ಗೆಳೆಯರು, ಪುಟ ೧೨.

೨೦. ಗರತಿಯ ಹಾಡು, ಸಂಗ್ರಹಕಾರರು, ಹಲಸಂಗಿ ಗೆಳೆಯರು, ಪುಟ ೫೫.

೨೧. ಜನಪದ ಸಾಹಿತ್ಯ ಭಾಷೆ, ಡಾ.ಎಸ್.ಎಸ್.ಅಂಗಡಿ, ಪುಟ ೬೫.

೨೨. ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ರಂ.ಶ್ರೀ.ಮುಗಳಿ, ಪುಟ ೨೩೦.

೨೩. ಬಸವಯುಗದ ವಚನೇತರ ಸಾಹಿತ್ಯ, ಪ್ರಸ್ತಾವನೆ, ಡಾ. ಕೆ.ರವೀಂದ್ರನಾಥ, ಪುಟ ೨೫.

೨೪. ವೀರಶೈವ ಪಾರಿಭಾಷಿಕ ಪದಕೋಶ, ಡಾ. ಎಸ್. ವಿದ್ಯಾಶಂಕರ್ ಪ್ರ.ಸಂ., ಪುಟ ೩೨೯.

೨೫. ನೂರೊಂದು ಬರಹ, ಡಾ.ವೀರಣ್ಣ ರಾಜೂರ, ಲೇಖನ ೨೯೩.

೨೬. ದೇಶಿ-ದೇಶೀಯತೆ-ದೇಶಿವಾದ, ಡಾ.ಆರ್ವಿಯಸ್ ಸುಂದರಂ, ಪುಟ ೧೮.

೨೭. ಕನ್ನಡ ಸಾಂಗತ್ಯ ಸಾಹಿತ್ಯ, ವೀರಣ್ಣ ರಾಜೂರ, ಪುಟ ೨೪.

೨೮. ಭಕ್ತವಾಣಿ, ಸಂದಾಪಕರು, ಡಾ.ಇಟಗಿ ಈರಣ್ಣ, ಪುಟ ೧೫.

೨೯. ಕನ್ನಡ ಸಾಹಿತ್ಯ ಚರಿತ್ರೆ, ರಂ.ಶ್ರೀ. ಮುಗಳಿ, ಪುಟ ೧೭೧.

೩೦. ತತ್ತ್ವಪದಗಳ ಪ್ರಾತಿನಿಧಿಕ ಸಂಕಲನ, ಪ್ರಧಾನ ಸಂಪಾದಕರು ಶಾಂತರಸ, ಸಂಪಾದಕರು, ಓ.ಎಲ್. ನಾಗಭೂಷಣಸ್ವಾಮಿ, ಪ್ರಸ್ತಾವನೆ, ಪುಟ X-XI.

೩೧. ಹೈದ್ರಾಬಾದ್ ಕರ್ನಾಟಕದ ತತ್ವಪದಗಳು, ಪುಟ.೮ ಬಸವರಾಜ ಸಬರದ, ಪ್ರಸ್ತಾವನೆ, ಪುಟ.೮

೩೨. ಸ್ವರವಚನಗಳ ಸಂಗೀತಾತ್ಮಕ ಅಧ್ಯಯನ, ಡಾ. ಸರ್ವಮಂಗಳಾ ಶಂಕರ್, ಪುಟ ೩೨೪ ಮತ್ತು೩೨೫

೩೩. ಮಾತಾಡು ಲಿಂಗವೆ, ಚಂದ್ರಶೇಖರ ಕಂಬಾರ, ಪ್ರಸ್ತಾವನೆ, ಪುಟ.೧೫

□□□

# ಅಧ್ಯಾಯ : ಮೂರು

# ಕನ್ನಡ ಜೈನ ಹಾಡುಗಳು : ಉಗಮ-ವಿಕಾಸ-ಪ್ರಕಟಣೆಯ ಇತಿಹಾಸ

ಕನ್ನಡ ನಾಡು ಹಲವಾರು ಧರ್ಮ, ಭಾಷೆ, ಜಾತಿ, ಜನಾಂಗ, ಆಚರಣೆ, ಸಂಪ್ರದಾಯ, ಕಲೆ, ಸಾಹಿತ್ಯ, ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ತನ್ನದೇ ಆದ ರೀತಿಯಲ್ಲಿ ಸಾಂಸ್ಕೃತಿಕ ವೈವಿಧ್ಯತೆ ಮೆರೆದಿರುವುದು ಸಾಹಿತ್ಯದುದ್ದಕ್ಕೂ ಕಂಡುಬರುತ್ತದೆ. ಹಾಗೆಯೇ ಯಾವುದೇ ಸಾಹಿತ್ಯವಾಗಿರಲಿ ಅದು ಆ ನಾಡಿನ ಸಮಷ್ಟಿ ಜೀವನದ ಪ್ರತಿಬಿಂಬವಾಗಿರುತ್ತದೆ. ಸಮಾಜದಲ್ಲಿರುವ ಜನರ ಜೀವನವಿಧಾನಗಳು ಬದಲಾದಂತೆ ಸಾಹಿತ್ಯವು ಕೂಡ ಕಾಲಕ್ಕೆ ಅನುಗುಣವಾಗಿ ಸ್ಥಿತ್ಯಂತರಗೊಳ್ಳುತ್ತಲೇ ಇರುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯವೂ ಆರಂಭದ ಕಾಲಘಟ್ಟದಿಂದಲೂ ಅನೇಕ ಬದಲಾವಣೆಗಳಿಗೆ ತನ್ನನ್ನು ಒಡ್ಡಿಕೊಂಡಿದೆ. ಧರ್ಮ ಹಾಗೂ ಆ ಧರ್ಮದ ಆಶಯಗಳಿಗೆ ಮತ್ತು ಆ ಕಾಲದ ಸಾಮಾಜಿಕ ಪರಿಸ್ಥಿತಿಗೆ ಅನುಗುಣವಾಗಿ ಸಾಹಿತ್ಯವು ರಚನೆಯಾಗಿರುತ್ತದೆ. ಹೀಗೆ ಕನ್ನಡ ಸಾಹಿತ್ಯವೂ ಸಹ ತನ್ನ ಆರಂಭಕಾಲದಿಂದ ಇಂದಿನವರೆಗೂ ಬದಲಾವಣೆಗಳನ್ನು ಕಂಡುಕೊಳ್ಳುತ್ತ ಬಂದಿದೆ.

### ೩.೧. ಉಗಮ-ವಿಕಾಸ

ಕನ್ನಡ ಸಾಹಿತ್ಯದ ಆರಂಭವನ್ನು ಕ್ರಿ.ಶ. ೯ನೇ ಶತಮಾನದ ಪಂಪನಿಂದಲೇ ಗುರುತಿಸುತ್ತೇವೆ. ಪಂಪ ಕನ್ನಡದ ಆದಿಕವಿ. ಕನ್ನಡ ಸಾಹಿತ್ಯದಲ್ಲಿ ವಸ್ತು, ಭಾಷೆ, ಶೈಲಿಯ ಜೊತೆಗೆ ಲೌಕಿಕ ಆಗಮಿಕ ಕಾವ್ಯಮಾರ್ಗಗಳನ್ನು ಸೃಷ್ಟಿಸಿದನು. ಈತನ ಮಾರ್ಗವನ್ನೇ ಇಟ್ಟುಕೊಂಡು ಹಲವಾರು ಜೈನಕವಿಗಳು ಚಂಪೂ ಶೈಲಿಯ ಲೌಕಿಕ, ಆಗಮಿಕ ಗ್ರಂಥಗಳನ್ನು ರಚಿಸಿದರು. ವಸ್ತುವಿನ ಆಯ್ಕೆಯಲ್ಲಿ ಬದಲಾದರೂ ಸಹ ಜೈನಧರ್ಮದ ಧಾರ್ಮಿಕ ಧೋರಣೆಗಳು ಬಹುತೇಕ ಎಲ್ಲ ಜೈನಕೃತಿಗಳಲ್ಲೂ ಕಂಡುಬರುತ್ತವೆ. ಇಂತಹ ಚಂಪೂಬದ್ಧವಾದ ಶೈಲಿಯಲ್ಲಿ ಲೌಕಿಕ, ಆಗಮಿಕ ಕಾವ್ಯಗಳನ್ನು ರಚಿಸಿದ ಜೈನಕವಿಗಳು ಜನಸಾಮಾನ್ಯರ ಆಲೋಚನೆಗೆ ನಿಲುಕದ ಪ್ರಕಾರದಲ್ಲಿ ಸಾಹಿತ್ಯವನ್ನು ರಚಿಸತೊಡಗಿದ್ದರು ಎಂದೇ ಹೇಳಬೇಕು. ಕಾರಣ ಕಡ್ಡಾಯವಾಗಿ ಧರ್ಮಕ್ಕೆ ಪ್ರೌಢವಾದ ಚಂಪೂವೇ ಸರಿಯೆಂಬ ಭಾವನೆ ಬಹುಕಾಲ ಜೈನಕವಿಗಳ ಅಭಿಪ್ರಾಯವಾಗಿದ್ದಿತು. ತೀರ್ಥಂಕರರಂಥ ಮಹಾವ್ಯಕ್ತಿಗಳ ಇತಿವೃತ್ತಿಗಳನ್ನು ದೇಸಿ-ಛಂದಸ್ಸಿನ ಸಾಹಿತ್ಯ ಪ್ರಕಾರಗಳಲ್ಲಿ ರಚಿಸುವುದು ವಸ್ತುಪ್ರೌಢಿಮೆಯ ದೃಷ್ಟಿಯಿಂದ ಉಚಿತವಲ್ಲ. ದೇಸಿ ಛಂದೋಪ್ರಕಾರಗಳಾದ ಷಟ್ಪದಿ, ರಗಳೆ, ತ್ರಿಪದಿ, ಸಾಂಗತ್ಯ ಹಾಡುಗಳೇನಿದ್ದರೂ ಲಘುವಾದ ಕಥಾವಸ್ತು ನಿರ್ವಹಣೆ ಸರಿ ಎಂಬುದು ಅವರ ಅನಿಸಿಕೆ ಆಗಿದ್ದಿತು. ಇದಕ್ಕೆ ಈ ರೀತಿಯ ಕಾರಣಗಳನ್ನು ನೋಡಬಹುದು

ಪಂಪನ ಕಾಲಕ್ಕೆ ಹಾಡು ಎನ್ನುವುದು ಒಂದು ಪ್ರಕಾರವಾಗಿ ಬೆಳೆದು ಬಂದಿರಲಿಲ್ಲ. ಈ ಕಾಲದಲ್ಲಿ ಹಾಡುವವರು ಮರ್ಯಾದಸ್ಥರಲ್ಲ ಎಂಬ ಭಾವನೆಯಿತ್ತು. ಮತ್ತೊಂದು ಪ್ರಮುಖ ಕಾರಣವೇನೆಂದರೆ ಪಂಪ, ಪೊನ್ನ, ರನ್ನರ ಕಾಲಕ್ಕೆ ಜೈನಧರ್ಮದ ಪ್ರಾಬಲ್ಯ ಅತಿ ಹೆಚ್ಚಾಗಿತ್ತು. ಆದ ಕಾರಣ ಜೈನಧರ್ಮ ಧಾರ್ಮಿಕ ಧೋರಣೆಗಳ ಜೊತೆಗೆ ತತ್ವಗಳನ್ನು ಪ್ರತಿಪಾದಿಸಬೇಕಾಗಿತ್ತು ಹಾಗೂ ಜೈನಧರ್ಮದ ತತ್ವಗಳನ್ನು ಧೋರಣೆಗಳನ್ನು ಕಟ್ಟಿಕೊಡಲು ಸಾಧ್ಯವಿಲ್ಲ ಎಂಬ ಭಾವನೆಯನ್ನು ಸಹ ಹೊಂದಿದ್ದರು. ಈ ಎಲ್ಲ ಕಾರಣಗಳಿಂದ ಬಹುತೇಕ ಎಲ್ಲ ಜೈನಕವಿಗಳಾದ ಪೊನ್ನ, ರನ್ನ, ನಾಗವರ್ಮ, ಚಾವುಂಡರಾಯ, ಜನ್ನ, ನಾಗಚಂದ್ರ, ನಯಸೇನ, ಶಾಂತಿನಾಥ, ಬ್ರಹ್ಮಶಿವ ಮುಂತಾದ ಹಲವು ಜೈನಕವಿಗಳು ಜೈನಧರ್ಮದ ಧಾರ್ಮಿಕ ಧೋರಣೆಗಳಿಗೆ ಬದ್ಧವಾಗಿಯೇ ಚಂಪೂ ಶೈಲಿಯಲ್ಲಿಯೇ ಕಾವ್ಯವನ್ನು ರಚಿಸಿದರು. ಜೈನ ಕವಿಗಳು ಸಾಹಿತ್ಯದ ಹಲವಾರು ವಸ್ತು ಮತ್ತು ಛಂದೋಪ್ರಕಾರಗಳ ಬಳಕೆಯ ಸಾಧ್ಯತೆಯನ್ನು ತೋರಿಸಿಕೊಟ್ಟರು. ಬಿಡಿಯಾದ ಶಾಸ್ತ್ರಗ್ರಂಥಗಳು, ಕಂದ, ಖ್ಯಾತಕರ್ನಾಟಕ, ಗದ್ಯದಿಂದದೊಡಗೂಡಿದ ಚಂಪೂ ಟೀಕೆಗಳು, ಕಥಾಗ್ರಂಥಗಳು, ಷಟ್ಪದಿ, ಸಾಂಗತ್ಯ, ಶತಕ, ನಿಘಂಟು ಹೀಗೆ ಹಲವಾರು ಛಂದೋಪ್ರಕಾರ ವೈವಿಧ್ಯತೆಯನ್ನು ದುಡಿಸಿಕೊಂಡರು. ಜೈನಕವಿಗಳು ತಮ್ಮ ಧರ್ಮದ ನಿಷ್ಠೆಯಿಂದ ಧಾರ್ಮಿಕ ಕಾವ್ಯವನ್ನು ರಚಿಸಿದರು. ಹಾಗೆಯೇ ತಮಗೆ ಆಶ್ರಯ ನೀಡಿದ ರಾಜನನ್ನು ಕುರಿತು ಲೌಕಿಕ ಕಾವ್ಯವನ್ನು ರಚಿಸುವುದರ ಮೂಲಕ ಧಾರ್ಮಿಕ ಕಾವ್ಯದಲ್ಲಿ ಇದ್ದಂತಹ ಬಿಗಿಭದ್ರತೆಯ ಬರವಣಿಗೆ ಈ ಲೌಕಿಕ ಕಾವ್ಯಗಳ ರಚನೆಯಲ್ಲಿ ಸ್ವತಂತ್ರ್ಯವಾದ ಮನೋಧರ್ಮ ತಾಳಿರುವುದು ಕಂಡುಬರುತ್ತದೆ. ಮುಂದೆ ಕಾಲ ಬದಲಾದಂತೆ ಓದುಗರ ನಿಲುವನ್ನು ಅರಿತುಕೊಂಡು ಬೇರೆ ಬೇರೆ ಸಾಹಿತ್ಯ ಪ್ರಕಾರಗಳನ್ನು ಬಳಸಿಕೊಂಡು ಪುರಾಣ, ಚರಿತ್ರೆ, ಶಾಸ್ತ್ರ, ತತ್ವ ಹೀಗೆ ಬೇರೆ ಬೇರೆ ವಿಷಯಗಳಿಗೆ ಬೇರೆ ಬೇರೆ ವಾಹಕಗಳನ್ನು ಸಮರ್ಥವಾಗಿ ದುಡಿಸಿಕೊಂಡಿರುವುದು ಕಂಡುಬರುತ್ತದೆ.

ಪಂಪಯುಗವನ್ನು ದಾಟಿಕೊಂಡು ಬಸವಯುಗದಲ್ಲಿ ಕಾಲಿಟ್ಟ ನಂತರ ದಾಸ ಸಾಹಿತ್ಯದ ಮೂಲಕ ಕನ್ನಡ ಸಾಹಿತ್ಯವೂ ಅನೇಕ ರೀತಿಯ ಬದಲಾವಣೆಗಳನ್ನು ಹೊಂದುತ್ತಲಿದ್ದಿತು. ಹೀಗೆಯೇ "ಜೈನ ಕವಿಗಳು ದೇಸಿಯ ದಿಕ್ಕಿನತ್ತ ಬೀಸುಗಾಳಿಯನ್ನರಿತು ತಮ್ಮ ಸಾಹಿತ್ಯರಥವನ್ನು ಅತ್ತ ಸಾಗಿಸಿದರು. ತೀರ್ಥಂಕರ ಚರಿತ್ರೆಗಳು ಹಾಗೂ ಇವರ ಜೈನ ಸಾಂಪ್ರದಾಯಿಕ ವಿಷಯಗಳು ಜನರಿಗೆ ಸುಲಭವಾದ ಷಟ್ಪದಿ, ಸಾಂಗತ್ಯಗಳಲ್ಲಿ ನೆಲೆ ನಿಂತವು. ಅಲ್ಲದೆ, ಶೈವ ವೈಷ್ಣವ ಭಕ್ತಿ ಪ್ರಭಾವವು ಸಹ ಜೈನಕವಿಗಳ ಮೇಲೆ ಆಯಿತೆಂದು ಕಂಡುಬರುತ್ತದೆ."[೧]

೧೬ನೇ ಶತಮಾನದ ಹೊತ್ತಿಗೆ ದಾಸರು-ಶರಣರು, ತತ್ವಪದಕಾರರು, ಅವರ ಸಾಹಿತ್ಯ ಪ್ರಕಾರಗಳಾದ ವಚನ, ಕೀರ್ತನೆ, ಸ್ವರವಚನ, ತತ್ವಪದಗಳು ಜನಮನದಲ್ಲಿ ಹೆಚ್ಚು ಪ್ರಚಲಿತವಾಗಿದ್ದವು. ಇದರಿಂದ ಪ್ರಭಾವಿತರಾದ ಜೈನಕವಿಗಳು ಕನ್ನಡ ದೇಸಿಯ ಮಟ್ಟುಗಳಿಗೆ ಪ್ರಾಧಾನ್ಯತೆಯನ್ನು ನೀಡಲು ಮುಂದಾದರು. ಜೊತೆಗೆ ಜೈನಧರ್ಮದ ಉಳಿವಿಗಾಗಿ ಮತ್ತು ತನ್ನ ಧರ್ಮದ ತತ್ವ ವಿಚಾರಗಳ ಪ್ರಚಾರಕ್ಕಾಗಿ ಅನಿವಾರ್ಯವಾಗಿ ದೇಸಿಯ ಛಂದಸ್ಸಿನತ್ತ ಅಥವಾ ಹಾಡುಗಬ್ಬದ ಪ್ರಕಾರದಲ್ಲಿ ಜೈನಕವಿಗಳು ಬರೆಯಲು ಮುಂದಾದರು.

ಜೈನಕವಿಗಳು ತಮ್ಮ ಧರ್ಮದ ತತ್ವದ ಪ್ರತಿಪಾದನೆಯನ್ನು ಪ್ರಥಮ ಉದ್ದೇಶವನ್ನಾಗಿಯೂ ಅದನ್ನೇ ಮೂಲಪ್ರೇರಣೆ ಹಾಗೂ ಧ್ಯೇಯವನ್ನಾಗಿಯೂ ಜೊತೆಗೆ ಕಾವ್ಯಧರ್ಮವನ್ನು ಸರಿಜೋಡಿಯಾಗಿ ನಡೆಸಿದರು. ಕ್ರಿ.ಶ. ೯-೧೦ನೇ ಶತಮಾನದಲ್ಲಿ ವಿಜೃಂಭಣೆಯಿಂದ ಮೆರೆದ ಜೈನ ಸಾಹಿತ್ಯ ಕ್ರಿ.ಶ.೧೧ನೇ ಶತಮಾನಕ್ಕೆ

ಧಾರ್ಮಿಕ ವಿಚಾರಗಳನ್ನು ಧಾರಣ ಮಾಡಿಕೊಂಡು ಸರಳ ಹಾಗೂ ಜನಪ್ರಿಯ ಮಾದರಿಯಲ್ಲಿ ಹಾಡುಗಳನ್ನು ಬರೆಯಲು ಮುಂದಾದರು. ಈ ಸಂದರ್ಭದಲ್ಲಿ ಜೈನಕವಿಗಳು ಸಿದ್ಧಮಾದರಿಯ ಹುಡುಕಾಟದಲ್ಲಿದ್ದರೂ ಇಂತಹ ಸಂದರ್ಭದಲ್ಲಿ ಜೈನಕವಿಗಳಿಗೆ ಜೈನಹಾಡುಗಳನ್ನು ಬರೆಯುವುದರ ಮೂಲಕ ಜೈನ ಸಾಹಿತ್ಯದ ರಚನೆಯಲ್ಲಿ ನಿರಂತರತೆಯನ್ನು ಸಶಕ್ತವಾಗಿ ಬಿಂಬಿಸುವಲ್ಲಿ ಗುಣವುಳ್ಳ ಸಾಹಿತ್ಯಕ ರೂಪವಾಗಿ ಈ ಜೈನ ಹಾಡುಗಳು ರಚನೆಗೊಳ್ಳುತ್ತವೆ. ಆದರೆ ಈ ಹಾಡುಗಳ ಪ್ರಕಾರದಲ್ಲಿ ಜೈನಕವಿಗಳು ರಚನೆಯಲ್ಲಿ ಅಷ್ಟಾಗಿ ಗಮನ ಹರಿಸಲಿಲ್ಲವೆಂದೇ ಹೇಳಬೇಕು. ಆದರೆ ಇದನ್ನು ಉಪೇಕ್ಷಿಸಲಿಕ್ಕಾಗದ ಮಟ್ಟದಲ್ಲಿ ರತ್ನಾಕರವರ್ಣಿಯ ಹಾಡುಗಳು ಲಭ್ಯವಾಗುವುದರಿಂದ ಜೈನಹಾಡುಗಳ ಪರಂಪರೆಗೆ ಒಂದು ನಿರಂತರತೆಯನ್ನು ತಂದುಕೊಟ್ಟಿದೆ.

ಒಟ್ಟಿನಲ್ಲಿ "ಕನ್ನಡ ಹಾಡಿನ ಸಾಹಿತ್ಯಕ್ಕೆ ಹರಿದುಬಂದ ಜೈನಪರಂಪರೆಯ ಹೊನಲು ರತ್ನಾಕರನ ಈ ಹಾಡುಗಳು."[೩] ರತ್ನಾಕರವರ್ಣಿಯನ್ನು ಬಿಟ್ಟರೆ ಈ ಹಾಡುಗಳ ರಚನೆಯಲ್ಲಿ ಪ್ರಮುಖವಾಗಿ ಯಾವ ಜೈನಕವಿಗಳು ಅಷ್ಟಾಗಿ ಗುರುತಿಸಿಕೊಳ್ಳುವುದಿಲ್ಲ. ಚಂದ್ರಸಾಗರವರ್ಣಿ(೧೮೦೦-೧೮೬೦), ಕವಿಪದ್ಮರಾಜ ಪಂಡಿತ(೧೮೬೦-೧೯೧೦), ಕವಿದ್ವಾರಪಾಲ(೧೮೬೦-೧೯೨೫) ಮುಂತಾದವರು ಹಾಡುಗಳ ರಚನೆಯಲ್ಲಿ ತೊಡಗಿದರು ಎಂಬುದಕ್ಕೆ ಅಲ್ಲಲ್ಲಿ ಇವರ ಜೈನಹಾಡುಗಳು ಪ್ರಸ್ತಾಪವಾಗಿರುವುದು ಕಂಡುಬರುತ್ತದೆ. ಬಿಡಿ ಬಿಡಿಯಾಗಿ ಜೈನಹಾಡುಗಳು ಹಸ್ತಪ್ರತಿಗಳಲ್ಲಿ ವಿರಳವಾಗಿ ಸಿಗುವುದರಿಂದ ಕನ್ನಡ ಜೈನ ಹಾಡುಗಳ ರಚನೆ ನಿರಂತರವಾಗಿತ್ತೆಂಬುದು ತಿಳಿದುಬರುತ್ತದೆ.

### ೩.೨. ಪ್ರಕಟಣೆಯ ಇತಿಹಾಸ

ಕನ್ನಡ ಜೈನಹಾಡುಗಳ ರಚನೆಯು ೧೬ನೇ ಶತಮಾನದಲ್ಲಾಯಿತಾದರೂ ಇದರ ಪ್ರಕಟಣೆಯ ಇತಿಹಾಸ ೧೯ನೇ ಶತಮಾನದ ಆದಿಭಾಗದಲ್ಲಾಯಿತು. ಕನ್ನಡ ಜೈನಹಾಡುಗಳ ಪ್ರಕಟಣೆಯು ಸುಮಾರು ೯೦ ವರ್ಷಗಳ ಇತಿಹಾಸ ಹೊಂದಿದೆ. ಕನ್ನಡ ಜೈನಹಾಡುಗಳು ೧೯೧೩ರಲ್ಲಿ ಎತ್ತೂರ ಶಾಂತಿರಾಜ ಶಾಸ್ತ್ರಿಯವರ 'ಜಿನಭಜನಸಾರ' ಎಂಬ ಕೃತಿಯ ಮೂಲಕ ಮೊದಲು ಪ್ರಕಟಣೆಗೊಂಡಿತು.

೧. ಕೃತಿ - ಜಿನಭಜನಸಾರ
ಸಂಪಾದಕರು - ಎತ್ತೂರ ಶಾಂತಿರಾಜ ಶಾಸ್ತ್ರಿಯವರು
ಪ್ರಕಟಣೆ - ೧೯೧೩

ಈ ಕೃತಿಯಲ್ಲಿ ರಚನೆಗೊಂಡ ಜೈನಹಾಡುಗಳು ಬಹುಶಃ ಲಭ್ಯವಾದ ಮಾಹಿತಿ ಪ್ರಕಾರ ಮೊದಲ ಸಂಗ್ರಹಗಳಾಗಿವೆ. ಇಲ್ಲಿ ಚತುರ್ವಿಂಶತಿ ತೀರ್ಥಂಕರರ ಸ್ತೋತ್ರಗಳಿವೆ. ಇವು ರಾಗ-ತಾಳಗಳ ಮೂಲಕ ರಚನೆಗೊಂಡ ಹಾಡುಗಳಾಗಿವೆ. ಈ ಗ್ರಂಥ ಸುಮಾರು ೬ ಬಾರಿ ಮರುಮುದ್ರಣಗೊಂಡಿರುವುದು ಇದರ ಜನಪ್ರಿಯತೆಗೆ ಸಾಕ್ಷಿಯಾಗಿದೆ.

೨. ಕೃತಿ - ಜಿನಭಜನ ಸಂಗ್ರಹ
ಸಂಪಾದಕರು - ವಿ.ಲೋಕನಾಥಶಾಸ್ತ್ರಿಗಳು
ಪ್ರಕಟಣೆ - ೧೯೪೮

ಈ ಕೃತಿಯ ಎರಡನೇ ಆವೃತ್ತಿಯನ್ನು ಮೂಡಬಿದಿರೆಯ ವಿ.ಲೋಕನಾಥಶಾಸ್ತ್ರಿಗಳು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇದು ೨ ಬಾರಿ ಮರು ಮುದ್ರಣಗೊಂಡಿದ್ದರೂ ಮೊದಲ ಪ್ರಕಟಣೆ ಯಾವಾಗ ಆಗಿದೆ

ಎಂಬುದು ತಿಳಿದುಬರುವುದಿಲ್ಲ. ಇದು ಜಿನ ನಾಮಸ್ಮರಣೆಗೆ ಸಹಾಯಕವಾಗುವ ಗ್ರಂಥ. ಇದರಲ್ಲಿ ಗೃಹಸ್ಥನಿಗೆ ಪ್ರತಿನಿತ್ಯವೂ ಮಾಡುವುದಕ್ಕೆ ಅನುಕೂಲವಾದ ದೇವರ ಅಭಿಷೇಕ, ಸಂಕ್ಷಿಪ್ತ ಪೂಜಾವಿಧಿ ಸಂಗೀತದಿಂದ ಮಾಡಲ್ಪಡುವ ಸಾಮೂಹಿಕ ಪೂಜೆಗೆ ಯೋಗ್ಯವಾದ ಸಂಸ್ಕೃತ, ಹಿಂದಿ, ಕನ್ನಡ ಅಷ್ಟಕಗಳು, ನೂತನವಾಗಿ ರಚಿಸಲ್ಪಟ್ಟ ಕನ್ನಡ ದೇವರ ಕೀರ್ತನೆಗಳು, ಮದುವೆ ಮೊದಲಾದ ಶೋಭಾನ ಕಾರ್ಯಗಳಲ್ಲಿ ಹಾಡುವುದಕ್ಕೆ ಯೋಗ್ಯವಾದ ಶೋಭಾನೆಗಳು, ತೀರ್ಥಂಕರ ಪಂಚಕಲ್ಯಾಣದ ಶೋಭಾನಗಳು, ದೇವರ ಉತ್ಸವ, ಶುತಪೂಜೆ ಮೊದಲಾದ ಜಿನಭಜನೆಗೆ ಅನುಕೂಲವಾದ ಅಷ್ಟಾವಧಾನ ಪದಗಳು ಮುಂತಾದವು ಗುಣಕೀರ್ತನಾ ರೂಪವಾದ ಚೂರ್ಣಿಕ-ಗದ್ಯ ಮೊದಲಾದವುಗಳನ್ನು ಸಂಗ್ರಹಿಸಲ್ಪಟ್ಟಿದೆ.

೩. ಕೃತಿ - ರತ್ನಾಕರನ ಕೀರ್ತನೆಗಳು

ಸಂಪಾದಕರು - ಭುವನಹಳ್ಳಿ ಡಿ. ಶ್ರೀಪತಿ ಜೋಯಿಸ್

ಪ್ರಕಟಣೆ - ೧೯೬೬

"ರತ್ನಾಕರವರ್ಣಿಯ ಕೆಲವು ಅಧ್ಯಾತ್ಮ ಗೀತೆಗಳನ್ನು ಮೊದಲು ಗುರುತಿಸಿದವರು ಮೂರ್ನಾಡು ವರ್ಧಮಾನ ಹೆಗ್ಡೆಯವರು. ಅಂತರಾತ್ಮ 'ಮೂವಹೆಗ್ಡೆ' ಎಂಬ ಕಾವ್ಯನಾಮಗಳಿಂದ ಕೃತಿರಚನೆ ಮಾಡಿರುವ ಇವರು ಮೂಡಬಿದ್ರೆಯ ಜೈನ್‌ಪೇಟೆಯಲ್ಲಿರುವ ಹಿರಿಬಸದಿ(ಅಮ್ಮನವರ ಬಸದಿ)ಯ ಅರ್ಚಕರ ಮನೆಯಲ್ಲಿದ್ದ ಕೈಬರಹದ ಪ್ರತಿಯಿಂದ ಈ ಹಾಡುಗಳನ್ನು ಪತ್ತೆ ಹಚ್ಚಿದರು."[೪] ಇದನ್ನು ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ತಾಲ್ಲೂಕು ಭುವನಹಳ್ಳಿ ಶ್ರೀಪತಿಯವರು ತಮ್ಮ ಮನೆಯಲ್ಲಿಯೇ ಇದ್ದ ತಾಡಪತ್ರಿಯ ಪ್ರತಿಯೊಂದರಲ್ಲಿ ರತ್ನಾಕರನ ಕೀರ್ತನೆಗಳು ಇದ್ದದನ್ನು ಗಮನಿಸಿ ಇದನ್ನು ಮುಂದೆ ರತ್ನಾಕರನ ಕೀರ್ತನೆಗಳು ಎಂಬ ಹೆಸರಿನಿಂದ ೧೯೬೬ರಲ್ಲಿ ಪ್ರಕಟಿಸಿದರು.

ಈ ಕೃತಿಯಲ್ಲಿ ಜೈನಹಾಡುಗಳು ಅಚ್ಚಗನ್ನಡದಲ್ಲಿವೆ. ಶೈಲಿ ಮನ ಮುಟ್ಟುವಂತಹುದು. ಸಂಗೀತ ಸುಮಧುರವಾದುದು. ಸುಸ್ವರದಲ್ಲಿ ಹಾಡಿ ಮನತಣಿಸಲು ತುಂಬ ಅನುಕೂಲವಾಗಿದೆ. ವಿಚಾರಗಳು ಎಷ್ಟು ಉದಾತ್ತವಾಗಿಯೇ ಅಷ್ಟೇ ವ್ಯವಹಾರವಾಗಿವೆ. ಬೋಧಿಸಿದ ತತ್ವಗಳು ಅಪಾರವಾದವು. ಇವೆಲ್ಲವುಗಳನ್ನು ಸ್ವಾದಿಸಲು ಓದುಗರಲ್ಲಿ ಮತ್ತು ಹಾಡುವವರಲ್ಲಿ ಬೇಕಾದುದು ನಿಷ್ಠೆ ಎಂದು ಮುನ್ನುಡಿಯಲ್ಲಿ ಶ್ರೀ ಮ.ಕು.ಮಕೋಲ ಅವರು ಹೇಳಿರುವುದು ಸಮಂಜಸವಾಗಿದೆ. ಇಂಥ ಉಪಯುಕ್ತ ಗ್ರಂಥವಾದ ರತ್ನಾಕರನ ಕೀರ್ತನೆಗಳನ್ನು ೧೯೮೫ರಲ್ಲಿ ಹೊಂಬುಜದ ಶ್ರೀ ಜೈನಮಠದ ಶ್ರೀ ಸಿದ್ಧಾಮಿಕೀರ್ತಿ ಗ್ರಂಥಮಾಲೆಯಿಂದ ಮರುಮುದ್ರಣಗೊಳಿಸಲಾಗಿದೆ.

೪. ಕೃತಿ - ಅಧ್ಯಾತ್ಮರಸ ಗೀತಾಮಂಜರಿ

ಸಂಪಾದಕರು - ಜ್ಯೋತಿಷಿಯಂ ಜಗತ್ಪಾಲಯ

ಪ್ರಕಟಣೆ - ೧೯೬೬

ಈ ಕೃತಿಯಲ್ಲಿ ಗೀತೆಗಳಿಗೆ ಯೋಗ್ಯ ರಾಗವನ್ನು, ತಾಳವನ್ನು ಸೂಚಿಸಿದ್ದಾರೆ. ಇದರಲ್ಲಿ ಒಟ್ಟು ೪೦ ಗೀತೆಗಳಿವೆ. ಒಂದೇ ವರ್ಷದಲ್ಲಿ ಪ್ರಕಟವಾದ ಈ ಎರಡು ಪುಸ್ತಕಗಳಲ್ಲಿ ಆರು ಹಾಡುಗಳ ಹೊರತು ಉಳಿದುವೆಲ್ಲ ಸಮಾನವಾಗಿವೆ.

೫. ಕೃತಿ - ರತ್ನಾಕರನ ಹಾಡುಗಳು

ಸಂಪಾದಕರು - ಹಂಪ ನಾಗರಾಜಯ್ಯ

ಪ್ರಕಟಣೆ - ೧೯೭೯

ಜೈನ ಸಾಹಿತ್ಯ-ಸಂಸ್ಕೃತಿಯಲ್ಲಿ ವಿಶೇಷ ಅಧ್ಯಯನ ಮಾಡಿದ ಡಾ.ಹಂಪ ನಾಗರಾಜಯ್ಯ ಅವರು ಈ ರತ್ನಾಕರನ ಹಾಡುಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ೧೯೭೭ರಲ್ಲಿ ತುಮಕೂರು ಜಿಲ್ಲೆಯ ಬೆಳ್ಳಾವಿ ಬಳಿಯಿರುವ ಬಿದರೆ ಎಂಬ ಗ್ರಾಮದಲ್ಲಿ ಅಲ್ಲಿನ ಪದ್ಮನಂದಿ ಗ್ರಂಥ ಭಂಡಾರದಲ್ಲಿ ಕೆಲವು ಹಸ್ತಪ್ರತಿಯ ತಾಳೆಯೋಲೆ, ಓಲೆಗರಿಗಳ ಇದರ ಜೊತೆಗೆ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ಭಂಡಾರದಲ್ಲಿರುವ ಹಸ್ತಪ್ರತಿಗಳನ್ನು ಬಳಸಿಕೊಂಡು ಇದನ್ನು ಸಂಪಾದಿಸಲಾಗಿದೆ. ಇದರಲ್ಲಿ ೨೩೮ ಹಾಡುಗಳಿವೆ. ಡಾ.ಹಂಪನಾ ಅವರ ರತ್ನಾಕರ ಕವಿಯ ಜೀವನ ಕೃತಿಗಳ ಬಗೆಗೆ ಸ್ಥೂಲವಾಗಿ ವಿವರಿಸಿದೆ. ಈ ಹಾಡುಗಳಲ್ಲಿ ಅಂತರಂಗದ ಮೊರೆಯಿಡುವಂತಹವುಗಳನ್ನು ಹೇಳಲ್ಪಟ್ಟಿದೆ. ತನ್ಮಯತೆ ಇಲ್ಲಿ ಸ್ಥಾಯಿಯಾಗಿ ನಿಂತು ಕೆನೆಗಟ್ಟಿದೆ. ಸಾಮಂಧರನ ಸಾನಿಧ್ಯದಲ್ಲಿ ತಾನು ಇನ್ನು ಸೇರಲು ಸಾಧ್ಯವಾಗಿಲ್ಲವಲ್ಲಾ ಎಂಬ ಪ್ರಾಮಾಣಿಕ ವೇದನೆ, ಅಳಲು ತಹತಹ, ವಿಷಾದ ಅನೇಕ ಹಾಡುಗಳಲ್ಲಿ ಕಂಡುಬರುತ್ತದೆ. ಧರ್ಮನಿಷ್ಠವಾದ ನಿರೂಪಣೆ ಹಾಗೂ ಅಭಿವ್ಯಕ್ತಿಯಿಂದ ಕೂಡಿದೆ. ಪ್ರಾಪಂಚಿಕ ಸುಖದಿಂದ ವಿಮುಖವಾದ ಜೀವನ ನಿವೇದನೆ ಇಲ್ಲಿದೆ. ಸಂಸಾರದ ಅಪಾರತೆಯನ್ನು, ಭೋಗ ಜೀವನದ ಅದ್ರುವತ್ವವನ್ನು ಕಂಡು ಬದುಕಿನ ಸಂಬಂಧದಿಂದ ಬಿಡಿಸಿಕೊಳ್ಳಲು ಈ ಜೀವದ ತವಕ ಎಷ್ಟೆಂಬುದನ್ನು ಕಾಣುತ್ತೇವೆ. ಆತ್ಮ-ಅಧ್ಯಾತ್ಮ ವಿಚಾರಗಳು ಈ ಹಾಡುಗಳಲ್ಲಿ ಕಂಡುಬರುತ್ತವೆ.

೬. ಕೃತಿ - ಶ್ರೀ ಪಂಚಕುಲದೇವತಾ ಪೂಜಾ ಸಂಗ್ರಹ

ಸಂಪಾದಕರು - ಮೂಡಬಿದ್ರೆಯ ಶ್ರೀ ಎಂ.ಧರ್ಮರಾಜ ಇಂದ್ರ

ಪ್ರಕಟಣೆ - ೧೯೯೯

ಈ ಕೃತಿಯಲ್ಲಿ ೨೨೧ ಹಾಡುಗಳಿವೆ. ಇವು ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿವೆ. ಜೊತೆಗೆ ಆಧುನಿಕ ಜೈನಕವಿಗಳು ರಚಿಸಿದ ಹಾಡುಗಳು ಇಲ್ಲಿ ಸೇರಿವೆ. ಹೀಗಾಗಿ ಇದೊಂದು ಸಂಕೀರ್ಣ ಸಂಪುಟವಾಗಿ ಮಾರ್ಪಾಟಾಗಿದೆ. ಅಷ್ಟವಿಧಾರ್ಚನೆ, ಷೋಡಶೋಪಚಾರ ಪೂಜೆಗೆ ಸಂಬಂಧಿಸಿದ ಗೀತೆಗಳ ಸಂಗ್ರಹವಾಗಿದೆ.

೭. ಕೃತಿ - ಬಾಹುಬಲಿ ಗೀತಾಂಜಲಿ

ಸಂಪಾದಕರು - ಕೀ.ಶೇ.ಮೂರ್ನಾಡು ವರ್ಧಮಾನ ಹೆಗ್ಗೆ(ಲೇಖಕರು)

ಪ್ರಕಾಶಕರು - ಧರ್ಮಸ್ಥಳ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ, ಉಜಿರೆ

ಪ್ರಕಟಣೆ - ೨೦೦೨, ೨೦೦೭, ೨೦೧೦

ಈ ಕೃತಿಯನ್ನು ೨೦೦೨ರಲ್ಲಿ ವಿಜೃಂಭಣೆಯಿಂದ ಆಚರಿಸಿದ ಅವರ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ಸಂಸ್ಮರಣೆಗಾಗಿ ಪ್ರಕಟಿಸಿದರು. ಸ್ವತಃ ವರ್ಧಮಾನ ಹೆಗ್ಡೆಯವರು ಜಿನಭಕ್ತಿ ಗೀತೆಗಳನ್ನು ರಚಿಸಿ ಹಾಡುತ್ತಿದ್ದರು. ಈ ಕೃತಿಯು ಮೂರು ಭಾರಿ ಮರು ಮುದ್ರಣಗೊಂಡಿದ್ದು ಈ ಕೃತಿಯಲ್ಲಿ

ರತ್ನಾಕರವರ್ಣಿಯ ಹಾಡುಗಳು, ನಿರಂಜನಸ್ತುತಿ, ಅಷ್ಟಾವಿಧಾರ್ಚನೆಯ ಹಾಡುಗಳು, ಗೊಮ್ಮಟೇಶ್ವರ ಸ್ತುತಿ, ಭಕ್ತಾಮದ ಸ್ತೋತ್ರ, ಪದ್ಮಾವತೀ ಸ್ತೋತ್ರ, ಮಂತ್ರ ಸ್ತೋತ್ರಗಳು, ಭಜನೆ ಹಾಡುಗಳು, ಆರತಿ ಹಾಡುಗಳು, ಮುಂತಾದವು ಈ ಕೃತಿಯಲ್ಲಿರುವುದು ಕಂಡುಬರುತ್ತದೆ. ಭಾಷೆಯ ದೃಷ್ಟಿಯಿಂದ ಮಂತ್ರಗಳು ಸಂಸ್ಕೃತಮಯ ವಾಗಿದ್ದರೂ ಇನ್ನಿತರ ಹಾಡುಗಳು ಕನ್ನಡಮಯವಾಗಿರುವುದು ಕಂಡುಬರುತ್ತದೆ.

೮. ಕೃತಿ - ಭಕ್ತಿವಾಹಿನಿ
ಲೇಖಕರು - ಶ್ರೀ ಎಂ.ಬಿ.ಪಾಟೀಲ
ಪ್ರಕಾಶಕರು - ದಿಗಂಬರ ಜೈನ ಟ್ರಸ್ಟ್, ಅಧ್ಯಾತ್ಮ ಪ್ರಕಾಶನ ಸಂಸ್ಥೆ, ಬೆಂಗಳೂರು
ಪ್ರಕಟಣೆ - ೨೦೦೪

ಈ ಕೃತಿಯಲ್ಲಿ ೧೦೮ ಹಾಡುಗಳಿವೆ. ಇದು ಜೈನಧರ್ಮದ ಪಾರಮ್ಯವನ್ನು ಹೇಳುವ ಕೃತಿಯಾಗಿದೆ. ಈ ಭಕ್ತಿವಾಹಿನಿಯಲ್ಲಿ ವೀತರಾಗರೀತ-ಶಾಸ್ತ್ರ, ಗುರು ಹಾಗೂ ತನ್ನ ಆನಂದ ಸ್ವರೂಪವಾದ ಭಗವಾನ್ ಆತ್ಮನ ಗುಣಸ್ತುತಿರೂಪವಾದ ಹಾಗೂ ಅವರ ಮಹಿಮೆಯನ್ನುಂಟು ಮಾಡುವಂಥ ಭಕ್ತಿಗೀತೆಗಳನ್ನೇ ಸೇರಿಸಲಾಗಿದೆ. ಇಲ್ಲಿ ತೀರ್ಥಂಕರರ ವಂದನೆ, ಆತ್ಮ-ಅಧ್ಯಾತ್ಮ ವಿಚಾರಗಳಿಗಿಂತ ಜೈನಧರ್ಮದ ಧಾರ್ಮಿಕ ವಿಚಾರಗಳು ಈ ಕೃತಿಯಲ್ಲಿ ಕಂಡುಬರುತ್ತವೆ. ಇದರಲ್ಲಿ ಕೆಲವು ಜೈನ ಹಾಡುಗಳು ಪ್ರಕಟಣೆಯಾಗಿದ್ದು ಅದರ ಮಾಹಿತಿಗಳು ಲಭ್ಯವಾಗದೇ ಇರುವುದರಿಂದ ಕೇವಲ ಕೃತಿಗಳ ಹೆಸರು ಪ್ರಕಟಣೆಗಳು ಈ ಕೆಳಕಂಡಂತಿವೆ.

೯. ಕೃತಿ - ರತ್ನಾಕರನ ನಿರಂಜನ ಸ್ತುತಿ
ಸಂಪಾದಕರು - ಜಿ.ಬ್ರಹ್ಮಪ್ಪ
ಪ್ರಕಟಣೆ - ೧೯೬೮

'ಈ ನಿರಂಜನ ಸ್ತುತಿಯನ್ನು ವೀರಶೈವ ಸಾಹಿತ್ಯದಲ್ಲಿ ಕಂಡುಬರುವ ಚೆನ್ನಬಸವಣಪುರಾಣ ನಾಂದ್ಯ, ಪ್ರಭುದೇವರ ಪುರಾಣದ ನಾಂದ್ಯ, ಬಸವ ಪುರಾಣನಾಂದ್ಯ, ಸಿದ್ಧೇಶ್ವರ ಪುರಾಣನಾಂದ್ಯ ಮುಂತಾದ ನಾಂದ್ಯ ಮಾದರಿಗೆ ಸೇರಿಸಬಹುದು'.[೫]

೧೦. ಕೃತಿ - ಕನ್ನಡ ಜೈನಹಾಡುಗಳು
ಸಂಪಾದಕರು - ಡಾ. ಎಫ್.ಟಿ. ಹಳ್ಳಿಕೇರಿ, ಡಾ. ಕೆ. ರವೀಂದ್ರನಾಥ
ಪ್ರಕಾಶನ - ಕನ್ನಡ ವಿಶ್ವವಿದ್ಯಾಲಯ, ಹಂಪಿ
ಪ್ರಕಟಣೆ - ೨೦೦೧

ಈ ಕೃತಿಯು ಸಮಗ್ರವಾದ ಜೈನಹಾಡುಗಳನ್ನು ಹೊಂದಿರುವ ಮಹತ್ವದ ಕೃತಿಯಾಗಿದೆ. ಇದರಲ್ಲಿ ಅನೇಕ ಬಿಡಿಬಿಡಿ ಜೈನಹಾಡುಗಳನ್ನು ಸಂಗ್ರಹಿಸಲಾಗಿದೆ. ಇದು ಹಸ್ತಪ್ರತಿ ಭಂಡಾರಗಳಲ್ಲಿ ದೊರೆತ ಹೊಸ ಹಾಡುಗಳನ್ನು ಒಟ್ಟಾಗಿ ಸಂಗ್ರಹಿಸಿದ ಕೃತಿಯಾಗಿದೆ. ಈ ಕೃತಿಯ ಅಧ್ಯಯನದ ದೃಷ್ಟಿಯಿಂದ ಹಾಡುಗಳ ವರ್ಗೀಕರಣವನ್ನು ಮಾಡಿ ಅಧ್ಯಯನಕಾರರಿಗೆ ಸುಲಭವಾಗಿ ನಿಲುಕುವಂತೆ ಮಾಡಿರುವುದು ವಿಶೇಷವಾಗಿದೆ. ಹಾಡುಗಳನ್ನು ಈ ರೀತಿಯಲ್ಲಿ ವರ್ಗೀಕರಿಸಿದ್ದಾರೆ. ೧. ರತ್ನಾಕರನ ಹಾಡುಗಳು, ೨. ತೀರ್ಥಂಕರರ ಹಾಡುಗಳು, ೩. ಯಕ್ಷಿಣಿಯರ ಹಾಡುಗಳು, ೪. ಜೋಗುಳದ ಹಾಡುಗಳು, ೫. ಶೋಭಾನದ ಹಾಡುಗಳು, ೬. ಮಂಗಳಾರತಿಯ ಹಾಡುಗಳು, ೭. ಸಂಕೀರ್ಣ ಹಾಡುಗಳು ಜೊತೆಗೆ ಅನುಬಂಧ, ಪಾರಿಭಾಷಿಕ,

ಪದಕೋಶ, ನಾಮಸೂಚಿ, ಹಾಡುಗಳು ಅಕಾರಾದಿ ಮುಂತಾದವುಗಳನ್ನು ಈ ಕೃತಿಯಲ್ಲಿ ನೀಡಿ ವಿಂಗಡಿಸಿದ್ದಾರೆ. ಈ ಹಾಡುಗಳು ವಸ್ತು ಸ್ವರೂಪದ ದೃಷ್ಟಿಯಿಂದ ನೋಡಿದಾಗ ವೀರಶೈವರ ಸ್ವರವಚನದಂತೆ, ದಾಸರ ಕೀರ್ತನೆಗಳಂತೆ, ಪಲ್ಲವಿ-ಅನುಪಲ್ಲವಿಗಳಿಂದ ಕೂಡಿದ ನಾಲ್ಕು ಚರಣಬಂಧಗಳಿಂದ ಕೂಡಿದೆ. ಹಾಡುಗಳು ಛಂದೋ ವೈವಿಧ್ಯತೆಯಿಂದ ಕೂಡಿವೆ. ಷಟ್ಪದಿ, ಕಂದ, ಚೌಪದಿ, ತ್ರಿಪದಿ, ದ್ವಿಪದಿಗಳಿಂದ ರಚನೆಯಾಗಿರುವುದು ಕಂಡುಬರುತ್ತದೆ. ವಸ್ತುವಿನ ದೃಷ್ಟಿಯಿಂದ ಜಿನತತ್ವ ಸಿದ್ಧಾಂತಗಳು ಪ್ರತಿಪಾದನೆ, ತೀರ್ಥಂಕರರ ಸ್ತುತಿಗಳು ಇವು ಸುದೀರ್ಘವಾದ ಹಾಡುಗಳಿಂದ ಕೂಡಿವೆ. ಜೈನಧರ್ಮದ ತತ್ವ ವಿಚಾರಗಳು, ನೀತಿ ತತ್ವಗಳು, ಆಗಿ ಹೋದ ಮಹಾಪುರುಷರ ಜೀವನ ಸಾಧನೆಗಳ ಸ್ತುತಿ ಇಲ್ಲಿರುವ ಪ್ರಮುಖ ವಸ್ತು ವಿಷಯವಾಗಿದೆ. ಒಟ್ಟಿನಲ್ಲಿ ಈ ಕೃತಿಯು ಜೈನಧರ್ಮದ ಸಾಹಿತ್ಯದ ನಿರಂತರತೆಯನ್ನು ಬಿಂಬಿಸುವ ಆಧಾರವಾಗಿ ನಿಲ್ಲುತ್ತದೆ.

೧೯೫೧ರಲ್ಲಿ ಮಿರ್ಜಿ ಅಣ್ಣಾರಾಯ ಸಂಪಾದಿಸಿದ ಶೋಭಾನ ಸಂಧಿಗಳು ಹಾಗೂ ಕವಿನಾಮವಿಲ್ಲದ 'ನಿರಂಜನ ಸ್ತುತಿ' ಹೆಸರಿನ ಕೃತಿಗಳು ಉಪಲಬ್ಧವಿಲ್ಲ. ಇವು ಕೂಡ ಜೈನಹಾಡುಗಳ ಸಂಗ್ರಹಗಳಾಗಿರಬೇಕೆಂದು ಭಾವಿಸಬಹುದು.

ಈ ಕೃತಿಗಳ ಪ್ರಕಟಣೆಗೆ ಇತಿಹಾಸದ ದೃಷ್ಟಿಯಿಂದ ನೋಡಿದಾಗ ಬಹುತೇಕ ಧಾರ್ಮಿಕ ಶ್ರದ್ಧೆ ಅನುಭಾವಗಳಿಂದ ಈ ಕೃತಿಗಳನ್ನು ಸಂಗ್ರಹಿಸಿ ಪ್ರಕಟಿಸಿರುವುದು ಕಂಡುಬರುತ್ತದೆ. ಕನ್ನಡ ವಿಶ್ವವಿದ್ಯಾಲಯದ ಮುದ್ರಣ ಹೊರತುಪಡಿಸಿದರೆ ಎಲ್ಲ ಜೈನಧರ್ಮೀಯರೇ ಈ ಕೃತಿಗಳನ್ನು ಪ್ರಕಟಿಸಿರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಕನ್ನಡ ಜೈನಹಾಡುಗಳ ಪ್ರಕಟಣೆಯ ಇತಿಹಾಸವು ೯೦ ವರ್ಷಗಳ ಇತಿಹಾಸವನ್ನು ಹೊಂದಿದ್ದರೂ ಸಹ ಅಲ್ಪ ಪ್ರಮಾಣದಲ್ಲಿ ಈ ಜೈನಹಾಡುಗಳು ಪ್ರಕಟಣೆಗೊಂಡಿರುವುದು ತುಂಬ ವಿಷಾದಕರವಾದುದು.

**ಕೊನೆ ಟಿಪ್ಪಣಿಗಳು**

೧. ರಂ.ಶ್ರೀ.ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ.೩೩೦, ೧೩ನೇ ಪರಿಷ್ಕೃತ ಸಂಸ್ಕರಣೆ, ೨೦೦೭.

೨. ರತ್ನಾಕರವರ್ಣಿ ಸಂಪುಟ, (ಸಂ) ಬಿರಾದಾರ ಎಂ.ಜಿ, ಪುಟ XLVIII.

೩. ರತ್ನಾಕರವರ್ಣಿ ಸಂಪುಟ, (ಸಂ) ಬಿರಾದಾರ ಎಂ.ಜಿ, ಪುಟ. XLIX.

೪. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, (ಸಂ) ಶಿವರುದ್ರಪ್ಪ ಜಿ.ಎಸ್., ಪುಟ ೬೩೯.

೫. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, (ಸಂ) ಶಿವರುದ್ರಪ್ಪ ಜಿ.ಎಸ್., ಪುಟ ೬೪೫.

❑❑❑

## ಅಧ್ಯಾಯ : ನಾಲ್ಕು

# ಕನ್ನಡ ಜೈನ ಹಾಡುಗಳು : ವಸ್ತು ವೈವಿಧ್ಯತೆ

# ಅಧ್ಯಾಯ : ನಾಲ್ಕು

# ಕನ್ನಡ ಜೈನ ಹಾಡುಗಳು : ವಸ್ತು ವೈವಿಧ್ಯತೆ

ಕನ್ನಡ ನಾಡು ಮತ್ತು ಜೈನಧರ್ಮ ಇವುಗಳ ಸಂಬಂಧ ತುಂಬ ಪ್ರಾಚೀನವಾದುದು. ಕ್ರಿ.ಪೂ. ೨ನೇ ಶತಮಾನದಿಂದಲೇ ಈ ಧರ್ಮದೊಂದಿಗೆ ಅವಿನಾಭಾವ ಸಂಬಂಧವಿದೆ. ಕನ್ನಡ ನಾಡಿಗೆ ಜೈನಧರ್ಮದ ತತ್ವ ಮಹತ್ವಪೂರ್ಣವಾದುದು. ಕನ್ನಡ ನಾಡಿನ ಸಂಸ್ಕೃತಿ, ಶಿಲ್ಪಕಲೆ, ಸಾಹಿತ್ಯದ ಬೆಳವಣಿಗೆಗೆ ಶ್ರಮಿಸಿದವರು ಜೈನರು. ಇದರಿಂದ ಕರ್ನಾಟಕ ಜೈನಧರ್ಮೀಯರ ಕೇಂದ್ರವಾಯಿತು. ಕರ್ನಾಟಕದಲ್ಲಿ ಜೈನಧರ್ಮದಲ್ಲಿ ಕಾಣುವ ಜೈನ ಮುನಿಗಳೆಲ್ಲ ಇಲ್ಲಿಯೇ ಜನಿಸಿದರು. ತಮ್ಮ ಕಾವ್ಯ ಪುರಾಣಗಳನ್ನು ಬರೆದು ಜೈನಧರ್ಮದ ತತ್ವ ಸಿದ್ಧಾಂತಗಳನ್ನು ಬಿತ್ತುವಲ್ಲಿ ಯಶಸ್ವಿಯಾದರು. ಮುಂದೆ ಜೈನಧರ್ಮ ಕರ್ನಾಟಕದಲ್ಲಿ ಉತ್ತುಂಗದ ಸ್ಥಾನ ಪಡೆಯಿತು. ಏಕೆಂದರೆ ಜೈನಧರ್ಮದ ಧಾರ್ಮಿಕ ವಿಚಾರಗಳು, ತತ್ವಗಳು ಹಾಗೂ ಜೈನಧರ್ಮದಲ್ಲಿರುವಂತಹ ಸಾರವನ್ನು ರಾಜಮನೆತನಗಳಿಗೆ ತಲುಪಿಸುವ ನಿಟ್ಟಿನಲ್ಲಿ ಮುಂದಾದರು. ಜೈನಧರ್ಮದ ತತ್ವಗಳಿಂದ ಪ್ರಭಾವಿತರಾದ ಹಲವಾರು ರಾಜಮನೆತನಗಳು ಜೈನಧರ್ಮವನ್ನು ಅನುಸರಿಸುವುದರ ಜೊತೆಗೆ ಪೋಷಿಸಲು ಮುಂದಾದವು.

ಜೈನಧರ್ಮದ ತತ್ವ ವಿಚಾರಗಳು ಒಂದು ಜೀವನಪರವಾದ ಮಾನವೀಯ ಮೌಲ್ಯಗಳನ್ನು ಒಳಗೊಂಡಿರುವಂತಹ ಮನುಷ್ಯ ಸಂಬಂಧಿ ಧರ್ಮವಾಗಿದೆ. ಈ ಕಾರಣದಿಂದಲೇ ಇಂದಿಗೂ ಜೈನಧರ್ಮದ ಜೀವಂತಿಕೆಗೆ ಸಾಕ್ಷಿಯಾಗಿದೆ. ಜೈನಧರ್ಮದ ತತ್ವ ಸಿದ್ಧಾಂತಗಳನ್ನು ಪ್ರಾಚೀನ ಕಾಲದಿಂದಲೂ ಜನಮುಖಿಯಾಗಿಸಲು ಕಾವ್ಯ, ಪುರಾಣ, ಕಥೆ, ಐತಿಹ್ಯಗಳ ಮೂಲಕ ಜನರಿಗೆ ತಲುಪಿಸುವಂತಹದ್ದನ್ನು ಕಾಣುತ್ತೇವೆ. ಜೈನಧರ್ಮದ ತತ್ವ ವಿಚಾರಗಳು ಕಠಿಣತೆಯಿಂದ ಸರಳತೆ ಕಡೆಗೆ ಸಾಗಿರುವುದನ್ನು ನೋಡುತ್ತೇವೆ. ಪಂಪನ ಕಾಲವನ್ನು ಅವಲೋಕಿಸಿದಾಗ ಕಾವ್ಯರಚನೆಯ ಸಂದರ್ಭದಲ್ಲಿ ಹಲವಾರು ಸಂದಿಗ್ಧ ಸಂದರ್ಭವನ್ನು ಬಳಸಿಕೊಂಡು ಒಂದು ಲೌಕಿಕಕಾವ್ಯವನ್ನು ಮತ್ತೊಂದು ಅಲೌಕಿಕಕಾವ್ಯವನ್ನು ಬರೆಯುವುದರ ಮೂಲಕ ಕನ್ನಡ ಸಾಹಿತ್ಯಕ್ಕೆ ಹೊಸ ರೂಪವನ್ನು ನೀಡುತ್ತಾನೆ. ಈ ಕಾವ್ಯಗಳ ರಚನೆಯಲ್ಲಿ ಒಂದು ಧಾರ್ಮಿಕ ವಿಷಯವನ್ನಾಗಿ, ಮತ್ತೊಂದು ರಾಜರನ್ನು ಕುರಿತು ಹೇಳುವುದರ ಜೊತೆಗೆ ಜೈನಧರ್ಮದ ತತ್ವಗಳು ಮಾನವ ಉದ್ಧಾರಕ್ಕೆ ಮತ್ತು ಜೀವನಪರವಾದ ಮೌಲ್ಯಗಳನ್ನು ತನ್ನ ಕಾವ್ಯಗಳಲ್ಲಿ ಹೇಳುವ ಮೂಲಕ, ಜೈನಧರ್ಮ ಹೊಸ ರೂಪ ಪಡೆಯಿತು. ನಂತರ ಬರುವಂತಹ ಹಲವಾರು ಜೈನಕವಿಗಳು ಪಂಪನ ಮಾರ್ಗವನ್ನು ಅನುಸರಿಸುವ ಮೂಲಕ ಜೈನಧರ್ಮದ ಧಾರ್ಮಿಕ ವಿಚಾರಗಳ ಜೊತೆಗೆ ಲೋಕಮಾನ್ಯ ತತ್ವಗಳನ್ನು ಬಿತ್ತುವಲ್ಲಿ ವಿಶೇಷ ಕಾಳಜಿ ವಹಿಸಿದರು.

ಒಂದು ಧಾರ್ಮಿಕ, ಸಾಂಸ್ಕೃತಿಕ ಮೌಲ್ಯದಿಂದಾದ ಯಾವುದೇ ಕಾವ್ಯ ಆ ಧರ್ಮಾವಲಂಬಿಗಳಿಗೆ ಮಾತ್ರ ಪ್ರಿಯವಾಗುವಂತಿದ್ದರೆ ಅದು ಲೋಕಮಾನ್ಯತೆಯನ್ನು ಪಡೆಯಲು ಸಾಧ್ಯವಿಲ್ಲ. ಇಂತಹ ವಿಚಾರವನ್ನು ಅರಿತ ಪಂಪ ಹಾಗೂ ಆತನ ನಂತರದ ಎಲ್ಲ ಜೈನಕವಿಗಳು ಇದೇ ನೀತಿಯನ್ನು ಅನುಸರಿಸಿದರು. ಹಾಗೆಯೆ ಜೈನಧರ್ಮ ೮ ಮತ್ತು ೯ನೇ ಶತಮಾನದಲ್ಲಿ ಹೆಚ್ಚು ಪ್ರಚಲಿತವಿದ್ದು, ೧೧ನೇ ಶತಮಾನದ ಹೊತ್ತಿಗೆ ಸ್ವಲ್ಪ ಇಳಿಮುಖವಾದರೂ ಕ್ರಿ.ಶ. ೧೧ನೇ ಶತಮಾನಕ್ಕಾಗಲೇ ಹಲವಾರು ಧರ್ಮಗಳ ಮಧ್ಯೆ ಜೈನಧರ್ಮದ ಪ್ರಾಬಲ್ಯ ಕುಂಠಿತಗೊಂಡಿತ್ತು. ಇದಕ್ಕಿರುವಂತಹ ಕಾರಣ ಜೈನಧರ್ಮ ತನ್ನ ಧಾರ್ಮಿಕ ವಿಚಾರಗಳನ್ನು ಸಡಿಲಗೊಳಿಸದೇ ಇರುವುದೇ ಆಗಿತ್ತು. ಕಷ್ಟಕರವಾದ ಆಚರಣೆಗಳು, ವ್ರತಗಳು, ಜೈನಧರ್ಮದ ತತ್ವಗಳು ಜನರಿಗೆ ಹಿಡಿಸದಾದವು. ಹಾಗೆಯೇ ಜನಸಾಮಾನ್ಯರಿಗೆ ತಲುಪದೇ ಹೋಯಿತು. ಇದರಿಂದಾಗಿ ಜೈನಧರ್ಮ ಅವನತಿಯ ಹಾದಿ ಹಿಡಿಯಲು ಪ್ರಮುಖ ಕಾರಣವಾಯಿತು. ಜೈನ ಸಾಹಿತ್ಯದಲ್ಲಿ ಸಂಸ್ಕೃತಭೂಯಿಷ್ಟವಾದ ಕಾವ್ಯಗಳೇ ಹೆಚ್ಚು ರಚನೆಯಾದುದು ಮತ್ತೊಂದು ಕಾರಣವಾಯಿತು. ಇದನ್ನರಿತ ಲಿಂಗಾಯತ ಮತ್ತು ವೈದಿಕ ಧರ್ಮಗಳು ಸರಳವಾದ ಭಾಷೆಯಲ್ಲಿ ಸಾಹಿತ್ಯವನ್ನು ರಚಿಸಿ ಜನರಿಗೆ ತಲುಪಿಸುವುದರ ಜೊತೆಗೆ ಅವರ ಗಮನ ತಮ್ಮ ಧರ್ಮದ ಮೇಲೆ ಸೆಳೆಯುವುದಾಗಿತ್ತು. ಇದನ್ನು ಅರಿತ ಜೈನಧರ್ಮವೂ ತತ್ತ್ವ ಆಚಾರ-ವಿಚಾರಗಳನ್ನು ಸರಳಗೊಳಿಸಿ ಪ್ರತಿಯೊಬ್ಬ ವ್ಯಕ್ತಿಗೂ ಜೈನಧರ್ಮದಲ್ಲಿ ಮೋಕ್ಷವಿದೆ ಮತ್ತು ಮೋಕ್ಷದ ಹಾದಿಯಲ್ಲಿ ನಡೆಯುವಂತೆ ಅರುಹಿದರು. ಬಸವಣ್ಣನಂತಹ ಮಹಾನ್ ಮಾನವತವಾದಿಯ ಚಿಂತನೆ, ವಿಚಾರಗಳು, ಸಮಾನತೆಯ ತತ್ವಗಳು ಜನಸಾಮಾನ್ಯರನ್ನು ಬಹಳ ಬೇಗ ಆಕರ್ಷಿಸಿದವು. ಜೊತೆಗೆ ಆ ಕಾಲಕ್ಕಾಗಲೇ ಸಾಹಿತ್ಯದಲ್ಲಿ ವಚನ, ಸ್ವರವಚನ, ಕೀರ್ತನೆಗಳು, ಹಾಡುಗಳ ರೂಪದಲ್ಲಿ ಪ್ರಸಾರವಾಗುತ್ತಿದ್ದವು. ಆದರೆ ಜೈನಧರ್ಮ ಮಾತ್ರ ತನ್ನ ಮಾರ್ಗೀಯ ಶೈಲಿಯನ್ನು ತೊರೆಯದೇ, ಸಂಸ್ಕೃತಭೂಯಿಷ್ಟವಾದ ಭಾಷೆಯಲ್ಲಿ ಸಾಹಿತ್ಯರಚನೆಗೆ ಮುಂದಾಗಿತ್ತು. ಹೀಗಾಗಿ ಜೈನಧರ್ಮದ ಪ್ರಭಾವ ಕುಂಠಿತಗೊಂಡಿತು. ಇಷ್ಟೆಲ್ಲ ಸಾಮಾಜಿಕ ಹಾಗೂ ಸಾಹಿತ್ಯವಲಯದಲ್ಲಿ ಬದಲಾವಣೆಗಳು ಆದರೂ ಕೂಡ ಜೈನ ಸಾಹಿತ್ಯದಲ್ಲಿ ಬದಲಾವಣೆಗಳನ್ನು ತರಲು ಮನಸ್ಸು ಮಾಡಲಿಲ್ಲವೆಂದೇ ತೋರುತ್ತದೆ. ಅದರ ಬದಲಾಗಿ ಶಾಸ್ತ್ರಕೃತಿಗಳು, ವ್ಯಾಕರಣ ಗ್ರಂಥಗಳು, ಛಂದಸ್ಸು ಹೀಗೆ ಹಲವಾರು ಕೃತಿಗಳನ್ನು ಬರೆದರೇ ಹೊರತು ತಮ್ಮ ಕಾವ್ಯಮಾರ್ಗದ ಸಡಿಲತೆಯನ್ನು ಅಥವಾ ಹೊಸರೂಪವನ್ನು ಕಂಡುಕೊಳ್ಳಲು ಇಚ್ಛಿಸಲಿಲ್ಲವೆಂದೇ ತೋರುತ್ತದೆ.

ಕ್ರಿ.ಶ. ೧೫-೧೬ನೇ ಶತಮಾನದ ಮಧ್ಯಭಾಗದಲ್ಲಿ ರತ್ನಾಕರವರ್ಣಿಯಂತಹ ಒಬ್ಬ ವಿನೂತನವಾದ ಜೈನಕವಿ ಗುರುತಿಸಿಕೊಳ್ಳುತ್ತಾನೆ. ಏಕೆಂದರೆ ರತ್ನಾಕರ ಎಂಬ “ಭರತೇಶ ವೈಭವ” ಮಹತ್ವದ ಕೃತಿಯನ್ನು ಬರೆಯುವುದರ ಮೂಲಕ ಜೈನಧರ್ಮದಲ್ಲಿ ಇದ್ದಂತಹ ಸಾಂಪ್ರದಾಯಿಕ ಮಾರ್ಗವನ್ನು ಮುರಿದು ಹಾಕಿ ಹೊಸಮಾರ್ಗದ ಹಾದಿಯನ್ನು ತೋರಿದವನು. ಯೋಗ-ಭೋಗದ ಮೂಲಕ ಜೈನತತ್ವ ಸಿದ್ಧಾಂತಗಳ ದರ್ಶನವನ್ನು ಮೂಡಿಸಿದಂತಹ ಕವಿಯಾಗಿ ಕಂಡುಬರುತ್ತಾನೆ. ಆ ಹೊತ್ತಿನ ಕಾಲಕ್ಕಾಗಲೇ ಸಮಾಜ ಹಾಗೂ ಸಾಹಿತ್ಯ ವಲಯದಲ್ಲಿ ಸಾಕಷ್ಟು ಬದಲಾವಣೆಗಳು ಕಂಡುಬಂದಿದ್ದವು. ಶರಣರ ವಚನಗಳು, ದಾಸರ ಕೀರ್ತನೆ, ಸುಳಾದಿ, ಉಗಾಭೋಗಗಳು, ತತ್ವಪದಗಳು, ಜನರ ಬಾಯಲ್ಲಿ ಹರಿದಾಡುತ್ತಿದ್ದವು. ಇದನ್ನು ಮನಗಂಡಂತಹ ರತ್ನಾಕರವರ್ಣಿಯಂತಹವರು ಹಾಡುಗಳನ್ನು ಬರೆಯಲು ಮುಂದಾದರು.

ಈ ಹಿನ್ನೆಲೆಯಲ್ಲಿ ಜೈನಧರ್ಮವನ್ನು ವಿಚಾರ ಮಾಡಿದಾಗ ಮೂಲಭೂತವಾಗಿ ಮನುಷ್ಯ ಜೀವನವನ್ನು ತಮ್ಮ ಮತಧರ್ಮದ ಸಂಸ್ಕೃತಿಯ ಮೇಲೆ ನಿರೂಪಿಸಿ, ವ್ಯಾಖ್ಯಾನಿಸಿ ಅದನ್ನು ಕಾವ್ಯಧರ್ಮದ ದಾರಿಯಲ್ಲಿಯೇ ಹರಿಬಿಟ್ಟರು. ಆ ಮೂಲಕ ಜೈನಕವಿಗಳು ನಿರ್ಮಿಸಿದ ಕೆಲವು ಮುಖ್ಯಪಾತ್ರಗಳು, ಸನ್ನಿವೇಶ ವಿಶ್ಲೇಷಣೆಯಿಂದ ಒಂದೆಡೆಗೆ ಅವರು ಪ್ರತಿಪಾದಿಸಿದ ಜೀವನ ಮೌಲ್ಯಗಳ ಸ್ವರೂಪ ಇನ್ನೊಂದೆಡೆಗೆ ಸಾಹಿತ್ಯಕ ಸಾಧನೆಗಳನ್ನು ಜೈನಕವಿಗಳು ಪರಿಭಾವಿಸಿಕೊಂಡಿದ್ದನ್ನು ನೋಡಬಹುದು. ಜೈನಕವಿಗಳೆಲ್ಲ ತಮ್ಮ ಜೈನ ಪೂರ್ವಪುರಾಣಗಳು ಹಾಗೂ ವೈದಿಕ ರಾಮಾಯಣ, ಮಹಾಭಾರತ ಕಥಾವಸ್ತುಗಳ ಜೊತೆಗೆ ಜಾನಪದೀಯ ಅಂಶಗಳನ್ನು ಪಡೆದುಕೊಂಡು ಅದನ್ನು ಮರುಸೃಷ್ಟಿಸುವಲ್ಲಿ ಜೈನಕವಿಗಳ ಸಾಧನೆ ಮಹತ್ವವಾದುದು. ಉದಾಹರಣೆಗೆ 'ಜನ್ನ'ನ ಯಶೋಧರ ಚರಿತೆಯಲ್ಲಿ ಈ ಕೃತಿಯ ನಿತ್ಯ ವಿನೂತನತೆಯನ್ನು ಹೊಂದಿ ಆಧುನಿಕತೆಯ ರೂಪವನ್ನು ಪಡೆದಿರುವುದು ಈ ಕೃತಿಯ ಸೃಜನಶೀಲತೆಗೆ ನಿದರ್ಶವಾಗಿದೆ.

ಜೈನಕವಿಗಳು ತಮ್ಮ ಪೂರ್ವ ಪುರಾಣಗಳಲ್ಲಿ ಇರುವಂತಹ ವಸ್ತುವನ್ನು ತೆಗೆದುಕೊಂಡು ಒಬ್ಬ ತೀರ್ಥಂಕರನ ಮೂಲಕ ಜೈನಧರ್ಮದ ತತ್ತ್ವ ದರ್ಶನಗಳನ್ನು ತಿಳಿಯಪಡಿಸುವ ಮೂಲಕ ವಿಶಿಷ್ಟತೆಯನ್ನು ಗುರುತಿಸಿಕೊಂಡಿದ್ದಾರೆ. ವೈದಿಕ ಕಾವ್ಯಗಳಂತಹ ರಾಮಾಯಣ ಹಾಗೂ ಮಹಾಭಾರತದಲ್ಲಿ ಬರುವ ಎಲ್ಲ ಖಳನಾಯಕರನ್ನು ತಮ್ಮ ಕಾವ್ಯಗಳಲ್ಲಿ ಅವರ ಉದಾತ್ತ ಗುಣವನ್ನು ಮೆರೆಸಿದ್ದಾರೆ ಹಾಗೂ ಜೈನಧರ್ಮದ ದರ್ಶನವನ್ನು ಮಾಡಿಸುವುದರ ಜೊತೆಗೆ ಅದು ಲೋಕಮಾನ್ಯಗೊಳಿಸಲು ಎಲ್ಲ ಜೈನ ಕವಿಗಳು ಪ್ರಯತ್ನಿಸಿರುವುದು ಗಮನೀಯವಾದದು. ಹಾಗೆಯೇ ಖಳನಾಯಕ ಪಾತ್ರದ ಮೂಲಕ "ನಾಯಕ ಅನೇಕಾಂತ ವಾದವನ್ನು ಹೇಳಲು ಸತ್ಯಕ್ಕೆ ಏಕಮುಖವಿಲ್ಲ, ಹಲವಾರು ಮುಖಗಳಿವೆ ಎಂಬುದನ್ನು ಜೈನಕವಿಗಳು ತಮ್ಮ ಧರ್ಮದ ವಿಚಾರಗಳನ್ನು ಅನಾವರಣ ಮಾಡುತ್ತ ಬಂದಿರುವುದು ಜೈನಕವಿಗಳಿಗಿರುವಂತಹ ಅಪಾರವಾದ ಧರ್ಮಶ್ರೇಷ್ಠತೆ ಹಾಗೂ ಧಾರ್ಮಿಕಪ್ರಜ್ಞೆಯನ್ನು ಸೂಚಿಸುತ್ತದೆ.

ಜೈನಧರ್ಮ ತನ್ನ ತತ್ತ್ವ ಸಿದ್ಧಾಂತಗಳನ್ನು ಲೋಕಾರ್ಪಣೆ ಮಾಡಲು ಸಾಹಿತ್ಯವನ್ನು ಒಂದು ಸಾಧನವನ್ನಾಗಿ ಮಾಡಿಕೊಂಡಿತು. ಇದನ್ನು ಕಾವ್ಯಗಳಲ್ಲಿ ಜನತೆಗೆ ಮನಮುಟ್ಟುವಂತೆ ಮಾಡಲು ಜೈನರು ಬಳಸಿಕೊಂಡ ಬಹಳ ಪ್ರಮುಖವಾದ ತಂತ್ರ 'ಭವಾವಳಿ.' ಈ ಭವಾವಳಿ ತಂತ್ರವನ್ನು ಜೈನರು ಎಷ್ಟರ ಮಟ್ಟಿಗೆ ಬಳಸಿದರು ಅಂದರೆ, ಇಡೀ ಸಾಂಸ್ಕೃತಿಕ ಜಗತ್ತನ್ನೇ ಪರಿಚಯಿಸುವ ಮೂಲಕ ಭವಾವಳಿಗಳನ್ನು ತಮ್ಮ ಕಾವ್ಯ, ಪುರಾಣ, ಕಥೆಗಳಲ್ಲಿ ಬಳಸಿಕೊಂಡರು. ಜೈನಕವಿಗಳ ಭವಾವಳಿಯು ತಂತ್ರದ ಮೂಲಕ ಜೈನ ತತ್ತ್ವಜ್ಞಾನವೂ ಪ್ರತಿಪಾದಿಸುವ ಜೀವದಯೆ ಪುನರ್ಜನ್ಮಕಲ್ಪನೆ, ಅಹಿಂಸೆಯ ಶ್ರೇಷ್ಠತೆ, ಮೋಕ್ಷ ಮುಂತಾದ ಧಾರ್ಮಿಕ ವಿಚಾರಗಳನ್ನು, ಅನೇಕ ಜೀವರಾಶಿಗಳ ಮುಖಾಂತರ ತೋರಿಸುವುದನ್ನು ಜೈನರು ವಿಶೇಷವಾಗಿ ಅರಿತುಕೊಂಡಿದ್ದರು. ಜೈನರ ಭವಾವಳಿಯಿಂದ ಭಾರತೀಯ ಸಂಸ್ಕೃತಿ ಹಾಗೂ ಸಮಾಜದ ಪರಿಕಲ್ಪನೆಗಳಾದ ಜಾತಿವ್ಯವಸ್ಥೆ, ಧಾರ್ಮಿಕ ಸಂಪ್ರದಾಯ, ಆಚಾರ-ವಿಚಾರ, ಸಮಾಜ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ರಾಜಕೀಯ ವ್ಯವಸ್ಥೆ ಅವುಗಳ ಸಂಘರ್ಷವನ್ನು 'ಆತ್ಮ' ಎಂಬ ಕೇಂದ್ರ ಬಿಂದುವಿನ ಮೂಲಕ ಸುತ್ತಲೂ ಹಾದು ಹೋಗುತ್ತವೆ."[7]

ಜೈನಧರ್ಮದ ಸಾಹಿತ್ಯದ ಮೂಲ ಭವಾವಳಿ ಮೂಲಕ ವೈಭವೀಕರಿಸಿ ಜೈನಧರ್ಮದ ತತ್ತ್ವವಿಚಾರ, ಧಾರ್ಮಿಕ ವಿಚಾರಗಳನ್ನು ಪ್ರಚಾರಪಡಿಸಬೇಕಾಗಿದ್ದಿತು. ಹೀಗೆ ಜೈನಕವಿಗಳು ಹಲವಾರು ತಂತ್ರ ಮಾರ್ಗಗಳನ್ನು

ಬಳಸಿಕೊಂಡರು. ಕ್ರಿ.ಶ.೧೫ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಜೈನರು ಹೊಸ ಸಿದ್ಧತೆಯ ಮಾರ್ಗವನ್ನು ಪ್ರಚಾರಕ್ಕೆ ಆರಿಸಿಕೊಂಡಿದ್ದರು. ಹೀಗೆ ಜೈನರು ಹೊಸ ಗಾಳಿಯನ್ನರಿತು ತಮ್ಮ ಧರ್ಮದ ಉಳಿವಿಗಾಗಿ ಮತ್ತು ಪ್ರಚಾರಕ್ಕಾಗಿ ಅನಿವಾರ್ಯವಾಗಿ ಕೆಲವು ಜೈನಕವಿಗಳು ಹಾಡುಗಳನ್ನು ಬರೆಯಲು ಮುಂದಾದರು. ಈಗಾಗಲೇ ಶರಣರ ಹಾಗೂ ದಾಸರ ಕೀರ್ತನೆ, ಸ್ವರವಚನ, ಸುಳಾದಿ, ಉಗಾಭೋಗ, ತತ್ವಪದಗಳು ಪ್ರಭಾವ ಬೀರಿದ್ದವು. ಜೈನಕವಿಗಳು ಇದನ್ನೇ ಆರಿಸಿಕೊಂಡು ತಮ್ಮ ಧರ್ಮದ ತತ್ವಸಾರವನ್ನು ಈ ಹಾಡುಗಳ ಮುಖಾಂತರ ಜನಸಾಮಾನ್ಯರಿಗೆ ತಿಳಿಸಲು ಮುಂದಾದರು. ಈ ವೇಳೆಗಾಗಲೇ ರತ್ನಾಕರವರ್ಣಿಯಂತಹ ಮಹಾನ್ ಕವಿಯು ಈ ಹಾಡುಗಳನ್ನು ಬರೆಯುವುದರ ಮೂಲಕ ಜೈನ ಸಾಹಿತ್ಯ ಪರಂಪರೆಗೆ ಮಾನ್ಯತೆಯನ್ನು ತಂದುಕೊಟ್ಟನು. ಜೈನಹಾಡುಗಳು ಆ ಧರ್ಮದ ಸಾರವನ್ನು ಒಳಗೊಂಡಿರುವಂತಹ ಬಿಡಿಬಿಡಿ ಹಾಡುಗಳಲ್ಲಿ ಅಭಿವ್ಯಕ್ತಗೊಂಡಿವೆ. ಈ ಹಾಡುಗಳಲ್ಲಿ ಆಗಿ ಹೋದಂತಹ ಪುಣ್ಯಪುರುಷರಾದ ತೀರ್ಥಂಕರರು, ಜೈನಮುನಿಗಳು, ಚಕ್ರವರ್ತಿಗಳು ಮತ್ತು ತತ್ತ್ವಸಿದ್ಧಾಂತ, ಧಾರ್ಮಿಕ ವಿಚಾರಗಳನ್ನು ಒಳಗೊಂಡಂತಹ ಬಿಡಿಬಿಡಿ ಹಾಡುಗಳಾಗಿವೆ.

ಇವುಗಳು ನಾದಮಾಧುರ್ಯದಿಂದ ಕೂಡಿದ ಧರ್ಮ ಪ್ರಸಾರಕ ಹಾಡುಗಳಾಗಿವೆ. ಧರ್ಮಪ್ರಚಾರಕ್ಕಾಗಿ ಹಿಂದಿನಿಂದಲೂ ಸಾಹಿತ್ಯವನ್ನು ಒಂದು ಮಾಧ್ಯಮವಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಹಾಗೆಯೇ ಜೈನಕವಿಗಳು ಕಾಲಕ್ಕೆ ತಕ್ಕಂತೆ ಹೊಸ ಸಾಹಿತ್ಯ ಪ್ರಕಾರಗಳನ್ನು ಅರಿಯಲು ಮುಂದಾದರು. ಏಕೆಂದರೆ ಜೈನಕವಿಗಳಿಗೆ ಹಾಡುಗಳ ಮೂಲಕ ಧರ್ಮಪ್ರಚಾರ ಮಾಡುವುದು ಅನಿವಾರ್ಯವಾಗಿತ್ತು.

ಮಧ್ಯಕಾಲೀನ ಕನ್ನಡ ಸಾಹಿತ್ಯದ ಇತಿಹಾಸವನ್ನು ಒಮ್ಮೆ ಅವಲೋಕಿಸಿದಾಗ ಈ ಕಾಲಕ್ಕಾಗಲೇ ದಾಸರ ಕೀರ್ತನೆಗಳು, ಶರಣರ ವಚನಗಳು, ತತ್ತ್ವಪದಗಳು, ಗೀತ ಮಾಧ್ಯಮಗಳಿಂದ ಪ್ರಸಿದ್ಧಿ ಪಡೆದಿದ್ದವು. ಇವುಗಳ ಆಶಯವು ಧರ್ಮ ಜಾಗೃತಿ, ಭಕ್ತಿಯ ಪರಾಕಾಷ್ಠೆ, ಲೋಕನೀತಿ ತತ್ತ್ವಗಳು, ಮಾನವೀಯ ಸಂಬಂಧಗಳು, ಸಮಾಜದ ಸುವ್ಯವಸ್ಥೆ ಸಮಾನತೆಯ ಆಶಯಗಳನ್ನು ಒಳಗೊಂಡಂತಹ ಪ್ರಸಾರ ಗೀತ ಮಾಧ್ಯಮಗಳಾಗಿದ್ದವು. ಈ ಮೂಲಕ ಕನ್ನಡ ಸಾಹಿತ್ಯಕ್ಕೆ ಹೊಸ ನೆಲೆಯನ್ನು ಒದಗಿಸಿದ್ದವು. ಹಾಗೆಯೇ ಜೈನಹಾಡುಗಳು ಸಹ ಧರ್ಮಪ್ರಚಾರದ ಜೊತೆಗೆ ಧಾರ್ಮಿಕ ವಿಚಾರಗಳನ್ನು ಧಾರಣ ಮಾಡಿಕೊಂಡು ಸರಳ ಹಾಗೂ ಜನಪ್ರಿಯ ಮಾದರಿಯ ಮೂಲಕ ಜನರ ಮನಸ್ಸನ್ನು ತಲುಪಿ ಧರ್ಮ ಹಾಗೂ ಧಾರ್ಮಿಕ ಆಶಯಗಳೊಂದಿಗೆ ಸಾಂಸ್ಕೃತಿಕ ಶ್ರೀಮಂತಿಕೆಗೆ ಕಾರಣವಾದವು. ಈ ಸಂದರ್ಭದಲ್ಲಿ ಜೈನರು ಸಿದ್ಧಮಾದರಿಯ ಹುಡುಕಾಟದಲ್ಲಿದ್ದರು ಎಂಬುದು ವಿಶೇಷ. ಇದನ್ನರಿ ಹಾಡುಗಳನ್ನು ಬರೆಯುವುದರ ಮೂಲಕ ಹಾಡುಗಬ್ಬದ ನಿರಂತರತೆಯನ್ನು ಬಿಂಬಿಸುವ ಗುಣವುಳ್ಳ ಸಾಹಿತ್ಯರೂಪವಾಗಿ ಈ ಜೈನಹಾಡುಗಳು ಕಂಡುಬರುತ್ತವೆ.

ಈ ಹಾಡುಗಳಲ್ಲಿ ಒಂದು ನಿರ್ದಿಷ್ಟ ಬಂಧ, ಗೇಯಗುಣ ಇರುತ್ತವೆ. ಧಾರ್ಮಿಕ ಸಿದ್ಧಾಂತಗಳ ಪ್ರತಿಪಾದನೆ ಈ ಹಾಡುಗಳಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಲೌಕಿಕ ನೆಲೆಗಳಿಗೆ ಪ್ರಾಧಾನ್ಯತೆಯಿರದೆ, ಅಧ್ಯಾತ್ಮ ವಿಚಾರಗಳಿಗೆ, ಮನುಷ್ಯನ ಕುರಿತು, ಸಾಹಿತ್ಯ ಚರಿತ್ರೆಯ ಸಂಬಂಧ, ಮೌಖಿಕ ಪರಂಪರೆಯ ಬಾಂಧವ್ಯ, ಲಿಖಿತ ಪರಂಪರೆಗೆ ಒಂದು ಹೊಸತನ ತಂದುಕೊಡುವ ಗುಣವಿದೆ. ಈ ಹಾಡುಗಳಲ್ಲಿ ಸಾಮಾಜಿಕವಾಗಿ ತೀವ್ರವಾದ ಅಭಿವ್ಯಕ್ತಿ ಸಂವೇದನೆಯಿಲ್ಲವಾದರೂ, ಲೋಕಜ್ಞಾನವನ್ನು ಒಳಗೊಂಡ ಅನುಭಾವದ ಮಾತುಗಳಿವೆ. ಧಾರ್ಮಿಕ ವಿಚಾರಗಳ ಕಡೆಗೆ ತಮ್ಮ ಒಲವನ್ನು ಕೇಂದ್ರೀಕರಿಸುತ್ತವೆ. ಈ ಹಾಡುಗಳಲ್ಲಿ ಪ್ರಮುಖವಾಗಿ ಜಿನಭಕ್ತಿಯ ನಿಷ್ಠೆ, ಹಾವಭಾವಗಳು, ಜನ್ಮಾಂತರಗಳ ಪ್ರಸ್ತಾಪ, ಲೌಕಿಕ

ಬದುಕಿನ ದುಃಖಮಯ ಸನ್ನಿವೇಶಗಳು ಇದರಿಂದ ಪಾರಾಗಲು ತೀರ್ಥಂಕರರ ಧ್ಯಾನ, ದಾನ, ಪೂಜೆ, ಜಪ, ತಪ ಇತ್ಯಾದಿ ಪರಿಕರಗಳನ್ನೊಳಗೊಂಡಂತಹ ವಸ್ತು ವಿಷಯಗಳಾಗಿವೆ. ಜೊತೆಗೆ ಈ ಹಾಡುಗಳಲ್ಲಿ ಅನೇಕ ಸ್ಥಳ ಹಾಗೂ ತೀರ್ಥಕ್ಷೇತ್ರಗಳು, ದೈವನಾಮಗಳು, ಜೈನಮುನಿಗಳು, ಯಕ್ಷ-ಯಕ್ಷಿಯರನ್ನು ಆರಾಧಿಸುವ ಪರಿ ಮುಂತಾದ ಜೈನಧರ್ಮದ ಪ್ರಾಚೀನ ಇತಿಹಾಸ ಈ ಹಾಡುಗಳಲ್ಲಿ ಕಂಡುಬರುತ್ತದೆ. ಈ ಹಾಡುಗಳ ಮುಖಾಂತರ ಅಂದಿನ ಸಾಂಸ್ಕೃತಿಕ ಬದುಕನ್ನು ಈ ಹಾಡುಗಳು ಅನಾವರಣಗೊಳಿಸುತ್ತವೆ.

ರತ್ನಾಕರವರ್ಣಿಯ ಜೈನಹಾಡುಗಳು ವಿಶಿಷ್ಟವಾಗಿ ಕಂಡುಬರುತ್ತವೆ. ಇದಕ್ಕೆ ಕಾರಣವೇನೆಂದರೆ ಈವರೆಗೂ ಎಲ್ಲ ಜೈನಕವಿಗಳು ತಮ್ಮ ಧಾರ್ಮಿಕ ಕಾವ್ಯಗಳಲ್ಲಿ ತೀರ್ಥಂಕರ ಚರಿತ್ರೆಯನ್ನು ಹೇಳುವುದರ ಮುಖಾಂತರ ಜೈನ ತತ್ತ್ವಸಾರವನ್ನು ಹೇಳುತ್ತಿದ್ದರು. ಆದರೆ ರತ್ನಾಕರವರ್ಣಿ ಚಕ್ರವರ್ತಿಯ ಕಥೆಯನ್ನು ಹೇಳುವುದರ ಮೂಲಕ ಯೋಗ-ಭೋಗದ ಸಮನ್ವಯತೆ ಸಾರಿದವನು. ಜೈನಧರ್ಮದ ಮೋಕ್ಷ ಪದವಿಯ ಸಾಧನೆಯನ್ನು ಸುಲಭಗೊಳಿಸಿ ಭೋಗದ ಜೊತೆಗೆ ಯೋಗದ ಮಹತ್ವವನ್ನು ಸಾರಿದವನು. ಇದರಿಂದ ಜೈನಸಿದ್ಧಾಂತಕ್ಕೆ ವಿರೋಧವಾಗುವಂತೆ ನಿರೂಪಿಸಿರುವುದು ಕಾಣಬಹುದು. ಸ್ವೀಕಾರಾರ್ಹವಾದ ತತ್ತ್ವಗಳನ್ನು ಎತ್ತಿಕೊಂಡು ಜೈನಧರ್ಮಕ್ಕೆ ಅಳವಡಿಸಿ ತನ್ನದೇ ಆದ ರೀತಿಯಲ್ಲಿ ಸಿದ್ಧಾಂತಗಳನ್ನು ನಿರೂಪಿಸಿದ್ದಾನೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಜೈನಧರ್ಮದ ಆಚಾರ-ವಿಚಾರ, ಧಾರ್ಮಿಕ ವಿಧಿ-ವಿಧಾನಗಳನ್ನು ಸುಲಭಮಾರ್ಗದಲ್ಲಿ ಅನುಸರಿಸುವಂತೆ ಬದಲಾವಣೆಗಳಿಗೆ ಅವಕಾಶ ನೀಡಿದ್ದಾನೆ. ಇದರಿಂದ ಜೈನಧರ್ಮದ ವ್ಯಾಪಕತೆ, ವೈಶಿಷ್ಟ್ಯತೆಯನ್ನು ಮೆರೆದಿರುವುದು ಕಂಡುಬರುತ್ತದೆ.

ಈ ಹಿನ್ನೆಲೆಯಲ್ಲಿ ರತ್ನಾಕರವರ್ಣಿಯ ಹಾಡುಗಳ ರಚನೆಯ ಹಿಂದಿರುವ ಪ್ರೇರಣೆ, ಪ್ರಭಾವವನ್ನು ವಿವೇಚಿಸಿರುವುದು ಸೂಕ್ತವೆನಿಸುತ್ತದೆ. ರತ್ನಾಕರವರ್ಣಿಯ ಕಾಲ ೧೫-೧೬ನೇ ಶತಮಾನದ ಮಧ್ಯಭಾಗದಲ್ಲಿ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಈ ಕಾಲಕ್ಕಾಗಲೇ ಕನ್ನಡ ಕಾವ್ಯ ಜಗತ್ತಿನಲ್ಲಿ ಹಲವಾರು ವಸ್ತು ಸ್ವರೂಪ, ಪ್ರಕಾರಗಳು, ಛಂದಸ್ಸುಗಳು, ಬಳಕೆಯಾಗುತ್ತಿದ್ದವು. ದೇಸಿಯ ಛಂದಸ್ಸುಗಳಾದ ಷಟ್ಪದಿ, ತ್ರಿಪದಿ, ಸಾಂಗತ್ಯ, ರಗಳೆ ಮುಂತಾದ ದೇಸಿಮಟ್ಟುಗಳ ಮೂಲಕ ಹಾಡಿನ ಲಯ, ನಾದಗಳಿಂದ ರಾರಾಜಿಸುತ್ತಿದ್ದವು ಎಂಬುದು ಒಂದು ಕಾರಣ. ಕ್ರಿ.ಶ.೧೫-೧೬ನೇ ಶತಮಾನ ವಿಜಯನಗರ ಸಾಮ್ರಾಜ್ಯದ ವೈಭವದ ಕಾಲವಾಗಿತ್ತು. ಈ ಸಾಮ್ರಾಜ್ಯದಲ್ಲಿ ಸಾಹಿತ್ಯ, ಸಂಗೀತ, ಕಲೆ ಮುಂತಾದ ವಿಷಯಗಳಿಗೆ ಹೆಚ್ಚಿನ ಮನ್ನಣೆ ದೊರೆತಿತ್ತು. ಈ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದಾದ್ಯಂತ ದಾಸರ ಪ್ರಭಾವ ಅವರ ಕೀರ್ತನ ಸಾಹಿತ್ಯದಿಂದ ಜನರನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವ ಮೂಲಕ ಭಕ್ತಿಯ ಪರಾಕಾಷ್ಠೆಯು ಮೊಳಗಿತ್ತು. ಇಂತಹ ದಾಸರ ಕೀರ್ತನೆಗಳು, ರತ್ನಾಕರವರ್ಣಿಯ ಮೇಲೆ ಪ್ರಭಾವ ಬೀರಿರುವುದು ಸಹಜ. ಇದಕ್ಕೆ ಹಲವಾರು ಕೀರ್ತನೆಗಳು ರತ್ನಾಕರವರ್ಣಿಯ ಹಾಡುಗಳಿಗೆ ತೀರ ಸಾಮೀಪ್ಯವಿರುವುದನ್ನು ನೋಡಬಹುದು.

> "ಹಣ್ಣು ಬಂದಿದೆ ಕೊಳ್ಳಿರೋ ನೀವೀಗ
> ಹಣ್ಣು ಬಂದಿದೆ ಕೊಳ್ಳಿರೋ ||ಪ||
> ಚಿನ್ನ ಬಾಲಕೃಷ್ಣನೆಂಬೊ ಚೆನ್ನದ ಬಾಳೆಯ"||[3]

ಇದು ಪುರಂದರದಾಸರ ಕೀರ್ತನೆಯಾಗಿದ್ದು ಇದನ್ನೇ ಹೋಲುವ ರತ್ನಾಕರವರ್ಣಿಯ ಹಾಡು ಈ ರೀತಿಯಿದೆ.

“ಹಣ್ಣು ಬಂದಿದೆ ಬನ್ನಿರೊ ಮಾವಿನ ಹಣ್ಣು ಬಂದಿದೆ ಬನ್ನಿರೊ
ಬಣ್ಣದಿ ಬಲು ಚೆಲುವ ಸವಿಯುಳ್ಳ ಹಣ್ಣು ಜಾಣರು ಮೆಲುವಾ”[೩]

ಹೀಗೆ ಹಲವಾರು ದಾಸರ ಕೀರ್ತನೆಗಳನ್ನು, ರತ್ನಾಕರರ್ಣಿಯು ತೀರ ಹತ್ತಿರದಿಂದ ಗಮನಿಸಿರುವುದಾಗಿ ಕಂಡುಬರುತ್ತದೆ. ಕೇವಲ ದಾಸರ ಕೀರ್ತನೆಗಳ ಪ್ರಭಾವ ಅಷ್ಟೇ ಅಲ್ಲದೆ ಶರಣರ ವಚನ ಸಾಹಿತ್ಯದ ಪ್ರಭಾವವನ್ನು ನಾವು ರತ್ನಾಕರನ ಹಾಡುಗಳಲ್ಲಿ ಗುರುತಿಸಬಹುದಾಗಿದೆ. ಹಾಗೂ ವಚನಗಳಿಂದ ಪ್ರಭಾವಿತನಾಗಲು ಹಲವಾರು ವೈಯಕ್ತಿಕ ಕಾರಣಗಳನ್ನು ಹಲವು ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ರತ್ನಾಕರವರ್ಣಿ ತನ್ನ ಧರ್ಮದಲ್ಲಿ ಆದಂತಹ ಮಾನಹಾನಿಗೆ ವೀರಶೈವ ಧರ್ಮಕ್ಕೆ ಮತಾಂತರ ಹೊಂದಿದ. ಅಲ್ಲಿದ್ದಾಗ ‘ಸೋಮೇಶ್ವರ ಶತಕ’ವನ್ನು ರಚಿಸಿದ ಸ್ವಲ್ಪ ದಿನಗಳ ನಂತರ ತನ್ನ ಧರ್ಮವೇ ಶ್ರೇಷ್ಠವೆಂದು ಪುನಃ ಜೈನಧರ್ಮಕ್ಕೆ ಹಿಂತಿರುಗಿದ್ದನ್ನು ಈ ಹಾಡಿನಲ್ಲಿ ನೋಡಬಹುದು.

“ಕರ್ಮವೇ ಒಲಿತಲ್ಲ ಜಿನ
ಧರ್ಮವನುಳಿದೆನ್ನ ನೀ ಪರಿ ಹುಚ್ಚು ಮಾಡಿತಲ್ಲ ||ಪ||
ಕರ್ಮವಶದಿ ಕಗ್ಗತ್ತಲೆ ಕವಿದೆನ್ನ |
ಚರ್ಮಕ್ಕೆ ಲಿಂಗವು ಬಿತ್ತಲ್ಲ ನಿರ್ಮಲ ಶ್ರೀ ಜಿನಧರ್ಮರೊಳಿದ್ದೆನ್ನ
ಈ ಮೈ ಹುಚ್ಚು ಮಾಡಿತಲ್ಲ”[೪]

ಈ ಹಾಡು ರತ್ನಾಕರವರ್ಣಿಯು ಮತಾಂತರ ಹೊಂದಿದ ನೋವಿನ ಭಾವನೆಯನ್ನು ವ್ಯಕ್ತಪಡಿಸುತ್ತದೆ. ಕವಿಯ ಅಂತರಂಗದ ಕ್ಷೋಭೆ, ಪಶ್ಚಾತ್ತಾಪ, ಉಮ್ಮಳಗಳು ಈ ಮತಾಂತರ ಘಟನೆಯನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ. ಇದೇನೇ ಇರಲಿ ರತ್ನಾಕರವರ್ಣಿಗೆ ವಚನ ಸಾಹಿತ್ಯದ ಪ್ರಭಾವವಿರುವುದು ಕಂಡುಬರುತ್ತದೆ. ಉದಾಹರಣೆಗೆ ಅಕ್ಕಮಹಾದೇವಿಯ ವಚನ ಪದ್ಯರೂಪವಾಗಿ ರತ್ನಾಕರವರ್ಣಿಯ ಹಾಡು ಇರುವುದು ವಿಶೇಷವಾಗಿದೆ.

“ನಮ್ಮ ಮನೆಯಲಿಂದು ಹಬ್ಬ ನಮಗೆ ಸಂದಣೆ ಬಹಳ
ನಿಮ್ಮ ನುಡಿಪ ಹೊತ್ತಿಲ್ಲ ಹೋಗಿ ವಿಷಯಗಳಿರಾ
ತನುವೆಂಬ ಮನೆಯೊಳಗೆ ನೆಲೆಸಿಪು ಪರಮಾತ್ಮ||ಪ||
ಮನೆಯ ದೇವರ ಹಬ್ಬ ಈ ಹಬ್ಬಕ್ಕೆಂದು
ನೆನೆಯದೆ ಮಿಂದು ನಡೆಯದೆ ಹೋಗಿ ಒಲಗೊಂಡು
ನೆನಹಿನ ಮೃತಾನ್ನದುಪಾಹಾರವಿಡಬೇಕು ||ಪ||

..........................................

ರೂಢಿಯೊಳು ಚನ್ನಮಲ್ಲನ ಭಜಿಸಬೇಕು”[೫]

ಈ ಮೇಲಿನ ವಚನದಂತೆ ರತ್ನಾಕರನ ಹಾಡು ತದ್ರೂಪವಾಗಿದ್ದು ಅಂಕಿತ ಮಾತ್ರ ಬದಲಾವಣೆಗೆ ಒಳಗಾಗಿರುವುದನ್ನು ನೋಡುತ್ತೇವೆ. ಪದ್ಯ ಈ ಕೆಳಗಿನಂತಿದೆ.

"ನಮ್ಮ ಮನೆಯೊಳಿಂದು ಹಬ್ಬ ನಮಗೆ ಸಂದಣಿ ಬಹಳ
ನಿಮ್ಮ ನುಡಿಸುವರೆ ಹೊತ್ತಿಲ್ಲ ಹೋಗಿ
ವಿಷಯಿಗಳಿರಾ ||ಪ||

ತನುವೆಂಬ ಮನೆಯೊಳು ಪರಮಾತ್ಮನೆಂದೆಂಬ
ಮನೆಯ ದೇವರ ಹಬ್ಬ ಈ ಹಬ್ಬಕ್ಕಿಂದು
ನೆನೆಯದೆ ಮೀಯಬೇಕು ನಡೆಯದೆ ಬಲಗೊಂಡು
ನೆನೆಹಿನ ಮೃತಾನ್ನದುಪಾಹಾರವಿರಬೇಕು"
..........................................
ರೂಢಿಯೊಳು ಹಂಪನಾಥನ ಭಜಿಸಬೇಕು"[೬].

ಈ ಮೇಲಿನ ಹಾಡುಗಳನ್ನು ಗಮನಿಸಿದಾಗ ರತ್ನಾಕರವರ್ಣಿಯೇ ಹಾಗೇ ಬರೆದನೋ ಅಥವಾ ಬೇರೆ ಯಾರಾದರೂ ರತ್ನಾಕರವರ್ಣಿಯ ಅಂಕಿತವನ್ನು ಸೇರಿಸಿದರೋ ಎಂಬುದು ಸಂಶಯಾಸ್ಪದವಾದುದು. ಅದೇನೆ ಇರಲಿ, ರತ್ನಾಕರವರ್ಣಿಯು ದಾಸರ ಕೀರ್ತನೆ, ಶರಣರ ಹಾಡುಗಳು ಮುಂತಾದ ವಿಷಯಗಳಿಂದ ಪ್ರಭಾವ ಹೊಂದಿರುವುದನ್ನು ಧೃಢಪಡಿಸುತ್ತವೆ.

ರತ್ನಾಕರವರ್ಣಿ ಹಾಡುಗಳನ್ನು ಅಥವಾ ಕೀರ್ತನೆಗಳನ್ನು ರಚಿಸಿದ್ದಾನೆ ಎಂಬುದಕ್ಕೆ ಹಲವಾರು ಹಸ್ತಪ್ರತಿಗಳಲ್ಲಿ ಹಾಡುಗಳು ದೊರೆತಿರುವುದು ಕಂಡುಬರುತ್ತದೆ. ಇವನ ಹಾಡುಗಳನ್ನು ಡಾ.ಹಂಪ ನಾಗರಾಜಯ್ಯನವರು ಸಂಪಾದಿಸಿ ಪ್ರಕಟಿಸಿದ್ದಾರೆ. ಇವನ್ನು ಅಣ್ಣನ ಹಾಡುಗಳು, ರತ್ನಾಕರ ಕೀರ್ತನೆಗಳು, ಅಧ್ಯಾತ್ಮ ಗೀತೆಗಳೆಂದು ಗುರುತಿಸುವುದುಂಟು. ಈ ಎಲ್ಲಾ ಆಧಾರಗಳಿಂದ ರತ್ನಾಕರವರ್ಣಿ ಕನ್ನಡ ಸಾಹಿತ್ಯದ ಹಾಡುಗಬ್ಬ ಪರಂಪರೆಯನ್ನು, ನಿರಂತರತೆಯನ್ನು ಕಾಯ್ದುಕೊಂಡು ಬಂದಂತಹ ಕೀರ್ತಿ ರತ್ನಾಕರವರ್ಣಿಗೆ ಸಲ್ಲುತ್ತದೆ. ಜೊತೆಗೆ ಈ ಹಿಂದೆ ಜೈನಕವಿಗಳು ಧರ್ಮ ಹಾಗೂ ಹಾಡುಗಳಲ್ಲಿ ಜೈನಧರ್ಮದ ತತ್ತ್ವ, ಸಿದ್ಧಾಂತಗಳನ್ನು ಸರಳೀಕರಿಸಿಕೊಂಡು ರಚಿಸಿರುವುದು ರತ್ನಾಕರವರ್ಣಿಯ ಯುಗಧರ್ಮಕ್ಕನುಸರಿಸಿ ರಚನೆ ಮಾಡಿರುವುದು ವಿಶೇಷ. ಸರ್ವಧರ್ಮಗಳಿಂದ ಸ್ವೀಕಾರಾರ್ಹವಾದ ತತ್ತ್ವಗಳನ್ನು ಎತ್ತಿಕೊಂಡು ಜೈನಧರ್ಮಕ್ಕೆ ಅಳವಡಿಸಿರುವುದು ಕಂಡುಬರುತ್ತದೆ.

ಒಟ್ಟಿನಲ್ಲಿ ರತ್ನಾಕರವರ್ಣಿ ಜೈನಧರ್ಮದ ಸಾರವನ್ನು ಬಿಗು ಸಂಪ್ರದಾಯ ಆಚರಣೆಗಳಿಂದ ಜನರಿಗೆ ಆಗುವ ಕಷ್ಟದಾಯಕ ಆಚರಣೆಗಳನ್ನು ಸುಲಭವಾಗಿ ಸಿಗುವಂತೆ ತನ್ನ ಕಾವ್ಯ, ಹಾಡುಗಳಲ್ಲಿ ನಿರೂಪಿಸಿದ್ದಾನೆ. ಇದಕ್ಕೆ ಇವನ ಬಿಡಿಬಿಡಿಯಾದ ಹಾಡುಗಳೇ ಸಾಕ್ಷಿ. ಈ ಹಾಡುಗಳಲ್ಲಿ ಜೈನತತ್ತ್ವದ ಸಾರವನ್ನು ಗರ್ಭೀಕರಿಸಿಕೊಂಡು ಜನರಿಗೆ ಸರಳ ಹಾಗೂ ಮನಸ್ಸಿಗೆ ಹಿತವಾಗುವಂತೆ ನಾದ ಲಯಾನ್ವಿತಗಳಿಂದ ಕೂಡಿರುವುದರ ಜೊತೆಗೆ ಜೈನಧರ್ಮದ ಮಹತ್ವವನ್ನು ಅರಿಯುವಂತೆ ಈ ಹಾಡುಗಳು ರಚನೆಯಾಗಿರುವುದು ಜೈನಧರ್ಮದ ಅಭಿವೃದ್ಧಿಗೆ ಕಾರಣವಾಯಿತೆಂದು ಹೇಳಬಹುದು.

ರತ್ನಾಕರನ ಹಾಡುಗಳಲ್ಲಿ ಪ್ರಮುಖವಾಗಿ ಕಂಡುಬರುವ ವಿಷಯ ವಸ್ತುಗಳು ಆತ್ಮ, ಮೋಕ್ಷ, ಧಾರ್ಮಿಕ ನೀತಿ, ತತ್ತ್ವ, ವೈರಾಗ್ಯ, ಯೋಗ-ಭೋಗದ ಸಮನ್ವಯತೆ, ಸಂಘರ್ಷ, ಪ್ರಾಪಂಚಿಕ ಸುಖಗಳಿಂದ ಬಿಡುಗಡೆ,

ಆತ್ಮಾನಂದ ಅನುಭವಿಸುವಿಕೆ, ಶರೀರದ ಕ್ಷಣಿಕತೆ, ಸಾವಿನ ಭೀಕರತೆ, ಸಂಸಾರದ ಜಂಜಾಟ, ಮಹಾತ್ಸಾಧನೆಯಿಲ್ಲದೆ ಮಹಾತ್ವಾಕಾಂಕ್ಷೆ, ಪಾಪ, ಪುಣ್ಯ ಕರ್ಮ, ಪರಿಕಲ್ಪನೆಗಳು, ಚಾರಿತ್ರ್ಯ, ಆಚಾರಗಳು, ಶುದ್ಧೀಕರಣ ಸಾಧನೆಯ ಮಾರ್ಗದ ಪರಿಶುದ್ಧತೆ, ಅಹಿಂಸೆಯೇ ಜೀವನದ ಮೌಲ್ಯ, ಹಂಸಕಲೆ, ಭೇದವಿಜ್ಞಾನ, ಆತ್ಮಸ್ವರೂಪ ಚಿಂತನೆ ಇನ್ನೂ ಮುಂತಾದ ವಿಷಯಗಳನ್ನೊಳಗೊಂಡು ಜೊತೆಗೆ ಜೈನರ ಸಾಂಸ್ಕೃತಿಕ ಜಗತ್ತನ್ನು ಮೆಲುಕು ಹಾಕುವುದು ಈ ಹಾಡುಗಳ ವಿಶಿಷ್ಟತೆಗೆ ಮತ್ತೊಂದು ಕಾರಣ. ಇಂತಹ ಹಾಡುಗಳನ್ನು ಅಧ್ಯಯನದ ದೃಷ್ಟಿಯಿಂದ ವಿವೇಚಿಸುವುದು ಮಹತ್ವದ್ದಾಗಿದೆ.

### ೪.೧. ಧಾರ್ಮಿಕ ಪರಿಕಲ್ಪನೆಯ ಹಾಡುಗಳು

#### ೪.೧.೧. ಆತ್ಮಪರಿಕಲ್ಪನೆ

ಜೈನಧರ್ಮದಲ್ಲಿ ಆತ್ಮದ ಪರಿಕಲ್ಪನೆ ವೈಚಾರಿಕ ಹಾಗೂ ವಿವೇಚನಾ ನೆಲೆಯಿಂದ ಕೂಡಿರುವಂತಹುದು. ಜೈನಸಿದ್ಧಾಂತ ಪ್ರಕಾರ "ಆತ್ಮನಿಗೆ ಎಂಟು ಕರ್ಮಗಳು. ಅವನ್ನು ಜ್ಞಾನವರಣೀಯ, ದರ್ಶನಾವರಣೀಯ, ಮೋಹನೀಯ ಅಂತರಾಯ ಇವು ಘಾತಿಕರ್ಮಗಳು. ವೇದನೀಯ, ಆಯು, ನಾಮಗೋತ್ರ"[೭] ಎಂದು ಅಘಾತಿ ಕರ್ಮಗಳು ಒಟ್ಟು ೧೪೮ ಒಳಭೇದಗಳಿವೆ ಎಂದು ಗುರುತಿಸಿದ್ದಾರೆ. ಈ ಕರ್ಮಗಳನ್ನು ನಾಶ ಮಾಡಿದಾಗ 'ಆತ್ಮ' ಅರಹಂತನಾಗುತ್ತಾನೆ. ಉಳಿದ ನಾಲ್ಕು ಕರ್ಮಗಳು ಕೆಲಕಾಲದವರೆಗೆ ಇರುತ್ತವೆ. ಆತನು ಸತ್ತ ನಂತರ ಉಳಿದ ನಾಲ್ಕು ಕರ್ಮಗಳು ನಾಶ ಹೊಂದುತ್ತವೆ. "ಆ ನಾಲ್ಕು ಕರ್ಮಗಳು ಆತ್ಮೋನ್ನತಿಗೆ ತಡೆಯಲಾಗುವುದಿಲ್ಲವಾದ್ದರಿಂದ ಇದನ್ನು ಅಘಾತಿಕರ್ಮಗಳೆನ್ನುತ್ತಾರೆ. ಅಂದರೆ ನಾಲ್ಕು ಘಾತಿ ಕರ್ಮಗಳನ್ನು ನಾಶಪಡಿಸಿದರೆ, 'ಕೇವಲಜ್ಞಾನ' ಪ್ರಾಪ್ತವಾಗಿ ಮೋಕ್ಷಕ್ಕೆ ತೀರ ಸಮೀಪವಾದಂತೆ ಉಳಿದ ನಾಲ್ಕು ಕರ್ಮಗಳೂ, ಅಘಾತಿಕರ್ಮಗಳು ನಾಶವಾದಾಗ ಆತ್ಮಕ್ಕೆ ಮೋಕ್ಷ ಸಿಗುವುದು ಎಂದು ಜೈನಧರ್ಮದ ಆತ್ಮದ ಪರಿಕಲ್ಪನೆ."[೮] ಜೈನದರ್ಶನದ ಪ್ರಕಾರ ಪ್ರತಿಯೊಂದು ಆತ್ಮವೂ ಸ್ವತಂತ್ರವಾದುದು, ದೇಹ ಬೇರೆ ಆತ್ಮ ಬೇರೆ. ದೇಹಕ್ಕೆ ನಾಶವುಂಟು ಆತ್ಮಕ್ಕೆ ಸಾವಿಲ್ಲ. ನಾಶವಿಲ್ಲವೆಂದು ಜೈನಧರ್ಮದ ಆತ್ಮದ ಪರಿಕಲ್ಪನೆಯನ್ನು ಈ ಹಾಡುಗಳಲ್ಲಿ ಪರಿಪರಿಯಾಗಿ ಚಿತ್ರಿಸಿದೆ.

"ಆತ್ಮಧ್ಯಾನಿಸು ನೀ ನಿಚ್ಚ ನಿನ್ನ ಮನ ಮೆಚ್ಚ
ಆತ್ಮಬಾಹ್ಯರ ಮಾತ ಕೇಳದಿರಾ||
ಕಲಿವರು ಶಾಸ್ತ್ರವ ಕೆಲವರ ಮೈಯ
ಬಳಿದು ದಂಡಿಸುವರು ಕೆಲವರು
ಲಲಿತಾತ್ಮ ಧ್ಯಾನಕ್ಕೆ ಮುನಿವರಗರ್ವ
ಸುಲಭರವರು ಡಂಭಕವೇಕೆ ನಂಬೊ"[೯]

ಈ ಹಾಡಿನಲ್ಲಿ ಜೈನಧರ್ಮದಲ್ಲಿ ಶ್ರೇಷ್ಠವಾದುದು ಆತ್ಮದ ಪರಿಕಲ್ಪನೆ. ಆತ್ಮವೇ ಶ್ರೇಷ್ಠವಾದುದು. ಉಳಿದೆಲ್ಲವೂ ನಿರರ್ಥಕ. ಜೀವನದಲ್ಲಿ ಡಾಂಬಿಕತೆ ಪ್ರಧಾನವಾಗಿ ನಿಜರೂಪವು ತಿಳಿಯದಂತಾಗಿದೆ. ಆದ್ದರಿಂದ ಈ ಲೋಕದಲ್ಲಿ ಹುಟ್ಟಿದವನಿಗೆ ಆತ್ಮ ಸಾಕ್ಷಾತ್ಕಾರವಾಗುವುದು ಕಷ್ಟಕರವಾದುದು. ಅದನ್ನು ಸಾಧನೆಯ ಮೂಲಕ ಗಳಿಸಿಕೊಳ್ಳಬೇಕು ಎಂಬ ಧ್ವನಿಯಿದೆ.

“ಪುತ್ಥಳಿ ಪುತ್ಥಳಿ ತಿಂಗಳ ಬೆಳಕಿನ
ಪುತ್ಥಳಿ ನನ್ನ ಕಂಗಳಂ ಮನವ ನೀ
ಸೂರೆಗೊಂಡೆ ಬೆಳುದಿಂಗಳ ಬೆಳಕಿನ ಪುತ್ಥಳಿ||

ಈ ಹಾಡಿನಲ್ಲಿ ‘ಪುತ್ಥಳಿ’ ಎಂಬುವುದು ಆತ್ಮ ಸ್ವರೂಪ ಪ್ರತೀಕ ನೆಲೆಯಲ್ಲಿ ವಿವರಿಸಿದ್ದಾರೆ.

ಹಂಸೆ ಹಾರಿದೇಕೊ ಮನವೆಂಬ
ಹಂಸೆ ಹಾರಿದೇಕೊ
ಮಾಂಸಮಯ ತನು ಸುಖದ ಕೆಸರಲ್ಲಿ
ಕಾಂಸೆಯೇತಕೆ ಬೇಡ ಬಿಡುಬಿಡು”[೧೦]

ಈ ಹಾಡಿನಲ್ಲಿ ‘ಹಂಸೆ’ ಪರಿಶುದ್ಧತೆ ಸಂಕೇತ. ಆತ್ಮದ ಪರಿಕಲ್ಪನೆ ದೇಹದಿಂದ ‘ಆತ್ಮ’ ಬಿಡುಗಡೆ ಹೊಂದಲು ಅಪರಾಜಿತೇಶ್ವರನ ಕರುಣಾಮೃತ ಅಗತ್ಯ ಎಂಬುದನ್ನು ಕುರಿತು ಹೇಳುತ್ತದೆ. ದೇಹದ ನಶ್ವರತೆಯನ್ನು ಮಾರ್ಮಿಕವಾಗಿ ಹೇಳುತ್ತ ಆತ್ಮದ ಶ್ರೇಷ್ಠತೆ ಶಾಶ್ವತ ಎಂಬುದನ್ನು ನಿರೂಪಿಸಿದ್ದಾನೆ.

“ಆಡಿ ಬಾ ಆಡಿ ಬಾ ಆಡಿ ಬಾ
ಆಡಿ ಬಾ ನೀ ಹಂಸೆ ಬೆಂದ
ಗೂಡು ನಿಜವಲ್ಲ ಮೇಲು
ನಾಡಿಗೆ ನೀ ಹೋಗಿ||

ಅಯಿದು ಹೊನ್ನ ಬೆಟ್ಟಗಳ ಪೂರ್ವ ಪಶ್ಚಿಮದಲ್ಲಿ
ಈರೈದು ದೇವ ದಶದಿಕ್ಕು ತಪ್ಪದೆ ಮತ್ತಲ್ಲಿ
ಮಯಿದೋರಿದ ಸಿದ್ಧರುಂಟು ನೀನವರ ಸುಧೆಯೆಂಬ
ನೆಯ್ದಿಲುಗಳ ಹೊಕ್ಕು ಹೂವಿನ ವಸಂತವಾ||

ಮೇರು ವಿದೇಹದಿ ಸಾರು ಸರ್ಗಕ್ಕೆಲ್ಲಾಗಿಸಿ ಮೇಲೆ
ಭೂರಿ ವಿಮಾನದ ದಾಂಟಿ ಮುಂದೆ ಮುಕ್ತಿಪುರದ
ಸಾರ ಸುಖಿಗಳ ಸಂಗವೆಂಬ ಪಾಲ್ಗಡಲಲ್ಲಿ
ಸಾರಿ ಮೂಡಿ ಮುಳುಗಿ ನಿನ್ನಮೃತದೋಕುಳಿಯಾ||
........................................
ಅಗೀಗವೆಂದನ್ನದೆ ನಿನಗಪರಾಜಿತೇಶ್ವರನ
ರಾಗರಸರಂಜಿತ ಪಾದಾಂಬುಜಗಳೆಲ್ಲಿ”[೧೧]

ಈ ಹಾಡಿನಲ್ಲಿಯೂ ಸಹ ರತ್ನಾಕರವರ್ಣಿ ‘ಹಂಸ’ ಎಂಬ ಪದವನ್ನು ಬಳಕೆ ಮಾಡಿರುವುದನ್ನು ನೋಡಿದರೆ ರತ್ನಾಕರನಿಗೆ ‘ಹಂಸಕಲೆಯ’ ಬಗ್ಗೆ ಇದ್ದಂತಹ ಅರಿವು ತಿಳಿಯುತ್ತದೆ. ಇಲ್ಲಿ ‘ಹಂಸ’ ಎಂಬುದು ‘ಸ್ವಚ್ಛಂದ’ ಸಂಕೇತ. ಆಡಿ ಬಾ ಹಂಸ ಈ ಗೂಡು ನಿಜವಲ್ಲ ಎಂದು ಹೇಳುವ ಮೂಲಕ ಲೌಕಿಕ ಜೀವನದ ನಶ್ವರತೆಯನ್ನು ಹೇಳುತ್ತ ಹಾಗೆಯೇ ಮುಂದುವರಿದು ಈ ಜೀವನ ನಮಗೆ ಶಾಶ್ವತವಲ್ಲ

ಆದ್ದರಿಂದ ಮೇಲು ನಾಡಿಗೆ ಹೋಗಿ ಬಾ ಎಂದು ಹೇಳುತ್ತವೆ. ಜೈನರಲ್ಲಿ ಇಹ ಜೀವನಕ್ಕಿಂತ ಪರಲೋಕದ ಜೀವನ ಶಾಶ್ವತ, ಶ್ರೇಷ್ಠ ಎಂಬ ಕಲ್ಪನೆಯಿದೆ ಎಂಬುದು ಈ ಹಾಡುಗಳಲ್ಲಿ ಕಂಡುಬರುತ್ತದೆ. ಒಟ್ಟಿನಲ್ಲಿ ಈ ಹಾಡು ದೇಹ ಬೆಂಕಿಯಲ್ಲಿ ಬೆಂದ ಮೇಲೆ ಆತ್ಮ ನೆಲೆ ಕಂಡುಕೊಳ್ಳಲು ತವಕಿಸುವುದು ಜೊತೆಗೆ ಸಾವಿನ ಖಚಿತತೆಯನ್ನು ದೇಹದ ಅನಿಶ್ಚಿತತೆಯನ್ನು ಹೇಳುತ್ತದೆ.

"ಯೋಗಿಯೆಂಬೆನೋ ಆತ್ಮನೇ
ತ್ಯಾಗಿಯೆಂಬೆನು ಆತ್ಮಯೋಗವರಿತಡೆ||

ಈರೈದು ಹೊಳೆಯ ಜಯಿಸಿ ಧರ್ಮಸದಾ ಸಂ
ಚಾರವ ತಡೆದವನಾ
ನೀರ ಸುಳಿದು ಹಂಸೆ ಹಾಲ ಕೊಂಬಂತೆ
ಶರೀರವ ತೊರೆದವನ ಆತ್ಮ

ಸಾರವ ಪಿಡಿದವನ ಧ್ಯಾನ ಪಾರಾಗದವನ||
ಅಣುಮಾತ್ರವಾದರೂ ವಿಷಯ ಕಷಾಯದ
ಕುಣಿಕೆಗೆ ಸಿಲುಕದನ
ಕ್ಷಣವು ಚಿದಂಬರ ಪುರುಷ ಧ್ಯಾನ ಲ
ಕ್ಷಣದಿಂದ ತೊಲಗದನ ಕರ್ಮ
ಗುಣವ ಸುಟ್ಟುರುಹುವನ ಸಿದ್ಧ ಗಣದೆಣಿಕೆಗೆ ಬಂದವನ"||[೨]

ರತ್ನಾಕರವರ್ಣಿ ಭರತೇಶ ವೈಭವದಲ್ಲಿ ಯೋಗ-ಭೋಗದ ಸಮನ್ವಯತೆಯನ್ನು ತಂದು ಭೋಗದ ಅವಶ್ಯಕತೆಯ ಜೊತೆಗೆ ಯೋಗದ ಅನಿವಾರ್ಯತೆ ಮತ್ತು ಶ್ರೇಷ್ಠತೆಯನ್ನು ಕುರಿತು ಹೇಳಿದ್ದಾನೆ. ಈ ಹಾಡಿನಲ್ಲಿ ಆತ್ಮಯೋಗವನ್ನು ಅರಿತವನಿಗೆ ಆತ್ಮವು ಯೋಗಮುಖಿಯೇ, ತ್ಯಾಗಮುಖಿಯೇ ಎಂಬ ಸಂದೇಹ ಉಂಟಾಗುತ್ತದೆ. ಆ ಸಂದೇಹ ಪರಿಹಾರ ಕಾಣಲು ಹಂಸಪಕ್ಷಿ, ಹಾಲು, ನೀರು ಬೇರ್ಪಡಿಸುವಂತೆ ಮನಕಷಾಯ ಕಳೆದು ಶುದ್ಧನಾಗುವುದನ್ನು ತಿಳಿಸುತ್ತದೆ. ಇಲ್ಲಿ ರತ್ನಾಕರವರ್ಣಿ ತನಗೆ ಇಷ್ಟವಾದ ಅಂಕಿತಗಳನ್ನು ಆಯಾ ಹಾಡುಗಳಲ್ಲಿ ಬಳಸುವುದು ಕಂಡುಬರುತ್ತದೆ. ಇಲ್ಲಿ ಚಿದಂಬರ ಪುರುಷ ಎಂಬುವುದು ರತ್ನಾಕರವರ್ಣಿಯ ಮತ್ತೊಂದು ಅಂಕಿತವಾಗಿದೆ.

"ಆರೈದು ಹೇಳಿರಣ್ಣಾತ್ಮಯೋಗಿಯ ವ್ಯವ
ಹಾರದುದ್ಯೋಗದೋಲಗದ ಗುಣಗಳ ||

ನೀರ ಬೊಬ್ಬುಳಿಯಂತೆ ತೋರಿಯಡಗುವ
ಶರೀರವ ತಪಸಿಗೆ ಮೂರುಗೊಂಡು
ಓರಂತೆ ಕೆಡದೆ ಮುಕ್ತಿ ಕೊಂಬವನ ವ್ಯವ
ಹಾರವೆಂಬುದು ಮಹಾಲಾಭವೋ ನಷ್ಟವೋ||

ಅಧ್ಯಾತ್ಮದಲ್ಲಿ ಧಾನಿಸಿದಲಾತ್ಮ ಭೂಮಿಯ
ಅಧ್ಯಾತ್ಮವರಿತು ಸಾಧಿಸಿಗೆಯ್ದು

ವಿದ್ಯಮಯದ ಬೆಳೆಸಿರಿ ಬೆಳೆವವನ
ಉದ್ಯೋಗವದು ಸಫಲವೋ ನಿಃಫಲವೋ||

ನಾಲಿಗೆ ಕೈಕಾಲು ಬಳಲಲಿಂ ಒಮ್ಮೆಗೆ
ಸೂಲವಿಲ್ಲ ನುಡಿಗೆ ನೆಲವುಂಟು
ಮೇಲುಂಟು ಮುಕ್ತಿ ಚಿದಂಬರ ಪುರುಷನ
ಓಲೈಸುವುದು ವಿಶಿಷ್ಟವೋ ಕಷ್ಟವೋ||[೧೩]

ಈ ಹಾಡಿನಲ್ಲಿ ಮನುಷ್ಯನ ಪ್ರಾಪಂಚಿಕ ವ್ಯವಹಾರಗಳಿಗಿಂತಲೂ ಆಧ್ಯಾತ್ಮಿಕ ವ್ಯವಹಾರಗಳಾದ ಆತ್ಮವನ್ನು ಕೆಡದಂತೆ ಸಂರಕ್ಷಿಸುವುದು ಅದರ ಮೂಲಕ ಮೋಕ್ಷ ಸಾಧನೆಯ ಕಡೆಗೆ ಪ್ರೇರೇಪಿಸುವ ನೆಲೆಯಿಂದ ಕೂಡಿದುದಾಗಿದೆ. ಜೈನಧರ್ಮದಲ್ಲಿ ಬಾಹ್ಯ ವ್ಯವಹಾರಗಳಿಗಿಂತ ಆತ್ಮಾನುಸಂಧಾನ ಬಹಳ ಮುಖ್ಯವೆಂದು ಹೇಳುತ್ತದೆ.

"ದೇಹ ಕೆಟ್ಟರೆ ನಾ ಕೆಟ್ಟೆನೆಂದೆಂಬವ ಮೂಢ
ದೇಹ ಕೆಟ್ಟಡೆ ನಾ ಕೆಡೆನೆಂಬವ ಪ್ರೌಢ||

ಇದನರಿದಂತಾತ್ಮ ಭಾದೆಗಳಿಲ್ಲವೆಂದು
ಬೆದರದೆ ತನ್ನಾತ್ಮ ಭಾವನೆಯೊಳಗೆ ತಾನಿದ್ದು
ಕ್ಷುಧೆ ತೃಷೆ ಮೊದಲಾದ ಬಾಧೆಗಳೆನಗಿಲ್ಲವೆಂದು
ಚಿದಂಬರ ಪುರುಷನ ಧ್ಯಾನಿಸುವನೊ ಗುಣಸಿಂಧು"||[೧೪]

ರತ್ನಾಕರವರ್ಣಿ ಬಹುತೇಕ ಎಲ್ಲ ಹಾಡುಗಳಲ್ಲಿ ಆತ್ಮದ ಬಗೆಗೆ ವಿವಿಧ ರೂಪಕಗಳ ಮೂಲಕ ಆತ್ಮವೇ ಶ್ರೇಷ್ಠವೆಂಬುವುದನ್ನು ಸಾಧಿಸಿ ತೋರಿಸುವುದು ಕಂಡುಬರುತ್ತದೆ. ಅದರಂತೆ ಈ ಹಾಡಿನಲ್ಲಿ ದೇಹ ಯಾವತ್ತು ಶಾಶ್ವತವಾದುದಲ್ಲ. ಅದರ ಚಿಂತೆ ಬಿಟ್ಟು 'ಆತ್ಮ' ಶಾಶ್ವತವೆಂದು ಪ್ರೇರೇಪಿಸುವ ಹಾಡಾಗಿದೆ. ಬೆಂಕಿ, ಖಡ್ಗ, ರೋಗಗಳಿಗೆ ತುತ್ತಾಗುವುದು ದೇಹವೇ ಹೊರತು ಆತ್ಮವಲ್ಲ. ಆತ್ಮ ಅವಿನಾಶಿ ಯಾದುದು. ಭಗವದ್ಗೀತೆಯಲ್ಲಿ ಬರುವಂತೆ ಆತ್ಮವನ್ನು ಬೆಂಕಿಯಿಂದ ಸುಡಲಾಗದು, ಖಡ್ಗದಿಂದ ಕತ್ತರಿಸಲಾಗದು. ಈ ಮೋಕ್ಷದ ಪ್ರೇರಣೆಯಾಗಿರುವುದು ಕಂಡುಬರುತ್ತದೆ. ಹಾಗೆಯೇ ರತ್ನಾಕರನ ನೂರಾರು ಹಾಡುಗಳಲ್ಲಿ ಆತ್ಮ ತತ್ವದ ಪರಿಕಲ್ಪನೆಯನ್ನು ವಿವಿಧ ಪಾರಿಭಾಷಿಕ ಪದಗಳ ಮೂಲಕ, ರೂಪಕಗಳ ಮೂಲಕ 'ಆತ್ಮ' ಸ್ವರೂಪವನ್ನು ಹಾಡಿನಲ್ಲಿ ಹಿಡಿದಿಟ್ಟಿರುವುದು ರತ್ನಾಕರವರ್ಣಿಗೆ ಇರುವ ಆತ್ಮದ ಅತ್ಯಂತ ಪ್ರಬಲವಾದ ನಂಬಿಕೆಯನ್ನು ಸೂಚಿಸುತ್ತದೆ. ಜೈನಧರ್ಮದ ಪ್ರಣಾಳಿಕೆಯ ಅನುಸಾರವಾಗಿ ರತ್ನಾಕರವರ್ಣಿಯು ಆತ್ಮಪರಿಕಲ್ಪನೆಯನ್ನು ಸರಿಯಾಗಿ ತನ್ನ ಹಾಡುಗಳಲ್ಲಿ ರೂಢಿಸಿಕೊಂಡಿರುವುದು ಕಾಣುತ್ತೇವೆ.

"ಆತ್ಮನು ಕಲೆಯೆಂಬುದದು ವಿಕ
ಳಾತ್ಮರಿಗಾರಿಗೂ ತಿಳಿಯದು
ಆತ್ಮ ವಿಮುಖರಿಗೆ ತೋರದು ನಿಲ್ಲದು
ಆತ್ಮರಾಮರ ಸೊಮ್ಮದು"||[೧೫]

ಈ ಹಾಡು ಆತ್ಮ ಎಂಬುದು ಕಲೆಯೆಂಬುದನ್ನು ತಿಳಿಯಲು ಅದು ಸಾಮಾನ್ಯರಿಂದ ಅಥವಾ ವಿಕಟರಿಂದ ಸಾಧ್ಯವಿಲ್ಲ. ಅದು ನಿರಾಕಾರ ಆತ್ಮನ ಸ್ವರೂಪವಾಗಿದೆ. ಅದರಿಂದ ಸಾಧನೆಯೇ ಹೊರತು ಇನ್ನು ಯಾವುದರಿಂದಲೂ 'ಆತ್ಮ'ವನ್ನು ಕಾಣಲು ಸಾಧ್ಯವಿಲ್ಲ ಎಂಬ ಧ್ವನಿ ವ್ಯಕ್ತವಾಗುತ್ತದೆ. ಅದೇ ರೀತಿ ಇನ್ನೊಂದು ಹಾಡನ್ನು ಗಮನಿಸಬಹುದು.

"ಜಲಗಾರನ ಜಲಗಾರನ ಜಾಣತನವ ನೋಡಾ
ಸುಲಭದಿ ಚಿನ್ನವ ತೆಗೆದ ನೋಡಾ||
ಡೋಣಿ ಗುದ್ದಲಿ ಹಾರೆ ಮಕ್ಕರಿಯಿಂದ
ಕ್ಷೋಣಿಯ ಮಣ್ಣು ಶೋಧಿಸಿ ಮತ್ತೆ
ಡೋಣಿ ಮುಂತಾದವ ಮಣ್ಣನು ಬಿಟ್ಟು
ಜಾಣ ಚಿನ್ನವನೊಂದನೆ ಪಿಡಿದಾ||
.................................
ಹಲವು ಶಾಸ್ತ್ರವನೋದಿ ಹಲವು ಚಿಂತಿಸಿದಾತ್ಮ
ಕಲೆಯನೊಂದನೆ ಧ್ಯಾನಿಸೆಂಬುದು
ಚೆಲುವ ಶ್ರೀ ಮಂದರಸ್ವಾಮಿ ಶಾಸನ ಈ
ಜಲಗಾರನದಕೆ ತಾ ದೃಷ್ಟಾಂತ"||[೧೬]

ಈ ಹಾಡಿನಲ್ಲಿ ಅರಿಷಡ್ವರ್ಗಗಳನ್ನು ಗೆದ್ದು ಆತ್ಮಧ್ಯಾನ ಮಾಡುವವನೇ ನಿಜವಾದ ಜಲಗಾರ. ಈ ಮಾತನ್ನೆ ಆಧುನಿಕ ಕವಿಗಳಾದ ಗೋಪಾಲಕೃಷ್ಣ ಅಡಿಗರ ಅಭಿಪ್ರಾಯದಂತೆ "ಅಗೆರುತ್ತ ಗದ್ದೆಗಳ ಕರ್ಮಭೂಮಿಯವರಣ" ಹುತ್ತಗಟ್ಟದೆ ಚಿತ್ತ ಮತ್ತೆ ಕೆತ್ತೀತೇನು ಎನ್ನುವ ಮಾತುಗಳು ನೆನಪಿಗೆ ಬರುತ್ತವೆ. ಯಶಸ್ಸು ಎಂಬುದು ಸಾಧಕನ ಸೊತ್ತೆ ಹೊರತು ಎಂದಿಗೂ ಸೋಮಾರಿಗಳ ಸಂಪತ್ತಾಗದು ಎಂಬುದು ಈ ಹಾಡಿನ ಭಾವವಾಗಿದೆ. ಇಲ್ಲಿ ಜಲಗಾರ ಎಂಬುದು 'ಸಾಧಕ' ಎಂಬುದರ ಹಿನ್ನೆಲೆಯಲ್ಲಿ ಬಳಸಿರುವುದು ಕಂಡುಬರುತ್ತದೆ.

"ಹೋದರೆ ಹೋಗು ಹೋಗದಿದ್ದರೆ ಇರು ನನಗದರಿಂದ ನಷ್ಟವಿಲ್ಲ
ಖೇದ ಹುಟ್ಟಿದ ಬಳಿಕ ಬೆರೆಸುವನೇ ಏತನುವೇ||
.................................
ಎಂದಿದ್ದರೂ ಎರವಲ್ಲದೆ ನೀನಾರು ನಾನಾರು
ಬಂದ ಹೋದ ಒಡಲೆಷ್ಟು ನಿನ್ನಂತೆ ತನುವೇ
ಇಂದುತನಕ ಮೋಹಮೂರ್ಛೆಯೊಳಿರ್ದೆ ಸಕಲ ಶ್ರೀ
ಮಂದರ ಸ್ವಾಮಿಯ ಕೃಪೆಯ ನಾನಿಂದು ಕಂಡೆ"||[೧೭]

ಈ ಹಾಡಿನಲ್ಲಿ ಬೇಸರದ ಮಾತುಗಳ ಮೂಲಕ ವ್ಯಕ್ತಪಡಿಸುತ್ತಾನೆ. ಪ್ರಪಂಚವೆಂಬುವುದು ತುಂಬ ವಿಶಾಲ. ಇಲ್ಲಿಗೆ ಅನೇಕರು ಬಂದು ಹೋಗುವವರಿದ್ದಾರೆ. ಕೆಟ್ಟು ಹೋದ ಮೇಲೆ ಪಶ್ಚಾತ್ತಾಪ

ಪಡುವವರಿದ್ದಾರೆ. ಆದ್ದರಿಂದ 'ಆತ್ಮ'ಕ್ಕೆನು ನಷ್ಟವಿಲ್ಲ ದೈವದ ಅನುಗ್ರಹಕ್ಕೆ ಬೇಕಾದ ಗುಣಗಳನ್ನು ಬೆಳೆಸಿಕೊಳ್ಳಬೇಕು ಎಂದು ಮಂದಾರ ಸ್ವಾಮಿಯ ಕೃಪೆಯೆಂಬುದು ಬೇಕು ಎಂಬ ಧ್ವನಿ ವ್ಯಕ್ತವಾಗಿರುವುದು ಕಂಡುಬರುತ್ತದೆ. ಇನ್ನೊಂದು ಹಾಡಿನಲ್ಲಿ ಈ ಲೋಕವೆಲ್ಲವೂ ಆತ್ಮವೇ ಎಂದು ಸಾರುವ ಅತ್ಯಂತ ಉತ್ಕಟವಾದ ಭಾವನೆ ಈ ಕೆಳಗಿನ ಹಾಡಿನಲ್ಲಿ ವ್ಯಕ್ತವಾಗಿದೆ.

"ಆತ್ಮನೆ ಲೋಕವೆಲ್ಲವು ಸಲೆಯ ಸಂಭ್ರಮಕೆ ಮರುಳಾಗಿ
ವ್ಯಾಕುಲದೊಳೊತ್ತಿ ನೋವುದೆ
ಆತ್ಮನು ನೀ ಕಂಡ ಕಳೆಯು ಮತ್ತಿಲ್ಲ ತಡೆವರೆ ಸಾಕೇಳು
ಮುಕ್ತಿಗೆ ನಿಜಾತ್ಮ||
ಆತ್ಮನೆ ಭರತೇಶ್ವರನು ಮುನ್ನ ತನ್ನದೆಂದಾಗಿ ಧರೆಯ
ಮತ್ತಾಳ್ದ ಸಗರೇಂದ್ರ ಆತ್ಮನೆ ಪರಮ ರಾಮನ
ಸುಜಾಮನು ರಾವಣನು ರಘುದೇವರ ಪಾಂಡು
ಪುತ್ರರಾಳಿದರು"[೧೮]

ಈ ಹಾಡಿನಲ್ಲಿ ಬಹುಮುಖ್ಯವಾಗಿ ಕಂಡುಬರುವುದು ಬದುಕಿನಲ್ಲಿ ಆತ್ಮವೇ ಶ್ರೇಷ್ಠ. ಆತ್ಮ ಸಾಕ್ಷಾತ್ಕಾರವೇ ಕೈವಲ್ಯಕ್ಕೆ ದಾರಿ ಎಂಬ ಅನುಭಾವದ ಮಾತಿದೆ. ಭೋಗ ಕ್ಷಣಿಕ, ದೇಹ ಕ್ಷಣಿಕ, ಜೀವದೊಡನೆ ಸಂಘರ್ಷಕ್ಕಿಳಿಯದೆ ಬಾಳುವುದು ಲೇಸು. ಭರತ, ರಾಮ, ರಾವಣ, ಸುಜಾಮ, ಸುಗ್ರೀವ, ಪಾಂಡು ಪುತ್ರರನ್ನು ಹೆಸರಿಸುವ ಮೂಲಕ ಆಳ್ವಿಕೆ ನಡೆಸಿದವರೆಲ್ಲರೂ ನಾಶವಾಗಿದ್ದಾರೆ. ಕಡೆಗೆ ಆತ್ಮ ಮಾತ್ರವೇ ಉಳಿದಿದೆ. ಅದುವೇ ಶಾಶ್ವತ ಸುಖ ಎಂಬ ಸಂದೇಶವನ್ನು ಸಾರುತ್ತದೆ.

"ಆನಂದಯೋಗಿ ಅಧ್ಯಾತ್ಮಯೋಗಿ
ಜೈನಾಗಮಯೋಗಿ ಜಯ ಸಿದ್ಧಯೋಗಿ||
ಪವನ ವಿಜಯಯೋಗಿ ಪರಮಾತ್ಮಯೋಗಿ
ಜವನ ದಾಳಿಯಗೆಲ್ದ ಜಗದೇಕಯೋಗಿ||
ಧೈರ್ಯಜಾರದ ಯೋಗಿ ದಯವುಳ್ಳಯೋಗಿ
ಸೂರ್ಯ ಪ್ರಕಾಶದ ಸುಜ್ಞಾನಯೋಗಿ||
ಗಗನದೊಳಾಡುವ ಗಂಧರ್ವಯೋಗಿ
ಸುಗುಣಮಣಿಯ ತೊಟ್ಟ ಶೃಂಗಾರ ಯೋಗಿ||
ಅಕ್ಷರಾಭರಣದ ಅಸಮಾನ ಯೋಗಿ
ಮೋಕ್ಷಕಾಂತೆಗೆ ಸೋತ ಮೋಹಗಾರ ಯೋಗಿ||
ಮೋಹಶೂರನಗೆಲ್ದ ಮೊನೆಗಾರಯೋಗಿ
ಶ್ರೀ ಹಂಸನಾಥನ ಸಿದ್ಧಾಂತಯೋಗಿ||"[೧೯]

ಈ ಹಾಡಿನಲ್ಲಿ ನಿಜವಾದ ಆತ್ಮವನ್ನು ಗುರುತಿಸುತ್ತಾನೆ. ಸಾವನ್ನು ಗೆಲ್ಲುವ, ಧೈರ್ಯಗುಂದದ, ಆಕಾಶದೊಳಗಿರುವ ಗಂಧರ್ವ, ಸೂರ್ಯಪ್ರಕಾಶದ ಆತ್ಮನೇ ಆನಂದಯೋಗಿಯೆಂದು ಬಣ್ಣಿಸುತ್ತಾನೆ. ಆತನಿಂದ

ಅಧ್ಯಾತ್ಮ ಸುಖ, ಆನಂದ ಯೋಗಿಯಾಗಲು ಆತ್ಮ ಸಾಕ್ಷಾತ್ಕಾರ ಅತಿಮುಖ್ಯವೆಂದು ಈ ಹಾಡಿನಲ್ಲಿ ವ್ಯಕ್ತವಾಗಿರುವುದು ಕಂಡುಬರುತ್ತದೆ. ಇಲ್ಲಿ ಹಂಸನಾಥನ ಅಂಕಿತವಿರಿಸಿಕೊಂಡಿರುವುದು ಕಂಡುಬರುತ್ತದೆ.

"ಆತ್ಮ ತತ್ವದ ಪಾಡು
ಅನುಭವದಾತ್ಮ ತತ್ವದ ಪಾಡು ನಿನ್ನ
ಮನದೊಳ ಪರಮಾತ್ಮನ ನೋಡು ||
ಆಸನಗಳ ಜಯಮಾಡಿ ಮೋಹಾಶಾ
ಪಾಶಗಳ ಪರದೀ ದಾರಿ
ಲೇಸಾಗಿ ದಶವಾಯುವ ಕೂಡಿ ಕರ್ಮ
ಶೋಷಣೆಗೈದು ಧ್ಯಾನವ ಮಾಡಿ"||[೨೦]

ರತ್ನಾಕರವರ್ಣಿ ಅನುಭವದ ಮೂಲಕ ಮನದಲ್ಲಿ ಪರಮಾತ್ಮನನ್ನು ನೋಡುವ ಪರಿಯನ್ನು ವಿವರಿಸುವುದರ ಜೊತೆ ಯೋಗದ ಯೋಗಾಸನಗಳನ್ನು ಜಯಮಾಡಿ ಮೋಹ, ಮದ ಮತ್ಸರಗಳನ್ನು ನಾಶ ಮಾಡಿದರೆ ತಾನಾಗಿಯೇ ಒಳ್ಳೆಯ ಸದ್ಗುಣಗಳಿಂದ ಸುಸಂಸ್ಕೃತ ವ್ಯಕ್ತಿಯಾಗಿ ಆತ್ಮದರ್ಶನವನ್ನು ಪಡೆಯುತ್ತೀಯ ಎಂಬ ಸಂದೇಶವನ್ನು ನೀಡುತ್ತಾನೆ. ಒಟ್ಟಿನಲ್ಲಿ ರತ್ನಾಕರವರ್ಣಿಯ ಹಾಡುಗಳಲ್ಲಿ ಆತ್ಮದ ಚಿತ್ರಣವನ್ನು ವಿವಿಧ ಪಾರಿಭಾಷಿಕ, ರೂಪಕಗಳ ಮೂಲಕ ಕೊಡುತ್ತಾನೆ. ಇಲ್ಲಿ ರತ್ನಾಕರ 'ಹಂಸ' ಎಂಬ ಪದವನ್ನು ಆತ್ಮದ ಪ್ರತೀಕವಾಗಿ ಹಲವು ಹಾಡುಗಳಲ್ಲಿ ಬಳಸಿರುವುದು ಕಂಡುಬರುತ್ತದೆ. ಹಂಸವೆಂದರೆ ಆತ್ಮವೆಂದು ಅರ್ಥ, ಆತ್ಮಾನುಸಂಧಾನವೇ ಹಂಸೋಪಾಸನೆ ಕನ್ನಡದಲ್ಲಿ ಬಹುಮಟ್ಟಿಗೆ 'ಹಂಸಕಲೆ' ಇಷ್ಟೊಂದು ವ್ಯಾಪಕವಾಗಿ ರತ್ನಾಕರನನ್ನು ಬಿಟ್ಟು ಇನ್ನಾರೂ ಚಿತ್ರಿಸಿಲ್ಲ ಎಂಬುದು ಕಂಡುಬರುತ್ತದೆ. ಹಂಸಕಲೆ ಎಂಬುದು "ಜೀವ ತನ್ನ ಸ್ವರೂಪವನ್ನು ಸಹಜ ಸ್ವಭಾವವನ್ನು ಹುಡುಕುವುದೇ ಆಗಿದೆ. ಇಂದ್ರಿಯ-ಮನಸ್ಸು-ಬುದ್ಧಿ ಇವುಗಳ ಸೀಮೆಯನ್ನು ದಾಟಿ ಆತ್ಮಾನುಸಂಧಾನದಲ್ಲಿ ತನ್ಮಯನಾದವನೇ ನಿಜವಾದ ತಪಸ್ವಿ"[೨೧] ರತ್ನಾಕರ ತನ್ನ ಭರತೇಶ ವೈಭವದಲ್ಲಿ ಮತ್ತು ಶತಕಗಳಲ್ಲಿ ಹಂಸಕಲೆಯನ್ನು ಹೆಚ್ಚಾಗಿ ಪಳಗಿಸಿರುವನು. ಹಾಗೆಯೇ ಹಾಡುಗಳಲ್ಲಿ ಹಂಸಕಲೆಯನ್ನು ಆತ್ಮದ ವಿವಿಧ ಸ್ವರೂಪಗಳನ್ನು ಸಮರ್ಥವಾಗಿ ಹಾಡಿನಲ್ಲಿ ಕಟ್ಟಿಕೊಟ್ಟಿರುವುದು ವಿಶೇಷವಾಗಿದೆ.

ಇಲ್ಲಿ ರತ್ನಾಕರವರ್ಣಿ ತನ್ನ ಹಾಡುಗಳಲ್ಲಿ 'ಆತ್ಮ'ವೇ ಪ್ರಧಾನವೆನ್ನುತ್ತಾನೆ. ಜೈನಧರ್ಮ ಸಹ ಆತ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದೆ. ಜೊತೆಗೆ ಹಾಡುಗಳಲ್ಲಿ ವಿವಿಧ ಸಂಕೇತ, ರೂಪಕ, ಪಾರಿಭಾಷಿಕ ಪದಗಳಿಂದ 'ಆತ್ಮ'ವೆಂಬ ಶಬ್ದವನ್ನು ಕಟ್ಟಿಕೊಟ್ಟಿದ್ದಾನೆ. ಆತ್ಮವೇ ಪ್ರಧಾನವೆಂಬ ನೆಲೆಯಲ್ಲಿ ಜೈನಧರ್ಮ, ಕರ್ಮ, ಆಚಾರ-ವಿಚಾರ, ಮೋಕ್ಷ ಒಟ್ಟಾರೆಯಾಗಿ ಜೈನಧರ್ಮದ ತತ್ವಗಳನ್ನು ವಿವರಿಸಿತ್ತು. ಕೊನೆಗೆ ಆತ್ಮದಲ್ಲಿ ಲೀನವಾಗುವಂತೆ ಈ ಹಾಡುಗಳನ್ನು ರಚಿಸಿದ್ದಾನೆ.

**೪.೧.೨. ಜೈನ ದರ್ಶನ**

ಪ್ರತಿಯೊಂದು ಧರ್ಮದ ಕವಿ ತನ್ನ ಧರ್ಮಕ್ಕೆ, ಧರ್ಮದ ಸಿದ್ಧಾಂತಗಳಿಗೆ ಹಾಗೂ ಧಾರ್ಮಿಕ ವಿಚಾರಗಳಿಗೆ ವಿಧೇಯಕನಾಗಿರುತ್ತಾನೆ. ಮೂಲಭೂತವಾಗಿ ಮನುಷ್ಯ ಜೀವನವನ್ನು ತಮ್ಮ ಮತಧರ್ಮದ

ಸಂಸ್ಕೃತಿಯ ಮೇಲೆ ನಿರೂಪಿಸಿ, ವ್ಯಾಖ್ಯಾನಿಸಿ ಅದನ್ನು ಕಾವ್ಯಧರ್ಮದ ಜಾಡಿನಲ್ಲಿ ಹರಿಯಬಿಟ್ಟಿರುವುದು ಈಗಾಗಲೇ ಜೈನ-ಜೈನೇತರ ಕವಿಗಳು ಮಾಡಿದ್ದಾರೆ. ಹಾಗೆಯೇ ರತ್ನಾಕರವರ್ಣಿಯು ತನ್ನ ಧರ್ಮದ ತತ್ತ್ವ ಸಿದ್ಧಾಂತ ಹಾಗೂ ಧಾರ್ಮಿಕ ವಿಚಾರಗಳನ್ನು ತನ್ನ ನೆಲೆಯಲ್ಲಿ ಅರ್ಥೈಸಿಕೊಂಡು ಅದನ್ನು ವ್ಯಾಖ್ಯಾನಿಸಿದ ಪರಿಪಾಟ ಈ ಹಾಡುಗಳಲ್ಲಿ ಕಾಣಬಹುದಾಗಿದೆ. ಜೀವನ ಅಥವಾ ಲೌಕಿಕ ಜೀವನದ ನಶ್ವರತೆಯನ್ನು ಹೇಳಿರುವುದುಂಟು. ಮೋಕ್ಷವನ್ನು ಗಳಿಸಬೇಕೆಂಬುದು ಜೈನಧರ್ಮದ ಪ್ರಣಾಳಿಕೆಯಾಗಿದೆ.

ಇದರ ಬಗ್ಗೆ ಬಹುತೇಕ ಎಲ್ಲ ಜೈನಕವಿಗಳು ಏಕರೂಪದ ಒಲವು ಮತ್ತು ನಿಲುವು ತಾಳಿರುವುದು ಅವರ ಕಾವ್ಯ ಕಥೆಗಳಲ್ಲಿ ಕಾಣಬಹುದು. ಇತರರು ನಿರೂಪಿಸಿರುವ ತೀರ್ಥಂಕರರ ಚರಿತ್ರೆ ಹಾಗೂ ಲೌಕಿಕ ಕಥಾನಾಯಕರ ಬಗ್ಗೆ ಹೇಳುತ್ತ ಮೋಕ್ಷದ ಪ್ರಾಪ್ತಿ ಅರಿವು ಮೂಡಿಸುವ ಮೂಲಕ ಸಾಧನೆಯನ್ನು ವ್ಯಕ್ತಪಡಿಸುವುದಾಗಿದೆ. ಜೈನ ತತ್ವಜ್ಞಾನ, ಮೂಲಭೂತ ಧೋರಣೆ, ಭೋಗದ ನಿರಾಕರಣೆ, ಮೋಕ್ಷದ ಮಹತ್ವ, ಆತ್ಮದ ಶ್ರೇಷ್ಠತೆ ಇವೆಲ್ಲಾ ಜೈನಕವಿಗಳ ಪ್ರಮುಖ ವಸ್ತುವಾಗಿದೆ. ಒಟ್ಟಾರೆಯಾಗಿ ಭೋಗ ಜೀವನದ ನಶ್ವರತೆಯನ್ನು ಮನದಟ್ಟು ಮಾಡುತ್ತ ಜೈನಧರ್ಮದ ಸಾಂಸ್ಕೃತಿಕ ಪರಿಕಲ್ಪನೆಯನ್ನು ಸೂಚಿಸಿರುವುದು ಪ್ರಧಾನವಾಗಿದೆ. ಬಹುತೇಕ ಎಲ್ಲ ಜೈನಕವಿಗಳಲ್ಲಿ ಮನುಷ್ಯ ಜೀವನವನ್ನು ಸಾರ್ಥಕತೆಯ ಕಡೆಗೆ ಕೊಂಡೊಯ್ಯುವ ಅಂಶ ಪ್ರಧಾನವಾಗಿ ಕಂಡುಬರುತ್ತದೆ. ಹಾಗೆಯೇ ರತ್ನಾಕರವರ್ಣಿಯ ಹಾಡುಗಳು ಮನುಷ್ಯ ಜೀವನವನ್ನು ಭೋಗದ ಅಥವಾ ಲೌಕಿಕತೆಗೆ ಸೀಮಿತಗೊಳಿಸದೆ ಅಧ್ಯಾತ್ಮದ ಕಡೆಗೆ ಸೆಳೆಯಲೆತ್ನಿಸುವುದನ್ನು ಹಾಡುಗಳ ಮೂಲಕ ತ್ಯಾಗ, ಜಪ, ತಪ, ಆತ್ಮವನ್ನು ಕಾಣುವ ಪರಿ. ಈ ಹಾಡುಗಳ ಮುಖಾಂತರ ಉದ್ದೀಪಿಸುವುದರ ಜೊತೆಗೆ ಅದನ್ನೊಂದು ಅನಿವಾರ್ಯ ವ್ರತವನ್ನಾಗಿ ಒಂದು ಸಾಂಸ್ಕೃತಿಕ ಮೂಲವನ್ನಾಗಿಯೂ ಮಾಡಿದ್ದಾನೆ. ಅವುಗಳಲ್ಲಿ ಕೆಲವು ಹಾಡುಗಳನ್ನು ಇಲ್ಲಿ ವಿವೇಚಿಸಲಾಗಿದೆ.

> "ಅಯ್ಯಯ್ಯೋ ಕಷ್ಟದ ಭವಬಂಧನದೊಳಗೆ ನೀ
> ನಯ್ಯೋ ಮೈಮೆರದ ಜೀವನೇ||
> ........................
> ಬೇಗ ಮುಕ್ತಿಯಾಗಬೇಕೆಂಬ ತಪಸು ಮಾಡಲಾರೆಯ ಲೇ
> ಸಾಗಿ ದಾನ ಪೂಜೆಯ ಮಾಡೋ||
> ಆ ಗುಣಕ್ಕುಹರುಗೆಟ್ಟರ ಪರಾಜಿತೇಶ್ವರ ಚೆ
> ನ್ನಾಗಿ ನಂಬಿ ಜಪವ ಮಾಡುವ"[೨೨]

ಈ ಹಾಡು ಪ್ರಾಪಂಚಿಕ ಸುಖಗಳಿಂದ ಪಾರುಮಾಡಿ ನನ್ನನ್ನು ಮುಕ್ತಿಯ ಪಥದೆಡೆಗೆ ಅಭಿವ್ಯಕ್ತಿಸುವ ಧ್ವನಿ ಈ ಹಾಡಿನಲ್ಲಿ ಕಂಡುಬರುತ್ತದೆ. ಜೊತೆಗೆ ಧಾರ್ಮಿಕ ಆಚಾರಗಳಾದ ದಾನ, ಜಪ, ತಪದ ಅಗತ್ಯತೆಯನ್ನು ಕುರಿತು ಹೇಳುತ್ತಾನೆ. "ಜೈನಧರ್ಮದಲ್ಲಿ ದಾನಕ್ಕೆ ವಿಶೇಷ ಮಹತ್ವವಿದೆ. ದಾನ ಜೈನಧರ್ಮದ ಷಟ್ಕರ್ಮಗಳಲ್ಲಿ ಒಂದು. ಅಭಯದಾನ, ಆಹಾರದಾನ, ಔಷಧದಾನ, ಶಾಸ್ತ್ರದಾನ"[೨೩] ಇವು ಹಲವು ದಾನಗಳು. ಈ ವಿವೇಚನಪೂರಿತವಾದ ದಾನಗಳು ಮಾನವನ ಸಂಕಷ್ಟಕ್ಕೆ ಕೈಹಿಡಿವ ಮಾರ್ಗವಾಗಿವೆ. ಈ ಹಾಡಿನ ದಾನಪೂಜೆಯ ಮಹತ್ವವನ್ನು ಹೇಳುವ ರತ್ನಾಕರನ ಪ್ರಿಯವಾದ ಅಂಕಿತನಾಮ ಅಪರಾಜಿತೇಶ್ವರ. ರತ್ನಾಕರ ವರ್ಣಿಯು 'ಅಪರಾಜಿತೇಶ್ವರ ಶತಕ' ಎಂಬ ಕೃತಿಯನ್ನು ಬರೆದಿದ್ದಾನೆ.

"ಕಂಡರೆ ಕರ್ಮವ ಗೆಲ್ವನಾಗಳೆ ಯೋಗಿ
ಕಾಣದವ ಭವರೋಗಿ||
ಹತ್ತುಗಾಳೆಯ ಹೆಜ್ಜೆಯರಿದು ಜಯವ ಮಾಡಿ ಮೈ ಬಿಟ್ಟಾಡಿ
ನೆತ್ತಿಗೆರೆದ ಹೊಳೆ ಬ್ರಹ್ಮನೊಡಗೂಡಿ ಅದನೆ ಕೊಂಡಾಡಿ
ಸುತ್ತುವ ಮನಸಿಗೆ ಸಂಕೋಲೆಯನು ಹೂಡಿ ನೊಸಲಲ್ಲಿ ಕೂಡಿ
ಮತ್ತೆ ಕಂಗಳು ತುದಿಮೂಗಿನೊಳಗೂಡಿ ತನ್ನಲಿ ತಾ ನೋಡಿ||

ಭದ್ರಾಸನವ ವಜ್ರಾಸನವ ಮೊದಲಾಗಿ ಅಸನ ಜಯವಾಗಿ
ನಿದ್ರೆಯನೀಗಿ ನಿರಾಹಾರ ನಿಜವಾಗಿ ಸಂತೋಷದಲಿ ತೇಗಿ
ರೌದ್ರತೆ ಗರ್ವ ವಂಚನೆಯಾಸೆ ಬಡವಾಗಿ ಶಾಂತಿಯಲಿ ಬೀಗಿ
ಚಿದ್ರೂಪನೊಂದನೆ ತಿಳಿದು ತೊನಲಿ ತೂಗಿ ನಿಶ್ಚಯವೆದೆತಾಗಿ||

ಬುದ್ಧಿಯಲಂಗವ ದೇವಾಲಯವೆಂದು ಆತ್ಮನೆಂದು
ಶುದ್ಧನಿಶ್ಚಯವೆಂಬ ನಯಕೆ ತಾ ಸೆಲೆ ಸಂದು ಚಿನ್ಮಯನಿಹುದೊಂದು
ಸಿದ್ಧಸ್ವರೂಪಕ್ಕೆ ಮನಮೆಚ್ಚಿ ಜಯವೆಂದು ಹರುಷಾಶ್ರು ಬಂದು
ಸಿದ್ಧಿಯಿನ್ನೆಂದ ಪರಾಜಿತೇಶ್ವರ ನೀನೆಂದು ತನ್ನಲಿ ತಾ ನಿಂದು"||[೨೪]

ಈ ಹಾಡು ಅಂತ್ಯಪ್ರಾಸದಿಂದ ಕೂಡಿರುವುದು ವಿಶೇಷ. ಈ ಹಾಡು ಜೈನಧರ್ಮದ ಕರ್ಮವನ್ನು ಜಯಿಸಿದವರಿಗೆ ಮೋಕ್ಷ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆಯನ್ನು ಸೂಚಿಸುತ್ತದೆ. ಇದು ಜೈನಧರ್ಮದ ತಿರುಳಾಗಿದೆ. ಕರ್ಮಗಳನ್ನು ಗೆದ್ದು ಮುಂದೆ ಮುಕ್ತಿ ಎಂಬ ಮೋಕ್ಷ ಸಿಗುತ್ತದೆ ಎಂಬ ಧ್ವನಿ ವ್ಯಕ್ತವಾಗುತ್ತದೆ. ಹೀಗೆಯೇ ಕರ್ಮವನ್ನು ಗೆಲ್ಲಲು ಯೋಗದ ಮಹತ್ವವನ್ನು ಹಾಗೂ ವಿವಿಧ ಯೋಗಾಸನಗಳನ್ನು ಪರಿಚಯಿಸುತ್ತಾನೆ. ಯೋಗದ ಮೂಲಕ ನಿದ್ರೆ, ಹಸಿವು ಇದರ ಜೊತೆಗೆ ಕೋಪ, ಅಹಂಕಾರ, ಮೋಸ ಎಲ್ಲವೂ ಶಾಂತಿಯಲ್ಲಿ ಲೀನವಾಗುವುದು. ಇದರಿಂದ ಮನಸ್ಸಿಗೆ ಶಾಂತಿ ಲಭಿಸುತ್ತದೆ. ಇದನ್ನೇ ರತ್ನಾಕರ "ಚಿದ್ರೂಪ" ಎಂದು ಕರೆಯುತ್ತಾನೆ.

ಜೈನ ಧರ್ಮದಲ್ಲಿ ಕರ್ಮ ಎಂಬ ಪರಿಕಲ್ಪನೆಯು ವಿಶಿಷ್ಟವಾಗಿ ಮುಂದಿನ ಹಾಡಿನಲ್ಲಿ ರೂಪಕಗಳ ಮೂಲಕ ಹೇಳಿರುವುದು ನೋಡಬಹುದು.

"ಈತ ಅಗಸನಲ್ಲ
ಅಗಸನೀತನಲ್ಲ ಕರ್ಮವ
ಕುಸುರಿ ಒಗೆಯಬಲ್ಲ ||ಪ||

ಆರು ತಪದೊಳದ್ದಿ ಪಂಚಾ
ಚಾರದೊಳಗೆ ಹೊದ್ದಿ
ತೋರುವ ಚತುರಾರಾಧನೆಗಳು ಚಾ
ಗಾರಸು ಪದ ಬಿಸಿಲ್ಕಾಯಿಸುತಿಹ
......................
ಚಿದಂಬರ ಪುರುಷ ಶ್ರೀಮುಕ್ತಿ ಸಲಿಸುತಿಹ"[೨೫]

ಈ ಹಾಡಿನಲ್ಲಿ ಕರ್ಮವೆಂಬುವುದು ಹೊಲಸದ ಅಥವಾ ಮಲಿನದಿಂದ ಕೂಡಿದ ದೇಹ ಇದನ್ನು ಪಂಚಾಚಾರ ಎಂಬ ಶುದ್ಧಿಯಿಂದ ಇದನ್ನು ಶುಚಿಗೊಳಿಸುವ ಧ್ವನಿ ವ್ಯಕ್ತವಾಗುತ್ತದೆ. ಇಲ್ಲಿ ಪಂಚಾಚಾರದಲ್ಲಿ ಐದು ವಿಧಗಳು ಬರುತ್ತವೆ. ದರ್ಶನ, ಜ್ಞಾನ, ಚಾರಿತ್ರ್ಯ, ತಪ ಮತ್ತು ವೀರ್ಯ ಇವುಗಳ ಮುಖಾಂತರ ಕರ್ಮವನ್ನು ಗೆಲ್ಲಬೇಕಂಬ ಆಶಯವನ್ನು ಹೇಳುತ್ತಾನೆ. ವಿಶೇಷವೆಂದರೆ ಕರ್ಮವ ಕುಸುರಿ ಬಗೆಯಬಲ್ಲ ಅಗಸ ಎಂಬ ರೂಪಕವನ್ನು ಬಳಸಿಕೊಂಡು ಕರ್ಮದ ಪಾಪದಿಂದ ಮುಕ್ತವಾಗುವುದಾಗಿದೆ. ಜೈನಧರ್ಮದಲ್ಲಿ ಕರ್ಮವನ್ನು ಜಯಿಸಿ ಬಂದವನಿಗೆ ಮೋಕ್ಷಪದವಿ ಲಭಿಸುತ್ತದೆ ಎಂಬ ದೃಢವಾದ ನಂಬಿಕೆಯಿದೆ. ಈ ನಂಬಿಕೆಯು ಪುರಾತನ ಪುರಾಣ ಕಾವ್ಯ ಕಥೆಗಳಲ್ಲಿ ಕರ್ಮದ ಪರಿಕಲ್ಪನೆಯನ್ನು ವ್ಯಕ್ತಪಡಿಸುತ್ತ ಬಂದಿರುವುದನ್ನು ನೋಡುತ್ತೇವೆ. ರತ್ನಾಕರವರ್ಣಿ ಕರ್ಮದಿಂದ ಮುಕ್ತಿಯನ್ನು ಪಡೆಯಲು ಹಲವಾರು ಹಾಡುಗಳು ನಿದರ್ಶನವಾಗಿ ನಿಲ್ಲುತ್ತವೆ.

ಈ ಕೆಳಗಿನ ಹಾಡಿನಲ್ಲಿ ಜೈನಧರ್ಮದಲ್ಲಿ ಆಗಿಹೋದಂತಹ ತೀರ್ಥಂಕರರು, ಚಕ್ರವರ್ತಿಗಳ ಹೆಸರನ್ನು ಪ್ರಸ್ತಾಪಿಸುತ್ತ ಮಾನವನನ್ನು ಪ್ರಶ್ನೆ ಮಾಡುವ ಮೂಲಕ ಮುಕ್ತಿಯನ್ನು ಸಾಧಿಸಿದೆ ಎಂಬ ಆಶಯವನ್ನು ಕಾಣುತ್ತೇವೆ.

"ಎತ್ತಲಿಂದ ಬಂದೆ ಇನ್ನೆತ್ತ ಪಯಣ ಮುಂದೆ ನಿನಗೆ
ಮೊತ್ತದ ಹಗೆಗಳ ನಡುವೆ ಮೋಸವೇ"||[೨೬]

ಈ ಹಾಡಿನಲ್ಲಿ ಬಂದುದು ಎಲ್ಲಿಂದ ಹೋಗುವುದು ಎಲ್ಲಿಗೆ ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ತವಕವನ್ನು ಕಾಣುತ್ತೇವೆ.

"ಭರತೇಶನಂದು ಮುಕ್ತಿಗೆ ಹೋದನಾತನೊಳು
ಬೆರೆಸಿ ಮುಕ್ತಿಗೆ ಹೋದನೆ ಮತ್ತೆ
ವರಸುತರೊಡಗೂಡಿ ಸಗರೇಂದ್ರ ಹೋಹಾಗಲ
ವರ ಕೂಡಿ ಹೋದನೆ ಭರದಿಂದ ಮಾಘವ
ಚಕ್ರೇಶನೈದಿದನವನ ನೆರವಿಯೊಳು ನಾ ಹೋದನೆ ಮತ್ತೆ
ಕರಚೆಲುವನೆನಿಪ ಸನತ್ಕುಮಾರೇಂದ್ರನೊಳು
ಸರಸವಾಡುತ ಹೋದನೆ||
ವಿಮಲನಾಥ ಕಾಲದದಿ ಮೇರು ಮಂದಾರೋ
ತ್ತಮರ ಸಂಗಡ ಹೋದನೆ ಬಳಿಕ ಕಮಲ ಚಕ್ರಿಯ ಕೂ
ಡೆ ಮಲ್ಲಿನಾಥನ ದಿನದೊಳಮವು ನಾ ಪೋದೆನೊ"[೨೭]

ಈ ಹಾಡಿನಲ್ಲಿ "ಜೈನಧರ್ಮದ ಶಲಾಕ ಪುರುಷರು ಎಂದು ಕರೆಸಿಕೊಳ್ಳುವ ೨೪ ಜನ ತೀರ್ಥಂಕರರಾದ ವರ್ತಮಾನ, ಭೂತಕಾಲ, ಭವಿಷ್ಯತ್‌ಕಾಲ ಹಾಗೂ ೧೨ ಜನ ಚಕ್ರವರ್ತಿಗಳು, ೯ ಜನ ನಾರಾಯಣರು, ೯ ಜನ ಪ್ರತಿ ನಾರಾಯಣರು ಮತ್ತು ೯ ಜನ ಬಲಭದ್ರರೂ ಸೇರಿ ೬೩ ಜನರನ್ನು ಶಲಾಕ ಪುರುಷರೆನಿಸುತ್ತಾರೆ."[೨೮] ಇಲ್ಲಿ ರತ್ನಾಕರವರ್ಣಿ ತನ್ನ ಹಾಡಿನಲ್ಲಿ ೧೯ನೇ ತೀರ್ಥಂಕರನಾದ ಮಲ್ಲಿನಾಥ ೧೩ನೇ ತೀಂರ್ಥಕರನಾದ ವಿಮಲನಾಥನನ್ನು ತನ್ನ ಹಾಡುಗಳಲ್ಲಿ ಪ್ರಸ್ತಾಪಿಸುತ್ತಾನೆ. ಹಾಗೆಯೇ ೧೨ಜನ

ಚಕ್ರವರ್ತಿಗಳಾದ ಭರತೇಶ, ಸಗರೇಂದ್ರ ಸನತ್ಕುಮಾರ, ಮಾಘವ ಮುಂತಾದವರನ್ನು ಈ ಹಾಡಿನಲ್ಲಿ ಪ್ರಸ್ತಾಪಿಸಿರುವುದು ಜೈನಧರ್ಮದ ಐತಿಹಾಸಿಕ ಪ್ರಜ್ಞೆಯನ್ನು ಮತ್ತು ಸಾಂಸ್ಕೃತಿಕ ಜಗತ್ತನ್ನು ಸೂಚಿಸುತ್ತಾನೆ.

ಜೈನಧರ್ಮದಲ್ಲಿ 'ಪಂಚಾಣುವ್ರತದ' ಶ್ರೇಷ್ಠತೆ ಮತ್ತು ಮಹಿಮೆಯನ್ನು ಸುದೀರ್ಘವಾಗಿ ಹಾಡೊಂದರಲ್ಲಿ ವಿವರಿಸುವುದು ಹೀಗಿದೆ.

"ಕೊಲೆ ಹುಸಿಯು ಕಳವು ಪರಿದಾರ ಅತಿಕಾಂಕ್ಷೆಗಳ
ಸಲೆ ವಿಸರ್ಜಿಸಿ ಸಮುದ್ರಾದಿ ಪರಮೇಶ್ವರನ
ನಲವಿನಲಿ ಧ್ಯಾನಿಸಲು ಸ್ವರ್ಗಾದಿ ಮೋಕ್ಷಗಳ
ಸುಲಭದಲಿ ಪಡೆಯಬಹುದೈ ಮನುಜ ||ಪ||[೨೯]

ಈ ಹಾಡಿನಲ್ಲಿ ಪಂಚಾಣುವ್ರತಗಳಾದ ಅಹಿಂಸೆ, ಸತ್ಯ, ಆಚಾರ್ಯ, ಬ್ರಹ್ಮಚರ್ಯ, ಪರಿಗ್ರಹ, ಪರಿಣಯ, ಇವುಗಳನ್ನು ಪ್ರತಿಯೊಂದು ಪದ್ಯದಲ್ಲಿ ವಿವರವಾಗಿ ಹೇಳಿದ್ದಾರೆ.

"ಕೊಲೆಯೆಂಬುದೀಗ ತನ್ನಯ ಕೊಲೆಗೆ ಕೊಟ್ಟ ಬೆಲೆ
ಕೊಲೆ ತನ್ನ ಕೊರಳೆದೆಯ ಬಿಡದೊತ್ತಿ ಕೊಲುವ ಕೊಲೆ
ಕೊಲೆಯು ಹಿಂಸಾವೃತ್ತಿ ಚರಣಕ್ಕೆ ಹೊತ್ತ ಹೊಲೆ
ಕೊಲೆಯು ಅಂತಕನ ಸಂಕೋಲೆ"[೩೦]

ಜೈನ ಧರ್ಮದ ಅಹಿಂಸೆಯೇ ಪರಮಧರ್ಮವೆಂದು ಸಾರಿರುವುದು ಜೈನಧರ್ಮದ ಶ್ರೇಷ್ಠತೆಯನ್ನು ಹೇಳುತ್ತದೆ. ಈ ಹಾಡಿನಲ್ಲಿ ಅಹಿಂಸೆಯನ್ನು ಪ್ರತಿಪಾದಿಸುತ್ತ ಕೊಲೆ, ರಕ್ತಪಾತ ಇವು ಮನುಷ್ಯನಿಗೆ ನೆಮ್ಮದಿ ತರುವಂತಹವಲ್ಲ. ಕೊಲೆಗಾರನ ಮನಸ್ಸು ಯಾವಾಗಲೂ ಆತಂಕದಿಂದ ಕೂಡಿರುತ್ತದೆ. ಇದು ಒಳ್ಳೆಯದಲ್ಲ ಎಂಬ ಆಶಯವನ್ನು ವ್ಯಕ್ತಪಡಿಸುತ್ತದೆ. ಅದೇ ರೀತಿ ಪಂಚಾಣುವ್ರತದ ಇನ್ನೊಂದು ಅಂಶವಾದ 'ಸುಳ್ಳ'ನ್ನು ಕುರಿತು ಹಾಡಿನಲ್ಲಿರುವುದನ್ನು ನೋಡಬಹುದು.

"ಪುಸಿ ವಿಮಲಕೀರ್ತಿ ಕಾಂತೆಯ ಮುಖಕೆ ತೊಡೆದ ಮಸಿ
ಪುಸಿ ಸಕಲ ಸುವ್ರತದ ಫಲವ ಕೆಡಿಸುವುದು ಈ
ಪುಸಿ ಪೊಲ್ಲಮೆಂದು ಮನದೊಳಗೆ ನಿಶ್ಚಸಿ ನೀ
ಪುಸಿಯ ಕನಸಿನಲಿ ಮೆರೆಯೈ ಆತ್ಮ"[೩೧]

ಈ ಹಾಡು ಸುಳ್ಳನ್ನು ಹೇಳಬಾರದು ಹಾಗೆಯೇ ಸತ್ಯದ ಪ್ರಾಮುಖ್ಯತೆಯನ್ನು ಹೇಳುತ್ತದೆ. ಸುಳ್ಳಿನಿಂದ ಆಗುವ ಕಸಿವಿಸಿಯನ್ನು ರತ್ನಾಕರವರ್ಣಿ ಬಹಳ ಸೊಗಸಾಗಿ ಚಿತ್ರಿಸಿರುವುದು ನೋಡಬಹುದು.

"ಕಳವು ತನ್ನಲ್ಲಿ ಪೊಕ್ಕಿದೆಯಲ್ಲಿ ಕಳವಳವು
ಕಳವು ಕೇಳಿದ ಕಂಡೆಯ ಲೋಕ ಲೋಕದಳಿವು
ಕಳವು ಕೈಕಾಲು ಕಿವಿ, ಮೂಗು, ಕಣ್ಣಳ ಅಳಿವು
ಕಳವು ವರ್ಣಗಳ ಸುಳಿವು"[೩೨]

ಈ ಹಾಡಿನಲ್ಲಿ ಕಳ್ಳತನ ಕೊನೆಯವರೆಗೂ ಕಾಡದೆ ಬಿಡದ ದುಃಖ ಕಳ್ಳತನದಿಂದ ಆಗುವ ಯಾತನೆ ಗಳನ್ನು ವ್ಯಕ್ತಪಡಿಸುತ್ತಾನೆ.

"ಪರವಾರರೊಳು ಸ್ನೇಹ ಪರಮ ಪಾಪದ ಗೇಹ
ಪರನಾರಿಯರ ಸಂಗ ಪರಮಾಯುಷ್ಯಕ್ಕೆ ಭಂಗ"[೩೩]

ಈ ಹಾಡಿನಲ್ಲಿ ಪರಸ್ತ್ರೀಯರ ಸಂಗವನ್ನು ವಿರೋಧಿಸುತ್ತ ಅದರಿಂದ ಆಗುವ ಅನಾಹುತಗಳನ್ನು ರತ್ನಾಕರವರ್ಣಿ ಎಚ್ಚರಿಸುತ್ತ ಜೈನಧರ್ಮದ ಪರಿಕಲ್ಪನೆಯಂತೆ ಸ್ತ್ರೀ ವ್ಯಾಮೋಹ ಪರನಾರಿಯರ ಸಂಗ ಅಸಹ್ಯ, ಅಸಭ್ಯ, ವರ್ತನೆಯೆಂದು ಟೀಕಿಸುತ್ತದೆ. ಬ್ರಹ್ಮಚರ್ಯವನ್ನು ಪರಿಪಾಲಿಸುವಂತೆ ಭೋದಿಸುತ್ತಾನೆ.

"ಅತಿಕಾಂಕ್ಷೆ ಯಾವಂಗೆ ಅತಿಕ್ಲೇಶ ಅವಂಗೆ
ಅತಿಕಾಂಕ್ಷೆ ಯಾವಂಗೆ ಅತಿದುಃಖ ಆತಂಗೆ
ಅತಿಕಾಂಕ್ಷೆಯಾಗದುಂಟು"[೩೪]

ಜೈನಧರ್ಮದ ಪ್ರಕಾರ ಸಂಪತ್ತನ್ನು ಅಗತ್ಯವಿದ್ದಷ್ಟು ಸಂಗ್ರಹಿಸಿಕೊಂಡು ಉಳಿದುದನ್ನು ಬಡವರಿಗೆ ದಾನ ಮಾಡಬೇಕು ಮತ್ತು ಹೆಚ್ಚಿನ ಸಂಪತ್ತಿನ ಮೇಲೆ ವ್ಯಾಮೋಹ ಪಡಬಾರದು ಎಂಬುದನ್ನು ತಿಳಿಸುತ್ತದೆ. ಇದು ಪರಿಗ್ರಹ ಪರಮಾತ್ಮ ವ್ರತವೆಂದು ಹೆಸರು. ಇಂತಹ ಪಂಚಾಣುವ್ರತದ ಶ್ರೇಷ್ಠತೆಯನ್ನು ರತ್ನಾಕರವರ್ಣಿ ತನ್ನ ಹಾಡುಗಳಲ್ಲಿ ಬಹಳ ಅರ್ಥಯುಕ್ತವಾಗಿ ಪದಬಂಧಗಳಿಂದ ಜನರ ಮನಸ್ಸಿಗೆ ನಾಟುವಂತೆ ರಚಿಸಿದ್ದಾನೆ. ಈ ಪಂಚಾಣುವ್ರತಗಳು ಹಸನಾದ ಸಮಾಜಕ್ಕೆ ತುಂಬ ಅಗತ್ಯವಿವೆ. ಸಮತೋಲನ ಸಮಾಜದ ನಿರ್ಮಾಣದಲ್ಲಿ ಇವು ಮಹತ್ವದ ಪಾತ್ರ ವಹಿಸುತ್ತದೆ. ಇಂತಹ ಅಮೂಲ್ಯವಾದ ತತ್ವಗಳು ಜೈನಧರ್ಮದ ಉದಾತ್ತೀಕರಣ ನೀತಿ, ಮಾನವೀಯ ಮೌಲ್ಯಗಳಂತಹ ಅಂಶಗಳು ಮತ್ತು ವೈಚಾರಿಕ ಪ್ರಣಾಳಿಕೆಯುಳ್ಳ ತತ್ವಗಳಿಂದ ಇಂದಿಗೂ ತನ್ನ ಚಹರೆಯನ್ನು ಬಿಂಬಿಸುತ್ತಿದೆ. ಅಮೂಲ್ಯವಾದ ತತ್ತ್ವಗಳನ್ನು ಇಂತಹ ಹಾಡುಗಳ ಮುಖಾಂತರ ಸಮಾಜಕ್ಕೆ ತಲುಪಿಸುತ್ತವೆ. ಆ ಮೂಲಕ ಜೈನ ಸಾಂಸ್ಕೃತಿಕ ಹಾಗೂ ಧಾರ್ಮಿಕ ವಿಚಾರಗಳು ವಿಶಿಷ್ಟತೆಯನ್ನು ಪಡೆದಿವೆ.

ಇನ್ನೊಂದು ಹಾಡಿನಲ್ಲಿ ಜೈನರ ಪಂಚ ನಮಸ್ಕಾರ ಮತ್ತು ಪಂಚ ಮಹಾಮಂತ್ರ ಇವುಗಳ ಪ್ರಸ್ತಾಪದ ಜೊತೆಗೆ ವಡ್ಡಾರಾಧನೆಯ ಕಥೆಗಳ ಸಂದರ್ಭ ಸನ್ನಿವೇಶಗಳನ್ನು ಪರಿಚಯಿಸುತ್ತಾನೆ.

"ಸದರವೆಂದಿರಬೇಡ ಪಂಚ ನಮಸ್ಕಾರ
ಅದು ಮಹಾಮಂತ್ರ ಕಂಡಾ
ಅದರಿಂದ ಹಲಬರು ಸುಖಿಯಾದವರುಂಟೆ
ಆದರ ಮಹಿಮೆಯ ಲಾಲಿಸು"[೩೫]

ಜೈನಧರ್ಮದಲ್ಲಿ ಮಹಾಮಂತ್ರವೆಂಬುವುದು ಪಂಚಪರಮೇಷ್ಠಿಗಳೆನಿಸಿದ ಅರಹಂತರು, ಸಿದ್ಧರು, ಉಪಾಧ್ಯಾಯರು, ಆಚಾರ್ಯರು, ಸಾಧುಗಳು ಇವರು ಜೈನಧರ್ಮದಲ್ಲಿ ಪೂಜ್ಯರು. ಇವರನ್ನು ನಮಸ್ಕರಿ ಸುವಾಗ ಹೇಳುವ ಮಂತ್ರವೇ ಮಹಾಮಂತ್ರ.

"ಣಮೋ ಅರಹಂತಾಣಂ

ಣಮೋ ಸಿದ್ಧಾಣಂ

ಣಮೋ ಆಇರಿಯಾಣಂ

ಣಮೋ ಉವಜ್ಝಾಯಾಣಂ

ಣಮೋ ಲೂವಿಪವುಸಾಹೂಣಂ"||[೨೬]

ಈ ಐದು ಮಂತ್ರಗಳಿಗೆ ಣಮೋ ಕಾರಮಂತ್ರಗಳೆಂದು ಹೆಸರು. ಇದನ್ನು ಜಪಿಸಿದರೆ ಸುಖಿಯಾಗಿ ಬದುಕುತ್ತೀಯ ಎಂಬ ಧ್ವನಿ ವ್ಯಕ್ತವಾಗುತ್ತದೆ. ಮುಂದಿನ ಹಾಡಿನ ಪದ್ಯದಲ್ಲಿ ವಡ್ಡಾರಾಧನೆಯ ಕಥಾ ಸಂದರ್ಭಗಳು ಬಂದಿರುವುದು ನೋಡಬಹುದು.

"ಕೇಳಿ ಅಂಜನ ಚೋರ ದೊರೆಯ ಕೂಡುಂಡು ಸೂಲಕ್ಕೆ ಗುರಿಯಾದನು

ಮೂಲ ಮಂತ್ರವ ಜಿನದತ್ತ ಪಾಲಿಸಲಾಗ ಸ್ವರ್ಗಕ್ಕೆ ಸಂದನು

ಕೇಳುತದಕೆ ರಾಯ ಜಿನದತ್ತ ಶೆಟ್ಟಿಯ ಮೇಲೆ ಮುನಿದನಾಗಳ ಸ್ವರ್ಗ

ಪಾಲ ತಾನೆ ಬಂದು ಜಪದ ಫಲವ ತೋರಿ ಆ ಲೋಕಕ್ಕೈದಿದನು"||[೨೭]

ಹೀಗೆ ಹಾಡಿನಲ್ಲಿ ವಡ್ಡಾರಾಧನೆಯ ಕಥಾಸಂದರ್ಭಗಳನ್ನು ಹೇಳುತ್ತ, ಜಿನನನ್ನು ಸೇರಲು ಇರುವ ಮಂತ್ರ ಸುಲಭ ಸಾಧ್ಯವಾದುದಲ್ಲ. ಅದಕ್ಕೆ ನಿರಂತರ ಪರಿಶುದ್ಧ ಮನಸ್ಥಿತಿ, ಶ್ರಾವಕರು ಅವನ್ನು ಪಡೆಯಲು ಸತತ ಪ್ರಯತ್ನ, ಪರಿಶ್ರಮದ ಮೂಲಕ ಅವನಿಗೆ ನಮಸ್ಕರಿಸಿದರೆ ನಮಗೆ ಪಂಚಪರಮೇಷ್ಠಿಗಳ ಸ್ಥಾನ ಲಭಿಸುತ್ತದೆ ಎಂಬುದರ ನೆಲೆಯಿದೆ.

ರತ್ನಾಕರವರ್ಣಿ ಮತ್ತೊಂದು ಹಾಡಿನಲ್ಲಿ ಜೈನಧರ್ಮದ ಸಾಂಸ್ಕೃತಿಕ ಇತಿಹಾಸವನ್ನು ಬಿಚ್ಚಿಡುವುದರ ಮೂಲಕ ಕಾಲಯುಗಗಳನ್ನು ಹೆಸರಿಸುತ್ತ ಜೈನಧರ್ಮದ ಬಸಿದಿಗಳ ಸಂಖ್ಯೆ ಹಾಗೂ ವರ್ಣನೆಯನ್ನು ಮಾಡುತ್ತ ಸಾಂಸ್ಕೃತಿಕ ಶ್ರೀಮಂತಿಕೆಯನ್ನು, ವೈವಿಧ್ಯತೆಯನ್ನು ಈ ಹಾಡಿನಲ್ಲಿ ಹೊಗಳಿರುವುದು ವಿಶೇಷವಾಗಿದೆ.

"ತೀರ್ಥ ವಂದನೆಗೇಳುದಯ ಕಾಲವಿದು ಪುಣ್ಯಕಾಲವಿದು ಪು

ಣ್ಯಾರ್ಥಕೊಳ್ಳಿತು ಪಡೆದ ಮನುಷ್ಯ ಜನ್ಮವನು

ವ್ಯರ್ಥಕ್ಕೆ ನೀಗದಿರು ಭಾವಪೂಜೆಯ ಮಾಡಿ

ಭವಕೆಟ್ಟು ಮುಕ್ತಿಯಹುದು||

ಇದು ಭರತಭೂಮಿ ಇದರಲಿ ಜಿನವಾಸಗಳು

ಮೊದಲು ಕೃತಯುಗ, ದ್ವಾಪರ, ತ್ರೇತೆಯುಗವೆಂಬ ಕಾ

ಲದಲಿ ಲೋಕಾಶ್ಚರ್ಯನಾಗಿ ತೋರಿದವೀಗ ಕಲಿಯುಗದ ದೋಷದಿಂದ

ಪದರವಾದವು ಕಲಿಯುಗಂ ಹೋದ ಬಳಿಕ ಮುಂ

ದೊದವಿ ಮುನ್ನಿನ ಹಾಗೆ ಮೆರೆವಂತಿರಲಿ ನಾ

ಲದ ದೋಷ ಹೊದ್ದದೆ ಸಂತತಂ ಮೆರೆವ ಬಸದಿಗಳುಂಟು

ಕೇಳೊರೆವನು"||[೨೮]

ಈ ಹಾಡಿನಲ್ಲಿ ಮನುಷ್ಯನ ಜನ್ಮ ಮನ್ವಂತರಗಳಲ್ಲಿ ಪಡೆದು, ಭಾವಪೂಜೆ ಮಾಡಿ ಭವಬಂಧನ ಕಳಚಿ ಮುಕ್ತಿಯನ್ನು ಪಡೆಯುವಂತೆ ಸೂಚಿಸುತ್ತದೆ. ಮುಂದಿನ ಪದ್ಯದಲ್ಲಿ ಯುಗಗಳನ್ನು ಪರಿಚಯಿಸುತ್ತ ಕಲಿಯುಗದ ದೋಷವನ್ನು ಸೂಚಿಸಲಾಗಿದೆ. ಜೈನರು ಯುಗಗಳನ್ನು ಒಂದು ವೈಚಾರಿಕ ನೆಲೆಯಲ್ಲಿ ಕಂಡುಕೊಂಡಿರುವುದು ವಿಶೇಷವಾದುದು. ಮಾನವ ವಿಕಾಸವಾಗಿ ಅಭಿವೃದ್ಧಿಯ ಮುಖಾಂತರ ಯುಗಗಳನ್ನು ಪರಿಚಯಿಸುತ್ತಾನೆ. ಜೊತೆಗೆ ಅನೇಕ ಜಿನ ಬಸದಿಗಳ ಸಂದರ್ಶನ ಅಲ್ಲಿ ಸಿದ್ಧಪರಮೇಷ್ಠಿಗಳ ನೆನೆದು ಧ್ಯಾನ ಮಾಡುವುದು. ಎಲ್ಲ ಸುತ್ತಿದ ಬಳಿಕ ನಿನ್ನ ಶರೀರವೇ ಜಿನದೇವ ವಾಸಸ್ಥಾನವೆಂದು ತಿಳಿಯಲು ಕರ್ಮವೆಲ್ಲ ಕಳೆದು ಮುಕ್ತಿ ಲಭಿಸುವುದು ಎಂದು ಹೇಳಲಾಗಿದೆ. ಈ ಹಾಡಿನಲ್ಲಿ ಮತ್ತೊಂದು ವಿಶೇಷವೆಂದರೆ ಇಲ್ಲಿ ಪಲ್ಲವಿ ಹೊರತುಪಡಿಸಿ ಉಳಿದ ಪದ್ಯಗಳು ವಾರ್ಧಕ ಷಟ್ಪದಿಯಲ್ಲಿವೆ. ಜೈನರಲ್ಲಿ ಪುರುಷಾರ್ಥಗಳನ್ನು ಗೆದ್ದವನು ಮೋಕ್ಷದ ಪದವಿಗೆ ಅರ್ಹ ಎಂಬ ನಂಬಿಕೆ ಈ ಹಾಡಿನಲ್ಲಿ ಧರ್ಮಾರ್ಥಗಳನ್ನು ಕುರಿತು ಹೇಳುತ್ತಾನೆ.

"ಬದ್ದು ಬಸ್ತಿಯ ಹೋಗು ಬಾಳದೆ ಹೋಗು ಬಾಳು
ತಿರ್ದ್ದ ಬಸ್ತಿಯ ಹೋಗು ಮನುಜಾ
ಇದ್ದೊಮ್ಮೆ ಬಾಳಲಾರದೆ ಹೋಗು ನಾಲ್ಕಿವು
ಹೆದ್ದಾರಿಗಳು ಮೋಕ್ಷಪುರಕ್ಕೆ ನಡೆ ಮನುಜಾ"[೩೯]

ಪುರುಷಾರ್ಥಗಳನ್ನು ಹೇಳುವುದರ ಮೂಲಕ ಮೋಕ್ಷದ ಪಟ್ಟದ ಅರಸನಾಗಲು ಪ್ರಾಪಂಚಿಕ ವಿಚಾರಗಳಾದ ಧರ್ಮ, ಅರ್ಥ, ಕಾಮ, ಸರಿಯಾದ ನೆಲೆಯಲ್ಲಿ ಕಂಡುಕೊಂಡರೆ ಮೋಕ್ಷ ಲಭಿಸುತ್ತದೆ ಎಂಬ ಅಭಿವ್ಯಕ್ತಿ ಈ ಹಾಡಿನಲ್ಲಿ ಮಡುಗಟ್ಟಿದೆ.

ರತ್ನಾಕರನ ಇನ್ನೊಂದು ಹಾಡಿನಲ್ಲಿ ರತ್ನಾಕರನಿಗಿದ್ದ ಇತರ ಧರ್ಮಗಳು-ದೈವಗಳು ಸಹ ಒಂದೇ ಎಂಬ ಭಾವನೆಯಿರುವುದು ಕಂಡುಬರುತ್ತದೆ. ಏಕೆಂದರೆ ಶೈವರ-ವೈಷ್ಣವರ ದೈವಗಳನ್ನು ಸ್ತುತಿಸುವ ಮೂಲಕ ಅನನ್ಯತೆಯ ಭಾವನೆಯನ್ನು ತೋರಿರುವುದು ಕಂಡುಬರುತ್ತದೆ. ಆ ಹಾಡನ್ನು ಈ ಕೆಳಗಿನಂತೆ ನೋಡಬಹುದು.

"ನಾನಾ ವರ್ಣಗಳಿಂದ ನುತಿಸಿಕೊಂಬಾತನು
ನೀನೆ ನೀನೇ ನೇಮಿನಾಥ ನೀನೇ ನೀನೆ||

ಹರಿಹರ ಶಂಭು ಸ್ವಯಂಭು ಶಂಕರ ಸರ್ವ
ಪುರುಷೋತ್ತಮ ಪುಣ್ಯ ಪುರುಷನೆಂಬಾತನು ನೀನೇ ನೀನೆ||

ಕೃಷ್ಣ ಕೃಷ್ಣಾಂಬುಧಿ ವಿಷ್ಣು ಜಗನ್ನಾಥ
ವಿಷ್ಣು ಸದ್ಧರ್ಮ ಚಾರಿಷ್ಣು ಎಂಬಾತನು ನೀನೆ ನೀನೆ||"[೪೦]

ಈ ಹಾಡಿನಲ್ಲಿ ನಾನಾ ಹೆಸರುಗಳಿಂದ ಬೀಜಾಕ್ಷರಗಳಿಂದ ಹೊಗಳಿಸಿಕೊಳ್ಳುವವ ನೇಮಿನಾಥನೇ ನೀನೆ ಅವೆಲ್ಲ ಎಂಬ ಆತ್ಮಧ್ವನಿಯಾಗಿದೆ. ಬ್ರಹ್ಮ, ವಿಷ್ಣು, ಕೃಷ್ಣ, ಶಿವ, ಶಂಕರ, ಜಗನ್ನಾಥ ಇವೆಲ್ಲವು ನೀನೆ ಎನ್ನುವುದರ ಮೂಲಕ ಧರ್ಮಸಹಿಷ್ಣು ಮನೋಭಾವನೆ ಹೊಂದಿದ ವ್ಯಕ್ತಿಯಾಗಿ ಕಂಡುಬರುತ್ತಾನೆ.

ನೇಮಿನಾಥ ಜೈನರಲ್ಲಿ ಬರುವ ೨೨ನೇ ತೀರ್ಥಂಕರ ಈತನನ್ನು ಕುರಿತು ಕನ್ನಡ ಸಾಹಿತ್ಯದಲ್ಲಿ ಹಲವಾರು ಪುರಾಣ, ಕಾವ್ಯಗಳನ್ನು ರಚಿಸಿರುವುದು ಕಾಣಬಹುದಾಗಿದೆ. ಹಾಗೆಯೇ ಜೈನಹಾಡುಗಳಲ್ಲಿ ೨೩೨ ಪದ್ಯಗಳು ಈತನಿಗೆ ಸಂಬಂಧಿಸಿದವುಗಳಾಗಿವೆ. ಜೈನರಲ್ಲಿ ಬಹಳ ಪ್ರಖ್ಯಾತಿಯನ್ನು ಪಡೆದಂತಹ ತೀರ್ಥಂಕರನಾಗಿದ್ದಾನೆ.

“ಕರುಣವಿಲ್ಲದ ಧರ್ಮಕರ್ಮ
ನಿಜವರಿಯದ ಸಂಗ ಭಂಗ್ಯದೇವ ||ಪ||

ದರುಶನವಿಲ್ಲದ ಮಾನವ ದಾನವ
ಪರಿಣಾಮವಿಲ್ಲದ ವ್ರತವು ವ್ಯರ್ಥ
ಕರುಣವಿಲ್ಲದ ಧರ್ಮಕರ್ಮ ಮನದಲ್ಲಿ
ಮರುಕವಿಲ್ಲದ ನಂಟು ಬರಿಯ ಗಂಟು”[೪೧]

ಕರುಣೆಯಿಲ್ಲದ ಧರ್ಮ ಯಾವುದಯ್ಯ ಪ್ರತಿಯೊಂದು ಧರ್ಮದ ಮೂಲ ದಯೆ, ಕರುಣೆ, ಅನುಕಂಪ ಇವುಗಳನ್ನೊಳಗೊಂಡಿದ್ದರೆ ಧರ್ಮವೆನಿಸಿಕೊಳ್ಳುತ್ತದೆ. ಹಾಗೆಯೇ ಈ ಹಾಡಿನಲ್ಲಿ ಮಾನವನ ದಾನ, ವ್ರತ, ಕರುಣೆ ಇವುಗಳಿಲ್ಲದೆ ಹೋದರೆ ಜೀವನ ಬರೀ ವ್ಯರ್ಥ ಎಂಬ ಧ್ವನಿ ವ್ಯಕ್ತವಾಗುತ್ತದೆ. ಅದರಲ್ಲಿಯೂ ಜೈನಧರ್ಮ ಒಂದು ವೈಜ್ಞಾನಿಕ ವಿಚಾರಪೂರ್ಣ ಆತ್ಮವಿಜ್ಞಾನ, ಆತ್ಮನ ಸರ್ವಾಂಗೀಣ ವಿಕಾಸ ಜ್ಞಾನೋನ್ನತಿ ಮಾಡಿಕೊಳ್ಳುವ ಮೋಕ್ಷ ಮಾರ್ಗದ ಧರ್ಮವಾಗಿದೆ. ಪಂಚೇಂದ್ರಿಯಗಳನ್ನು ಕುರಿತು ಹೇಳುವ ಹಾಡು ಬಹಳ ಅರ್ಥಯುಕ್ತವಾಗಿ ಕೂಡಿರುವುದನ್ನು ನೋಡುತ್ತೇವೆ.

“ಜೋಕೆಯನರಿದು ಜಿತೇಂದ್ರಿಯರಾಗಿ

ಹೇಗೆ ಭೋಗಿಸುವಿರಿ ದುರ್ವಿಷಯದ ಮಾತು ಕಿಡಿ

ದಾಗಿದಾಗ ಯದೆ ಧಿಗಿಲೆನುತಿದೆ ಆಕಟಾ ||ಪ||”[೪೨]

ಈ ಹಾಡಿನಲ್ಲಿ ಪಂಚೇಂದ್ರಿಯಗಳನ್ನು ಒಳ್ಳೆಯ ಕಾರ್ಯಕ್ಕೆ ಬಳಸಿಕೊಳ್ಳಬೇಕು ದುರ್ವಿಷಯ ದುರ್ನಡತೆ, ಭೋಗ ಜೀವನಕ್ಕಲ್ಲ ಎಂಬುದನ್ನು ಎಚ್ಚರಿಸುವ ಧ್ವನಿಯಿದೆ. ಜೈನಧರ್ಮದ ಶ್ರೇಷ್ಠತೆಯನ್ನು ಹೊಗಳುವ ಹಾಡಾಗಿದೆ.

“ಪುಣ್ಯಫಲಾ ಆಹಾ ಪುಣ್ಯಫಲಾ
ನರದೇಹ ಪಿಡಿದು ಜಿನಮತದೆ ಜನಿಸುವುದು||

ಸೇವ್ಯಾ ಸೇವವನರಿತಿರಿಬಹುದು ಸು
ಭವ್ಯರ ಗೋಷ್ಠಿಯೊಳಿರಬಹುದು
ದಿವ್ಯ ವ್ರತವಮಾಂತು ನೋಡಲುಬಹುದು ಮುಂ
ದಿವ್ಯಯ ಪದವನು ಪಡೆಯಬಹುದು||

ಸಿರಿವಂತನ ದಾನವ ಮಾಡಲುಬಹುದು ಶಾಸ್ತ್ರ
ಪರರಿಗೆ ಉಪದೇಶಿಸಬಹುದು ಇನಿತು

ದೊರೆಯದಿರ್ದೊಡೆ ಮಾಳ್ಪ ಜನರ ಪೂಜೆಯ ಕಂಡು
ಪರಿಣಾಮ ಶುದ್ಧಿಯ ಪಡೆಯಲುಬಹುದು||
ಭೋಗದಿ ವಿರಕ್ತಿಯದೋಲು ಯೋಗಿಯಾಗಿ ಮ
ಹಾಗುಣ ಪಡೆದು ನಡೆಯಲುಬಹುದು
ಆಗಮ ಸಂಸಿದ್ಧವಾದರೆ ಮಹಾಯೋಗಿ
ಯಾಗಿ ಕರ್ಮಗಳ ಖಂಡಿಸಬಹುದು"||೪೩

ಈ ಹಾಡಿನಲ್ಲಿ ಜಿನಧರ್ಮದ ಶ್ರೇಷ್ಠತೆಯನ್ನು ಹೊಗಳಿ ಹೇಳುತ್ತಾನೆ. ಜಿನಧರ್ಮದಲ್ಲಿ ಜನಿಸುವುದೇ ಪುಣ್ಯಫಲ. ದಾನ, ಧರ್ಮ, ಶಾಸ್ತ್ರ, ಪರಿಣಾಮ ಶುದ್ಧಿ, ಬೋಗದ ವಿರಕ್ತ, ಮಂಗಳಕರವಾದ ರತ್ನತ್ರಯಗಳನ್ನೊಳಗೊಂಡಿರುವ ಈ ಜಿನಧರ್ಮವೇ ಶ್ರೇಷ್ಠವಾದುದು. ಆ ಮೂಲಕ ದೇಹವೊಂದಿ ಜಿನಧರ್ಮ ಸ್ವೀಕರಿಸುವುದೇ ಶ್ರೇಷ್ಠ ಎಂಬ ಆಶಯದ ಗೀತೆಯಾಗಿದೆ. ಜೈನಧರ್ಮದಲ್ಲಿ ರತ್ನತ್ರಯಗಳೆಂದು ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್ ಚಾರಿತ್ರ್ಯ ಈ ಮೂರು ಮನುಷ್ಯನಿಗೆ ಇದ್ದರೆ ಅವನು ದೈವತ್ವಕ್ಕೇರುತ್ತಾನೆ, 'ಜಿನ'ನಾಗುತ್ತಾನೆ ಎಂಬುದು ಜೈನಧರ್ಮದ ಪರಿಕಲ್ಪನೆಯಾಗಿದೆ. ಹಾಗೆಯೇ ತಪಸ್ಸು, ದಾನ, ವ್ರತ, ಉಪವಾಸ, ಶೀಲಗಳಿಂದ ಜಿನನನ್ನು ಒಲಿಸಿಕೊಳ್ಳಬಹುದು ಎಂಬ ಆಶಯವನ್ನು ಹೊಂದಿರುವ ಹಾಡಾಗಿದೆ.

"ಯಾಕೆ ಮೈಮರದೆ ತನು ಕೆಡದಿರದು ವಿಷಯರತಿ
ಸಾಕು ದಾನಾರ್ಚನೆಯು ಶೀಲವುಪವಾಸಗಳೆಂಬೀ
ನಾಲ್ಕರಲಿ ನಡೆ ತಪಸ ಮಾಡು ಮುನ್ನದರಿಂದ ಆ
ನೇಕ ಫಲಗಳು ಪಡೆದರು ಭವ್ಯಾ||

ವರಮುಕ್ತಿಯನು ಕೇಳಬೇಡ ಕಾಗೆಯ ಮಾಂಸವನು
ತೊರೆದು ಫಲದಿ ಯಕ್ಷಿಣಿ ಗಂಡನೆಂದು ಮೈದುನ
ಪೇಳೆ ಪಂಚವ್ರತವನು ಕೈಕೊಂಡು
ಸುರನಾಥನ ವ್ರತದ ಮಹಿಮೆಯೆಂದು||
ಈ ನರ ಜನ್ಮವನು ಬರಿದೆ ನೀಗದಿರು ಅಪರಾಜಿತೇಶ್ವರನ
ಸನ್ನಿಧಿಯ ಸಾರಾ"||೪೪

ಈ ಹಾಡು ಜೈನಧರ್ಮದಲ್ಲಿ ಫಲಗಳು ಲಭಿಸಬೇಕೆಂದರೆ ವ್ರತಗಳನ್ನು ಆಚರಿಸಬೇಕು ಎಂಬ ಧಾರ್ಮಿಕ ನಂಬಿಕೆಯಿದೆ. ಜೈನರಲ್ಲಿ ಒಂದೊಂದು ಕಷ್ಟದ ನಿವಾರಣೆ ಫಲದ ಅಪೇಕ್ಷಣೆ ಪರಿಹಾರದ ಅಕಾಂಕ್ಷೆಯನ್ನು ಹೊಂದಿರುತ್ತವೆ. ಜೈನರಲ್ಲಿ ವ್ರತದ ಬಗ್ಗೆ ಬಹಳ ವಿಶೇಷ ಮಹತ್ವವಿದೆ. ಒಟ್ಟಿನಲ್ಲಿ ರತ್ನಾಕರನ ಬಹುತೇಕ ಹಾಡುಗಳಲ್ಲಿ ಜೈನಧರ್ಮದ ದರ್ಶನವನ್ನು ಮೂಡಿಸುವುದರ ಜೊತೆಗೆ ಜೈನ ಧಾರ್ಮಿಕ ವಿಚಾರಗಳು ಹಾಡುಗಳಲ್ಲಿ ಮಡುಗಟ್ಟಿರುವುದನ್ನು ನೋಡುತ್ತೇವೆ. ಅನೇಕ ಜಿನ ಬಸದಿಗಳು ತೀರ್ಥಂಕರರು, ಚಕ್ರವರ್ತಿಗಳು ವ್ರತಗಳು, ಧ್ಯಾನ, ತಪಸ್ಸು, ರತ್ನತ್ರಯಗಳು, ಪಂಚಾಣುವ್ರತಗಳು ಪಂಚಪರಮೇಗಳು ಮುಂತಾದ ಅನೇಕ ವಿಷಯಗಳನ್ನು ಹಾಡಿನಲ್ಲಿ ಗರ್ಭೀಕರಿಸಿಕೊಂಡಿವೆ.

"ಕರುಣದೋರೋ ಕಡಲಾದಿ ಶಿವನೆ ನಿಜ
ಶರಣ ರಕ್ಷಕ ಮೂಲೋಕ ಬಾಂಧವನೆ ||

ಸಾಯದ ಸವಿದು ಮಾಯಾದ ವೇಷ ಹೀಗೆ
ಕಾಯದ ಹಿಸುತಲಿದೇಕೋ ಮೋಹಪಾಕಾಯೇನು
ದಾಯವಿದನ್ನು ಜಗದೀಶಾ ಎನ್ನ
ಕಾಯ ಸಮುದ್ರಾಧಿ ಪರಮೇಶ"[೪೫]

ಈ ಹಾಡಿನಲ್ಲಿ ಶಿವ, ಶರಣ, ಪರಮೇಶ, ಜಗದೀಶ ಇವು ವೀರಶೈವ ಶರಣರ ವಚನಗಳಲ್ಲಿ ಬಳಕೆಯಾಗುವಂತಹ ಪ್ರಿಯವಾದ ನಾಮಗಳು ಇಲ್ಲಿ ರತ್ನಾಕರವರ್ಣಿಗೆ ವೀರಶೈವರ ಆಚಾರ-ವಿಚಾರ, ತತ್ವಗಳು ಪ್ರಿಯವಾಗಿರಬೇಕು. ಆದ್ದರಿಂದಲೇ ಈತನ ಕೆಲವು ಹಾಡುಗಳಲ್ಲಿ ವೀರಶೈವ ಧರ್ಮ ಪರಿಕಲ್ಪನೆಗಳು ಬರುತ್ತವೆ. ಅವು ಕೈವಲ್ಯ, ಪಂಚಾಚಾರ, ಶರಣ ಎಂಬ ಪದಗಳು ಕಾಣಿಸಿಕೊಳ್ಳುತ್ತವೆ. ಹಾಡುಗಳಲ್ಲಿ ಮೂರು ಲೋಕಗಳಲ್ಲಿ ಒಡೆಯನಾದವನೇ ಹೆಣ್ಣು, ಹೊನ್ನು, ಮಣ್ಣು ಎಂಬ ಮಾಯೆಗಳಿಗೆ ಒಳಗಾಗಿದ್ದೇವೆ. ಅವರ ಕಡೆಗಣ್ಣ ನೋಟಕ್ಕೆ ಗುರಿಯಾಗಿದ್ದೇವೆ. ಆದರಿಂದ ಪಾರಾಗಲು ನಿನ್ನ ಕರುಣೆ ಬೇಕು. ಅದಕ್ಕಾಗಿ ಕರುಣೆ ತೋರಿ ಕಾಪಾಡು ಎಂದು ಹಪಹಪಿಸುತ್ತಿದ್ದಾನೆ ಎಂಬ ಧ್ವನಿ ವ್ಯಕ್ತವಾಗಿದೆ.

ರತ್ನಾಕರನ ಇನ್ನೊಂದು ಹಾಡಿನಲ್ಲಿ ಜೈನಧರ್ಮದ ಶ್ರೇಷ್ಠತೆಯ ಜೊತೆಗೆ ಬಂದು ಹೋದಂತಹ ಪುಣ್ಯಪುರುಷರ ಹೆಸರುಗಳನ್ನು ಹೇಳುವುದರ ಮೂಲಕ ಜೈನಧರ್ಮದ ಸಿದ್ಧಾಂತ ಹಾಗೂ ಧಾರ್ಮಿಕ ವಿಚಾರಗಳನ್ನು ಕುರಿತು ಹೇಳುತ್ತದೆ.

"ಧರ್ಮವೆ ಬಲ್ಲಿತಲ್ಲಾ ಬಹು
ಕರ್ಮವ ಕೆಡಿಸಿ ಮೋಕ್ಷ ಮನೆಯೊಳಿರಿಸುವ ಜಿನ
ಧರ್ಮವೇ ಬಲ್ಲಿತಲ್ಲಾ||

ಸಿದ್ಧಾಂತಿತಾನಹ ಮಾಘಣಂದೀಶನು
ದೊದ್ದೆಗಳಂತೆ ಮೋಹಕೆ ಸಿಲುಕಿ
ಬಿದ್ದನ ಮೈ ಹೊಯಿದೆಬ್ಬಿಸಿ ಮೊದಲಂತೆ
ಸಿದ್ಧಾಂತಿಕರೆಂದನಿಸಿತಾ ಹೊ||

ದೇವ ಸುಮಂತಭದ್ರಾರ್ಯನುದರದೊಳು
ತೀವಿದಸನ ಲಯವಾಗುತಿರೆ
ಭಾವಿಸಿ ನೋಡಿ ಕಾಂಚಿಪುರದೊಳಾಗದಿ
ರಾವರ ಸರಿಯಿಲ್ಲೆಂತೆನಿಸಿತಾ ಹೊ"||[೪೬]

ಜಿನಧರ್ಮದ ಶ್ರೇಷ್ಠತೆ, ಜೈನಮುನಿಗಳಾದ ಮಾರ್ಘನಂದೀಶ, ಸುಮಂತ ಭದ್ರಾರ್ಯನ ಸ್ಮರಿಸುವಿಕೆ, ಆ ಮೂಲಕ ಪ್ರಾಪಂಚಿಕ ಸಂಗತಿಗಳಿಂದ ದೂರ ಉಳಿದು ಸತ್ಯಾಚಾರ ಧರ್ಮವೇ ಸದ್ಧರ್ಮವೆಂದು ಭಾವಿಸಿರುವುದು ಜೈನಧರ್ಮ ಒಪ್ಪಿಕೊಳ್ಳುವ, ಅಪ್ಪಿಕೊಳ್ಳುವ ಆಶಯವನ್ನು ಈ ಹಾಡು ವ್ಯಕ್ತಪಡಿಸುತ್ತದೆ.

ರತ್ನಾಕರವರ್ಣಿಯ ಹಾಡುಗಳಲ್ಲಿ ಜೈನಧರ್ಮದ ಶ್ರೇಷ್ಠತೆ, ಜೈನಧರ್ಮದ ದರ್ಶನವನ್ನು ಮನಸ್ಸಿಗೆ ಹಿತವಾಗುವಂತೆ ಹೊಗಳಿ ಹಾಡಿದ್ದಾನೆ. ಕೊನೆಗೆ ಜಿನಧರ್ಮಕ್ಕೆ ಬಂದು ಮೋಕ್ಷವನ್ನು ಪಡೆಯಿರಿ ಎಂಬ ಭಾವಗಳು ಮಡುಗಟ್ಟಿ ನಿಂತಿವೆ. ಅಂತಹ ಹಾಡನ್ನು ಇಲ್ಲಿ ನೋಡಬಹುದು.

"ಮಿಂದು ಬಾ ಮಿಂದು ಬಾ ಮಿಂದು ಬಾ ಕಂದಾ
ಅಂದದ ಶ್ರೀ ಜಿನಮತವೆನಿಪ ಗಂಗೆಯಲ್ಲಿ||"[೪೭]

ನೀನು ಮಾಡಿದಂತಹ ಎಲ್ಲ ಪಾಪಕರ್ಮಗಳನ್ನು ನಾಶಗೊಳಿಸಲು ಜಿನಮತವೆಂಬ ಗಂಗಾನದಿಯಲ್ಲಿ ಸ್ನಾನ ಮಾಡಿದರೆ, ಅಲ್ಲಿಗೆ ನಿನ್ನ ಪಾಪಕರ್ಮಗಳು ನಾಶವಾಗುತ್ತವೆ. ಆಗ ಒಳ್ಳೆಯ ಷೋಡಶ ಭಾವನೆಗಳಿಂದ ಕಂಗೊಳಿಸುವ ನಿರ್ವಾಣ ಸಾಮ್ರಾಜ್ಯ ಸೇರಲು ಜಿನಮತಕ್ಕೆ ಬಾ ಎಂದು ಆಹ್ವಾನಿಸುವ ಧ್ವನಿಯಾಗಿದೆ. ಇಂತಹ ಹಲವಾರು ರತ್ನಾಕರನ ಹಾಡುಗಳಲ್ಲಿ ಜೈನಧರ್ಮದ ಅಂತರಂಗದ ತತ್ವಸಿದ್ಧಾಂತಗಳು ಧಾರ್ಮಿಕ ಆಚಾರ-ವಿಚಾರಗಳು ಜೊತೆಗೆ ಜಿನಧರ್ಮಕ್ಕೆ ಬಂದು ಸೇರಿ ಮೋಕ್ಷ ಪಡೆಯಿರಿ ಎನ್ನುವ ಹಂಬಲದ ಮೂಲಕ ಜಿನಧರ್ಮದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತವೆ.

**೪.೧.೩. ಲೋಕನೀತಿ ತತ್ವ**

ಈ ಹಾಡುಗಳಲ್ಲಿ ಸಾಮಾಜಿಕವಾದ, ತೀವ್ರವಾದ ಸಂವೇದನೆ ಇಲ್ಲವಾದರೂ ಮಾನವ ಜನ್ಮದ ಹಸನಾದ ಜೀವನಕ್ಕೆ ಸ್ಫೂರ್ತಿಯಾಗಿದೆ. ಇಲ್ಲಿ ಲೋಕನೀತಿ ತತ್ವಗಳನ್ನು ಒಳಗೊಂಡಂತೆ, ಜೀವನದ ಕ್ಷಣಿಕತೆ, ಸಂಸಾರದ ನಶ್ವರತೆ, ಇದಕ್ಕೆ ಪೂರಕವಾಗಿ ಯೋಗ, ಜಪ-ತಪ, ದಾನ-ಧ್ಯಾನದ ಅಗತ್ಯತೆಯನ್ನು ಕುರಿತು ಹೇಳುತ್ತದೆ. ಇದರ ಮೂಲಕ ಜಿನಧರ್ಮದಲ್ಲಿ ಆಗಿ-ಹೋದಂತಹ ಸಂದರ್ಭ ಹಾಗೂ ಪುಣ್ಯ ಪುರುಷರು ಜಿನಮುನಿಗಳು ವ್ರತಗಳನ್ನು ಪರಿಚಯಿಸುತ್ತ ಜೈನಧರ್ಮದ ಸಾಂಸ್ಕೃತಿಕ ಜಗತ್ತನ್ನು ಪುನರ್ ನೆನಪಿಸುತ್ತವೆ. ಅಂತಹ ಹಾಡುಗಳನ್ನು ನಾವು ವಿವೇಚಿಸುವುದು ಸೂಕ್ತವೆನಿಸುತ್ತದೆ. ಈ ಹಾಡಿನಲ್ಲಿ ಸಂಸಾರದ ನಶ್ವರತೆ ಜೀವನದ ದುಃಖಗಳನ್ನು ಹೇಳುವಂತಹುದು.

"ಬದುಕು ತುಂಬಿದ ದುಃಖ
ಅನುಗಾಲವೂ ದುಃಖ ಪಾಪಿಗೆ ನನ್ನ
ಮನದೊಳು ನಿಶ್ಚಯವರಿಯದ ಕೋಪಿಗೆ ||ಪ||

ಹುಟ್ಟಿ ಬೆಳೆಯ ದುಃಖ ಕೆಟ್ಟು ಹೋದರು ದುಃಖ
ಹೊಟ್ಟೆ ಬಟ್ಟೆಗೆ ದೊರೆಯದ ದುಃಖವು
ಅಷ್ಟೈಶ್ವರ್ಯ ಬಂದರೂ ದುಃಖ ಸಂಪತ್ತು
ಎಷ್ಟು ಬಂದರೂ ಅಷ್ಟು ದುಃಖವೇ"||[೪೮]

ಮನುಷ್ಯ ಜನ್ಮವೆಂಬುದು ಯಾವಾಗಲೂ ಜಂಜಾಟಗಳಿಂದ ಕೂಡಿರುವುದು. ಅದ್ದರಿಂದ ಮನದಲ್ಲಿ ಒಂದು ಗುರಿಯನ್ನು ಇಟ್ಟುಕೊಳ್ಳಬೇಕು. ಅದನ್ನರಿಯದ ಮನುಷ್ಯ ಅನುಗಾಲವೂ ದುಃಖದಿಂದ ನರಳುತ್ತಾನೆ. ಹುಟ್ಟಿನಿಂದ ಹಿಡಿದು ಬಾಲ್ಯ, ಮದುವೆ, ಸಂಸಾರ, ಹೊಟ್ಟೆ, ಆಹಾರ, ಐಶ್ವರ್ಯ ಹಾಗೇ ನಾನಾ ತರಹದ ಚಿಂತೆಗಳಿಂದ ಮನುಷ್ಯ ದುಃಖದಿಂದ ನರಳುತ್ತಾನೆ. ಆದ್ದರಿಂದ ಜೀವನದ ಕೊನೆಯ ಘಟ್ಟ ಯಾವುದೆಂಬ ಅಂಶವನ್ನು ಇಟ್ಟುಕೊಂಡರೆ ದುಃಖವೂ ಬರುವುದಿಲ್ಲ ಎಂಬ ಧ್ವನಿಯಾಗಿದೆ.

"ಸಾಕಿನ್ನು ಹಲವು ಹಂಬಲಿನಾಸೆ ದೇವಾ ನೀ
ಸಾಕಿದಂದದೊಸೋಳೊಪ್ಪೆಯಪರಾಜಿತೇಶಾ||
ಮೂಜಗದೊಳಗುಳ್ಳ ಸಕಲ ಸಂಪದ ನಿಮ್ಮ
ಪೂಜಿಸಿದವರಿಗೆ ತೃಣಮಾತ್ರವಯ್ಯ
ಮೂಜಗಲೋಕದಿಂದ ನಮಗಿನ್ನಮೋನಲೋ ಅಪ
ರಾಜಿತೇಶ್ವರನೆಂಬ ಭಕ್ತಿಯ ಮುಕ್ತಿ"[೪೯]

ಮನುಷ್ಯನ ದುರಾಸೆಗಳಿಂದ ಆಗುವ ಆಸೆ, ನಿರಾಸೆ, ದುಃಖ ಇವೆಲ್ಲವೂ ಅಪಾಯಕಾರಿಗಳೇ ಆದ್ದರಿಂದ ಇವೆಲ್ಲವೂ ಕ್ಷಣಿಕ ಸುಖವನ್ನು ನೀಡುವಂತಹ ಬಾಹ್ಯ ವಸ್ತುಗಳು. ಜೀವನ ಮುಕ್ತಿಗೆ ಬೇಕಾಗಿರುವುದು ಆನಂದ, ಆತ್ಮಾನಂದವಾಗಿದೆ. ನಾವು ಬೆಳೆಯಬೇಕಾಗಿರುವುದು ಇಂತಹ ಆಸೆಯ ಕಡೆಗೆ ಎಂಬುದನ್ನು ಎಚ್ಚರಿಸುವ ಹಾಡಾಗಿದೆ.

"ಇದ ನೀವು ಕಣ್ಣಾರೆ ಕಾಂಬುದಿಲ್ಲವೆ ಕ
ರ್ಮದಾಟವ ಸಂಸಾರದ ಮಾಟ ದುಃಖವ ಕಾಲಕೂಟವ||

ಅಳುದ್ದವಾದ ರೂಪು ಅಳೆದು ಹೋಹ ನಾಳೆ ಗೇಣುದ್ದವಾಗಿ
ಬಾಳು ತಲದೇಕೊ ಮತ್ತೊಬ್ಬ ತಾಯೊಡಲೆಂಬ
ಜಾಳುಸೆರೆಯಲ್ಲಿ ಮಲಮೂತ್ರದ ಕರೆಯಲ್ಲಿ ಮಾಸಿನ
ಮುಸುಕು ಮರೆಯಲ್ಲಿ||

ಪ್ರಾಯದಿ ಮೋಹಿಸಿದ ತನ್ನಯ ಕಾಯವೆ ಮುಪ್ಪಾಗಿ
ಹೇಯದೋರುತಲ್ಲದೆ ಮುನ್ನಿನ ಸೊಬಗೆಲ್ಲ
ಮಾಯಮಾಗುತ್ತದೆ ತಲೆ ಕೈ ನಡುಗಿ ತೂಗುತ್ತಿದೆ"||[೫೦]

ಈ ಹಾಡಿನಲ್ಲಿ ವಿಷಾದದ ಧ್ವನಿಯನ್ನು ವ್ಯಕ್ತಪಡಿಸುತ್ತಾನೆ. ಕರ್ಮದಿಂದೊಡಗೂಡಿದ ಸಂಸಾರವೆಂಬ ಆಕರ್ಷಕ ಸಂಗತಿಯಿಂದ ದುಃಖವೆಂಬ ಕಾಲವನ್ನು ಸೇರಲಾಗಿ ಬದುಕು ಸಹನೀಯವಾಗದಂತೆ ಮಾಡಿದ್ದನ್ನು ಕಾಣಲಿಲ್ಲವೇ ಎಂದು ವಿಷಾದನೀಯ ನುಡಿಯನ್ನು ವ್ಯಕ್ತಪಡಿಸಿದ್ದಾನೆ. ಕೊನೆಗೆ ಚಿದಂಬರ ಪುರುಷನಲ್ಲಿ ಮುಕ್ತಿಯನ್ನು ಪಡೆ ಎಂಬ ಆಶಯವನ್ನು ನೀಡುತ್ತಾನೆ.

ದೇಹದ ಅನಿತ್ಯತೆ ಹಾಗೂ ಜೀವನದಲ್ಲಿ ನಿಜವಾದ ಸುಖ, ಸಂತೋಷ ಯಾವುದೆಂದು ಅರಿಯದೆ ಇರುವುದನ್ನು ಈ ಹಾಡಿನಲ್ಲಿ ರೂಪಕಗಳಿಂದ ತುಂಬ ಸೊಗಸಾಗಿ ಕಟ್ಟಿಕೊಟ್ಟಿದ್ದಾನೆ.

"ಸುಖವ ಬಯಸಿ ಸುಖದೊಳಗೆ ಕಾಣದೇ ಹೋದೆ
ಮುಖದಿಂದ ನೋಡುವರೇ ಮನವೇ||

ನೆರೆ ಕಬ್ಬಿನೊಳಿರ್ದ ರಸವ ಕಾಣದೆ
ಕುರಿ ಹೊರಗೆ ಸೋಗೆಯ ತಿಂಬಂತೆ
ಉರಿ ಮೈಯೊಳಿಹ ಪರಮಾತ್ಮಾಮೃತವ ಬಿಟ್ಟು

ಬರಿಯ ಮೈಯ ಸುಖಕ್ಕೆ ಸೋಲುವರೇ||

ರಸದಾಳೆ ಕಬ್ಬಿನ ಸೋಗೆಯ ಬಿಟ್ಟೊಳಗಿರ್ದ
ರಸವ ಕೊಂಬಾಂನೆಯಂತೆ ವಿಷಯ
ದಾಸೆಯ ಬಿಟ್ಟು ನೆಚ್ಚಲು ಬ್ರಹ್ಮಾನಂದ
ರಸವ ಸೇವಿಸಲಿಲ್ಲವೇ"||[೫೧]

ಜೀವನದಲ್ಲಿ ಸುಖ ನೆಮ್ಮದಿಯನ್ನರಿಯದೆ ದೇಹಸುಖವೇ ಶ್ರೇಷ್ಠವೆಂಬ ಭ್ರಮೆಯಲ್ಲಿರುವವರಿಗೆ "ನೆರೆ ಕಬ್ಬಿನೊಳಿರ್ದ ರಸವ ಕಾಣದೆ ಕುರಿ ಹೊರಗೆ ಸಿಪ್ಪೆಯ ತಿಂದಂತೆ" ಎಂಬುದನ್ನು ರೂಪಕದ ಮೂಲಕ ಕಟ್ಟಿಕೊಟ್ಟಿರುವುದು ವಿಶೇಷವೆನಿಸುತ್ತದೆ. ಆದರಿಂದ ಒಳಗಿನ ಆತ್ಮಾನಂದವನ್ನು ಪಡೆದರೆ ಶಾಶ್ವತ ಸುಖ ನೆಮ್ಮದಿ ಲಭಿಸುತ್ತದೆ ಎಂಬುದರ ಆಶಯವಾಗಿದೆ.

"ಯೋಗವೆ ಭೋಗವಯ್ಯ ತಿಳಿದರೆ
ಯೋಗವೆ ಭೋಗವಯ್ಯ ತಿಳಿಯದಿರೆ ತನ್ನ
ಯೋಗವೆ ರೋಗವಯ್ಯ ತಿಳಿದರೆ"||[೫೨]

ಈ ಹಾಡು ಯೋಗವೆ ಭೋಗವೆಂದು ತಿಳಿಯದಿದ್ದರೆ ಭವರೋಗವೇ ಮಾರಣಾಂತಿಕವಾಗುತ್ತದೆ. ಅಲಸ್ಯ, ಜಡಸ್ಥಿತಿ, ನಿದ್ರೆ ಮುಂತಾದವು ದೇಹವನ್ನು ಭಾರವಾಗಿಸುವುದರಿಂದ ಮುಕ್ತಿ ಪಡೆಯಲು ಯೋಗವೆಂಬ ಸಾಧನಮಾರ್ಗದ ಅವಶ್ಯಕತೆಯನ್ನು ಹಾಡಿನಲ್ಲಿ ಹೇಳಲಾಗಿದೆ. ಇಲ್ಲಿ ರತ್ನಾಕರ ಯೋಗಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದ್ದಾನೆ. ಯೋಗದ ಮಹತ್ವವನ್ನು ಕುರಿತು ಹಲವಾರು ಹಾಡುಗಳಲ್ಲಿ ಕಂಡುಬರುತ್ತದೆ. ಸಂಸಾರದ ನಶ್ವರತೆಯನ್ನು ಕುರಿತಂತೆ

"ಸಾಕು ಸಾಕು ಸವಿಗೆಟ್ಟಿತು ನನಗಿನ್ನು
ಸಾಕಾಯಿತೇ ಸಂಸಾರದ ಸುಖವು||

ಸಂಜೀವನನವ ಕಂಡಮೇಲೆ
ಗಂಜಿಗಾಸೆ ಮಾಡುವರೇನಣ್ಣ?
ರಂಜಿಸುವ ಪರಮಾತ್ಮನ ಕಂಡಮೇಲೀ
ಗಂಜಿನ ಮೈಸುಖದಾಸೆಯಾಕಣ್ಣ"||[೫೩]

ಈ ಹಾಡಿನಲ್ಲಿ ಬಹಳ ಮುಖ್ಯವಾಗಿ ಸಂಸಾರದ ಸಂಕೋಲೆಯ ಬಿಡುಗಡೆಗೆ ಹಾಗೂ ಸಂಸಾರದ ನಶ್ವರತೆಯನ್ನು ಹೇಳುವ ಮೂಲಕ ನಿಜವಾದ ಸುಖ ಯಾವುದು ಎಂಬುದನ್ನು ಸೂಚಿಸುತ್ತದೆ. ಅದು ಸಂಜೀವನತನ ಕಂಡ ಮೇಲೆ ಗಂಜಿಗಾಸೆ ಮಾಡುವರೇನಲ್ಲ ಎಂಬ ಸಾಲು ನಿಜವಾದ ಬದುಕು ಯಾವುದು ಎಂದು ತಿಳಿದ ಮೇಲೆಯೂ ಇಹ ಜೀವನದ ಗಂಜಿಗಾಸೆ ಮಾಡುವುದೇನು ಎಂಬ ವಿಷಾದದ ಧ್ವನಿ ವ್ಯಕ್ತವಾಗಿದೆ.

"ದಾನಿಯ ಸಂಪತ್ತು ಜಗದ ಪೀಡೆಗೆ ಮಿತ್ತು ಸು
ಜ್ಞಾನಿಗೆ ನೀಡಿದಾ ತುತ್ತು ಸ್ವರ್ಗ ಸುಖದ ಬಿತ್ತು||

ಬಡವನ ದಾನ ಶಶಿ ಮರ್ತ್ಯಕನ ಸಮಾಧಾನ

ಕಡು ಶುಚಿಯುಳ್ಳನ ವ್ರತದ ವಿಧಾನ

ದೃಢಭಕ್ತಿ ಯುಕ್ತಿ ದೀಕ್ಷೆವಡೆದನ ಸುಜ್ಞಾನ

ನುಡಿ ಜಾಣನ ಮೌನ ಮುಕ್ತಿಗೆ ಸೋಪಾನ"||[೫೪]

ದಾನ ಎಂಬುದರ ಮಹತ್ವವನ್ನು ಹೇಳಲಾಗಿದೆ. ಜಗತ್ತಿನ ದಾನ ಶ್ರೇಷ್ಠ ಗುಣವೇ ಆದರೂ ಕೂಡ ಧ್ಯಾನದ ಘನತೆ ಪ್ರಕಟವಾಗುವುದು ಸುಜ್ಞಾನಿಗೆ ನೀಡಿದರೆ ಮಾತ್ರ. ಅದು ಸ್ವರ್ಗ ಸುಖದ ಬೀಜವಾಗಬೇಕು. ಪರಿಶುದ್ಧ ಮನದವನ ವ್ರತದ ವಿಧಾನವೇ ಜೈನರ ಪ್ರಕಾರ ಶ್ರೇಷ್ಠ ದಾನ ಎಂಬುದನ್ನು ನಿರೂಪಿಸುತ್ತದೆ. ದೊರೆಯಾಗಿದ್ದರೂ ವಿಷಯ ವಿರಕ್ತಿ ಶ್ರೇಷ್ಠವೆನ್ನುತ್ತಾನೆ ರತ್ನಾಕರ. ಮುತ್ತಿಗೆ ಪರಮಾತ್ಮನ ಧ್ಯಾನ ಮತ್ತು ವ್ಯಕ್ತಿಯ ನೇಮ ಅತಿ ಮುಖ್ಯವೆಂದು ಹೇಳುತ್ತಾನೆ.

"ಸುಖವೆಂಬೆ ನನ್ನ ಸೊಬಗೆಂಬೆ

ಅಖಿಳ ಸಂಪದವೆಂಬೆ ಗುರುವೇ ನಾ ನಿನ್ನ||

ಮುಕ್ತಿಯೆಂಬೆ ಮುಕ್ತಿಯ ದಾರಿಯೆಂಬೆ

ಮುಕ್ತಿಯ ಸುಖವೆಂಬೆ ಶಕ್ತಿ

ಜ್ಞಾನವೆಂಬೆ ಜ್ಞಾನ ದರುಶನವೆಂಬೆ

ಜ್ಞಾನದರುಶನ ಚಾರಿತ್ರ ನೀನೆಂಬೆ

ಜ್ಞಾನದರುಶನದ ಚಾರಿತ್ರ ತಪಂಗಳು ನೀನೆಂಬೆ

ನೀನೆ ತಾನೆಂಬೆ ಗುರುವೇ"||[೫೫]

ಜೈನ ರತ್ನತ್ರಯಗಳಾದ ಸಮ್ಯಕ್‌ಜ್ಞಾನ, ಸಮ್ಯಕ್‌ದರ್ಶನ, ಸಮ್ಯಕ್‌ಚಾರಿತ್ರ್ಯಗಳ ಪಾಲನೆಯೇ ಸುಖ, ಸೊಬಗು ಆಗಿದ್ದರೆ ಜೀವನ ನೆಮ್ಮದಿಯಾಗಿರುತ್ತದೆ ಎಂಬ ಸಂದೇಶವನ್ನು ನೀಡುತ್ತಾನೆ.

"ದೇಹ ಕೆಟ್ಟರೆ ನಾ ಕೆಟ್ಟೆನೆಂದೆಂಬುವ ಮೂಢ

ದೇಹ ಕೆಟ್ಟಡೆ ನಾ ಕೆಡೆನೆಂಬವ ಪ್ರೌಢ||

ತಿತ್ತಿಯೊಳಗೆ ಗಾಳಿಯ ಕೂಡಿ ಬಾಧಿಸುವಂತೆ ಮೈಯ

ಸುತ್ತಿನೊಳೆದಾತ್ಮನ ನೋಯಿಸುವರೋರಂತೆ

ತಿತ್ತಿ ಹರಿದ ಮೇಲೆ ಗಾಳಿ ಕೈವಶವಾಗುವಂತೆ ಮೈಯ

ಪಟುಗೆಯಿಂದಗಲಿದ ಮೇಲೆ ಮಣ್ಣ ಚಿಂತೆ"||[೫೬]

ಹೊರಗಿನ ನಿಸರ್ಗ ವಿಕೋಪಗಳಿಗೆ ತುತ್ತಾಗುವುದು ದೇಹವೇ ಹೊರತು ಆತ್ಮವಲ್ಲ. ಆದ್ದರಿಂದ ದೇಹದ ಹಂಗು ತೊರೆದು ಜಿನನಲ್ಲಿ ಲೀನರಾಗಿ ಮುಕ್ತಿಯನ್ನು ಪಡೆಯಿರಿ ಎಂಬ ಆಶಯವನ್ನು ಹೊಂದಿದೆ.

"ಸಾವಾರಿಗೆ ಹುಟ್ಟೂರಿಗೆ ಸಂಸಾರ ಬದುಕ್ಯಾರಿಗೆ

ಜೀವಗಿಲ್ಲವಿವು ಮೈಯ ಸಂಬಂಧದಿಂದಲ್ಲದಣ್ಣ||

ದೇಹವೆಂಬ ಚೋಹ ತೊಟ್ಟಿದರಿದು ಬದುಕೆಂಬದು
ದೇಹವ ಬಿಟ್ಟರೆ ಸಾವೆಂಬದ ಮತ್ತೊಂದು
ದೇಹವ ಬಿಟ್ಟರೆ ಹುಟ್ಟೆಂಬರಾತ್ಮನೊಂದು ಮೈಯ
ಚೋಹವ ಹೋಗದೆ ನಿಂದರದು ಮುಕ್ತಿಯೆಂಬರಣ್ಣ||

ಮರದಗ್ನಿ ಹೊಸದರೆ ತಾಗಿರ್ದ ಹೆ
ಮ್ಮರನ ಸುಟ್ಟಿರುವಂತಾತ್ಮನ ಧ್ಯಾನಿಸಿ ತನ್ನಿಂದ
ಶರೀರ ಮುಲಾರನು ಸುಟ್ಟು ಮುಕ್ತವಹುದು ಚಿದಂರ
ಒರ ಪುರುಷನ ನೆಚ್ಚಿ ನಂಬಿ ನಿಚ್ಚ ಧ್ಯಾನಿಸಿರಣ್ಣ"||[೫೭]

ಮಾನವ ಜನ್ಮ ಎಂಬುದು ಹುಟ್ಟು-ಸಾವು ಆಕಸ್ಮಿಕಗಳಿಂದ ಆಗಿರುವಂತಹವು. ಅದರಿಂದ ಮಾನವ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕಾದ ಅನಿವಾರ್ಯತೆಯನ್ನು ಹೇಳುತ್ತದೆ. ಮರಕ್ಕೆ ಅಗ್ನಿ ಸ್ಪರ್ಶಿಸಿದರೆ ಮರ ಭಸ್ಮವಾಗುವಂತೆ ದೇಹ ನಾಶವಾಗುತ್ತದೆ. ಆದ್ದರಿಂದ ದೇಹಕ್ಕೆ ಹುಟ್ಟು-ಸಾವು ಸಂಭವಿಸುತ್ತವೆಯೇ ಹೊರತು ಆತ್ಮಕ್ಕಲ್ಲ ಎಂಬ ಧ್ವನಿಯಾಗಿದೆ.

"ಏನ ಕಂಡ ಮೆಚ್ಚಿದ ನೀನೀ ಸಂಸಾರವ
ಅನುಭಾವ ನಿನಗಿದು ತರವೇ ನಿಜಾತ್ಮಾ"||[೫೮]

ಈ ಹಾಡು ಸಂಸಾರದ ಸಾರರಹಿತ ಸ್ಥಿತಿ ಕುರಿತದ್ದು. 'ಪಂಪ' ತನ್ನ 'ಆದಿಪುರಾಣ'ದಲ್ಲಿ "ಸಂಸೃತಿಯ ನೀನೆಂದು ನಂಬುವರ್ ಜಡರ್" ಎನ್ನುವ ಮಾತಿಗೆ ಪೂರಕವಾಗಿದೆ. ಹಾಗೆಯೇ ಬಸವಣ್ಣನವರ "ವಿಷಯವೆಂಬ ಹೆಸರನ್ನು ತನ್ನ ಮುಂದೆ ತಂದು ಪಸರದಿರಯ್ಯ ಹಸುವೇನ ಬಲ್ಲುದು ಹಸುರೆಂದೆಳಸುವುದು" ಈ ವಚನವೂ ಇದೇ ಅರ್ಥ ಪರಂಪರೆ ಸೂಚಿಸುತ್ತದೆ. ಮನುಷ್ಯ 'ಅಹಂ' ಎಂಬುದನ್ನು ತೊರೆಯಬೇಕು ಎಂಬ ಆಶಯವನ್ನು ಸುಂದರವಾಗಿ ಚಿತ್ರಿಸಿದ್ದಾನೆ.

"ನೀನೆ ನೀನೆ ನೀನೆ ಚಿನ್ಮಯ ರೂಪ
ನಾನಾ ಸಂಕಲ್ಪವೆನ್ನ ಮೆಚ್ಚೆನೋ ಭಯ ಲೋಪ||

ಶಶಿರವಿಗಧಿಕ ಕೋಟಿ ಕಾಂತಿ ನಿನ
ಗೆಸೆವ ಚೆಲ್ವಿಕೆಯ ಸುಪಂತಿ
ಹೆಸರುಗೊಂಡರ ಕರ್ಮಶಾಂತಿ ಪೂ
ಜಿಸುವಗಿನ್ನೆತ್ತಳ ಭ್ರಾಂತಿ||

ಕ್ಷೇಮಕ್ಕೆ ನೀ ಜನ್ಮ ಭೂಮಿ ನಿನ್ನ
ಕಾಮಿಸಿದವರಿಗೆ ಕಾಮಿ
ಶ್ರೀ ಮಂದರ ಜಿನಸ್ವಾಮಿಯೆಂಬ
ನಾಮದಿ ನಾ ಪರಿಣಾಮಿ"[೫೯]

ಇಲ್ಲಿ ಮನುಷ್ಯನ ಅಹಂಕಾರವೆಂಬ ಪೊರೆ ಕಳಚಿದರೆ ಎಲ್ಲವೂ 'ನಾನು' ಎಂಬುದು ಹೋಗಿ 'ನೀನೆ' ಎಂಬ ಧನ್ಯತಾಭಾವ ಪ್ರಕಟವಾಗುತ್ತದೆ. ಸೂತ್ರಧಾರತನ ನಿನ್ನದಾದ್ದರಿಂದ ನಮ್ಮಿಂದೇನು ಸಾಧ್ಯವಿಲ್ಲ ಎಂಬುದನ್ನು ಅರಿಯಬೇಕಾದರೆ ಮನುಷ್ಯ ಇಂತಹ ಹಾಡುಗಳ ಮೂಲಕ ಮನುಷ್ಯನಲ್ಲಿರುವ ಗುಣಗಳು ನಿರ್ಮೂಲನೆಯಾಗದ ಹೊರತು ಬದುಕಿನ ನೆಮ್ಮದಿ ಸಿಗಲಾರದು ಎಂಬುದನ್ನು ಪ್ರತಿಬಿಂಬಿಸುತ್ತದೆ.

"ಮನದಂತೆ ಮಂಗಲ ನೆನೆದಂತೆ ಕಾರ್ಯವೆಂದು
ಮನುಜರಾಡುವ ಗಾದೆ ಭವ್ಯಗಾತ್ಮ ಬೋಧೆ||

ಕೋಪಗರ್ವ ಲೋಭ ಮಾಯಾ ಮೋಹ ಹೊದ್ದಿದಾ ಮನ
ಪಾಪವನೆ ಪಡೆವುದಾ ಮನವೆ ತಾ ತಿಳಿದು
ಸ್ತ್ರೀ ಪುರಾಣ ದಾನ ಪೂಜೆ ಜಪದರ್ಥಿಯ
ಲಿ ಪುಣ್ಯರೂಪಹುದು ಮನದಂತೆ ಮಂಗಲಾರ್ಥವಿದು"||[೬೦]

ಮನಸ್ಸು ಒಳ್ಳೆಯದನ್ನು ಆಲೋಚಿಸಿದರೆ ಒಳ್ಳೆಯದು ಕೆಟ್ಟದ್ದನ್ನು ಆಲೋಚಿಸಿದರೆ ಕೆಟ್ಟ ಕಾರ್ಯಗಳು ಆಗುತ್ತವೆ. ಆದ್ದರಿಂದ ಆತ್ಮವನ್ನು ಮುನ್ನಡಸಲು ಒಳ್ಳೆಯ ಮನಸ್ಸು ಮತ್ತು ಕಾರ್ಯಗಳೆರಡು ಬೇಕು ಎಂಬ ಆಶಯ ವ್ಯಕ್ತವಾಗಿದೆ.

ಮುಂದಿನ ಹಾಡಿನಲ್ಲಿ ಯಾವುದು ಹಿತಕರ ಯಾವುದು ಅಹಿತಕರವಾದುದು ಎಂಬುದನ್ನು ಗಾದೆಯ ಮಾತಿನಂತೆ ಹೇಳಿರುವುದನ್ನು ನೋಡುತ್ತವೆ.

"ಹಂಸನನರಿದು ಭಾವಿಸುವುದೇ ಸಂಸಾರ
ಹಂಸನನರಿಯದ ಸುಖವೇ ದುಃಸ್ಸಾರ||
ಆತ್ಮವನರಿದು ಭೋಗಿಪಭೋಗ ಸಂಭೋಗ
ಆತ್ಮವನರಿಯದ ಭೋಗದುಬ್ಬೇಗ
ಆತ್ಮವನರಿದು ಕೂಡುವ ಯೋಗ ಸಂಯೋಗ
ಆತ್ಮವನರಿಯದ ಯೋಗ ಕುಂಯೋಗ||

ಸುಜ್ಞಾನಿಗೆ ಬಂದ ಸಿರಿಯೆ ಸಂಪತ್ತು
ಅಜ್ಞಾನಿಗೆ ಬಂದ ಸಿರಿಯೆಲ್ಲ ವಿಪತ್ತು
ಸುಜ್ಞಾನಿ ಮೋಹಿಪುದೆಲ್ಲ ಸಮ್ಮೋಹ
ಅಜ್ಞಾನಿಯ ಮೋಹವೆಲ್ಲ ದುರ್ಮೋಹ||

ಅಧ್ಯಾತ್ಮ ಮುಟ್ಟಿ ಹಾಡುವ ಗೀತ ಸಂಗೀತ
ಅಧ್ಯಾತ್ಮ ಮುಟ್ಟಿ ಹಾಡದ ಗೀತ ದುರ್ಗಿತ
ಅಧ್ಯಾತ್ಮ ಮುಟ್ಟಿದ ಬೋಧೆ ಸುಭೋಧೆ
ಅಧ್ಯಾತ್ಮ ಹೊರತಾದ ಬೋಧೆ ದುರ್ಬೋಧೆ"||[೬೧]

ಗಾದೆಯ ಮಾತಿನಂತೆ ಕಿವಿಗೆ ಇಂಪನ್ನು ನೀಡುವುದು. ಹಾಗೂ ಜನರ ಮನಸ್ಸಿನಲ್ಲಿ ಸದಾ ಉಳಿಯುವಂತೆ ಮಾಡಿದ್ದಾನೆ. ಇಲ್ಲಿ ಮುಖ್ಯವಾಗಿ ಆತ್ಮವನ್ನು ಅರಿತು ಬದುಕುವುದೇ ನಿಜವಾದ ಸಂಸಾರ. ಸುಜ್ಞಾನಿ ಎಲ್ಲವನ್ನು ಸುಖಿಸಬಲ್ಲ. ಅಜ್ಞಾನಿ ಎಲ್ಲವನ್ನು ಅಪತ್ತಿಗೆ ದುಡಿಸಿಕೊಳ್ಳಬಲ್ಲ. ಅಧ್ಯಾತ್ಮದ ಗೀತವೇ ಜೀವನ ಸಂಗೀತ ಎಂಬುದನ್ನು ಹೇಳುತ್ತದೆ.

"ಸಾಕು ಹೋಗು ನಿಲ್ಲು ಮೋಹಾಸುರ
ಸಾಕು ಹೋಗು ನಿಲ್ಲು
ಏಕಿನ್ನು ಮರೆ ನಿನ್ನ ಪರಿಯು ನಾನರಿವೆನು||

ಸ್ನೇಹ ಕೋಪವೆಂಬೆರಡು ನಿನ್ನ ದಾರಿಗಳು ಮೂರು
ದೇಹವೆಂಬುವು ರಾಕ್ಷಸ ನಿನ್ನ ಹೊಳಲಿಲ್ಲವೇ
ನೀ ಕಾಣಲಿಲ್ಲವೇ ಕರ್ಮಗಳೇನು ಪರಿವಾರವಲ್ಲವೇ
ಅವು ನನ್ನ ಗೆಲಲಿನ್ನು ಬಲ್ಲವೇ"||[೨]

ಮನುಷ್ಯನಲ್ಲಿ ಅಡಗಿರುವಂತಹ ಮೋಹವೆಂಬ ರಾಕ್ಷಸತನವನ್ನು ಓಡಿಸಲು ಸ್ನೇಹ, ಕೋಪ, ದೇಹವೆಂಬ ನಿನ್ನ ದಾರಿಗಳಿಂದ ಹೊರಬರಬೇಕಾಗಿದೆ. ಅದಕ್ಕೆ ಆತ್ಮಧ್ಯಾನ ಬೇಕು. ಧ್ಯಾನವೆಂಬ ಉಂಗಣ್ಣು ತೆರೆದು ಎಲ್ಲಾವನ್ನು ಸುಟ್ಟರೆ ಮುಕ್ತಿಯು ತಾನಾಗಿಯೇ ದೊರಕುತ್ತದೆ ಎಂಬ ಅರ್ಥಧ್ವನಿಯಾಗಿದೆ. ಬುದ್ಧಿಯನು ಎಚ್ಚರಿಸುವ ಮೂಲಕ ಇಂದ್ರಿಯಗಳ ಮನಸ್ಸಿನ ಅಗತ್ಯತೆಯನ್ನು ಕುರಿತು ಹೇಳುತ್ತದೆ.

"ಬುದ್ಧಿ ಸದರವೆಯೆಲ್ಲಕೆ ಬುದ್ಧಿ ಸದರವೇ
ಬದ್ಧಕರ್ಮವ ಬಯಲು ಮಾಡಿ
ಸಿದ್ಧಪದವಿಗೆ ಧ್ಯಾನಿಸುವ ||

ಹೆಣ್ಣು ತೊರೆಯಬೇಕು ಮತ್ತೊಂದು
ಹೆಣ್ಣಿನ ಕೂಟಕ್ಕೆ ಮೋಹಿಸಬೇಕು
ಕಣ್ಣಿಗೆ ಕಾಣಿಸಿಕೊಳ್ಳದ ತನ್ನಂ
ಬಣ್ಣವ ಭಾವಿಸಿ ಕಾಣಬೇಕು||

ಚಂದ್ರನಂತೆ ಶಾಂತನಾಗಿ
ರುಂದ್ರ ಶೃಂಗಾರ ಕವಿಯ ಗುರು ಮ
ಹೇಂದ್ರ ಕೀರ್ತಿಯಾಗಿಹಂತೆ
ಇಂದ್ರಿಯ ವಿಜಯಿಯಾಗಬೇಕು"||[೩]

ಇಲ್ಲಿ ಬಹಳ ಮುಖ್ಯವಾಗಿ ಮನಸ್ಸಿನ ಹಿಡಿತದಿಂದ ಇಂದ್ರಿಯಗಳನ್ನು ನಿಯಂತ್ರಿಸಬೇಕು. ಅದರ ಬದಲು ಬುದ್ಧಿಯ ಕೈಗೆ ಪಂಚೇಂದ್ರಿಯಗಳ ಕೊಟ್ಟರೆ ಬುದ್ಧಿಯು ಸದರವಾಗುತ್ತದೆ. ಇದರಿಂದ ಸಿದ್ಧಪದವಿ ಲಭಿಸುವುದಿಲ್ಲ. ಈ ಹಾಡಿನಲ್ಲಿ 'ರತ್ನಾಕರನ ಗುರುವಾದ ಮಹೇಂದ್ರ ಕೀರ್ತಿಯನ್ನು ಸ್ಮರಿಸುವ ಮೂಲಕ ಮಹೇಂದ್ರ ಕೀರ್ತಿಯಂತೆ ಇಂದ್ರಿಯಗಳನ್ನು ಗೆಲ್ಲಬೇಕೆಂಬ ಆಶಯವನ್ನು ವ್ಯಕ್ತಪಡಿಸುತ್ತಾನೆ.

ರತ್ನಾಕರನ ಮತ್ತೊಂದು ಹಾಡಿನಲ್ಲಿ ಬಡವರ ಬಗ್ಗೆ ಅನುಕಂಪ, ದಾನ, ಧರ್ಮ, ಉಪಕಾರ, ಮೋಸ, ವಂಚನೆ, ಹೆಣ್ಣು, ಹೊನ್ನು, ಮಣ್ಣು ಇವುಗಳ ಕುರಿತು ಎಚ್ಚರಿಕೆಯ ಗಂಟೆಯನ್ನು ನೀಡುತ್ತಾನೆ.

"ಎಚ್ಚರೆಚ್ಚರವಿರಲಿ ಅನುದಿನದಲ್ಲಿ ಎಚ್ಚರೆಚ್ಚವಿರಲಿ||
ಬಲ್ಲಿದ ತಾನೆಂದು ಬಡವನ ಬಾಯ್ಗಳ ಬಡಿಯದಿರೆಚ್ಚರಿಕೆ
ಎಳಷ್ಟು ತಪ್ಪಿ ನೀ ನಡೆದರೆ ನರಕವ ಪೋಗುವೆ ಎಚ್ಚರಿಕೆ ಹೇ ಮನುಜಾ||
ಮಾಡು ದಾನ ಧರ್ಮಪರ ಉಪಕಾರವ ಮರೆಯದಿರೆಚ್ಚರಿಕೆ
ನಾಡಿನ ಜನರನ್ನು ನೋಡಿ ನಡೆಯೋ ಮುಂದೆ ನಟನೆ ಬೇಡೆಚ್ಚರಿಕೆ
ಹೆಣ್ಣು ಹೊನ್ನು ಮಣ್ಣು ನಿನ್ನ ವಂಚಿಸಬಿಟ್ಟು ಪೋಗುವುದೆಚ್ಚರಿಕೆ
ಚೆನ್ನಾಗಿ ಗಳಿಸಿಯು ಬದುಕುವೆ ನಾನೆಂಬ ಚೇಷ್ಟೆಬೇಡೆಚ್ಚರಿಕೆ"||[೬೪]

ಈ ಹಾಡಿನಲ್ಲಿ ಸಮಾಜವನ್ನು ಟೀಕಿಸುತ್ತ, ಬಡವರನ್ನು ರಕ್ಷಿಸಿ ಬಡವರ ಹೊಟ್ಟೆಯ ಮೇಲೆ ಹೊಡೆಯಬೇಡಿ. ದಾನಧರ್ಮಗಳನ್ನು ಮಾಡಿ ಪುಣ್ಯವನ್ನು ಸಂಪಾದಿಸಿ ಆಸ್ತಿಯ ಸಂಪಾದನೆಯಿಂದ ನಾನು ಬದುಕಬಲ್ಲನೆಂಬ 'ಅಹಂ' ದೂರವಿರಿಸಿ ಆ ಮೂಲಕ ಮುಕ್ತಿಯನ್ನು ಪಡೆಯಿರಿ. ಪ್ರಾಪಂಚಿಕವಾದ ಆಸೆ, ಆಕಾಂಕ್ಷೆಗಳಿಂದ ನೀವೂ ಮೋಸ ಹೋಗದಿರಿ. ಇದನ್ನರಿತ ಬಾಳು ಸುಖೀ ಎಂಬ ಎಚ್ಚರದ ಮಾತು ಇದಾಗಿದೆ. ಜಾತಿಯನ್ನು ಪ್ರಶ್ನೆ ಮಾಡುತ್ತ ಕುಲ, ನೆಲೆ ಯಾವುದು ಎಂಬುದನ್ನು ಪ್ರಶ್ನಿಸುವ ಮೂಲಕ ಉತ್ಕಟವಾದ ಧ್ವನಿ ವ್ಯಕ್ತವಾಗಿರುವುದು ಈ ಹಾಡಿನಲ್ಲಿ ನೋಡಬಹುದು.

"ಇಂದ್ರಿಯ ಸೂತತ ದುರ್ಗಂಧ ಮಲಮೂತ್ರ
ನಿಂದನಿಂದ ಠಾವಿನಲಿ ನಿಜವ ನಾನರಿಯೆ
ಒಂದೆ ಬಚ್ಚಲ ಕುಳಿಯೊಳು ತಿಂದೆ ಮೊಲೆಮಾಂಸವ ಇಂತಾ
ಅಂಧಕ ಹೊಲೆಯರಿಗೆ ತಮಗೆಲ್ಲಿಯ ಕುಲವೋ"||[೬೫]

ಇದು ಶರಣರ ವಚನ ಸಾಹಿತ್ಯದಂತೆ ತೀವ್ರವಾದ ಸಾಮಾಜಿಕ ಸಂವೇದನೆಯಿಂದ ಕೂಡಿದ ಹಾಡಾಗಿದೆ. ಬಂದೆ ಬಚ್ಚಲ ಕುಳಿಯೊಳುತಿಂದೆ ಮೊಲೆಮಾಂಸವ ಇಂತಾ ಅಂತಕ ಹೊಲೆಯರಿಗೆ ತಮಗೆಲ್ಲಿಯ ಕುಲವೋ ಎಂದು ಪ್ರಶ್ನಿಸುವ ಮನೋಭಾವ ಇಲ್ಲಿದೆ. ಒಂಬತ್ತು ರಂಧ್ರ, ಮಜ್ಜೆ, ಮಾಂಸಗಳಿಂದೊಡಗೂಡಿದ ದೇಹವಿರುವುದು ನಾನು ಯಾವ ಸ್ಥಿತಿಯವನು ಎಂಬುದು ನನಗೆ ಗೊತ್ತಾಗಿಲ್ಲ. ಅದರ ಅರಿವು ಮೂಡಿಸುವ ಪ್ರಯತ್ನ ಕೂಡ ಆಗಿದೆ. ಆ ಮೂಲಕ ನಿನ್ನೆಡೆಗೆ ನಡೆಯುವ ಗುಣವುಳ್ಳವನಾಗುತ್ತಾನೆ ಎಂಬ ನಿವೇದನೆಯಿದೆ.

"ಚಿದ್ರೂಪನ ಧ್ಯಾನವೆಂಬ ಹಡಗನೇರಿ ಸಂಸಾರ
ಸಮುದ್ರವನೆ ದಾಂಟಿ ಮೋಕ್ಷದ್ವೀಪಗೆ ಹೋಗಾತ್ಮನೆ||

ಸಾವುಹುಟ್ಟುಗಳೆಂಬೆರಡು ಹೆಣ್ಣು ಗಂಡು ತೆರೆಗಳು
ಅವಾಗ ತಾವು ಮಕ್ಷುಧೆಯೆಂಬ ವಡಬಾಗ್ನಿ
ತೀವಿದ ಸಂಸಾರವೆಂಬ ಮೀನು ಮೊಸಳೆ ಸರ್ಪಂಗಳು
ಈ ವಿಕಾರವೆಂಬ ಕರ್ಮಕಡಲೊಳೇಕೆ ಮುಳುಗಿದ್ಯೆ||

ಹೀಗೆ ಆತ್ಮಧ್ಯಾನವೆಂಬ ಹಡಗನೇರಿಕೊಂಡು ಹೋಗು
ಹೋಗಲಾ ದಾರಿ ಮೋಕ್ಷವೆಂಬ ದ್ವೀಪಕ್ಕೆ ಹೋಗುವುದು
ರೋಗ ಮುಪ್ಪು, ಸಾವು, ಹುಟ್ಟು ಆವ ಬಾಧೆ ಇಲ್ಲದಲ್ಲಿ
ಶ್ರೀಗುರುಚಿದಂಬರ ಪುರುಷನಾಣೆ ಮಹಾನಂದಾ"||೬೬

ಸಂಸಾರವೆಂಬುದು ಹಡುಗು ಇದ್ದಂತೆ. ಅದನ್ನು ಧ್ಯಾನವೆಂಬ ಮಂತ್ರದ ಮೂಲಕ ಶರಧಿಯನ್ನು ದಾಟಿದರೆ ಮೋಕ್ಷ ಪ್ರಾಪ್ತಿಯಾಗುತ್ತದೆ. ಹುಟ್ಟು, ಸಾವು, ಗಂಡು, ಹೆಣ್ಣು ಎಂಬ ಎರಡು ತೆರೆಗಳು ಈ ವಿಕಾರಗಳು, ಆತ್ಮವೆಂಬ ಹಡಗಿನ ರಂಧ್ರಗಳನ್ನು ಮುಚ್ಚಲು 'ಧ್ಯಾನವೆಂಬುದು' ಶ್ರೇಷ್ಠವಾದುದು. ಅದನ್ನು ಅಣಿಗೊಳಿಸಿ ಎಲ್ಲವನ್ನು ಇಲ್ಲವಾಗಿಸಬೇಕು ಎಂಬ ನಿಲುವನ್ನು ವ್ಯಕ್ತಪಡಿಸುತ್ತದೆ. ಅಂದರೆ ಸಂಸಾರವನ್ನು ಮಾಡುತ್ತ ಧ್ಯಾನದಲ್ಲಿ ಮಗ್ನನಾಗಿರಬೇಕು ಎಂಬ ಆಶಯವನ್ನು ಹೊಂದಿರುವ ಹಾಡಾಗಿದೆ. ಹಾಗೆಯೇ ಮುಂದಿನ ಹಾಡು ಕೂಡ ಸಂಸಾರದ ನಿಸ್ಸಾರತೆಯನ್ನು ಕುರಿತು ಹೇಳುವ ಹಾಡಾಗಿದೆ.

"ಸಂಸಾರಾ ನಿಸ್ಸಾರಾ ಸಸ್ಸರಾ ನಿಸ್ಸಾರ
ನಿನಗೂ ನನಗೂ ಅದಾವ ಸಂಬಂಧ ತನುವೇ ಸಾರುತ್ತ ನೀ
ಎನ್ನ ಜತೆ ನೀನಿಹುದು ಏನು ಚಂದಾ ಆ
ದೇನು ಚಂದಾ ಸಸ್ಸಾರ ನಿಸ್ಸಾರ||

ಮುಪ್ಪು ಸಾವಿ ಹುಟ್ಟು ಜಾತಿ ಇಲ್ಲ ಎನಗೆ ತನುವೇ
ಮುಪ್ಪು ಸಾವು ಹುಟ್ಟು ಜಾತಿ ಉಂಟು ನಿನಗೆ
ಅಪ್ಪಾಜಿ ಶ್ರೀಮಂದರೇಶನೊಬ್ಬ ಎನಗೆ ತನುವೆ
ಅಪ್ಪಂದಿರೆಂಬತ್ತನಾಲ್ಕು ಲಕ್ಷ ನಿನಗೆ ನಿನಗೂ ನನಗೂ"||೬೭

ಅರಿತರೆ ಸಂಸಾರ ಅರಿಯದಿದ್ದರೆ ನಿಸ್ಸಾರ ಎಂದು ಹೇಳುವ ಮೂಲಕ ಸಂಸಾರದ ಅಗತ್ಯತೆಯನ್ನು ಹೇಳುವುದಾಗಿದೆ. ತನ್ನನ್ನು ತಾನು ಅರಿತರೆ ಸಸ್ಸಾರ(ಸುಲಭ, ಸುಗಮ). ತನ್ನ ಯಾರು ಅರಿಯದೇ ಬೇರೆಯವರ ಬಗ್ಗೆ ನಿಂದನೆಗಳನ್ನು ಮಾಡುತ್ತ ಅಪವಿತ್ರ ಕಲ್ಮಷಗಳಿಂದ ತಮ್ಮ ಬದುಕು ಸವೆಸುವುದೋ ಅವರೆಲ್ಲರಿಗೂ ಈ ಬದುಕು ನಿಸ್ಸಾರ(ಸಾರ, ಸತ್ಯವಿಲ್ಲದು) ಆಗುತ್ತದೆ. ಸಸ್ಸಾರ-ನಿಸ್ಸಾರ ಅದು ನಮ್ಮಲ್ಲಿಯೇ ಇದೆ. ಮುಪ್ಪು, ಸಾವು, ಹುಟ್ಟು, ಜಾತಿ ಎಲ್ಲ ದೇಹಕ್ಕೆ ಹೊರತು ಆತ್ಮಕ್ಕೆ ಅಲ್ಲವೆಂಬ ಅರಿತ ಮಾತುಗಳಿಂದ ಪ್ರಸ್ತಾಪಿಸುತ್ತಾನೆ.

"ಬಲ್ಲಿದ ನೀನೆಂದು ಬಡವರ ಬಾಯ್ಗಳ ಬಡಿಯದಿರೆಚ್ಚರಿಕೆ
ಜಳ್ಳಪ್ಪು ತಪ್ಪಿದರೆ ಖಳನರಕವ ಹೋಗುವೆ ನೀನೆಚ್ಚರಿಕೆ||

ಮಾಡು ದಾನಧರ್ಮ ಪರೋಪಕಾರವ ಮರೆಯದಿರೆಚ್ಚರಿಕೆ
ಕೇಡು ಬಯಸಿದರೆ ನಂಬಿದವರೊಳು ಕೆಡುವೆ ನೀನೆಚ್ಚರಿಕೆ
ನಾಡೊಳು ಸುಜನರ ನೋಡಿ ನಡೆ ಮುಂದೆ ನಟನೆ ಬೇಡೆಚ್ಚರಿಕೆ||

ಹೊನ್ನು ಹೆಣ್ಣು ಮಣ್ಣು ನಿನ್ನನೆ ವಂಚಿಸಿ ಹೋಗುವುದೆಚ್ಚರಿಕೆ
ಚೆನ್ನಾಗಿ ಗಳಿಸಿ ನಾ ಬದುಕಿದೆನೆಂಬ ಚೇಷ್ಟೆ ಬೇಡೆಚ್ಚರಿಕೆ
ಬಾಳು ಬದುಕು ಬಲದಿ ತಂದೆ ತಾಯ್ಗಳ ಬೈಯದಿರೆಚ್ಚರಿಕೆ
ಹಾಳು ಬದುಕಿಗೆ ಹಲಬರ ಕೂಡಾಣ ಹಗೆ ಬೇಡೆಚ್ಚರಿಕೆ
ಮೂಲೋಕಪತಿ ಶ್ರೀಮಂದರೇಶನ ಚರಣವ ಮರೆಯದಿರೆಚ್ಚರಿಕೆ"||[೬೮]

ಮನುಷ್ಯನಾಗಿ ಬಾಳಿದ ಮೇಲೆ ನೀನು ಅನುಸರಿಸಬೇಕಾದ ನೀತಿಗಳನ್ನು ಮನ ಮುಟ್ಟುವಂತೆ ತಿಳಿ ಹೇಳುತ್ತಾನೆ. ಬಡವರ ಬಾಯಿಗೆ ಮಣ್ಣು ಹಾಕದಿರಿ, ಇದನ್ನು ತಪ್ಪಿ ನಡೆದರೆ ನರಕಕ್ಕೆ ಹೋಗುವ ಸಂದೇಶವನ್ನು ನೀಡುತ್ತಾನೆ. ಮಾನವನಾಗಿ ಹುಟ್ಟಿದ ಮೇಲೆ ದಾನ, ಧರ್ಮ ಮಾಡಬೇಕು. ಬೇರೆಯವರಿಗೆ ಕೇಡನ್ನು ಬಯಸದೆ ಎಲ್ಲರಿಗೂ ಒಳಿತನ್ನು ಬಯಸಬೇಕು, ನಾಡಿನಲ್ಲಿರುವ ಸುಜ್ಞಾನಿಗಳ ನೋಡಿ ನಮ್ಮ ಮುಂದಿನ ಜೀವನ ಕಟ್ಟಿಕೊಳ್ಳಬೇಕು. ಹೆಣ್ಣು, ಹೊನ್ನು, ಮಣ್ಣಿಗಾಗಿ ಹಲವರು ಮಣ್ಣುಪಾಲಾಗಿ ಹೋಗಿದ್ದಾರೆ. ನೀವು ಅವರಂತೆ ಹೋಗಬೇಡಿ ಎಂಬ ಸಂದೇಶವನ್ನು ನೀಡುತ್ತಾನೆ. ಮುಪ್ಪಿನಲ್ಲಿ ಯಾವತ್ತು ತಂದೆ ತಾಯಿಗಳಿಗೆ ನಿಂದಿಸಬೇಡಿ ಎನ್ನುವ ಸಾರ ಈ ಹಾಡಿನಲ್ಲಿ ತುಂಬ ಸುಂದರವಾಗಿ ಪದಬಂಧಗಳಿಂದ ಕಟ್ಟಿದ್ದಾನೆ. ಒಟ್ಟಿನಲ್ಲಿ ಪರೋಪಕಾರವನ್ನು, ದಾನಧರ್ಮದ ಮೂಲಕ ನಂಬಿದವರಿಗೆ ಕೇಡನ್ನು ಬಯಸದೆ, ಆಸೆ ಮಾಯೆಗಳಿಗೆ ಮರುಳಾಗದೆ, ಸಾವು ಬರುವ ಮುಂಚೆ ಸತ್ಕಾರ್ಯಗಳನ್ನು ಮಾಡುವಂತೆ ಉಪದೇಶಿಸಲಾಗಿದೆ.

"ಊರಿಗೆ ಹೋಗುವ ಬನ್ನಿ ಕಾಡ ಈ
ದಾರಿ ಸಂಸಾರ ಮಾರ್ಗವಲ್ಲೆನ್ನಿ||

ಈ ಸಂಸಾರ ನೀ ಬಿಟ್ಟು ಜಿನ
ಶಾಸನ ಮಾರ್ಗದಿ ತಪಕಳವಟ್ಟು
ಲೇಸಾಗಿ ಕರ್ಮವ ಸುಟ್ಟು ಮುಕ್ತಿ
ವಾಸದಾಗಿ ನಿರಂಜನನೊಳು ಮನದಿಟ್ಟು"||[೬೯]

ಸಂಸಾರವೆಂಬುದು ಕಾಡದಾರಿಯಂತಿರುವ ಮಾರ್ಗವನ್ನು ಬಿಟ್ಟು, ಭೋಗ, ಉಪಭೋಗ ಎಂಬ ಕೀಟವು ಒಂದು ಕೀಟಲೆ ಮಾಡುವ ಮುನ್ನ ಜಿನರು ಹಾಕಿಕೊಟ್ಟ ತಪಸ್ಸಿನ ಮಾರ್ಗವನ್ನು ಹಿಡಿದು ಕರ್ಮವನ್ನು ಸುಡಬೇಕು. ಆ ಮೂಲಕ ಮುಕ್ತಿಯೆಂಬ ಊರಿಗೆ ಬನ್ನಿ ಎಂಬ ಆಹ್ವಾನವನ್ನೀಯುತ್ತಾನೆ.

"ಆಳುದ್ದ ನಾಳೆ ಗೇಣುದ್ದ ಎಂಬ ಗಾದೆಯ ಮಾತಿನ ಠೀವಿ
ಯಿಂದ ಕೂಡಿದ ಅರ್ಥಯುಕ್ತವಾದ ಹಾಡಾಗಿದೆ.
ಆಳುದ್ದವಾದ ರೂಪವಳಿದು ನಾಳೆ ಗೇಣುದ್ದವಾಗಿ
ಬಾಳು ತಲದೇಕೋ ಮತ್ತೊಬ್ಬ ತಾಯೊಡಲೆಂಬ
ಚಾಳು ಸೆರೆಯಲ್ಲಿ ಮನಮೂತ್ರದ ಕೆರೆಯಲ್ಲಿ
ಒಳ ಮಾತಿನ ಮುಸುಕು ಮರೆಯಲ್ಲಿ"||[೭೦]

ಇಂತಹ ಹಾಡುಗಳು ಮನುಷ್ಯನನ್ನು ಟೀಕಿಸುವ ಮೂಲಕ ಸರಿಯಾದ ಬದುಕನ್ನು ಕಟ್ಟಿಕೊಳ್ಳುವ ಎಚ್ಚರಿಕೆಯನ್ನು ನೀಡುತ್ತದೆ. ಮನುಷ್ಯನನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಪರಿ-ಪರಿಯಾಗಿ ಹೇಳುತ್ತವೆ.

ಮನುಷ್ಯನ ಬಾಹ್ಯ ಚಟುವಟಿಕೆಗಳನ್ನು ನಿಂದಿಸುತ, ಸರಿಯಾದ ಮಾರ್ಗದಲ್ಲಿ ನಡೆಯುವಂತೆ ಸೂಚಿಸುವ ಹಾಡುಗಳೇ ಹೆಚ್ಚಾಗಿವೆ. ಇಂತಹ ಹಾಡುಗಳ ಮೂಲಕ ಮನುಷ್ಯನ ಸೂಕ್ಷ್ಮತೆ ಸೂಕ್ಷ್ಮ ಮನೋಭಾವಗಳನ್ನು ಹಿಡಿದಿಟ್ಟಿವೆ.

'ಹುತ್ತವ ಬಡಿದಲ್ಲಿ ಫಲವೇನು' ಎಂಬ ಹಾಡು ಸುದೀರ್ಘವಾಗಿದ್ದು ಮಾನವನನ್ನು ಟೀಕಿಸುವ ಮೂಲಕ ಒಳ್ಳೆಯ ಕಾರ್ಯಗಳಿಗೆ ನಿರತರಾಗಿ ಎನ್ನುವ ಸಂದೇಶ ನೀಡುತ್ತದೆ.

"ಇಹಪರವೆರಡರ ಚಿಂತನೆಯಿಲ್ಲದೆ
ಬಹುಚಿಂತೆಯ ಮಾಡಿ ಫಲವೇನು
ತಾನುಣ್ಣ ಪರರಿಗಿಕ್ಕದೆ ಹೊನ್ನು ಕಾದಿರ್ದ ಹೀನನ ಸಿರಿಯಿದ್ದು ಫಲವೇನು
ಸ್ನಾನ ಪಾನಕೆ ಸಲ್ಲದ ಕೊಳನಿದ್ದು ಕಾನನ ತುಂಬಿದ್ದು ಫಲವೇನು
ಏನೆಂದು ತನ್ನ ಶುದ್ಧಾತ್ಮನನರಿಯದೆ ನಾನಾ ಶಾಸ್ತ್ರವನೋದಿ ಫಲವೇನು
ದಿನ ಬಂಜೆಯಿಲ್ಲದೆ ಧರ್ಮವ ಗಳಿಸದೆ ಮನುಜ ಜನ್ಮಕ್ಕೆ ಬಂದು ಫಲವೇನು
ಮನವ ದಂಡಿಸಿ ತನ್ನ ನೋಡದೆ ಮೈಯನೆ ಅನುದಿನ ದಂಡಿಸಿ ಫಲವೇನು
ಘನ ವಿಷವುಳ್ಳ ಸರ್ಪನ ಪಿಡಿಯದೆ ಹುತ್ತವ ನಿಚ್ಚ ಬಂದಲ್ಲಿ ಫಲವೇನು
ನಾಳೆ ಸಾವುಡಿಂದು ಬಲ್ಲರೆಲ್ಲರು ಸಾವಬಾಳ ನಚ್ಚಿರಲ್ಲಲ್ಲಿ ಫಲವೇನು
ಅಲಿ ಮುನಿದು ಹಂಸನಾಥನ ನೋಡದೆ ಆಲಸ್ಯದೊಳಗಾಡಿ ಫಲವೇನು"||೬೧

ಇಲ್ಲಿ ಮಾನವನ ನಡತೆಯನ್ನು ಪ್ರಶ್ನೆ ಮಾಡುತ್ತಾನೆ. ಮಾನವ ಜನ್ಮ ಬಹಳ ದೊಡ್ಡದು ಅದನ್ನು ಧರ್ಮ, ಸಹಾಯ, ಸಹಕಾರ, ಅನುಕಂಪಗಳಿಂದ ದೀನದಲಿತರಿಗೆ ಸಹಾಯ ಮಾಡುವುದರ ಮೂಲಕ ಈ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಬೇಕು ಎಂಬ ಆಶಯ ಇಲ್ಲಿದೆ. ಈ ಹಾಡು ವಚನಗಳಂತೆ ತೀಕ್ಷ್ಣವಾಗಿ ಸರ್ವಜ್ಞನ ವಚನಗಳಂತೆ ಕಠೋರವಾಗಿ ಮನುಷ್ಯನನ್ನು ಪ್ರಶ್ನೆ ಮಾಡುತ್ತಿರುವುದು ನೋಡಿದರೆ ರತ್ನಾಕರನ ಕಾಲದಲ್ಲಿ ಇದ್ದಂತಹ ಸಾಮಾಜಿಕ ಪರಿಸ್ಥಿತಿಯನ್ನು ಚಿತ್ರಿಸುತ್ತದೆ. ರತ್ನಾಕರ ಸಮಾಜವನ್ನು ಸರಿಯಾದ ರೀತಿಯಲ್ಲಿ ನಡೆಸುವ ಮನೋಭಾವನೆಯುಳ್ಳವನಾಗಿದ್ದನು. ಅನ್ಯಾಯ, ಅಕ್ರಮ, ಮೋಸವನ್ನು ಧಿಕ್ಕರಿಸುವ ಮನಸ್ಸನ್ನು ಹಾಡುಗಳ ಮುಖಾಂತರ ಗುರುತಿಸಲಾಗಿದೆ.

"ಬುದ್ಧಿಯಾಗಿ ಬದುಕೆಂದು ಪೇಳಿದೆ ನಾನು ಅಪು
ಬುದ್ಧನಾಗಿ ಕೆಡಬೇಡ ಆತ್ಮನೆ ನೀನು ||ಪ||

ದಾನಧರ್ಮವೆಂಬುದು ಕಟ್ಟೋರಗವ ಕಟ್ಟು ಆತ್ಮ
ಧ್ಯಾನವೆಂಬ ವ್ರಜ ಪಂಜರವ ತೊಟ್ಟು
ದೀನ ಮಾನವೆಂಬ ದುರ್ವಿಚಾರವ ಬಿಟ್ಟು ಆತ್ಮ ಅ
ಜ್ಞಾನವೆಂಬ ಅರಣ್ಯವೆಲ್ಲವನು ಸುಟ್ಟು||

ಸತ್ಯವೆಂಬ ತಾಯಿ ಮಾತ ಮೀರದಿರಯ್ಯಾ ನೀ
ನಾತ್ಮ ಜ್ಞಾನ ತಂದೆ ವಡನೆ ಬಾಳಯ್ಯ

ಮತ್ತೆ ಶಾಂತಿಯೆಂಬ ಸುದತಿಯನಾಳಯ್ಯ ನಿನಗೆ
ಗತ್ಯಂತ ಕ್ಷಮೆಯೆಂಬ ಪುತ್ರನಾಳಯ್ಯ
ಬಾಳುವಾಗ ಸರ್ವಜ್ಞನ ಬಂಧುಗಳೆಲ್ಲ ಕೆಟ್ಟ ಪ
ತ್ತಾಲಿರುವಾಗ ಮಾತನಾಡುವರಿಲ್ಲ ಯಾ
ಬಾಳು ಸಂಸಾರ ಸ್ಥಿರವೆಂಬುದೆ ಹೊಲ್ಲ ಮುಕ್ತಿಯ
ನಾಳಿದ ಜನರ ಸಿದ್ಧನೆ ಬಲ್ಲ||"೨೨

ಮನುಷ್ಯ ಸುಜ್ಞಾನಿಯೆಂಬ ಬುದ್ಧಿಯನ್ನು ಹೊಂದಿ ಅದನ್ನು ಸರಿಯಾದ ಮಾರ್ಗದಲ್ಲಿ ನಡೆಸುವಂತೆ ಹೇಳುವ ಪರಿಯಾಗಿದೆ. ದಾನ ಧರ್ಮದ, ಶ್ರೇಷ್ಠತೆ, ಮನುಷ್ಯನ ದುರ್ವಿಚಾರಗಳು ಆತ್ಮನಲ್ಲಿ ಲೀನವಾಗುವಂತೆ ಆಶಯವನ್ನು ವ್ಯಕ್ತಪಡಿಸುತ್ತದೆ. ಜೊತೆಗೆ ಇದ್ದಾಗ ಎಲ್ಲರೂ ಅಣ್ಣ ತಮ್ಮಂದಿರು, ಇಲ್ಲದಾಗ ಯಾರು ಸಹ ಮಾತನಾಡಿಸುವವರಿಲ್ಲ ಎಂಬ ಗಾದೆ ಮಾತಿನ ಸ್ವರೂಪದಿಂದ ಕೂಡಿದೆ.

ರತ್ನಾಕರನ ಹಾಡುಗಳನ್ನು ವಸ್ತುದೃಷ್ಟಿಯಿಂದ ವಿವೇಚಿಸಿದಾಗ ಆತ್ಮ-ಮೋಕ್ಷ ವಿಚಾರಗಳನ್ನೊಳಗೊಂಡ ಹಾಡುಗಳೇ ಹೆಚ್ಚಾಗಿ ಕಂಡುಬರುತ್ತವೆ. ಈ ಹಾಡುಗಳ ನೀತಿತತ್ವಗಳೇ ಪ್ರಧಾನವಾದ ತಳಹಾದಿಯಾಗಿದೆ. ಹಾಗೆಯೇ ಮತ್ತೊಂದು ನೀತಿ ವಿಶೇಷತೆಯೆಂದರೆ ಮಾನವನ ಜೀವನವನ್ನು ಸೂಕ್ಷ್ಮವಾಗಿ ವಿವೇಚಿಸುವ ಮೂಲಕ ಮನುಷ್ಯನನ್ನು ಸನ್ಮಾರ್ಗದತ್ತ ಕೊಂಡೊಯ್ಯುವ ಹಾಡುಗಳಾಗಿವೆ. ಶರಣರ ವಚನಗಳಂತೆ ತೀವ್ರವಾದ ಸಾಮಾಜಿಕ ಸಂವೇದನೆ ಇಲ್ಲಿ ಇಲ್ಲವಾದರೂ ಕೆಲವು ಕಡೆ ಅದರ ಛಾಯೆಗಳು ಕಂಡುಬರುತ್ತವೆ. ಸರ್ವಜ್ಞನಂತೆ ಹರಿತವಾದ ಭಾಷೆ ಇಲ್ಲವಾದರೂ ಆ ಸ್ವರೂಪವನ್ನು ಒಳಗೊಂಡಂತಹ ಕೆಲವು ಹಾಡುಗಳು ಕಂಡುಬರುತ್ತವೆ. ಜೊತೆಗೆ ದಾಸರ ಕೀರ್ತನೆಗಳನ್ನೇ ಹೆಚ್ಚು ಹೋಲುವ ಹಾಡುಗಳಾಗಿವೆ. ಅಧ್ಯಾತ್ಮ, ಭಕ್ತಿ, ಆತ್ಮ ಸಂಸಾರದ ನಶ್ವರತೆ, ಸಾವಿನ ಭೀಕರತೆ, ದೇಹದ ನಶ್ವರತೆ, ಮುಪ್ಪು, ಸಾವು, ಹುಟ್ಟು ಇವು ಪ್ರಶ್ನೆ ಮಾಡುವುದರ ಮೂಲಕ ಮನುಷ್ಯನನ್ನು ನಿಜವಾದ ಜೀವನದ ದಾರಿ ಯಾವುದು ಎಂಬುದನ್ನು ತೋರಿಸುವ ಮನೋಭಾವ ವಾಗಿದೆ. ಪ್ರಾಪಂಚಿಕ ಸುಖಗಳ ಕ್ಷಣಿಕತೆಯನ್ನು ಕುರಿತು ಹೇಳುವ ಪ್ರಮುಖ ವಸ್ತುಗಳಾಗಿವೆ. ಹಾಗೆಯೇ ಜೈನಧರ್ಮದ ತತ್ವ ಹಾಗೂ ಧಾರ್ಮಿಕ ವಿಚಾರಗಳನ್ನು ಹೇಳುವುದರ ಮೂಲಕ ಜೈನರಲ್ಲಿ ಆಗಿ ಹೋದಂತಹ ಪುಣ್ಯಪುರುಷರಾದ ತೀರ್ಥಂಕರರು, ಜಿನಮುನಿಗಳು, ಚಕ್ರವರ್ತಿಗಳು ಹಾಗೂ ಪುರಾತನ ಕಾವ್ಯಗಳ ಕಥಾ ಸಂದರ್ಭಗಳನ್ನು ಹಾಡುಗಳಲ್ಲಿ ತರುವುದರ ಮೂಲಕ ಧಾರ್ಮಿಕ ವಿಚಾರವನ್ನು ಪುಷ್ಟಿಗೊಳಿಸುತ್ತವೆ. ಇಂತಹ ರತ್ನಾಕರ ಹಾಡುಗಳು ಜೈನಧರ್ಮದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹಾಗೂ ಜೈನಧರ್ಮದ ತತ್ವ ವಿಚಾರ ಸಿದ್ಧಾಂತಗಳನ್ನು ಪ್ರಚಾರಪಡಿಸುವುದಾಗಿದೆ.

### ೪.೨. ಜಿನ ಹಾಗೂ ಜಿನ ಪರಿವಾರ ಸ್ತುತಿಗಳು

#### ೪.೨.೧. ತೀರ್ಥಂಕರರ ಸ್ತುತಿ

ಜೈನರಲ್ಲಿ ದೇವರ(ಈಶ್ವರ) ಕಲ್ಪನೆಯಿಲ್ಲವಾದರೂ ಆತ್ಮಕ್ಕೆ ಪ್ರಾಶಸ್ತ್ಯವಿದೆ. ಜೈನಧರ್ಮವೆಂಬುದು ಜಿನನಿಂದ ಬೋಧಿಸಲ್ಪಟ್ಟ ಧರ್ಮವಾಗಿದೆ. ಜಿನನೆಂದರೆ ಜಯಿಸಿದವನು. ತನ್ನ ಆತ್ಮವಿಚಾರಗಳನ್ನು

ಸಂಪೂರ್ಣವಾಗಿ ಜಯಿಸಿಕೊಂಡವನೇ ಜಿನ. ಅವನು ಕರ್ಮಗಳಿಂದ ಮುಕ್ತನಾಗಿರುತ್ತಾನೆ ಹಾಗೂ ಪರಮಾತ್ಮನಾಗಿರುತ್ತಾನೆ. ಇಪ್ಪತ್ನಾಲ್ಕು ತೀರ್ಥಂಕರರು 'ಜಿನ'ರಾಗಿದ್ದಾರೆ. ತೀರ್ಥಂಕರರು ತಮ್ಮ ಸಾಧನೆ ತಪೋಬಲದಿಂದ ಎಲ್ಲವನ್ನೂ ಗೆದ್ದವರು. ಇವರನ್ನು ಅರಿಹಂತರು, ಸಿದ್ಧರು, ಉಪಾಧ್ಯಾಯರು, ಆಚಾರ್ಯರು, ಸಾಧನಗಳನ್ನೊಳಗೊಂಡ ಪಂಚಪರಮೇಷ್ಠಿಗಳೆಂದು ಕರೆಯುವರು.

"ತೀರ್ಥಂಕರರು ಸಂಸಾರ ನಿಸ್ತರಣೋಪಾಯವನ್ನು ಮಾಡುವ ಹಾಗೂ ರಾಗ ದ್ವೇಷ ಇಲ್ಲವೆ ನಾಲ್ಕು ರೀತಿಯ ಘಾತಿ ಕರ್ಮಗಳನ್ನು ನಾಶ ಮಾಡಿಕೊಂಡು ಅನಂತ ಜ್ಞಾನ-ದರ್ಶನ ಸುಖ-ವೀರ್ಯಗಳುಳ್ಳವರು ಶುಭ್ರದೇಹಿಗಳೂ, ಪರಿಶುದ್ಧರೂ ಆದ ತೀರ್ಥಂಕರರು ನಿಶ್ಚಯಾನುಸಾರವಾಗಿ ಅಶರೀರಿಗಳಾದವರು. ವ್ಯವಹಾರಾನುಸಾರವಾಗಿ ಸಪ್ತದಾಮರಹಿತ ಅಮ್ಯಜ್ವಲ ಪವಿತ್ರದೇಹವುಳ್ಳವರೆಂಬ ಭಾವನೆ ಜೈನಧರ್ಮದ ಸಿದ್ಧಾಂತವಾಗಿದೆ. ಈ ತೀರ್ಥಂಕರರಲ್ಲಿ ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಉದ್ವೇಗ, ಚಿಂತೆ, ಜರೆ, ರೋಗ, ಮೃತ್ಯು, ಭೇದ, ಸ್ವೇದ, ಮದ, ಅರತಿ, ವಿಸ್ಮಯಜನ್ಮ, ನಿದ್ರೆ, ವಿಷಾದ ಎಂಬ ೧೮ ತರದ ದೋಷಗಳಿಂದ ವಿಮುಕ್ತರಾಗಿರುತ್ತಾರೆ. ಭೂಮಿಯ ಕಲ್ಯಾಣಕ್ಕಾಗಿ ಪಾಪಗಳನ್ನು ಹಗುರ ಮಾಡಲಿಕ್ಕೆ ತಾಮಸ ಹೃದಯವನ್ನು ಬೆಳಗುವುದಕ್ಕೆ, ಕಲ್ಪ-ಕಲ್ಪಗಳಲ್ಲಿ ತೀರ್ಥಂಕರರು ಉದಯಿಸಿದ್ದಾರೆಂಬ ಭಾವನೆ. ತೀರ್ಥಂಕರ ರಾಗುವ ಜಿನರಿಗೆ ಮಾತೃಗರ್ಭದಲ್ಲಿ ಜನಿಸಿದಾಗ ಜನ್ಮಾಭಿಷೇಕ, ನಿಷ್ಕ್ರಮಣ ಕಾಲದಲ್ಲಿ, ಪರಿನಿಷ್ಕ್ರಮಣ, ಕೇವಲ ಜ್ಞಾನವಾದಾಗ ಕೇವಲ ಜ್ಞಾನ ಕಲ್ಯಾಣ, ಪರಿನಿರ್ಮಾಣ ಕಲ್ಯಾಣವೆಂಬ ಪಂಚಮಹಾ ಕಲ್ಯಾಣಗಳೆಂಬ ಮಹೋತ್ಸವಗಳು ಸೇರುತ್ತಿರುತ್ತವೆ.

ತೀರ್ಥಂಕರರು ಅಪಾಯಾಗಮಾನತಿಶಯ, ಜ್ಞಾನಾತಿಶಯ, ಪೂಜಾತಿಶಯ, ವಚನಾತಿಶಯಗಳೆಂಬ ಚತುಷ್ಟಯವುಳ್ಳವರು. ಇವೆಲ್ಲವೂ ತೀರ್ಥಂಕರರಿಗೆ ಮೂವತ್ತುನಾಲ್ಕು ಅತಿಶಯಗಳು. ೧. ದೇಹದಲ್ಲಿ ಯಾವಾಗಲು ಜೀವವಿರುವುದಿಲ್ಲ. ೨. ಯಾವ ಹೊಲಸು ಇಲ್ಲ. ೩. ಶರೀರದ ರಕ್ತ-ಮಾಂಸಗಳು ಶುಭ್ರವಾಗಿ, ವಿಶುದ್ಧವಾಗಿ ಇರುವವು. ೪. ಅವರ ಆಕೃತಿಯು ಉತ್ತಮ(ಸಮರ ಚಮರಸ್ವ ಸಂಸ್ಥಾನ). ೫. ಅವರ ಶರೀರ ಸ್ನಾಯುವೇಷ್ಟನ, ಎಲುಬು ಕೀಲುಗಳು ವಜ್ರಮಯ. ೬. ಅವರ ಶರೀರವು ಅತಿಶಯ ಸುಂದರ. ೭. ಅವರ ದೇಹವು ದಿವ್ಯ ಸುಗಂಧವನ್ನು ಬೀರುವುದು. ೮. ಅವರ ದೇಹವು ೧೦೮ ಸುಕ್ಷಣ(ಲಾಂಛನ) ಗಳುಳ್ಳದ್ದು. ೯. ಅವರ ಶರೀರವು ಅಪರಿಮಿತ ವೀರ್ಯವುಳ್ಳದ್ದು. ೧೦. ಅದರ ಭಾಷಣವೂ ಹಿತವೂ-ಮಿತವೂ ಆಗಿರುವುದು (ಇವು ೧೦ ಜನ್ಮಸಿದ್ಧವಾದ ಅತಿಶಯಗಳು). ಕೇವಲ ಜ್ಞಾನ ಉಂಟಾದಾಗ ಬರುವ ೧೦ ಅತಿಶಯಗಳು. ಅವುಗಳೆಂದರೆ,

೧. ಅವರು ಇರುವಂತಹ ಪ್ರದೇಶದ ಸುತ್ತಲೂ ೧೦೦ ಯೋಜನೆಗಳವರೆಗೆ ಸುಭಿಕ್ಷವಿರುವುದು.
೨. ಅವರಿರುವಲ್ಲಿ ಯಾವ ಪ್ರಾಣಿಯ ವಧೆಯೂ ಆಗುವುದಿಲ್ಲ.
೩. ಅವರು ಭೂಮಿಯನ್ನು ಸೋಂಕದೆ ಆಕಾಶದಲ್ಲಿ ಸಂಚರಿಸುವರು.
೪. ಅವರು ಭೋಜನ ಮಾಡುವುದಿಲ್ಲ.
೫. ಅವರು ಸಂಚರಿಸುವ ಅತಿವೃಷ್ಟ್ಯಾದಿ ಅತಿಬಾಧೆಗಳಿಲ್ಲ
೬. ಅವರನ್ನು ನೋಡುವವರಿಗೆಲ್ಲ ಅವರು ತಮ್ಮ ಸಮ್ಮುಖದಲ್ಲಿ ಇದ್ದಂತೆ ತೋರುವುದು.

೭. ಎಲ್ಲ ವಿದ್ಯೆಗಳ ಒಡೆತನವು ಅವರಿಗುಂಟು.

೮. ಅವರ ನೆರಳು ಬೀಳುವುದಿಲ್ಲ.

೯. ಅವರ ಕಣ್ಣು ರೆಪ್ಪೆಗಳು ಬಡಿಯುವುದಿಲ್ಲ.

೧೦. ಅವರ ದೇಹದ ಕೂದಲು, ಉಗುರುಗಳು ಬೆಳೆಯುವುದಿಲ್ಲ.

ಹಾಗೆಯೇ ಹದಿನಾಲ್ಕು ಅತಿಶಯಗಳು ದೇವತೆಗಳಿಂದ ಮಾಡಲ್ಪಡುವವು. ಅವುಗಳೆಂದರೆ

೧. ಅರ್ಹಂತರಿಗೆ ಅರ್ಧಮಾಗದೀ ಭಾಷೆಯುಂಟಾಗುವುದು.

೨. ಸಮಸ್ತ ಜೀವನದಲ್ಲಿ ಪರಸ್ಪರ ಮೈತ್ರಿಯುಂಟಾಗುವುದು.

೩. ದಿಕ್ಕುಗಳು ನಿರ್ಮಲವಾಗುವವು.

೪. ಆಕಾಶವು ನಿರ್ಮಲವಾಗುವುದು.

೫. ಎಲ್ಲ ಋತುಗಳಲ್ಲಿ ಹೂ-ಹಣ್ಣು-ಕಾಯಿಗಳು ಬೆಳೆಯುವುವು.

೬. ಒಂದು ಗಾವುದವರೆಗಿನ ನೆಲವು ಕನ್ನಡಿಯಂತೆ ನಿರ್ಮಲವಾಗುವುದು.

೭. ಅರ್ಹಂತರು ನಡೆಯುವಾಗ ಅವರ ಪಾದಗಳು ಕೆಳಗೆ ಸುವರ್ಣ ಕಮಲಗಳುಂಟಾಗುವುವು.

೮. ಆಕಾಶದಲ್ಲಿ ಜಯ ಜಯಧ್ವನಿಯುಂಟಾಗುವುದು.

೯. ಮಂದವೂ-ಸುಗಂಧವೂ ಆದ ಗಾಳಿ ಬೀಸುವುದು.

೧೦. ಸುವಾಸನೆಯ ಮಳೆಯಾಗುವುದು

೧೧. ಪವನ ಕುಮಾರ ದೇವತೆಗಳು ನೆಲವನ್ನು ಗುಡಿಸಿ ನಿರ್ಮಲ ಮಾಡುವರು.

೧೨. ಎಲ್ಲ ಜೀವಿಗಳಿಗೆ ಆನಂದವಾಗುವುದು.

೧೩. ಅವರ ಇದಿರಿನಲ್ಲಿ ಧರ್ಮಚಕ್ರವು ತಿರುಗುವುದು.

೧೪. ಛತ್ರಚಾಮರ ಘಟಿ ಮೊದಲಾದ ಎಂಟು ಮಂಗಲ ವಸ್ತುಗಳು ಯಾವಾಗಲೂ ಹತ್ತಿರ ಇರುವುವು."[೭೩]

ಹೀಗೆ ಇವು ತೀರ್ಥಂಕರರನ್ನು ಗುರುತಿಸುವ ವಿಶಿಷ್ಟ ಗುಣಗಳೆನಿಸಿವೆ. ಇದರಿಂದಾಗಿ ಇವರಿಗೆ ಮತಿ-ಶ್ರುತ ಅವಧಿಗಳೆಂಬ ತ್ರಿಕಾಲಜ್ಞಾನಿಗಳೆಂಬ ಹೆಗ್ಗಳಿಕೆ ಇವರಿಗೆ ಪ್ರಾಪ್ತವಾಗಿದೆ. ಜೈನರಲ್ಲಿ ತೀರ್ಥಂಕರರೇ ದೇವರು. ಬೇರೆ ದೇವರ ಕಲ್ಪನೆ ಇವರ ಧರ್ಮಶಾಸ್ತ್ರ ಪುರಾಣಗಳಲ್ಲಿ ಕಂಡುಬರುವುದಿಲ್ಲ. "ತೀರ್ಥಂಕರರನ್ನು ಮೂರು ಭಾಗಗಳಲ್ಲಿ ಗುರುತಿಸುತ್ತಾರೆ. ಮೊದಲನೆಯದು ವರ್ತಮಾನ ಕಾಲದ ತೀರ್ಥಂಕರರು.

| | |
|---|---|
| ೧. ವೃಷಭ | ೨. ಅಜಿತ |
| ೩. ಶಂಭವ | ೪. ಅಭಿನಂದನ |
| ೫. ಸುಮತಿ | ೬. ಪದ್ಮಪ್ರಭ |
| ೭. ಸುಪಾರ್ಶ್ವ | ೮. ಚಂದ್ರಪ್ರಭ |
| ೯. ಪುಷ್ಪದಂತ | ೧೦. ಶೀತಲ |
| ೧೧. ಶ್ರೇಯಾಂಸ | ೧೨. ವಾಸುಪೂಜ್ಯ |
| ೧೩. ವಿಮಲ | ೧೪. ಅನಂತನಾಥ |
| ೧೫. ಧರ್ಮನಾಥ | ೧೬. ಶಾಂತಿನಾಥ |

೧೭. ಕುಂದನಾಥ ೧೮. ಅರನಾಥ

೧೯. ಮಲ್ಲಿನಾಥ ೨೦. ಮುನಿಸುವ್ರತ

೨೧. ನಮಿನಾಥ ೨೨. ನೇಮಿನಾಥ

೨೩. ಪಾರ್ಶ್ವನಾಥ ೨೪. ವರ್ಧಮಾನ

ಇವರಂತೆ ಭೂತಕಾಲದಲ್ಲಿ ೨೪ ಜನ ಭವಿಷ್ಯತ್ ಕಾಲದಲ್ಲಿ ೨೪ ಜನ ತೀರ್ಥಂಕರರನ್ನು ಜೈನರು ಗುರುತಿಸಿದ್ದಾರೆ."[೬೪]

ತೀರ್ಥಂಕರರು ೨೪ ಮಂದಿ ಇದ್ದರೂ, ಕುಲ, ಗೋತ್ರ, ನಾಮಾದಿಗಳನ್ನು ಬಿಟ್ಟರೆ ವ್ಯಕ್ತಿ ವ್ಯಕ್ತಿಗೂ ಅಷ್ಟೇನು ವ್ಯತ್ಯಾಸ ಕಂಡು ಬರುವುದಿಲ್ಲ. ಪ್ರತಿಯೊಬ್ಬ ತೀರ್ಥಂಕರರಿಗೂ ಎತ್ತರ, ಮೈಬಣ್ಣ, ಆಯಸ್ಸು, ಲಾಂಛನ, ಜನ್ಮನಕ್ಷತ್ರಗಳು, ಯಕ್ಷ-ಯಕ್ಷಿಯರು, ಗಾಂಧಾರರ ಸಂಖ್ಯೆ, ದೀಕ್ಷಾಸ್ಥಾನ ಮುಂತಾದ ವಸ್ತು ಚಿಹ್ನೆಗಳನ್ನು ಹೊಂದಿದ್ದಾರೆ. ಇವರನ್ನು ಜೈನರು ತೀರ್ಥಂಕರರು ಎಂದು ಕರೆಯುತ್ತಾರೆ. ತೀರ್ಥಂಕರರೆಂದರೆ ಅರಿವನ್ನುಂಟು ಮಾಡುವವರು, ಜ್ಞಾನಿಗಳೆಂದು ಅರ್ಥ. ಸಂಸಾರಿ ಜೀವರಿಗೆ ಪರಿನಿರ್ವಾಣ ಮಾರ್ಗವನ್ನು ತೋರಿಸಿಕೊಟ್ಟವರು.

ಪ್ರಾಚೀನ ಕಾಲದಿಂದಲೂ ಜೈನರು ತಮ್ಮ ಸಾಹಿತ್ಯದ ಮೂಲಕ ತೀರ್ಥಂಕರರನ್ನು ತಮ್ಮ ಜೀವ ವಿಕಾಸ ಕ್ರಮದಲ್ಲಿ ಬಂದ ಚರಿತ್ರೆಯನ್ನೇ ಧರ್ಮ ಪ್ರಚಾರದ ಸಾಧನವಾಗಿ ಉಪಯೋಗಿಸಿಕೊಂಡು ಪುರಾಣ ರಚನೆ ಮಾಡಿದ್ದಾರೆ. ತಮ್ಮದೇ ಆದ ಲೋಕಕಾರ ಕಥನ, ತೀರ್ಥಮಹಿಮಾ, ಸಮರ್ಥನ, ಚರ್ಮಗತಿ, ಸ್ವರೂಪ, ತಪೋದಾನ ವಿಧಾನ, ವರ್ಣನ ಮತ್ತು ತತ್ಫಲಪ್ರಾಪ್ತಿ, ಪ್ರಕಟನೆಂಬ ಪಂಚಲಕ್ಷಣಗಳನ್ನು ಇಟ್ಟುಕೊಂಡರು. ತಮ್ಮ ಸಾಹಿತ್ಯದ ಜೊತೆಗೆ ತೀರ್ಥಂಕರರ ಚರಿತ್ರೆಯನ್ನು ಸಮಾಜಮುಖಿಯಾಗಿಸುತ್ತ ಬಂದಿದ್ದಾರೆ. ಈವರೆಗೂ ಎಲ್ಲ ಜೈನ ಕವಿಗಳೂ ಸಹ ತೀರ್ಥಂಕರರನ್ನು ಕುರಿತು ಪುರಾಣ, ಕಾವ್ಯಗಳನ್ನು ರಚಿಸಿರುವುದನ್ನು ನೋಡಬಹುದು. ಈ ಕೃತಿಗಳಲ್ಲಿ ತಮ್ಮ ಧರ್ಮದ ಧಾರ್ಮಿಕ ನಾಯಕರಾದ ತೀರ್ಥಂಕರರನ್ನು ಕುರಿತಾಗಿದೆ. ಇಲ್ಲಿ ಪಂಚ ಕಲ್ಯಾಣಗಳ ಮೂಲಕ ಅವರನ್ನು ವರ್ಣಿಸಿ ಜನ್ಮ ಜನ್ಮಾಂತರದ ಜೀವನದ ಪ್ರಸ್ತಾಪ ಮಾಡುತ್ತಾರೆ.

ಬಹುತೇಕ ಎಲ್ಲ ಜೈನಕವಿಗಳು ತೀರ್ಥಂಕರರ ಚರಿತ್ರೆಯನ್ನು ಎರಡು ಭಾಗಗಳಾಗಿ ನಿರ್ಮಿಸುತ್ತ ಹೋದರು. ಒಂದು ತೀರ್ಥಂಕರನಾಗುವವರೆಗಿನ ಸಾಧನೆಯ ಕಥೆ. ಇನ್ನೊಂದು ತೀರ್ಥಂಕರನಾಗಿ ಜೀವನವನ್ನು ತ್ಯಜಿಸಿ ವೈರಾಗ್ಯವನ್ನು ಪಡೆಯುವ ಕಥೆಯಾಗಿರುತ್ತದೆ. ಇವರು ಭವಾವಳಿ ತಂತ್ರದ ಮೂಲಕ ತೀರ್ಥಂಕರರ ಜನ್ಮ ಜನ್ಮಾಂತರಗಳನ್ನು ಪ್ರಸ್ತಾಪಗಳನ್ನು ಮಾಡುತ್ತಾರೆ. ಇಂತಹ ಸಮಗ್ರವಾದ ತೀರ್ಥಂಕರರ ಚರಿತ್ರೆಯ ಪುರಾಣಕತೆಗಳಿವೆ. ದೀರ್ಘವಾದ ವರ್ಣನೆಗಳ ಮೂಲಕ ನೋಡುತ್ತಿದ್ದವು. ಆದರೆ ಆ ಕಾಲ ಸರಿದು ಈ ಕವಿಗಳು ನೂತನವಾದ ಮಾರ್ಗವನ್ನು ಅಳವಡಿಸಿಕೊಂಡರು. ಅದುವೇ ಆ ಹಾಡುಗಬ್ಬ ಸಾಹಿತ್ಯ ಅಥವಾ ಹಾಡುಗಳು. ಇವುಗಳ ಮುಖಾಂತರ ಜೈನಧರ್ಮದ ತತ್ತ್ವ, ಸಿದ್ಧಾಂತ, ಧಾರ್ಮಿಕ ವಿಚಾರಗಳು, ತೀರ್ಥಂಕರರ ಚರಿತೆ ಜೈನಮುನಿಗಳು ಹೀಗೆ ಮುಂತಾದ ವಿಷಯಗಳನ್ನು ಒಳಗೊಂಡ ಬಿಡಿಬಿಡಿಯಾದ ಹಾಡುಗಳೇ ಈ ಜೈನ ಹಾಡುಗಳಾಗಿವೆ. ಈ ಹಾಡುಗಳು ಕಿರಿದಾದವುಗಳಾದರೂ ಹಿರಿದರ್ಥವನ್ನು ತಿಳಿಸಿ ಹೇಳುವ ಮಹತ್ವಪೂರ್ಣವಾದ ಹಾಡುಗಳ ಪ್ರಕಾರವಾಗಿವೆ.

ಒಟ್ಟಿನಲ್ಲಿ ಈ ಹಾಡುಗಳಲ್ಲಿ ಕಂಡು ಬರುವಂತಹ ಪ್ರಮುಖ ವಸ್ತುವಿಷಯಗಳು. ದೈವದ ಪರಿಕಲ್ಪನೆಗೆ ಬದಲಾಗಿ ಆತ್ಮದ ಶ್ರೇಷ್ಠತೆ, ಪಂಚಪರಮೇಷ್ಠಿಗಳು, ಅರ್ಹಂತರು, ಸಿದ್ಧರು, ಉಪಾಧ್ಯಾಯರು, ಆಚಾರ್ಯರು, ಸಾಧು ಜೈನಮುನಿಗಳು ಪರಂಪರೆಯ ವಿವರಣೆಯನ್ನು ನೀಡುತ್ತವೆ. ಹಾಗೆಯೇ ಘಾತಿಕರ್ಮಗಳ ನಾಶ, ಅಶರೀರಿಗಳಾದರೂ ದೇಹವುಳ್ಳ ಭಾವನೆ, ಹದಿನೆಂಟು ರೀತಿಯ ದೋಷಗಳ ಮುಕ್ತಿ ಮುಂತಾದ ಸಂಗತಿಗಳನ್ನು ತಿಳಿಸುತ್ತವೆ. ಇಲ್ಲಿ ತೀರ್ಥಂಕರರು ಭೂಮಿಯ ಪಾಪವನ್ನು ಹಗುರ ಮಾಡಲು ತಾಮಸ ಹೃದಯ ಬೆಳಗಲು, ಯುಗಯುಗಾಂತರಗಳಲ್ಲಿ ತೀರ್ಥಂಕರರು ಉದಯಿಸುತ್ತಾರೆಂಬ ಭಾವನೆಯಿದೆ. ಇದು ಹಿಂದೂಗಳಲ್ಲಿನ ಕಲ್ಪನೆಯನ್ನು ಹೋಲುತ್ತದೆ. ತೀರ್ಥಂಕರರ ಸಾಧನೆಯ ವೈಭವೀಕರಣ, ಪಠಣ ಈ ಹಾಡುಗಳ ಆಶಯ, ತೀರ್ಥಂಕರರ ಜನನ-ಯೌವ್ವನ-ನಿರ್ಮಾಣ ಮುಂತಾದವುಗಳ ಕುರಿತು ಜೀವನಚರಿತ್ರೆಗಳು ಕಟ್ಟಿಕೊಡುತ್ತವೆ. ಜೀವನದುದ್ದಕ್ಕೂ ನಡೆಯುವ ಪಂಚಕಲ್ಯಾಣಗಳ ಮಹೋತ್ಸವ ವರ್ಣನೆಯ ಸೊಗಸಾದ ಪ್ರತಿಪಾದನೆ ಇಲ್ಲಿ ಕಂಡುಬರುತ್ತವೆ. ಭಕ್ತನ ಅಂತರಂಗದ ಭಕ್ತಿಯ ಆವೇಶ, ತೀರ್ಥಂಕರರ ಲಾಂಛನ, ತಂದೆ, ತಾಯಿ, ಜನ್ಮಸ್ಥಳ, ನಿರ್ವಾಣ ಸಮಯ, ಧರ್ಮಬೋಧೆ, ಪಂಚಕಲ್ಯಾಣ, ಸಮಸವರಣ ರಚನಾ ಪರಿಕಲ್ಪನೆ ಮುಂತಾದವುಗಳಿವೆ. ಹಾಗೆಯೇ ಬಿಡಿಬಿಡಿಯಾದ ಹಾಡುಗಳಲ್ಲಿ ಜೈನಧರ್ಮದ ಸಾಂಸ್ಕೃತಿಕ ಆಯಾಮಗಳನ್ನು ಅನಾವರಣಗೊಳಿಸುತ್ತವೆ. ಇಂತಹ ಹಾಡುಗಳನ್ನು ಸ್ಥೂಲವಾಗಿ ವಿವೇಚಿಸುವುದರ ಮೂಲಕ ಜೈನಧರ್ಮದ ಸಾಂಸ್ಕೃತಿಕ ವಿವಿಧ ಆಯಾಮಗಳನ್ನು ಪರಿಚಯಿಸುತ್ತವೆ.

ತೀರ್ಥಂಕರರ ಮೊದಲಿನ ಹಾಡುಗಳಲ್ಲಿ ಒಂದು ಹೊಸ ಮಾರ್ಗದ ಮೂಲಕ ಹಾಡುಗಳ ಪ್ರಾರಂಭ ಮಾಡಿರುವುದು ಈ ಹಾಡುಗಳ ವಿಶಿಷ್ಟತೆಗೆ ಮತ್ತೊಂದು ಕಾರಣ. ಏಕೆಂದರೆ ಈ ಹಿಂದೆ "ಕಾವ್ಯಾರಂಭದ ಮಂಗಳಚರಣ ಪದ್ಯಗಳ ಇಡಿ ಕಾವ್ಯವೇ ಪ್ರಾರ್ಥನೆಯಾಗಿರುವ ಹಲವು ನಿದರ್ಶನಗಳಿವೆ. ಹರಿಹರ ಕವಿ ಪ್ರಾರ್ಥನೆಗಾಗಿಯೇ ಇಡಿಯಾಗಿ ರಗಳೆಯನ್ನು ಬರೆದಿದ್ದಾನೆ. ವೀರಶೈವ ಸಾಹಿತ್ಯದಲ್ಲಂತೂ ಈ ಪ್ರಕಾರದ ಸಾಹಿತ್ಯ ವಿಪುಲವಾಗಿ ಬೆಳೆದುಬಂದಿದೆ. ಪ್ರಾರಂಭದಲ್ಲಿ ದೈವೀ ಕೃಪೆಗಾಗಿ ಸ್ತೋತ್ರಗಳು ಮೀಸಲಾಗಿದ್ದವು. ಬರುಬರುತ್ತ ಇದರ ವಸ್ತು ಮತ್ತು ವ್ಯಾಪ್ತಿಗೆ ಧರ್ಮ-ಧರ್ಮಾಧಿಕಾರಿಗಳು, ಪುಣ್ಯಪುರುಷರು ಒಳಗಾಗಿದ್ದಾರೆ. ಹಾಗೆಯೇ ಜೈನಹಾಡುಗಳಲ್ಲಿ ತೀರ್ಥಂಕರರ ಹಾಡುಗಳು ಈ ಸ್ತೋತ್ರ ಸಾಹಿತ್ಯ ಪರಂಪರೆಗೆ ಸೇರಿದವುಗಳಾಗಿದ್ದು ೨೪ ತೀರ್ಥಂಕರರ ಸಾಧನೆಯನ್ನು ವೈಭವೀಕರಿಸಿ ಪಠಣ ಮಾಡಿದ್ದಾರೆ."[೭೫] ಈ ಹಾಡುಗಳು ೨೪ ತೀರ್ಥಂಕರರನ್ನು ಸ್ಮರಿಸುತ್ತವೆ. ಕವಿಯ ಅಂತರಂಗದ ಸುಪ್ತ ಬಯಕೆಯ ಈ ಹಾಡು ಭಕ್ತಿ-ಶಾಂತರಸಗಳಿಂದ ಮಡುಗಟ್ಟಿ ನಿಂತಿವೆ. "ಶ್ರೀಮದಮರಪತಿನರ" ಎಂಬ ೨೪ ಪದ್ಯಗಳುಳ್ಳ ಹಾಡಾಗಿದೆ.

"ಶ್ರೀಮದಮರಪತಿ ನರಸುರ ವಂದ್ಯಗೆ
ಸೋಮಾರ್ಕಕೋಟಿ ತೇಜನಿಗೆ
ಕಾಮಿತಾರ್ಥವನಿವ ವೃಷಭ ಜಿನೇಶಗೆ
ಪ್ರೇಮದಿಂದಲಿ ವಂದಿಸುವೆ"||[೭೬]

ಮೊದಲ ಪದ್ಯದಲ್ಲಿ ಮೊದಲನೇ ತೀರ್ಥಂಕರನಾದ ವೃಷಭನಾಥನನ್ನು ಕುರಿತು ಹಾಡಿರುವುದಾಗಿದೆ ಹಾಗೂ ಕಾಮಿತಾರ್ಥವನ್ನು ಕೊಡುವ ಎಂಬ ವಿಶೇಷಣ ಪದ ಬಳಸುವ ಮೂಲಕ ಆರಂಭವಾಗುತ್ತದೆ. ಹೀಗೆ ಉಳಿದ ೨೩ ತೀರ್ಥಂಕರರನ್ನು ಸ್ಮರಿಸುವ ಮೂಲಕ ಅವರ ಶ್ರೇಷ್ಠತೆಯ ಗುಣಗಳನ್ನು ಕೊಂಡಾಡುವುದನ್ನು ನೋಡುತ್ತೇವೆ.

"ಭಜಿಸುವ ಭಕ್ತಿಯಿಂದಲಿ ನಾನೊಮ್ಮೆ
ಅಜಿತಜಿನರ ಪಾದಯುಗವಾ|
ರುಜನ ಕೆಡಿಸಿದಾರು ಹುಲ್ಲದೆವಾಗಿ
ನಿಜಭಕ್ತಿಯಿಂದ ವಂದಿಸುವೆ||

ತುಂಬಿದ ಸುಖಗಳ ಶಂಭವ ಜಿನರಿಗೆ
ನಂಬಿದವರಿಗೆ ಇವಲೇಸ
ಸಂಭ್ರಮದಿಂದಲಿ ಸಲಹುವ ದೇವಾಗಿ ಗು
ಣಾಂಬುಧಿಯನೀವ ಸರ್ವೇಶಾ||

ಉಭಯ ಲಕ್ಷ್ಮೀಯ ನೆರೆ ತಾಳಿದವಾಗಿ| ಶುಭಲಕ್ಷಣಾಂಗ ಮೂರುತಿಗೆ
ಅಭಿನಂದನ ಜಿನರಡೆಗಳ ನೆನೆವೆನು
ಶುಭಮತಿ ಎನಗಾಗಲೆಂದು||

ಮಮತೆಯಿಂದಲಿ ಸರ್ವಜನರನು ಸಲಹುವ
ಸುಮತಿ ಜಿನರ ಪಾದ ಮುಗಿವಾ
ಕ್ರಮದಿಂದ ನೆನೆವೆನು ಅನುದಿನ ನಿಮ್ಮನು
ಕ್ರಮದ ದೋಷವು ಕೆಡವೆಂದು||"[೭೬]

ಹೀಗೆ ಇನ್ನುಳಿದ ಪದ್ಯಗಳಲ್ಲಿ ಪ್ರತಿಯೊಬ್ಬ ತೀರ್ಥಂಕರರನ್ನು ಸ್ಮರಿಸುವುದು ಕಂಡುಬರುತ್ತದೆ. ಕಾಮಿತಾರ್ಥವನು ಕೊಡುವ ವೃಷಭ, ಭಕ್ತಿಯ ಅತಿಶಯವಾದ ಅಜಿತನಾಥ, ಸುಖದಿಂದ ತುಂಬಿರುವ ಶಂಭವಜಿನಾಥ, ಶುಭಲಕ್ಷಣ, ಮೂರ್ತಿಯಾದ ಅಭಿನಂದನ, ಮಮತೆಯ ಪ್ರತೀಕವಾದ ಸುಮತಿ, ಪದ್ಮವಶಾಂತದವನಾದ ಪದ್ಮಪ್ರಭ, ಸುಖವಿತ್ತು, ಸಲುಹುವ ಸುಪಾರ್ಶ್ವನಾಥ, ಭವಬಂಧನವನ್ನು ಬಿಡಿಸುವ ಚಂದ್ರಪ್ರಭ, ಅಮೃತಾಂಗನೆಯೊಳು ನಿಂತ ಪುಷ್ಪದಂತ, ಪಾವಕವನ್ನೆಲ್ಲ ತಂದೀಯುವ ಶೀತಲಸ್ವಾಮಿ, ಕಾರ್ಮಿಕ ಫಲವೀಯುವ ಶ್ರೇಯಾಂಶ, ಲೇಸನ್ನುಂಟು ಮಾಡುವ ವಾಸು ಪೂಜ್ಯ, ಅಮರಗತಿ, ಮಲೆಕೊಡುವ ವಿಮಲರ್ಜಿ, ಮುಕ್ತಿ ಸಂಪದನೀಯುವ ಅನಂತಜಿನ, ಧರ್ಮವನ್ನು ಧರೆಯೊಳುದ್ಧರಿಸಿದ ಧರ್ಮನಾಥ, ಅಗಣಿತ ಸುಖಗಳ ಗಣಿಯಾದ ಶಾಂತಿನಾಥ, ಭವನಾಶಕ್ಕೆ ಕಾರಣವಾದ ಕುಂದನಾಥ, ಜನರನ್ನು ಸಲಹುವ ಅರಜಿನ, ದೇವಮಲ್ಲಿನಾಥ, ಅನುಪಮಮತಿಗಣ ವೀತರಾಗದ ಮುನಿಸುವ್ರತ, ಕೋಮಲಾಂಗನಾದ ನೇಮಿನಾಥ, ಮೋಕ್ಷ ಸಂಪದ ನೀಡುವ ನೇಮಿನಾಥ, ಸಿದ್ಧಪದವಿಯನ್ನು ಕೊಡುವ ವರ್ಧಮಾನರನ್ನು ತಪ್ಪದೆ ನೆನೆಯುತ್ತೇವೆ ಎಂಬ ಉತ್ಕಟಭಾವ ಈ ಹಾಡಿನಲ್ಲಿ ವ್ಯಕ್ತವಾಗಿದೆ. ಜೊತೆಗೆ ೨೪ ತೀರ್ಥಂಕರರ ಹೆಸರು, ವ್ಯಕ್ತಿತ್ವವನ್ನು ಪರಿಚಯಿಸುತ್ತವೆ. ಹಾಗೆಯೇ 'ಶ್ರೀಮಂದಾರಪತಿ' ಈ ಹಾಡು ಸಾಂಗತ್ಯ ಛಂದಸ್ಸಿನಿಂದ ಕೂಡಿದೆ. ಒಟ್ಟಿನಲ್ಲಿ ಈ ಹಾಡು ಕರ್ಮವನ್ನು ಸುಟ್ಟು ದುರ್ಮತಿಗಳು ದೂರವಾಗಲೆಂದು ಈ ಭೂಮಿಯಲ್ಲಿ ಧರ್ಮೋದ್ಧಾರಕ್ಕಾಗಿ ಜನಿಸಿರುವ ಜಿನಧರ್ಮ ಸ್ವೀಕಾರ, ಆ ಮೂಲಕ ಮನುಷ್ಯನ ಬದುಕಿನ ಆತ್ಯಂತಿಕ ಸುಖವಾದ ಮೋಕ್ಷ ಪಡೆಯುವಿಕೆಗೆ ವಿವಿಧ ತೀರ್ಥಂಕರರನ್ನು ಸ್ಮರಿಸಬೇಕಾಗಿದೆ. "ಉದಯಕಾಲದೊಳೆದ್ದು" ಎಂಬ ಹಾಡು ಒಂದು ರೀತಿಯಲ್ಲಿ ಸುಪ್ರಭಾತದ ಹಾಡಿನಂತೆ ಇರುವುದು ಕಂಡುಬರುತ್ತದೆ.

ಉದಯ ಕಾಲದೊಳೆದ್ದು ಮುದದಿ ಸ್ನಾನವ ಮಾಡಿ

ಮೃದು ವಚನದಿಂದ ಶ್ರೀ ಜಿನರ ಪಾದವ ನೆನೆಯೈ.||"[೭೮]

ಎನ್ನುವ ಪಲ್ಲವಿಯು ಜಿನಸ್ತುತಿಯ ಹಾಡಾಗಿದೆ. ಈ ಹಾಡು ೧೦ ಪದ್ಯಗಳಿಂದ ಕೂಡಿದ್ದು ಜೈನರ ಧಾರ್ಮಿಕ ಹಾಗೂ ಸಾಂಸ್ಕೃತಿಕ ಯಾತ್ರಾ ಸ್ಥಳಗಳನ್ನು ಪರಿಚಯಿಸುತ್ತದೆ. ಹಾಗೆಯೇ ಆ ಸ್ಥಳದಲ್ಲಿ ನೆಲೆಸಿರುವಂತಹ ತೀರ್ಥಂಕರರನ್ನು, ಬಸದಿಗಳನ್ನು ಪ್ರಸ್ತಾಪಿಸುತ್ತದೆ.

ಹೆಸರಾದ ಪೆನಗೊಂಡೆ ಪಚ್ಚಪಾರೀಶ್ವ ಹರದ

ಬಸದಿಯ ಪಾರೀಶ್ವಮತಿಯ ಕೂಡೆ

ಹಸನಾದ ಗುಡಿಬಂಡೆ ಚಂದ್ರನಾಥಸ್ವಾಮಿ

ಕುಸುಮಶರನ ಗೆಲಿದ ಪಾರೀಶ್ವಜಿನರ ನೆನೆಯೈ||

ನಾಮ ಸಾಸಿರದೊಡೆಯ ನಾಮಗೊಂಡಲ ಅನಂತ ಜಿನಪ

ಪ್ರೇಮದಿಂ ಸಲಹೆನ್ನ ಗಗನಗಿರಿ ಮಲ್ಲಿನಾಥ

ಕಾಮಿನಾರ್ಥವ ಕೊಡುವ ರಾಂಪುರದ ಆದೀಶ್ವರ

ಸ್ವಾಮಿ ರಕ್ಷಿಸುವ ಬೇಗ ಹಿರಿಯೂರು ಜಿನರ ನೆನೆಯೈ||

ಚಪ್ಪನ್ನದೇಶದೊಳಗಿಪ್ಪ ಜಿನಗೇಹದೊಳು

ಇಪ್ಪತ್ತುನಾಲ್ಕು ಜಿನಬಿಂಬಗಳಿಗೆ

ಪುಷ್ಪಗಂಧಾಕ್ಷತೆಯ ಫಲಗಳಿಂದರ್ಚಿಸು ಚಂ

ಪಪುರಿ ಚನ್ನಗಿರಿ ಜಿನೇಶ ಮುಕ್ತಿಮಾರ್ಗವ ತೋರಿಸೈ||[೭೯]

ಜೈನರ ಹಲವು ಧಾರ್ಮಿಕ ಕೇಂದ್ರಗಳನ್ನು ಆಯಾ ಪ್ರದೇಶದಲ್ಲಿ ನೆಲೆಸಿರುವ ತೀರ್ಥಂಕರರನ್ನು ನೆನೆಯುತ್ತಾ ಪ್ರದೇಶಗಳ ಸಾಂಸ್ಕೃತಿಕ ಅನನ್ಯತೆಯನ್ನು ಬಿಂಬಿಸುವಲ್ಲಿ ಈ ಹಾಡುಗಳು ನೆರವಾಗಿವೆ. ಇಲ್ಲಿ ರತ್ನಗಿರಿ, ಪೆನುಗೊಂಡೆ, ನಾಮಗೊಂಡಲ, ಹಿರಿಯೂರು, ಚನ್ನಗಿರಿ, ವೇಣುಪುರಿ, ಕುಚ್ಚಂಗಿ, ಬೇಳೂರು, ಕೂಡಲೂರು, ನಿಡಗಲ್ಲು, ಶಿರಾ ಮುಂತಾದ ಸ್ಥಳಗಳನ್ನು ನೆನೆಯುತ್ತಾರೆ. ಆಯಾ ಸ್ಥಳಗಳಿಗೆ ಹಾಡುಗಾರ ಅನ್ವರ್ಥಕ ವಿಶೇಷತೆಗಳನ್ನು ನೀಡಿರುವುದು ಅರ್ಥವಾಗುತ್ತದೆ. ಹೆಸರಾದ ಪೆನುಗೊಂಡೆಯ ಪಚ್ಚಪಾರೀಶ್ವರ, ನಾಮಸಾಸಿರದೊಡೆಯ ನಾಮಗೊಂಡಲ ಅನಂತಜಿನ, ನಿಚ್ಚ ವೈಭವದೊಳೆಸೆವ ವೇಣುಪುರಿ, ಇಳೆಯೊಳಧಿಕವಾದ ಬೇಳೂರು ವಿಮಲ ಜಿನ, ಎಡಬಲದ ನಿಡಗಲ್ಲು ನಾರೀಶ್ವ, ಜಗದೊಳತಿಶಯವಾದ ಶೀರ್ಯದಾ ಶಾಂತಿಜಿನ ಹೀಗೆ ಮುಂತಾಗಿ ವರ್ಣಿಸುವ ರೀತಿಯಾಗಿದೆ"[೮೦] ಹಾಡಿನಲ್ಲಿ ಭಕ್ತಿಯ ನಿವೇದನೆಯ ಆರ್ತಧ್ವನಿ ಈ ಹಾಡಿನಲ್ಲಿ ಪ್ರಕಟವಾಗಿದೆ. ಹಾಗೆಯೇ ಮತ್ತೊಂದು ಹಾಡಿನಲ್ಲಿ ಜೈನರ ಧಾರ್ಮಿಕ ಸ್ಥಳಗಳನ್ನು ಪರಿಚಯಿಸುವುದನ್ನು ಮತ್ತು ಪ್ರಾರ್ಥನೆಯನ್ನೊಳಗೊಂಡಿದೆ.

"ಏಳು ಮನೋಹರ ಚಾವದಲ್ಲಿ ಕೇವಲಜ್ಞಾನ

ವೇಳೆಯಾಯಿತು ವ್ಯರ್ಥದಲಿ ದಿನ"[೮೧]

ಎಂಬ ಜೈನರ ರತ್ನತ್ರಯಗಳನ್ನು ಪರಿಚಯಿಸುತ್ತದೆ. ಸಮ್ಯಕ್‌ಜ್ಞಾನ, ಸಮಕ್ಯ್‌ದರ್ಶನ, ಸಮ್ಯಕ್‌ಚಾರಿತ್ರ ಇವು ಲಭಿಸುವುದರಿಂದ ದೈವತ್ವದ ನೆಲೆಗೇರುತ್ತಾರೆ ಎಂಬ ಭಾವನೆ ಜೈನರಲ್ಲಿದೆ. ಪ್ರತಿಯೊಬ್ಬ ತೀರ್ಥಂಕರರು

ಕೇವಲ ಜ್ಞಾನವನ್ನು ಪಡೆದು ದೈವತ್ವಕ್ಕೇರಿರುವುದು ತಿಳಿದುಬರುತ್ತದೆ. ಮುಂದಿನ ಪದ್ಯಗಳಲ್ಲಿ ಜೈನರ ಪವಿತ್ರ ಸ್ಥಳಗಳು, ತೀರ್ಥಂಕರರು ನಿರ್ವಾಣ ಹೊಂದಿದ ಸ್ಥಳಗಳನ್ನು ಪರಿಚಯಿಸುತ್ತದೆ.

"ಕೈಲಾಸಗಿರಿಯಲ್ಲಿ ಆದಿ ಜಿನ ದೇವರಿಗೆ ಚಂಪಾಪುರದ
ವಾಸು ಪೂಜ್ಯನಾಥನ ಮತ್ತು ಪಾವಾಪುರದ ವರ್ಧಮಾನ
ಉಜಂತಗಿರಿ ನೇಮಿಜಿನರ ವಂದಿಸುತ ಸಮ್ಮೇದ ಶಿಖರದಲಿ
ಇಪ್ಪತ್ತು ಚೂಳಿಕೆಯ ಇಪ್ಪತ್ತು ತೀರ್ಥಂಕರರು ಮೊದಲಾಗಿ
ಅಗಣಿತರು ಲೆಕ್ಕವಿಲ್ಲದ ಅಸಂಖ್ಯಾತ ಮುಕ್ತಿಗೆ ಹೊಂದವರು
ಮಹಿಮೆಯನು ಧ್ಯಾನಿಸು ಭವ್ಯ"[೮೨]

ಇಲ್ಲಿ ಬರುವಂತಹ ಸ್ಥಳಗಳು ಜಿನರ ಪವಿತ್ರ ಯಾತ್ರಾಸ್ಥಳಗಳಾಗಿವೆ. ಇಲ್ಲಿ ತೀರ್ಥಂಕರರು ನಿರ್ವಾಣ ಹೊಂದಿದ ಪವಿತ್ರ ಸ್ಥಳಗಳಾಗಿವೆ. ಚಂಪಾಪುರ, ಪಾವಾಪುರ, ಶ್ರೀ ಸಮ್ಮೇಕ್ ಶಿಖರ ಒರಿಸ್ಸಾ ರಾಜ್ಯದಲ್ಲಿ ಕಂಡುಬರುವ ಜೈನ ಪವಿತ್ರ ಯಾತ್ರಾಸ್ಥಳಗಳಾಗಿವೆ. ಬಹುತೇಕ ಎಲ್ಲ ಜೈನ ತೀರ್ಥಂಕರರು ಒರಿಸ್ಸಾ ರಾಜ್ಯದಲ್ಲಿ ನಿರ್ವಾಣ ಹೊಂದಿದ್ದಾರೆ. ಅದರಲ್ಲಿ ಜೈನರಿಗೆ ಅತ್ಯಂತ ಪವಿತ್ರವಾದ ಸ್ಥಳ ಸಮ್ಮೇಕ್ ಶಿಖರವಾಗಿದೆ. ಪ್ರತಿಯೊಬ್ಬ ಜೈನನು ಈ ಶಿಖರವನ್ನು ದರ್ಶನ ಮಾಡುವುದರ ಮೂಲಕ ಮುಕ್ತಿಯನ್ನು ಪಡೆಯಬಹುದು ಎಂಬ ಪರಿಕಲ್ಪನೆ ಜೈನರಲ್ಲಿದೆ.

"ಪರಮ ಪರಂಜ್ಯೋತಿ ಕೋಟಿ ಚಂದ್ರಾದಿತ್ಯ
ಕಿರಣ ಸುಜ್ಞಾನ ಪ್ರಕಾಶ
ಸುರರ ಮುಕುಟಮಣಿರಂಜಿತ ಚರಣಾಬ್ಜ
ಶರಣಾಗು ಪ್ರಥಮ ಜಿನೇಶ॥"[೮೩]

ಇದು ರತ್ನಾಕರವರ್ಣಿಯ ಕಾವ್ಯವಾದ 'ಭರತೇಶ ವೈಭವ'ದ ಮೊದಲ ನಾಂದಿ ಪದ್ಯವಾಗಿದೆ ಅಥವಾ ಪ್ರಾರ್ಥನ ಪದ್ಯವಾಗಿದೆ. ಬದುಕಿನಲ್ಲಿ ಕಂಡುಬರುವ ಭೋಗ-ತ್ಯಾಗಗಳ ಸಮನ್ವಯವನ್ನು ಕುರಿತಾಗಿದೆ. ಮುಂದಿನ ಹಾಡು ಜೈನರ ಧಾರ್ಮಿಕ ವಿಷಯಗಳನ್ನು ಪ್ರಸ್ತಾಪಿಸುತ್ತ ವ್ರತಗಳನ್ನು ಮತ್ತು ಕೆಲವು ಸ್ಥಳಗಳ ಜೊತೆಗೆ ಶಾಂತಿನಾಥ, ಅನಂತನಾಥ, ತೀರ್ಥಂಕರರನ್ನು ಪ್ರಸ್ತಾಪಿಸುತ್ತದೆ.

"ಅನಂತನಾಥನ ನೋಂಪಿಯೊಳಗೆ ಬಹು
ಜನರನ್ನು ಮನ್ನಿಹರು
ಜನಮತ ಪಂಚಮಿಯ ತಿಥಿಯೊಳ್ಬಹು
ಜನರಿಗೌತಣ ಮಾಳ್ಪರು॥

ಶಾಂತಿನಾಥನು ಕರುಣದಿ ಸತಿ
ಸುತ ಮಿತ್ರರು ಸಹಿತರ್ಪರು
ಅತಿಶಯದ ಖಾನಾಪುರದೊಳ
ಗತಿಶಯದ ಸುಖವಿರ್ಪರು॥"[೮೪]

ಈ ಹಾಡಿನಲ್ಲಿ ಕಲಿಯುಗದಲ್ಲಿ ಧರ್ಮವೆಂಬುವುದಿದೆ. ಅದರಲ್ಲಿ ಶ್ರೇಷ್ಠವೆನಿಸುವ ವ್ರತಗಳನ್ನು ಮಾಡುವ ತೀರ್ಥಂಕರರು ಸುಖ ನೆಮ್ಮದಿಯಿಂದ ಇರುವುದನ್ನು ಸಂಕೇತಿಸುತ್ತದೆ. ಜೈನರಲ್ಲಿ ಪುರಾತನ ಕಾಲದಿಂದಲೂ ನೋಂಪಿಯ ಆಚರಣೆ ಕಂಡುಬರುತ್ತದೆ. ಹಲವಾರು ಜೈನಕಾವ್ಯ, ಪುರಾಣಗಳಲ್ಲಿ ಹಲವಾರು ನೋಂಪಿಗಳನ್ನು ಪ್ರಸ್ತಾಪ ಮಾಡಿದ್ದಾರೆ. ಉದಾಹರಣೆಗೆ "ನೇಮಿಚಂದ್ರನ ನೇಮಿನಾಥ ಪುರಾಣದಲ್ಲಿ ಗೋಮುಖಿ ನೋಂಪಿಯ ಉಲ್ಲೇಖವಿದೆ. ಬಾಹುಬಲಿ ಕವಿಯ ನಾಗಕುಮಾರ ಚರಿತೆಯಲ್ಲಿ ಶ್ರೀ ಪಂಚಮ ನೋಂಪಿಯ ಪ್ರಸ್ತಾಪವಿದೆ."[೮೫] ಹಲವಾರು ಕಾವ್ಯಗಳಲ್ಲಿ ನೋಂಪಿಯ ಪ್ರಸ್ತಾಪ ಬಂದಿರುವುದನ್ನು ನೋಡಿದರೆ ಜೈನರಿಗೆ ಇರುವಂತಹ ನೋಂಪಿಯ ವ್ರತದ ಆಚರಣೆಯ ವಿಶಿಷ್ಟತೆ ಮತ್ತು ಮಹತ್ವ ತಿಳಿದುಬರುತ್ತದೆ. ಹಾಗೆಯೇ ಜೈನ ಹಾಡುಗಳಲ್ಲಿ ನೋಂಪಿಯ ವ್ರತಗಳನ್ನು ಪ್ರಸ್ತಾಪ ಮಾಡಿರುವುದು ಕಂಡುಬರುತ್ತದೆ. ಹಾಗೆಯೇ ೧೪ನೇ ತೀರ್ಥಂಕರನಾದ ಅನಂತನಾಥ ಮತ್ತು ೧೬ನೇ ತೀರ್ಥಂಕರನಾದ ಶಾಂತಿನಾಥನನ್ನು ಪ್ರಸ್ತಾಪಿಸುವುದರ ಮೂಲಕ ಯಕ್ಷಿಣಿ ಪದ್ಮಾವತಿಯನ್ನು ಹೆಸರಿಸುತ್ತಾರೆ.

'ರಕ್ಷಿಸೊ ಎನ್ನನು ತವನಿಧಿ' ಈ ಹಾಡಿನಲ್ಲಿ ಭಕ್ತಿಯ ಪರಾಕಾಷ್ಠತೆಯನ್ನು ಅರ್ಪಿಸುವ ಮೂಲಕ ಧನ್ಯತಾಭಾವವನ್ನು ವ್ಯಕ್ತಪಡಿಸಿದ್ದಾರೆ.

ರಕ್ಷಿಸೊ ಎನ್ನನು ತವನಿಧಿರಾಯನೆ
ದುಷ್ಟವ್ಯಸನದಿಂದ ಬ್ರಷ್ಟಾಗಿ ತೊಳಲಿದೆ
ಕಷ್ಟವ ಹರಿಸೆನ್ನ ಸಲಹೆನ್ನ ತಂದೆ||
ಕಮಲಲೋಚನೆ ನೀ ಕರುಣಸಮುದ್ರನೆ
ಪೀಠಾಕಮಲ ದೊಳಿಹ ಶ್ರೀ ಜಿನನೇಕ್ಷನೇ
ಕರುಣಿಸು ದಯದಿಂದ ವರಗಳ ಬೇಗ"||[೮೬]

'ಕಮಲಲೋಚನೆ' 'ಕಮಲತೀರದೊಳಿಹ' ಎಂಬ ೬ನೇ ತೀರ್ಥಂಕರನಾದ 'ಪದ್ಮಪ್ರಭ'ನದು. ಕಮಲ ಚಿಹ್ನೆಯನ್ನು ಹೊಂದಿರುವಂತಹನು. ಹಾಗೆಯೇ "ತವನಿಧಿ ಎಂಬುವುದು ಕರ್ನಾಟಕದಲ್ಲಿರುವ ಪವಿತ್ರ ಯಾತ್ರಾ ಸ್ಥಳವಾಗಿದೆ. ಇದು ಬೆಳಗಾವಿ ಜಿಲ್ಲೆಯ ನಿಪ್ಪಾಣಿ ಪಟ್ಟಣ ಹತ್ತಿರ ಇರುವ ಸ್ಥಳವಾಗಿದೆ. ಇದನ್ನು ಸ್ತವನಿಧಿ ಎಂತಲೂ ಕರೆಯುತ್ತಾರೆ."[೮೭] ಒಟ್ಟಾಗಿ ಹಾಡಿನಲ್ಲಿ ದುಷ್ಟ ವ್ಯಸನಗಳನ್ನು ಕುರಿತು ಭ್ರಷ್ಟವಾಗಿರುವ ನಮ್ಮ ಬದುಕನ್ನು ಹಸನು ಮಾಡಲು ಭಗವಂತನನ್ನು ಬೇಡುತ್ತಿದ್ದಾರೆ. ನಿನ್ನ ಪಾದ ಸ್ಮರಿಸುತ್ತ ಜೀವನ ಸಾಗಿಸುತ್ತೇವೆ. ಆದ್ದರಿಂದ ನಮ್ಮನ್ನು ರಕ್ಷಿಸುವ ಭಾರ ನಿಮ್ಮದು ಎಂದು ತೀರ್ಥಂಕರನಲ್ಲಿ ಬೇಡುವ ಸ್ಥಿತಿಯಾಗಿದೆ. 'ವಸುಧೆಗಧಿಕವಾದ ದೇವ' ಎಂಬ ಸ್ತುತಿ ಪದ್ಯ ೧೪ನೇ ತೀರ್ಥಂಕರನಾದ ಅನಂತನಾಥನನ್ನು ಕುರಿತುದಾಗಿದೆ. ಈ ಹಾಡು ಒಂದು ಕಥಾನಕವನ್ನು ಕಟ್ಟಿಕೊಡುತ್ತದೆ.

"ವಸುದೆಗಧಿಕವಾದ ದೇವ ಕಾಣಮ್ಮ
ಕುಸುಮಬಾಣನ ಮರ್ಧಿಸಿದ ಕಾಣಮ್ಮ
ವಸುಧೆಯ ಭವ್ಯದ ಭಾಗ್ಯ ಕಾಣಮ್ಮ
ಶಶಿಮುಖಿಯರ ನೋಡುವ ಬನ್ನಿರಮ್ಮ

ಮೇರುಗಿರಿಗೆ ದಕ್ಷಿಣ ಭಾಗವಮ್ಮ
ಭರತಕ್ಷೇತ್ರದ ಆರ್ಯಭಾಂಡವಮ್ಮ
ಸುರಚಿರ ಕೌಶಲ್ಯ ದೇಶದೊಳಮ್ಮ
ಸಿರಿವೆತ್ತ ಅಯೋಧ್ಯನಗರಿ ಕಾಣಮ್ಮ||

ಸುರಲೋಕದ ವಾದ್ಯ ಮೊಳಗಿದವಮ್ಮ
ಸುರಸತಿಯರು ನರ್ತಿಸುತ್ತಿರ್ದ್ದರಮ್ಮ
ಹೇಮಶೈಲದ ಪೀಠಾಗ್ರದೊಳಮ್ಮ
ಸ್ವಾಮಿಯ ಬಿಜಯಂಗೈಸಿದರಮ್ಮ
ಹೇಮಘಟದೊಳಮೃತನ ತಂದರಮ್ಮ
ಸ್ವಾಮಿಗೆ ಅಭಿಷೇಕ ಮಾಡಿದರಮ್ಮ||

ಈ ಪದಗಳನೋದಿ ಕೇಳ್ದವರಿಗಮ್ಮ
ಪಾಪವೆಲ್ಲವು ಪರಿಹಾರವಾಗಲಮ್ಮ
ರೂಪ ಸೌಭಾಗ್ಯ ಸಂಪದವಾಗಲಮ್ಮ
ಯಾವತ್ತೂ ಸುಖದೊಳೊಲಾಡುವರಮ್ಮ||"೮೮

ಹೀಗೆ ದೀರ್ಘವಾದ ೨೪ ಪದ್ಯಗಳುಳ್ಳ ಹಾಡಾಗಿದೆ. ಈತನ ಗುಣಗಾನ ಮಾಡುವುದರಿಂದ ಪ್ರಾರಂಭವಾಗಿ ಸಮಸವರಣ ಮಂಟಪವನ್ನು ಪ್ರವೇಶಿಸುವ ಮೂವತ್ತುನಾಲ್ಕು ಅತಿಶಯಗಳು, ಮೂವತ್ತು ಲಕ್ಷದಾಯುಷ್ಯ ಎಡಬಲಗಳಲ್ಲಿರುವ ಅನಂತಮತಿ, ಪಾತಾಳಯಕ್ಷಿ, ಯಕ್ಷರ ಉಲ್ಲೇಖವಿದೆ. ಕೊನೆಯಲ್ಲಿ ನಿರ್ವಾಣ ಹೊಂದಿದ ಕಾಲಮಾನವನ್ನು ಸೂಚಿಸಲಾಗಿದೆ. ಈ ಹಾಡು ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಹೆಣ್ಣು ದೇವತೆಗಳಿಗೆ 'ಅನಾದಿಗಳು' ಎಂಬ ವ್ಯಕ್ತಿಗಳು ಈ ದೇವತೆಗಳನ್ನು ಕೊಂಡಾಡುವ ರೀತಿಯಲ್ಲಿಯೇ ಈ ಹಾಡು ತೀರ್ಥಂಕರರನ್ನು ಗುಣಗಾನವ ಮಾಡುವ ಹಾಡಾಗಿದೆ. ಈ ಹಾಡಿನಲ್ಲಿ ಭರತಕ್ಷೇತ್ರ ಅಯೋಧ್ಯನಗರಿ, ಸಮ್ಮೇದಗಿರಿ, ಶರನಿಧಿಗಿರಿ ಮುಂತಾದ ಯಾತ್ರಾಸ್ಥಳಗಳನ್ನು ಪ್ರಸ್ತಾಪಿಸುತ್ತದೆ.

'ಮಾನಿನ ರನ್ನಳೆ ನೋಡೆ' ಈ ಹಾಡು ಪಲ್ಲವಿಯನ್ನು ಹೊರತುಪಡಿಸಿ ಮೂರು ಪದ್ಯಗಳಿಂದ ಕೂಡಿದೆ. ಈ ಹಾಡಿನಲ್ಲಿ ಒಂದು ಶ್ರೇಷ್ಠ ಧರ್ಮವನ್ನು ಸ್ಥಾಪಿಸಿ ಸರ್ವರನ್ನು ಸಲುಹುವ ಜೈನಧರ್ಮವು ಪವಿತ್ರವಾದುದು. ಮಾತ್ರವಲ್ಲದೆ, ಜಗತ್ತಿನ ಜನರನ್ನು ಸಂರಕ್ಷಿಸುವ ಗುಣವುಳ್ಳದ್ದು, ಸರ್ವಸಾಧು ಸಮೂಹ ಬರುವ ಈ ಧರ್ಮವನ್ನು ಒಂದು ಹೆಣ್ಣಾಗಿ ನೋಡುವ ಪರಿಭಾಷೆಯಿದೆ. ೧೪ ದೇವತೆಗಳಿಂದ ವಂದಿಸಿ ಕೊಳ್ಳುವವನು ಎಂಬರ್ಥ ಇರುವ ಹಾಡಾಗಿದೆ.

"ಶ್ರೀಮಂದಮರೇಂದ್ರ ವಂದ್ಯನ ಕೋಮಲಾಂಗಿ ನೋಡಿ
ಮುಕ್ತಿ ಭಾಮಿನಿಯ ದಶಗುಣದಾಮನ ನೋಡೆ
ತಾಮರಸ ನೇತ್ರನೊಡೆ ಸೋಮಾರ್ಕ ಕೋಟಿ ಪ್ರಕಾಶ
ದಾ ಮಹಿಮಾ ನೇಮಿಸ್ವಾಮಿಯ ಕಾಮಿನಿ ನೋಡೆ||"೮೯

ಹೀಗೆ ಉಳಿದೆರಡು ಪದ್ಯಗಳು ವರ್ಣನೆಯಿಂದ ಶ್ರೇಷ್ಠತೆಯನ್ನು ಹೇಳುತ್ತವೆ. 'ವೃಷಭ ಜಿನೇಶನೇ' ಎಂಬ ಈ ಹಾಡು ಆದಿತೀರ್ಥಂಕರನಿಂದ ಅಜಿತನಾಥ, ಶಂಭವನಾಥ, ಅಭಿನಂದನ ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೀಯಾಂಕ್ಷ, ವಾಸುಪೂಜ್ಯ ವಿಮಲನಾಥ ಎಂಬ ಜೈನಧರ್ಮದ ಪ್ರಥಮ ೧೩ ತೀರ್ಥಂಕರರ ವರ್ಣನೆ ಇದೆ. ಹಾಗೆಯೇ ಪ್ರತಿಯೊಬ್ಬ ತೀರ್ಥಂಕರನ ವಸ್ತು ವಿಶಿಷ್ಟತೆಯನ್ನು ಗುರುತಿಸಿರುವುದು ಈ ಹಾಡಿನಲ್ಲಿ ನೋಡಬಹುದು. ಈ ಹಾಡು ದೀರ್ಘವಾಗಿದ್ದು ೧೪ ಪದ್ಯಗಳಿಂದ ಕೂಡಿದೆ. ಪ್ರತಿಯೊಂದು ಪದ್ಯದಲ್ಲೂ ತೀರ್ಥಂಕರನ ಹೆಸರನ್ನು ಪ್ರಸ್ತಾಪಿಸುತ್ತಾನೆ.

"ವೃಷಭ ಜಿನೇಶನೇ ಸುಘುಮ ಶರೀರನೆ
ಕುಸುಮ ಬಾಣನ ಗೆಲಿದವನೆ
ವಿಷಮ ಭವಾಂಬುಧಿಯ ದಾಂಟಿರುವನೇ
ಅಸಮಾನನು ನೀನೆ||"೬೦

ಭೂಮಂಡಲದಲ್ಲಿ ಯಶಸ್ಸನ್ನು ಗಳಿಸಿ ಮುಕ್ತಿಯ ಮಾತನಾಡುತ್ತಿರುವ ಆದಿದೇವನೇ ಸಾಂಸಾರಿಕ ಬದುಕಿನಲ್ಲಿದ್ದು ಕಮಲಪತ್ರದ ಮೇಲಿನ ಬಿಂದುವಿನಂತೆ ಅನುಭವಿಸಿದವನೆ, ಅದೇ ಸಂದರ್ಭದಲ್ಲಿ ವೈರಾಗ್ಯ ಮೂಡಿ ತ್ಯಾಗದೆಡಗೆ ಸಾಗಿದವನು. ಆಗಿರುವ ಜಿನವೃಷಭರೀವನ ವರ್ಣನೆಯಾಗಿದೆ. ಭೋಗದ ಸುಖವನ್ನು ಅನೇಕ ಜನ್ಮ ಜನ್ಮಾಂತರಗಳಲ್ಲಿ ಸಾಧನೆ ಮಾಡಿದವನು ಎಂಬ ಆಶಯವಾಗಿದೆ.

"ಶ್ರೀ ಜಗತ್ರಯ ಭವ್ಯ ಪಂಚಮ' ಎಂಬ ಹಾಡು ಪಲ್ಲವಿಯನ್ನು ಹೊರತುಪಡಿಸಿ ಉಳಿದೆಲ್ಲ ಪದ್ಯಗಳು ಭಾಮಿನಿ ಷಟ್ಪದಿಯಲ್ಲಿದೆ.

ಪುರಜೀನೇಶ್ವರ ನಿಮ್ಮ ಕಮಲ
ಚರಣಸರಸಿಜ ಯುಗಮ ನಿಮ್ಮಯ
ಸರಸ ಮಾನಸು ಮಧ್ಯ
ವರ್ತಿಯ ಮಾಡು ನಾಭಿಯಮ
ಪರಮಗುಣನಿಧಿ ಅಜಿತ ಜಿನ
ವರ ನಿರಘು ಶಂಭವ
ಭೂತ್ರಯಾಟಿ ತಾ ಪಿರಿದು ಕೃಪೆಯಿಂ||"೬೧

ಪುರದೇವನೆ ನಿಮ್ಮ ಪಾದಕಮಲಗಳನ್ನು ಹಿಡಿದು ಬೇಡುತ್ತೇನೆ. ನಿಮ್ಮ ಪಾದಸ್ಪರ್ಶದಿಂದಲೇ ನಮ್ಮೆಲ್ಲ ಬದ್ಧ ಕರ್ಮಗಳು ನಾಶವಾಗುತ್ತವೆ ಎಂಬ ಭಕ್ತಿಯ ಪರಾಕಾಷ್ಠತೆಯ ಪ್ರಮುಖ ಧ್ವನಿಯಾಗಿದೆ. 'ದೇವ ಪಾಲಿಸು ಎನ್ನ' ಎಂಬ ಹಾಡು ಕೆಲವು ಪದ್ಯಗಳು ಆದಿಪ್ರಾಸದಿಂದ ಕೂಡಿ ಸೊಗಸಾಗಿ ಕಾಣಿಸುವ ಹಾಡುಗಳಂತಿವೆ.

"ಮೂರು ಮೂಢವ ಗೆಲ್ಲು ಮೂರು ರತ್ನವ ಸೆಳೆದು
ಮೂರಾರು ದೋಷದ ಬೇರನು ಹರಿದು
ಮೂರು ಮೂಢದಿ ನಾನು ತೊಳಲುತಲಿರುವೆನು
ಮಾರಮರ್ದನ ಒಂದು ಸಲಹೋ ನೀನಿಂದು||"೬೨

ಜೈನಧರ್ಮದಲ್ಲಿ ಮೂರು ರತ್ನತ್ರಯಗಳಾದ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ್ಯ ಇವನ್ನು ಮನುಷ್ಯ ಹೊಂದಿದ್ದರೆ ಮುಕ್ತಿಯನ್ನು ಗಳಿಸಬಹುದು ಎಂಬುದು ಜೈನಧರ್ಮದ ಬಲವಾದ ನಂಬಿಕೆ. ಇಂತಹ ತತ್ವ ಸಿದ್ಧಾಂತಗಳನ್ನು ಬಿಡಿ ಬಿಡಿಯಾದ ಹಾಡುಗಳಲ್ಲಿ ಸಮರ್ಥವಾಗಿ ಪ್ರತಿಬಿಂಬಿಸುತ್ತವೆ. ಮನುಷ್ಯನನ್ನು ಬಹುಬೇಗನೆ ಸೆಳೆಯಲು ಈ ಹಾಡುಗಳಲ್ಲಿ ಭಕ್ತಿಯ ಪರಾಕಾಷ್ಠತೆ ತುಂಬಿದೆ. ಜೈನಧರ್ಮದಲ್ಲಿ ರತ್ನತ್ರಯಗಳನ್ನು ಗೆಲ್ಲುವ ಮೂಲಕ ಮೂರು ದೋಷಗಳನ್ನು ಬುಡಸಹಿತ ಕತ್ತರಿಸಿ ನನ್ನನ್ನು ಸತ್ಕರಿಸಿ ಕಾಪಾಡು ಎಂಬ ಆರ್ತಧ್ವನಿ ಈ ಹಾಡಿನಲ್ಲಿ ಪ್ರಕಟವಾಗಿದೆ.

"ಪುಷ್ಪಕ್ಕೋಗುವ ಬನ್ನಿ" ಎಂಬ ಹಾಡಿನಲ್ಲಿ ಸಂನ್ಯಾಸಿಗಳು, ಶ್ರಾವಕರು ಪೂಜೆಗೆ ಹೋಗುವುದಕ್ಕೆ ವಿವಿಧ ಬಗೆಯ ಹೂವುಗಳನ್ನು ತೆಗೆದುಕೊಂಡು ಜಿನಸ್ವಾಮಿಯನ್ನು ಪೂಜಿಸೋಣ ಎಂಬ ಧ್ವನಿ ಈ ಕೆಳಗಿನ ಹಾಡಿನಲ್ಲಿ ಕಾಣಬಹುದು.

"ಪುಷ್ಪಕ್ಕೋಗುವ ಬನ್ನಿ ಸರ್ವಶ್ರಾವಕರೆಲ್ಲ
ತಪ್ಪದೆ ಜಿನಂಗರ್ಪಿಸುವ ಬನ್ನಿ||

ಅರಳಿದಾ ತಾವರೆ ಮುಳುಗು ಹೊಂಗೇದಿಗೆ
ಇರುವಂತಿಗೆ ಜಾಜಿ ಶಾವಂತಿಗೆ
ಪರಿಮಳವುಳ್ಳವಂಥ ಪಾರಿಜಾತದ ಪುಷ್ಪ
ಅರುಹನ ಚರಣಗರ್ಪಿಸುವ ಬನ್ನಿ||"[೯೩]

ಈ ಜೈನ ಪರಿಕಲ್ಪನೆಯಲ್ಲಿ ಪೂಜಾದಿ ಪೂಜಾಸಾಮಗ್ರಿ ವಿಧಾನವು ಆ ಜೈನ ಪ್ರಭಾವದಿಂದ ಬಂದದ್ದು. ಜೈನತತ್ವದಲ್ಲಿ ಮೂಲತಃ ಫಲಪುಷ್ಪಾದಿಗಳನ್ನು ಹಿಡಿಯದೆಯೇ ಭಾವ ಪೂಜೆ ಮಾಡುವುದು ಸಾಕೆಂದು ಶಾಸ್ತ್ರಗ್ರಂಥಗಳು ಸ್ಪಷ್ಟಪಡಿಸಿವೆ. "ಜಿನನನ್ನು ಪೂಜಿಸುವುದು ಆತ ತನ್ನ ಜೀವಿತ ಕಾಲದಲ್ಲಿ ಮಾಡಿದ ಮಹತ್ ಸಾಧನೆಗೆ ಏರಿದ ಎತ್ತರಕ್ಕೆ ಆತ ತೋರಿದ ತ್ಯಾಗದ ಹಾದಿಯಲ್ಲಿ ಹೋಗಲು ಸಫೂರ್ತಿ ಪ್ರೇರಣೆ ಬರಲಿ ಎಂದು ಗೌರವ ತೋರಿಸಲಾಗುತ್ತದೆ. ಈ ಸ್ಫೂರ್ತಿ ಪ್ರೇರಣೆಗಳನ್ನು ಸಹ ಆತ ಕರುಣಿಸುವುದಿಲ್ಲ. ಆತ ಏನನ್ನೂ ಅನುಗ್ರಹಿಸುವುದಿಲ್ಲ. ಜೈನರು ಜಿನಭಕ್ತರು ಎನ್ನುವುದಕ್ಕಿಂತ ಜಿನನ ಹಿಂಬಾಲಕರು ಎನ್ನುವುದು ಸಮರ್ಪಕವಾಗಿದೆ. ಈ ಅರ್ಥದಲ್ಲಿ ಬಸದಿ ಎಂಬುದು ಸಮವಸರಣದ ಅನುಕರಣ ಬಸದಿಗಳನ್ನು ಕಟ್ಟುವ, ಜಿನಬಿಂಬ ಮೂಡಿಸುವ ಪದ್ಧತಿ ಕ್ರಿ.ಪೂ. ಮೂರು, ಎರಡನೇ ಶತಮಾನದಿಂದ ಈಚೆಗೆ ರೂಢಿಗೆ ಬಂದಿದೆ. ಕ್ರಿ.ಶ.ಮೂರನೆಯ ಶತಮಾನದ ತರುವಾಯ ಯಕ್ಷ ಯಕ್ಷಿಯನ್ನು ಪೂಜಿಸುವ ಪರಂಪರೆ ಪ್ರಾರಂಭವಾಗಿ"[೯೪] ಇಂದಿಗೂ ಸ್ಥಾನಿಕವಾಗಿಸಿ ಜೈನ ಪರಂಪರೆಯವರು ಮೂರ್ತಿ ಪೂಜಾ ಪದ್ಧತಿಯು ವಿಧ್ಯುಕ್ತವೆಂದು ತಿಳಿದು ಜಿನಬಿಂಬಗಳನ್ನು ನಿರ್ಮಿಸುವುದಿಲ್ಲ. ಬಸದಿಗಳನ್ನು ಕಟ್ಟಿಸುವುದಿಲ್ಲ. ಪೂಜಾದಿಗಳನ್ನು ಮಾಡುವುದಿಲ್ಲ. ಅವರು ಕೇವಲ ಸ್ವಾಧ್ಯಾಯ ಪ್ರಾರ್ಥನೆಗಳಿಗೆ ಪ್ರಾಧಾನ್ಯತೆಯನ್ನು ಕೊಟ್ಟಿದ್ದಾರೆ. ಆದರೆ ಈ ಜೈನಹಾಡುಗಳು ಮುಖ್ಯವಾಗಿ ಪೂಜಾ, ವಿಧಿವಿಧಾನಗಳು, ಬಸದಿಗಳು, ಚೈತ್ಯಾಲಯಗಳು, ತೀರ್ಥಂಕರರ ಮೂರ್ತಿಗಳನ್ನು ಪೂಜಿಸುವ ಆರಾಧಿಸುವ ಪರಿಕಲ್ಪನೆ ಈ ಹಾಡುಗಳಲ್ಲಿ ಕಂಡುಬರುತ್ತದೆ. ಅಂದರೆ ಜೈನರೂ ಸಹ ಹಿಂದೂ ಧರ್ಮದ ಪರಿಕಲ್ಪನೆಯಂತೆ ದೇವಾಲಯಗಳು, ಪೂಜಾಸಾಮಗ್ರಿಗಳು, ವಿಗ್ರಹ ಆರಾಧನೆ ಮುಂತಾದ

ಅಂಶಗಳನ್ನು ಅಳವಡಿಸಿಕೊಂಡಿರಬಹುದು. ಅದು ಏನೇ ಇರಲಿ ಈ ಮೇಲಿನ ಹಾಡಿನಲ್ಲಿ ಜೈನ ಶ್ರಾವಕರು ಭಕ್ತಿಯಿಂದ ಜಿನನನ್ನು ಪೂಜಿಸಲು ಫಲಪುಷ್ಪಗಳನ್ನು ಅರ್ಪಿಸುವುದರ ಮೂಲಕ ಭಕ್ತಿಯ ಧ್ವನಿ ವ್ಯಕ್ತವಾಗುತ್ತದೆ.

'ತೋರಿಸೋ ದೇವಾ' ಎಂಬ ಹಾಡು ಸಂಸಾರದ ಜಂಜಾಟಗಳ ಬಂಧನದಿಂದ ಮುಕ್ತಗೊಳಿಸು ಶ್ರೀ ಆದಿ ಜಿನೇಂದ್ರ ಎಂಬ ಪರಿಕಲ್ಪನೆಯನ್ನು ಒಳಗೊಂಡಿದೆ.

"ತಾಯಿತಂದೆಯ ಬಸಿರಲ್ಲಿ ಹುಟ್ಟಿದೆಯನ್ನ
ಕಾಯಕೆ ವರಸುಖ ಕೊಡಲಿಲ್ಲವೊ
ಪ್ರಾಯ ಕಂಡನೆಗೊಂದು ಹೆಣ್ಣುಕೊರಳಿಗೆ ಕಟ್ಟಿ

ಮಾಯದ ಸಂಕೋಲೆ ಹಾಕಿದರಯ್ಯ||
ಸಿಲ್ಕಿ ಸಂಸಾರ ಸಮುದ್ರದೊಳಗೆ ನಾನು
ಲೆಕ್ಕವಿಲ್ಲದೆ ದುಃಖಬಡುತಿರಲು
ಮಕ್ಕಳೆಂಬ ಬೆಜ್ಜ ಮೈಮೇಲೆ ಬೀಳಲು
ಕಕ್ಕಸವಾಯಿತು ಸೈರಿಸಲಾರೆ||"[೯೫]

ಇಲ್ಲಿ ಸಂಸಾರದ ಜೀವನ 'ಕಕ್ಕಸ' ಎಂಬ ಹೀನಾರ್ಥವನ್ನು ಹೇಳಲಾಗಿದೆ. ತಂದೆ ತಾಯಿಗಳ ಸಮಾಗಮದಿಂದ ಹುಟ್ಟಿದ ನಾವು ಶರೀರಕ್ಕೆ ಸುಖ ಕೊಡಲಿಲ್ಲ. ಪ್ರಾಯ ಬಂದಾಗ ಸಂಸಾರದ ಶರಧಿಗೆ ನೂಕಿದರು. ಅದರಿಂದ ಬಿಡಿಸಿಕೊಳ್ಳಲಾಗದೆ ಒದ್ದಾಡುತ್ತಿದ್ದೇವೆ. ಸಂಸಾರ ಬಂಧನದಿಂದ ಬಿಡುಗಡೆಗೊಳಿಸಿ ಮುಕ್ತಿಯ ದಾರಿ ತೋರಿ ಎಂಬ ದೀನತ್ವ ಭಾವವಿದೆ. 'ಸಾಕಿನ್ನು ಸಂಸಾರ' ಎಂಬ ಹಾಡು ಎಂಟನೇ ತೀರ್ಥಂಕರನಾದ ಚಂದ್ರಪ್ರಭುವಿನಲ್ಲಿ ಭಕ್ತನು ಬೇಡುವ ಆರ್ತಧ್ವನಿಯಿದೆ. ಸಂಸಾರದ ಅನಿತ್ಯತೆ ಕುರಿತ ಅಭಿವ್ಯಕ್ತಿ ಈ ಹಾಡಿನಲ್ಲಿ ಕಂಡುಬರುತ್ತದೆ.

"ಸಾಕಿನ್ನು ಸಂಸಾರ ನಾನುನೊಲ್ಲೆನು ನಾನು
ಚಂದ್ರನಾಥನ ಪರಾಕು ಮಾಡದೆ ಎನ್ನ
ಸಂಶಯ ಬಿಡಿಸಯ್ಯ ಚಂದ್ರನಾಥ||"[೯೬]

ಎನ್ನುವ ಹಾಡು ಭಕ್ತನನ್ನು ಸಂಸಾರದಿಂದ ಮುಕ್ತಿಗೊಳಿಸಿ ನನ್ನನ್ನು ನಿನ್ನ ಪಾದಕ್ಕೆ ಅರ್ಪಿಸಿಕೋ ಎಂಬ ಭಾವವಿದೆ. ಮುಂದಿನ ಬಹುತೇಕ ಹಾಡುಗಳಲ್ಲಿ ಚಂದ್ರನಾಥನ ಕುರಿತಾದ ಹಾಡುಗಳೇ ಹೆಚ್ಚಾಗಿವೆ. "ಬಂದು ನೋಡಿರೆಲ್ಲ ನಿಂದು" "ಪಾಲಿಸೆನ್ನ ಚಂದ್ರನಾಥ" ಮುಂತಾದ ಹಾಡುಗಳು ಚಂದ್ರನಾಥನ ವರ್ಣನೆಯಿಂದ ಕೂಡಿವೆ.

'ಶ್ರೀ ನೆಯ್ಯೆನೇರಿಸುವ' ಎಂಬ ಹಾಡಿನಲ್ಲಿ ಜೈನ ಸ್ತ್ರೀಯರು ತಮ್ಮ ಧಾರ್ಮಿಕ ಪೂಜಾ ವಿಧಿ-ವಿಧಾನಗಳನ್ನು ಈ ಹಾಡಿನಲ್ಲಿ ಅತ್ಯಂತ ಸುಂದರವಾದ ಚಿತ್ರಣದೊಂದಿಗೆ ಕಟ್ಟಿಕೊಟ್ಟಿದ್ದಾರೆ.

"ಶ್ರೀ ನೆಯ್ಯನೇರಿಸುವ ಬನ್ನಿರೊ ಶ್ರೀ ನೇಮಿ
ಜಿನರಿಗೆ ಶರಣು ಶರಣೆಂಬ ಮುತ್ತೈದೆಯರು ನೆಯ್ಯನೇರಿಸು
ಬನ್ನಿರೋ ||ಪ||

ಹಸ್ತಿನಿ ಚಿತ್ತಿನಿ ಮತ್ತೆ ಶಂಕಿನಿ ದೇವ
ಉತ್ತಮಾಪದ್ಮಿನಿ ಭೂಮಿದೇವಿ
ರತ್ನದೆ ಹೊಂಬಟ್ಟಲೊಳೊಮ್ಮೆಗೆ ತಕ್ಕೊಂಡು||

ಇಂದು ಮುತ್ತೈದೆಯರು ಮಿಂದು ಮಜ್ಜನವಾಗಿ
ಗಂಧಕದಂಬವ ಮೈಯಸೂಸಿ
ಮುಂದಾರಮಲ್ಲಿಗೆಯ ತಂದು ತುರುಬಿಗೆ ಸೂಡಿ||

ಪದಕಮಣಿ ಚಿಂತಾಕುಪದ್ಮರಾಗದ ವಾಲೆ
ಒದಗಿದ ಮುತ್ತಿನ ಬೊಟ್ಟನಿಕ್ಕಿ
ಮಂದ ಗಜಗಮನೆಯರು ನಡುಸಣ್ಣ ಜಾಣೆಯರು||

ನೆನಗಡಲೆ ತಂಬಿಟ್ಟು ಗೊನೆಯ ಬಾಳೆಹಣ್ಣು
ನೇಮಿಜಿನರಿಗೆ ಮನದಿ ಭಜಿಸಿ
ಕನ್ನೆಮುತ್ತೈದೆಯರ್ಗೊಲಿದು ಬಾಗಿನ ಕೊಟ್ಟು||"[೭]

ಇಲ್ಲಿ ಶ್ರೀ ನೇಮಿನಾಥನ ಪೂಜೆಗೆ ಹೋಗುವ ನೆಪದಲ್ಲಿ ಜೈನ ಸ್ತ್ರೀಯರು ಹೊರಡುವ ಸನ್ನಿವೇಶವನ್ನು ವರ್ಣಿಸಿದ್ದಾರೆ. ಎಲ್ಲ ಮುತ್ತೈದೆಯರು ಸ್ನಾನ ಮಾಡಿ ಗಂಧದ ಎಣ್ಣೆ ಹಚ್ಚಿಕೊಂಡು ಮಂದಾರ ಮಲ್ಲಿಗೆ ತುರುಬಿಗೆ ಮುಡಿದುಕೊಂಡು ಬಂಗಾರದ ಆಭರಣಗಳನ್ನು ಮೈಗೆ ಸಿಂಗರಿಸಿಕೊಂಡು, ಫಲ ಆಹಾರಗಳನ್ನು ಸಮರ್ಪಿಸುವ ಚಿತ್ರಣ ಕಟ್ಟಿಕೊಟ್ಟಿದ್ದಾರೆ. ಇಂತಹ ಹಾಡುಗಳು ಜೈನಧರ್ಮದ ತತ್ವಗಳನ್ನು ಹಾಗೂ ಧಾರ್ಮಿಕ ವಿಚಾರಗಳನ್ನು ಸಡಿಲಗೊಳಿಸಿರುವುದು ಕಂಡುಬರುತ್ತದೆ. ಇಂತಹ ಹಾಡುಗಳು ಜೈನರ ಧಾರ್ಮಿಕ ಆಚಾರ-ವಿಚಾರ, ಸಂಪ್ರದಾಯಗಳನ್ನು ಬಿಚ್ಚಿಡುತ್ತವೆ.

'ನೇಮಿಜಿನೇಶ್ವರ ಸ್ವಾಮಿ' ಎಂಬ ಹಾಡು ಸುದೀರ್ಘವಾದ ೨೭೩ ಪದ್ಯಗಳಿಂದ ಕೂಡಿದೆ. ಈ ಹಾಡು ಜೈನಧರ್ಮದ ಕಥೆ, ಪುರಾಣಗಳ ಸ್ವರೂಪಗಳನ್ನು ಒಳಗೊಂಡಿದೆ. ಈ ಹಾಡಿನಲ್ಲಿ ವೈರಾಗ್ಯದ ಜನ್ಮ ಜನ್ಮಾಂತರಗಳ ಹುಟ್ಟು, ಅದರ ಮುಖಾಂತರ ಕರ್ಮವನ್ನು ಕಳೆದುಕೊಂಡು ಮುಕ್ತಿಯನ್ನು ಪಡೆಯುವುದು. ಪಂಚಕಲ್ಯಾಣಗಳ ಪ್ರಸ್ತಾಪ, ಭಕ್ತಿಯ ಪರಾಕಾಷ್ಠತೆ, ಧರ್ಮದ ಶ್ರೇಷ್ಠತೆ, ಲೌಕಿಕ ಬದುಕಿನ ಹೀನತೆ, ಸ್ತ್ರೀ ವ್ಯಾಮೋಹದಿಂದ ಪಾಪ ಮುಂತಾದ ಜೈನ ಧಾರ್ಮಿಕ, ತಾತ್ವಿಕ ವಿಚಾರಗಳನ್ನು ಕಥನರೂಪದಲ್ಲಿ ವಿಸ್ತರಿಸಿರುವುದು ವಿಶೇಷವಾದುದು. ಈ ಹಾಡಿನಲ್ಲಿ ನೇಮಿನಾಥನ ಕುರಿತಾಗಿ ಮಹತ್ವದ ವಿಚಾರಗಳು ಮೂಡಿ ಬಂದಿವೆ.

"ಭಾವಿಸಿ ಕೇಳಿರೋ ಎಲೆ ಜೀವ
ಭಾವಜಹರ ಜಿನ ವಚನವನು||

ಶ್ರೀ ಜಿನಶಾಸನಾಜ್ಞೆಯ ಮೀರಿಯೆ

ಜೂಜಿಂ ಪಾಂಡುವರೊಲಿದಾಡಿ

ರಾಜಾರ್ಥವನುಳಿದಡವಿಯ ಹೊಕ್ಕರು

ಜೂಜಿನ ದೆಸೆಯನು ಬಿಡು ಜೀವ||

ಪರಬಲ ಜಲಧಿಗೆ ಒಡಬನೆಂದೆನಿಸಿದ

ಉರವಿ ಕ್ರಮಯುತ ರಾವಣನು

ಪರಸತಿಗಳಳುಪಿಯೆ ನರಕಕ್ಕಿಳಿದನು

ಪರಸತಿಯಾಸೆಯ ಬಿಡು ಜೀವ||"[೯೮]

ಇಲ್ಲಿ ಪಾಂಡವರು ಜೂಜಿನಿಂದ ವನವಾಸಕ್ಕೆ ಹೋದ ದುರಂತವನ್ನು ಹೇಳುತ್ತದೆ. ಮಾನವನು ಸರಿಯಾದ ಮಾರ್ಗದಲ್ಲಿ ನಡೆದು ಮೋಕ್ಷ ಪದವಿಯನ್ನು ಅನುಭವಿಸಿರಿ ಎಂಬ ಅರ್ಥಧ್ವನಿ ಇಲ್ಲಿದೆ. ಇಲ್ಲಿ ರಾಮಾಯಣ-ಮಹಾಭಾರತದ ಸಂದರ್ಭಗಳನ್ನು ತೆಗೆದುಕೊಳ್ಳಲಾಗಿದೆ. ಅಲ್ಲಿ ಬರುವಂತಹ ದುರಂತ ಹೇಳುವುದರ ಮೂಲಕ ತನ್ನ ಧರ್ಮದ ತತ್ವಗಳು ಹಾಗೂ ಧಾರ್ಮಿಕ ವಿಚಾರಗಳು ಶ್ರೇಷ್ಠವೆಂದು ಬಣ್ಣಿಸುವ ಪರಿ ಈ ಹಾಡಿನಲ್ಲಿ ವ್ಯಕ್ತವಾಗಿದೆ.

'ಎಷ್ಟು ದೂರ ಬೆಳಗುಳವಂದೆ' ಈ ಹಾಡಿನಲ್ಲಿ ಕರ್ನಾಟಕದಲ್ಲಿ ದಕ್ಷಿಣ ಕಾಶಿಯೆಂದೇ ಪ್ರಸಿದ್ಧಿ ಪಡೆದಿರುವ ಶ್ರವಣಬೆಳಗೊಳದ ಸಾಂಸ್ಕೃತಿಕ ಚಹರೆಯನ್ನು ಬಿಂಬಿಸಲಾಗಿದೆ. ಆ ಭಾಗದ ಜೈನಧರ್ಮದ ಐತಿಹಾಸಿಕ, ಚಾರಿತ್ರಿಕ, ಅಂಶಗಳ ಕುರಿತು ಈ ಹಾಡು ಬೆಳಕು ಚೆಲ್ಲುತ್ತವೆ. ಈ ಹಾಡನ್ನು ಶ್ರವಣಬೆಳಗೊಳದ ಚಂದ್ರಯ್ಯನೆಂಬ ಭಕ್ತನು ಹಾಡನ್ನು ರಚಿಸಿರುವುದಾಗಿ ಈ ಹಾಡಿನಲ್ಲಿ ಉಲ್ಲೇಖವಾಗಿರುವುದನ್ನು ನೋಡಬಹುದು.

"ದಕ್ಷಿಣ ಕಾಶಿಯಂತೆ

ಲಕ್ಷ್ಮೀನೆಲಸಿದ ಬೆಳಗುಳವಂತೆ

ಇಕ್ಷುಚಾಪನ ಗೆದ್ದನಂತೆ

ಮೋಕ್ಷಗಾಮಿ ಗೊಮಟೇಶನಂತೆ||

ಧರೆಯೊಳಗೆ ಬೆಳ್ಗೊಳ ಪುಟ್ಟಿ

ಮಕ್ಕಳೊದಿಸುವ ಮಠವು ಸ್ವಾಮಿ

ಭಕ್ತ ಚಂದ್ರಯ್ಯ ಪಾಡಿದ ಪದವು

ಅಕ್ಕರಿಂ ಕೇಳಿರೋ ಜನರು"||[೯೯]

ಶ್ರವಣಬೆಳಗೊಳದ ವರ್ಣನೆಯ ಜೊತೆಗೆ ಗೊಮ್ಮಟೇಶ್ವರನ ಪವಿತ್ರತೆ ಮತ್ತು ಅದೊಂದು ಶೈಕ್ಷಣಿಕ ಹಾಗೂ ಜೈನರ ಸಾಂಸ್ಕೃತಿಕ ಕೇಂದ್ರ ಎಂಬುದು ತಿಳಿದುಬರುತ್ತದೆ. ಗೊಮ್ಮಟೇಶನ ಹಾಗೂ ಶ್ರವಣಬೆಳಗೊಳದ ವರ್ಣನೆಯಿರುವ ಸಾಕಷ್ಟು ಹಾಡುಗಳಿರುವುದು ಕಂಡುಬರುತ್ತವೆ. ಅವುಗಳಲ್ಲಿ ೪೩, ೪೫, ೪೬, ೪೭, ೪೮

ಹಾಡುಗಳಲ್ಲಿ ಗೊಮ್ಮಟವನ್ನು ಕುರಿತು ವರ್ಣಿಸಿರುವ ಹಾಡುಗಳಾಗಿವೆ. ಇನ್ನೊಂದು ಹಾಡಿನಲ್ಲಿ ಗೊಮ್ಮಟ ಮೂರ್ತಿಯನ್ನು ಪ್ರತಿಷ್ಠಾಪಿಸಿದ ಚಾವುಂಡರಾಯ ಎಂದು ಹೇಳಲಾಗಿದೆ. ಇದು "ಪುರಪರಮೇಶನ ಸ್ಮರಿಸಿ" ಎಂಬ ಹಾಡಾಗಿದೆ.

ಧರೆಗೆ ಪವಿತ್ರವು ನರಪತಿ ಮೂರ್ತಿ
ವರಪುರ ದೇವನ ಪುತ್ರನದೂ
ಹರುಷವನೀಯುವ ಚರಿತೆಯ ಪೇಳುವೆ
ಸರಳ ಜೀವಿಗಳು ಲಾಲಿಪುದು||"[೧೦೦]

ಭೂಮಿಯಲ್ಲಿ ಪವಿತ್ರವಾದ ಗೊಮ್ಮಟಮೂರ್ತಿಯ ಚರಿತೆಯನ್ನು ಹೇಳುವೆ ಕೇಳಿ ಎನ್ನುತ್ತಾನೆ.

"ಕೊಳದೊಳು ತಾವರೆ ಬಿಳಿಯರುತಿರಲು
ಬಿಳಿಕೊಳಯೆನ್ನುವ ಪೆಸರಾಯಿತು
ಇಳೆಯೊಳು ಮುಂದಕೆ ಬಳಕೆಗೆ ಬರುತ
ಬೆಳ್ಗೊಳವೆನ್ನುವ ಊರಾಯಿತು||"[೧೦೧]

ಬೆಳುಗೊಳ ಎಂಬ ಹೆಸರು ಹೇಗೆ ಬಂತು ಎನ್ನುವುದನ್ನು ಈ ಹಾಡು ಸ್ಪಷ್ಟಪಡಿಸುತ್ತದೆ. ಕೊಳದಲ್ಲಿ ತಾವರೆ ಬಿಳಿಯಂತೆ ಕಂಗೊಳಿಸುತ್ತಿತ್ತು. ಅದನ್ನು ನೋಡಿ ಬಿಳಿಕೊಳ ಎನ್ನುವ ಹೆಸರಾಯಿತು. ಮುಂದೆ ಅದೇ ಸ್ಥಳೀಯ ಐತಿಹ್ಯ ರೂಪ ಪಡೆದು ಜನರ ಲೋಕರೂಢಿಯಾಗಿ ಬೆಳುಗೊಳ ಎನ್ನುವ ಊರಾಯಿತು ಎಂದು ಬೆಳಗೊಳದ ಸ್ಥಳನಾಮ ಚರಿತ್ರೆಯನ್ನು ತಿಳಿಸುತ್ತದೆ.

ಮುಂದೆ ಮತ್ತೊಂದು ಹಾಡಿನಲ್ಲಿ 'ಶ್ರವಣಬೆಳ್ಗೊಳ' ಎಂಬ ಹೆಸರು ಹೇಗೆ ಬಂದಿತು ಎಂಬುದನ್ನು ವರ್ಣಿಸಲಾಗಿದೆ.

"ಹಿಂದಕೆ ಕೆಲಮನಿ ವೃಂದವು ನೆಲೆಸಿದ
ರಂದಿಗೆ ಪೆಸರು ಅದು ಬದಲು
ಮಂದಿಗಳೆಲ್ಲರೂ ಶ್ರವಣಬೆಳ್ಗೊಳ
ವೆಂದು ಪಾಡಿದರು ಆ ಮೊದಲು||"[೧೦೨]

ಈ ಹಿಂದೆ ಊರಲ್ಲಿ ಹಲವು ಮುನಿಗಳು ವಾಸವಾಗಿದ್ದರು. ಅದರಿಂದ ಅವರಿಗೆ ಶ್ರಾವಕ ಮುನಿಗಳು ಎಂದು ಕರೆಯುತ್ತಿದ್ದರು. ಮುಂದೆ ಜನರ ಬಾಯಲ್ಲಿ ಶ್ರವಣಬೆಳ್ಗೊಳವೆಂದಾಯಿತು ಎನ್ನುವ ಮಾಹಿತಿಯನ್ನು ಸ್ಥಳೀಯ ಚರಿತ್ರೆಗಳು ಒದಗಿಸುತ್ತದೆ.

"ಚಂಡ ಪರಾಕ್ರಮಿ ಗಂಡುಗಲಿಯು ಚಾ
ವುಂಡರಾಯನು ಒಂದು ದಿನ
ಕಂಡನು ಸ್ವಪ್ನದಿ ಬಂಡೆಯೊಳಗಿಹ
ದಿಂಡ ಮೂರ್ತಿಯ ತಾ ಮುದದಿ||"[೧೦೩]

ಚಾವುಂಡರಾಯನು ಗೊಮ್ಮಟ ಮೂರ್ತಿಯನ್ನು ಪ್ರತಿಷ್ಠಾಪಿಸಲು ಕಾರಣವಾದ ಕಥೆಯನ್ನು ಹೇಳುತ್ತ ಹೋಗುತ್ತವೆ. ಅಲ್ಲಿನ ಚರಿತ್ರೆಯನ್ನು ಕಟ್ಟಿಕೊಡುವುದರ ಮೂಲಕ ಅಲ್ಲಿನ ಸಾಂಸ್ಕೃತಿಕ ಜಗತ್ತನ್ನು ವಿವರಿಸುತ್ತದೆ.

'ಕರುಣಿಸಿ ಕಾಯೋ ಎನ್ನ' ಎನ್ನುವ ಹಾಡು ದ್ವಿಪದಿ ಸಾಲುಗಳಿಂದ ಕೂಡಿದ್ದು, ಭರತ ಮತ್ತು ಬಾಹುಬಲಿಯೆಂಬ ಅಣ್ಣ ತಮ್ಮಂದಿರ ಯುದ್ಧದ ವರ್ಣನೆಯನ್ನು ಕೊನೆಗೆ ಮೋಕ್ಷವನ್ನು ಪಡೆದ ಬಗೆಯನ್ನು ಕುರಿತ ವರ್ಣನೆಯಿದೆ.

"ಕರುಣಿಸಿ ಕಾಯೋ ಎನ್ನ ಶ್ರೀ ಗೊಮ್ಮಟೇಶ
ಕರುಣಿಸಿ ಹಲವು ಯೆನ್ನ||

ಧರೆಯೊಳಧಿಕವಾದ ಪೌದನ ಪುರಪತಿ
ಧರೆಯೊಳಗ್ರಜನೊಳ ಸೆಣಸಿ ನೀ ಜಯಿಸಿದೆ||
ಮಲ್ಲಯುದ್ಧದಿ ನೀನು ಬಲ್ಲಿದನೆನಿಸಿದೆ
ಬಲ್ಲಿದ ಭುಜಬಲಿಯೆನಿಸಿ ನೀ ಮೆರೆದಿಹೆ||

ದೃಷ್ಟಿಯುದ್ಧದಿ ನೀನು ದಿಟ್ಟನುಯೆನಿಸಿ ತಾ
ದಿಟ್ಟದಿ ಜಗದೊಳು ಶ್ರೇಷ್ಠನುಯೆನಿಸಿದೆ||

ಧರೆಯೊಳಗ್ರಜದೊಳು ಸೆಣಸಿದಪಕೀರ್ತಿ
ಹೊರೆಯದೆ ಹೋದೆ ನೀ ವೈರಾಗ್ಯದಿಂದ||"[೧೦೪]

ಇಂತಹ ಚರಿತ್ರೆಯನ್ನು ಕಟ್ಟಿಕೊಡುವ ಮೂಲಕ ಪೌರಾಣಿಕ ವಸ್ತುಗಳನ್ನು ಹಾಡುಗಳಲ್ಲಿ ಮರುಬಿಂಬಿಸಿರುವುದು ಇಲ್ಲಿಯ ವಿಶೇಷ.

'ತಿಳಿದು ಮನದೊಳು ಭಾವಿಸಿ' ಎಂಬ ಹಾಡು ಜೈನಧರ್ಮದ ಧಾರ್ಮಿಕ ಸಂಪ್ರದಾಯವನ್ನು ಹಾಗೂ ಅದನ್ನು ಪ್ರತಿಪಾದಿಸುವ ಅಂಶಗಳನ್ನು ವ್ಯಕ್ತಪಡಿಸುತ್ತದೆ.

"ತಿಳಿದು ಮನದೊಳ ಭಾವಿಸಿ
ತಿಳುಬೆಳಕಿನಂತಿರ್ದ ಜೈನಮಾರ್ಗದ
ನೆಲೆಯಾವಳಿನರಿಯದೆ ಜೈನನೆಂದೆನಿಸಬಹುದೇ||

ಅಣುವ್ರತಗಳೈದು ಶಿಕ್ಷಾವ್ರತಗಳು ನಾಲ್ಕು
ಗುಣವ್ರತಗಳು ಮೂರು ಈ ಹನ್ನೆರಡರ
ಗುಣ ಸ್ವರೂಪವನಾಂತು ಅತಿಚಾರಗಳ ಕಳೆದು
ಗಣಿತದಲಿ ಎರಡನೆಯ ಜೈನನೆಂದು ತಿಳಿದು||"[೧೦೫]

ಜೈನಧರ್ಮದ ನೆಲೆಯನ್ನು ತಿಳಿಯಲು ಅನುಸರಿಸಬೇಕಾದ ಮಾರ್ಗಗಳ ವರ್ಣನೆಯಿದೆ. ಅದನ್ನು ಮನಸ್ಸಿನಲ್ಲಿ ಭಾವಿಸಿ ಮುನ್ನಡೆದರೆ ಸುಖಕರವಾದ ದಾರಿ ನಿಮ್ಮದಾಗಲಿ ಎಂಬ ಅರ್ಥವನ್ನು ಈ ಹಾಡು

ಗರ್ಭೀಕರಿಸಿಕೊಂಡಿದೆ. ಅಣುವ್ರತಗಳಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯೆ, ಅಪರಿಗ್ರಹ ಎಂಬ ಈ ಐದನ್ನು ವ್ರತದಂತೆ ಆಚರಿಸಲು ಜೈನಧರ್ಮ ಒತ್ತಾಯಿಸುತ್ತದೆ. ಹಾಗೆಯೇ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್ ಚಾರಿತ್ರ್ಯ ಇದ್ದರೆ ಎಲ್ಲ ಅತಿಚಾರಗಳು ಕಳೆದು ಮೋಕ್ಷವು ಸಲ್ಲುತ್ತದೆ ಎಂಬ ಆಶಯವಿದೆ.

ಹೀಗೆ ಬಹುತೇಕ ಚಂದ್ರನಾಥನ ವರ್ಣನೆ, ಶಾಂತಿನಾಥನ ವರ್ಣನೆ, ಮಲ್ಲಿನಾಥನ ವರ್ಣನೆ, ಪಾರ್ಶ್ವನಾಥನ ವರ್ಣನೆ, ಚಂದ್ರಪ್ರಭನ ವರ್ಣನೆಯ ಹೆಚ್ಚು ಹಾಡುಗಳು ಕಂಡುಬರುತ್ತವೆ. ಆ ಮೂಲಕ ಮುಕ್ತಿಯ ಕಡೆಗೆ ದಾರಿ ತೋರಿಸು ಎಂಬ ಭಕ್ತನ ಧ್ವನಿ ಇಲ್ಲಿ ಗೋಚರಿಸುತ್ತದೆ. ಇಂತಹ ಅಮೂಲ್ಯವಾದ ಹಾಡುಗಳು ಜೈನಧರ್ಮದ ಸಾಂಸ್ಕೃತಿಕ ಹಾಗೂ ಧಾರ್ಮಿಕ ವಿಚಾರಗಳನ್ನು ಮೆಲುಕು ಹಾಕುವ ಮೂಲಕ ಹಿಂದಿನ ಹೆಜ್ಜೆಗಳನ್ನು ಅವರ ಅಸ್ಮಿತೆಯನ್ನು ಸಹ ಸ್ಪಷ್ಟಪಡಿಸುತ್ತದೆ. ಈ ತೀರ್ಥಂಕರರ ಹಾಡುಗಳಲ್ಲಿ ತೀರ್ಥಂಕರರ ಸಾಧನೆಯ ವರ್ಣನೆ, ತೀರ್ಥಂಕರರ ಜನನ, ಯೌವ್ವನ, ನಿರ್ವಾಣ ಮುಂತಾದ ಜೀವನ ಚರಿತ್ರೆಗಳು ವರ್ಣಿತವಾಗಿವೆ. ಹಾಗೆಯೇ ಇವು ಜೈನಧರ್ಮದ ಇತಿಹಾಸವನ್ನು ಕುರಿತು ಬೆಳಕು ಚೆಲ್ಲುವಂತಹ ಹಾಡುಗಳಾಗಿವೆ. ಗೊಮ್ಮಟೇಶ್ವರ ಮೂರ್ತಿಯ ಪ್ರತಿಷ್ಠಾಪನೆ, ಗೊಮ್ಮಟನ ವರ್ಣನೆ, ಚಾವುಂಡರಾಯನ ಸಾಧನೆ ಹಾಗೂ ಅನೇಕ ಸ್ಥಳಗಳ ಪರಿಚಯವನ್ನು ಮಾಡಿಕೊಡುತ್ತವೆ. ಭಕ್ತನ ಅಂತರಂಗದ ಭಕ್ತಿಯ ಆವೇಶ ತೀರ್ಥಂಕರರನ್ನು ನೆನೆಯುವ ಮೂಲಕ ವ್ಯಕ್ತಪಡಿಸಲಾಗಿದೆ. ತೀರ್ಥಂಕರರ ಲಾಂಛನ, ತಂದೆ-ತಾಯಿ, ಜನ್ಮಸ್ಥಳ, ನಿರ್ವಾಣ, ಸಮಯ, ಧರ್ಮಬೋಧೆ, ಪಂಚಕಲ್ಯಾಣ ಸಮವಸರಣ ರಚನಾ ಪರಿಕಲ್ಪನೆ ಮುಂತಾದ ಜೈನಧರ್ಮದ ತತ್ವ ಹಾಗೂ ಧಾರ್ಮಿಕ ವಿಚಾರಗಳನ್ನು ಹೇಳುತ್ತವೆ. ಒಟ್ಟಿನಲ್ಲಿ ಈ ಹಾಡುಗಳ ಮೂಲಕ ಜೈನಧರ್ಮದ ಸಾಂಸ್ಕೃತಿಕ ಆಯಾಮಗಳು ಅನಾವರಣಗೊಂಡಿವೆ.

### ೪.೨.೨. ಯಕ್ಷಿಣಿಯರ ಸ್ತುತಿ

ಯಕ್ಷ-ಯಕ್ಷಿಣಿಯರ ಕಲ್ಪನೆಗಳು ಜೈನರಲ್ಲಿ ಮಾತ್ರ ಪ್ರಚಲಿತದಲ್ಲಲ್ಲದೆ ಬದಲಾಗಿ ಜೈನೇತರರಲ್ಲಿಯೂ ಇವೆ. ಬಹು ಪ್ರಾಚೀನ ಕಾಲದಿಂದಲೂ ಯಕ್ಷ-ಯಕ್ಷಿಯರನ್ನು ಶಾಸನ, ಸಾಹಿತ್ಯ, ಶಿಲ್ಪ ಈ ಮೂರು ಬಗೆಯ ಪ್ರಕಾರದಲ್ಲೂ ಗುರುತಿಸಲಾಗಿದೆ. ಆದರೆ ಜೈನಧರ್ಮದಲ್ಲಿ ಮಾತ್ರ ಬಹಳ ವಿಶಿಷ್ಟವಾದ ಸ್ಥಾನಮಾನ ಗೌರವ ಇವರಿಗೆ ಸಂಧಿವೆ. ಆದರೆ ಇಂತಹ ಸ್ಥಾನಮಾನಗಳು ಜೈನೇತರರಲ್ಲಿ ಸಿಗುವುದಿಲ್ಲ. ಯಕ್ಷ-ಯಕ್ಷಿಣಿಯರ ಪರಿಕಲ್ಪನೆಯನ್ನು ಭಾರತೀಯ ವಾಙ್ಮಯದಲ್ಲಿ ಕಾಣುತ್ತೇವೆ. ವೇದ, ಉಪನಿಷತ್ತುಗಳಲ್ಲಿ ಯಕ್ಷರ ಹೆಸರನ್ನು ಪ್ರಸ್ತಾಪಿಸಲಾಗಿದೆ.

"ಋಗ್ವೇದಲ್ಲಿ ಯಕ್ಷರ ಬಗ್ಗೆ ಭಯ ಭೀತಿಯಿಂದ ಉಪೇಕ್ಷೆ ವ್ಯಕ್ತವಾಗಿತ್ತು. ಅಥರ್ವಣ ವೇದದಲ್ಲೂ ಯಕ್ಷನನ್ನು ಏಸಸ್ಸತಿಯ ಸ್ವಾಮಿಯೆಂದು ತಿಳಿಸಲಾಗಿದೆ. ಇದು ಯಕ್ಷರನ್ನು ಕುರಿತು ಧೋರಣೆಯಲ್ಲಾದ ಪರಿವರ್ತನೆಗೆ ಅಂಕುರಾರ್ಪಣೆಯಾಗಿರಬಹುದು. ಏಕೆಂದರೆ ಯಕ್ಷರು ವೃಕ್ಷದೇವತೆಗಳೆಂಬ ಜೈನ, ಬೌದ್ಧ, ವೈದಿಕ ವಾಙ್ಮಯದಲ್ಲೂ ಕರೆದಿರುವುದು ಕಂಡುಬರುತ್ತದೆ. ಯಕ್ಷ ಎಂಬ ಶಬ್ದಕ್ಕೆ ಋಗ್ವೇದದಲ್ಲಿ ಭಯಾನಕ, ಅದ್ಭುತ, ಅದೃಶ್ಯ, ದೈವಿಕ ಶತ್ರು ಎಂಬ ಅರ್ಥಗಳಿವೆ"[೧೦೬]

ಆದರೆ ಜೈನರ ಪರಿಕಲ್ಪನೆಯಲ್ಲಿ ವೃಕ್ಷಜಾತಿಗಳೆಂದು ತಿಳಿದಿದ್ದಾರೆ. ಹೀಗೆ ಯಕ್ಷ-ಯಕ್ಷಿಯರ ಪ್ರಸ್ತಾಪವನ್ನು ಮಹಾಭಾರತ ಉಪನಿಷತ್‌ಗಳಲ್ಲಿ ಉಲ್ಲೇಖವಾಗಿದೆ. "ಗೋಪಥ(೧-೧), ತೈತ್ತರೀಯ

(೩-೧೨-೩), ಇತರ ಬ್ರಾಹ್ಮಣ ಉಪನಿಷತ್ತುಗಳಲ್ಲಿ ಯಕ್ಷ ಶಬ್ದದ ಪ್ರಯೋಗವಿದೆ(೧, ೪, ೭, ೬, ೮). ದೇವಸೂಚಿಯಲ್ಲಿ ಇದನ್ನು ಸೂಚಿಸಲಾಗಿದೆ."[೧೦೬]

ಇದು ಬೌದ್ಧ ಗ್ರಂಥಗಳಲ್ಲಿ ಸಹ ಉಲ್ಲೇಖವಾಗಿರುವುದು ವಿಶೇಷ. ಮೈತ್ರಿ ಉಪನಿಷತ್ತಿನಲ್ಲಿ ಯಕ್ಷರನ್ನು ಉಲ್ಲೇಖಿಸಲಾಗಿದೆ. ಒಟ್ಟಿನಲ್ಲಿ ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತ ಕಾವ್ಯಗಳಲ್ಲಿ ಇದರ ಉಲ್ಲೇಖ ಬರುತ್ತದೆ. ಆದರೆ ಜೈನರಲ್ಲಿ ತೀರ್ಥಂಕರರ ಮೂರ್ತಿಗಳಿಗೆ, ಯಕ್ಷ-ಯಕ್ಷಿಯರಿಗೆ ಉನ್ನತವಾದ ಸ್ಥಾನವನ್ನು ಕಲ್ಪಿಸಲಾಗಿದೆ.

ಜೈನರಲ್ಲಿ ಯಕ್ಷ-ಯಕ್ಷಿಯರನ್ನು ವಿಶಿಷ್ಟವಾಗಿ ಗುರುತಿಸುವ ಮನೋಭಾವ ಕಂಡುಬರುತ್ತದೆ. "ಜಿನ ಪ್ರತಿಮೆಯ ಮುಕ್ಕೊಡೆ ಅಶೋಕ ವೃಕ್ಷ, ಚಾಮರ ಸಿಂಹಪೀಠ, ಪ್ರಭಾಮಂಡಲ, ದಿವ್ಯಧ್ವನಿ, ಪುಷ್ಪದೃಷ್ಟಿ ಮತ್ತು ದುಂದುಬಿಗಳೆಂಬಿ ಅಷ್ಟ ಮಹಾಪ್ರತಿಕಾರ್ಯಗಳುಳ್ಳದೂ ಸ್ಥಿರ ಮತ್ತು ಚರ ಬಿಂಬಗಳ ಪಾದ ಪೀಠದ ಕೆಳಗೆ ಲಾಂಛನವುಳ್ಳದೂ, ಬಲಭಾಗದಲ್ಲಿ ಯಕ್ಷ-ಯಕ್ಷಿಯರಲ್ಲೂ ಇರುವುದು ಕಂಡುಬರುತ್ತದೆ. ಇಪ್ಪತ್ತುನಾಲ್ಕು ತೀರ್ಥಂಕರರಿಗೂ ಪ್ರತ್ಯೇಕವಾಗಿ ಬಲಭಾಗದಲ್ಲಿ ಯಕ್ಷ-ಯಕ್ಷಿಯರು ಎಡಭಾಗದಲ್ಲಿರುತ್ತಾರೆ. ಇವರನ್ನು ತೀರ್ಥಂಕರ, ರಕ್ಷಕರು, ಸೇವಕರೆಂದು ಹೇಳಲಾಗುತ್ತದೆ."[೧೦೮] ಹೀಗೆ ಕನ್ನಡ ಸಾಹಿತ್ಯದಲ್ಲಿ ಬಹುತೇಕ ಜೈನಪುರಾಣಗಳಲ್ಲಿ, ಕಾವ್ಯಗಳ ಕುರಿತು ಪ್ರತ್ಯೇಕ ಪ್ರಾರ್ಥನೆಗಳಿವೆ. ಉದಾಹರಣೆಗೆ ರನ್ನನ ಅಜಿತನಾಥ ಪುರಾಣದ ಪದ್ಯ ಹೀಗಿದೆ.

ಜಿನವೃಂದಾದರ್ರರಿರ್ಪ
ತ್ತು ನಾಲ್ವರಾತೀರ್ಥನಾಥ ಸಮುದಾಯದ ಕಾ||
ಸನ ದೇವಿಯರ್ಕಳಿರ್ಪ
ತ್ತು ನಾಲ್ವರೀಗೆ ಮಣೆಯ ಯಕ್ಷರಕ್ಷಯ ಸುಖಂ||

ಹೀಗೆ ಒಬ್ಬೊಬ್ಬ ಯಕ್ಷನನ್ನು-ಯಕ್ಷಿಣಿಯನ್ನು, ಪ್ರತ್ಯೇಕವಾಗಿ ಸ್ತುತಿಸುವ ಪದ್ಯಗಳು ಕನ್ನಡದಲ್ಲಿ ಸಾಕಷ್ಟಿವೆ. ಕನ್ನಡ ನಾಡಿನಾದ್ಯಂತ ದೇವಾಲಯ, ಬಸದಿ, ಜಿನಾಲಯಗಳಲ್ಲಿ ಸುಂದರ ಮೂರ್ತಿಗಳನ್ನು ನಿರ್ಮಿಸಲಾಗಿದೆ. ಜೈನರಲ್ಲಿ ೨೪ ಯಕ್ಷ ೨೪ ಯಕ್ಷಿಯರನ್ನು ಈ ಕೆಳಗಿನಂತೆ ಹೆಸರಿಸಬಹುದು.

| ಯಕ್ಷರು | ಯಕ್ಷಿಯರು |
|---|---|
| ೧. ಗೋಮುಖ | ೧. ಚಕ್ರೇಶ್ವರಿ |
| ೨. ಮಹಾಯಕ್ಷ | ೨. ರೋಹಿನಿ |
| ೩. ತ್ರಿಮುಖ | ೩. ಪ್ರಜ್ಞಪ್ತಿ |
| ೪. ಯಕ್ಷೇಶ್ವರ | ೪. ವಜ್ರಶೃಂಖಲಾ |
| ೫. ತುಂಬರು | ೫. ಪುರುಷದತ್ತಾ |
| ೬. ಪುಷ್ಪ | ೬. ಮನೋತೆಗಾ |
| ೭. ಮಾತಂಗ | ೭. ಕಾಲೀ |
| ೮. ಶ್ಯಾಮ | ೮. ಜ್ವಾಲಾಮಾಲಿನಿ |

| | |
|---|---|
| ೯. ಅಜಿತ | ೯. ಮಹಾಕಾಳಿ |
| ೧೦. ಬ್ರಹ್ಮ | ೧೦. ಮಾನವೀ |
| ೧೧. ಈಶ್ವರ | ೧೧. ಗೌರೀ |
| ೧೨. ಕುಮಾರ | ೧೨. ಗಾಂಧಾರಿ |
| ೧೩. ಷಣ್ಮುಖ | ೧೩. ವೈರೋಟಿ |
| ೧೪. ಪಾತಾಳ | ೧೪. ಅನಂತಮತಿ |
| ೧೫. ಕಿನ್ನರ | ೧೫. ಮಾನಸೀ |
| ೧೬. ಗರುಡ | ೧೬. ಮಹಾಮಾನಸೀ |
| ೧೭. ಗಂಧರ್ವ | ೧೭. ಜಯಾ |
| ೧೮. ಬೇಂದ್ರ | ೧೮. ತಾರವತಿ |
| ೧೯. ಕುಬೇರ | ೧೯. ಅಪರಾಜಿತಾ |
| ೨೦. ವರುಣ | ೨೦. ಬಹುರೂಪಿಣೀ |
| ೨೧. ಭೃಕುತಿ | ೨೧. ಚಾಮುಂಡಾ |
| ೨೨. ಗೋಮೇರ | ೨೨. ಆಮ್ರಾ |
| ೨೩. ಧರಣ-ಧರಣೇಂದ್ರ | ೨೩. ಪದ್ಮಾವತೀ |
| ೨೪. ಮಾತಂಗ | ೨೪. ಸಿದ್ಧಾಯಿಕಾ |

ಇಂತಹ ಯಕ್ಷ-ಯಕ್ಷಿಯರ ಕುರಿತು ಜೈನರಲ್ಲಿ ಹಲವಾರು ಹಾಡುಗಳು ರಚನೆಗೊಂಡಿರುವುದು ಕಂಡುಬರುತ್ತದೆ. ಇವುಗಳಲ್ಲಿ ಪಾರ್ಶ್ವನಾಥನ ಯಕ್ಷಿಯಾದ ಪದ್ಮಾವತಿಯ ಹಾಡುಗಳು ಹೆಚ್ಚಾಗಿ ಕಂಡುಬರುತ್ತವೆ. ಜೊತೆಗೆ ಕೂಷ್ಮಾಂಡಿದೇವಿ, ಜ್ವಾಲಾಮಾಲಿನಿಯರ ಕುರಿತ ಹಾಡುಗಳಿವೆ. ಪ್ರಮುಖವಾಗಿ ಯಕ್ಷಿಣಿಯರ ಸೌಂದರ್ಯದ ವರ್ಣನೆ, ಆಭರಣ ವರ್ಣನೆ, ಅವರ ನೋಟ-ಮಾಟ-ವಯ್ಯಾರಗಳನ್ನು ಮನಸ್ಸಿಗೆ ಮುಟ್ಟುವಂತೆ, ಕಣ್ಣಿಗೆ ನಾಟುವಂತೆ ಚಿತ್ರಿಸುವ ಕಲೆಗಾರಿಕೆ ಹಾಡುಗಳಲ್ಲಿ ಉಲ್ಲೇಖವಾಗಿವೆ. ಇಂತಹ ಯಕ್ಷಿಯರ ಹಾಡುಗಳು ಜೈನಧರ್ಮದ ಧಾರ್ಮಿಕ ಆಚಾರಗಳನ್ನು ಅರಿಯುವುದರ ಜೊತೆಗೆ ಅಲ್ಲಿರುವ ವಿಶಾಲವಾದ ಸಾಂಸ್ಕೃತಿಕ ಜಗತ್ತು ಅನಾವರಣಗೊಂಡಿರುವುದು ಕಂಡುಬರುತ್ತದೆ. ಹಿಂದೂಗಳಲ್ಲಿ ದೇವತೆಗಳ ಪರಿಕಲ್ಪನೆಯಂತೆ ದೇವತೆಗಳ ಪೂಜೆ, ವರ್ಣನೆ, ವಯ್ಯಾರವನ್ನು ಜೈನರು ಸಹ ಆಚರಿಸುತ್ತಿರುವುದು ವಿಶೇಷವಾದ ಸಂಗತಿಯೆನಿಸುತ್ತದೆ. ಏಕೆಂದರೆ ಜೈನರ ಆಚರಣೆಗಳಲ್ಲಿ ಪೂಜೆ, ಪುನಸ್ಕಾರಗಳು ಕಂಡುಬರುವುದಿಲ್ಲ. ಆದರೂ ಜೈನರಲ್ಲಿ ಯಕ್ಷ-ಯಕ್ಷಿಣಿಯರ ಪೂಜೆ, ಫಲಪುಷ್ಪಗಳ ಅರ್ಚನೆ ಮುಂತಾದ ಕಾರ್ಯಗಳು ನಡೆಯುತ್ತವೆ. ಇಂತಹ ವಿಶಿಷ್ಟವಾದ ಹಾಡುಗಳನ್ನು ವಿವೇಚಿಸುವುದು ಅಗತ್ಯವಾಗಿದೆ. ಜೈನರಲ್ಲಿ ಹೆಚ್ಚು ಪ್ರಚಲಿತವಾದ ಯಕ್ಷಿ 'ಪದ್ಮಾವತಿ'ಯೇ ಹೆಚ್ಚು ಜನಪದೀಕರಣಕ್ಕೆ ಒಳಗಾಗಿರುವ ಕುರಿತಾಗಿ ಜನಪದ ಹಾಡುಗಳು ಬಳಕೆಯಲ್ಲಿವೆ. ಈಕೆಯ ವರ್ಣನೆ, ಮಹಿಮೆ, ಪವಾಡಗಳನ್ನು ಪದ್ಮಾವತಿಯ ಸೌಂದರ್ಯ, ಆಕೆಯ ಮಹಿಮೆ, ಕೇಳಿದವರನ್ನು ನೀಡುವ ವರದೇವತೆಯಾಗಿ ಪದ್ಮಾವತಿ ಜೈನರಲ್ಲಿ ನೆಲೆಸಿದ್ದಾಳೆ. ಇಂತಹ ಪದ್ಮಾವತಿಯನ್ನು ಹಾಡಿನಲ್ಲಿ ಸ್ತುತಿಸಲಾಗಿದೆ.

“ಸಿಂಗಾಡಿಯೆಂದದ ಪುರ್ಬ್ಬಿನ

ಕಂಗಳ ಕುಡಿನೋಟದ ಚೆಲುವಿನ

ಭೃಂಗಕುಂತಳದ ಫಣಿವೇಣಿ ಪದ್ಮಾಂಬ

ಸಿಂಗಾರದ ಹೂವ ಮುಡಿ ಬಾರೇ||

ರಾಜೀವ ನೇತ್ರದ ತಿಲಕದ

ತೇಜಮುತ್ತಿನ ಮೂಗುತಿ ಹೊಳೆಯಲು

ರಾಜಿಪನಾಸಿಕದ ವಿಮಲಾಂಗಿ ಪದ್ಮಾಂಬ

ಜಾಜಿಯ ಹೂವ ಮುಡಿ ಬಾರೇ||

ಹೊಂಬುಜಪುರದೊಳು ನೆಲೆಸಿದ

ರಂಬೆ ಪದ್ಮಾವತಿಯಮ್ಮಗೆ ಸುವರ್ಣದ

ಪ್ರತುಮೆಯೆಸೆಯಲು ಪದ್ಮಾಂಬೆ

ದುಂಡು ಮಲ್ಲಿಗೆಯ ಮುಡಿ ಬಾರೇ||”[೧೦೯]

ಈ ಹಾಡಿನಲ್ಲಿ ಪದ್ಮಾವತಿಯನ್ನು ಹೂವಿನಿಂದ ಸಿಂಗರಿಸಲಾಗಿದೆ. ಮಲ್ಲಿಗೆ, ಸಂಪಿಗೆ, ಜಾಜಿ, ಪಂಕಜ, ಸುರಗಿ ಮುಂತಾದ ಹೂವುಗಳಿಂದ ಅಲಂಕೃತವಾಗಲು ಭಕ್ತನ-ಭಕ್ತಿಯ ಭಾವನಾತ್ಮಕ-ಸಂಬಂಧ ಈ ಹಾಡಿನಲ್ಲಿ ವ್ಯಕ್ತವಾಗಿದೆ. ಇಲ್ಲಿ ಪದ್ಮಾವತಿಯ ಪ್ರತಿಯೊಂದು ಸಿಂಗಾರವೂ ಅತಿಶಯವಾಗಿ ಕಂಡುಬರುತ್ತದೆ. ಹಾಗೆಯೇ ಹಾಡಿನ ಕೊನೆಯ ಪದ್ಯದಲ್ಲಿ ಪದ್ಮಾವತಿ ನೆಲೆಸಿರುವ ಸ್ಥಳವನ್ನು ಪರಿಚಯಿಸಲಾಗಿದೆ. ಹೊಂಬುಜ ಎನ್ನುವುದು ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನಲ್ಲಿದೆ. ಇದೊಂದು ಜೈನರ ಪವಿತ್ರ ಕ್ಷೇತ್ರವಾಗಿದೆ. ಇಲ್ಲಿ ಸುತ್ತಲೂ ರುದ್ರರಮಣೀಯವಾದ ಬೆಟ್ಟಗುಡ್ಡಗಳು, ಗಿಡಮರಗಳ ನಡುವೆ ಪದ್ಮಾವತಿಯು ನೆಲೆಸಿರುವುದರಿಂದ ಇದೊಂದು ಪವಿತ್ರ ಸ್ಥಳವಾಗಿದೆ. ೨೩ನೇ ತೀರ್ಥಂಕರನಾದ ಪಾರ್ಶ್ವನಾಥ ಯಕ್ಷಿಣಿಯೇ ಈ ಪದ್ಮಾವತಿ. ಇಲ್ಲಿ ಪ್ರತಿಯೊಂದು ಆಚಾರ-ವಿಚಾರ-ಸಂಪ್ರದಾಯಗಳು ಹಿಂದೂ ಧರ್ಮದ ಆಚರಣೆಗಳೋಪಾದಿಯಲ್ಲಿ ನಡೆಯುತ್ತವೆ.

ತುಲಾಭಾರ, ನಾಮಕರಣ, ವೀಳ್ಯ, ಪೂಜೆ, ವಿಶಿಷ್ಟಪೂಜೆ, ದಾಸೋಹ ಪ್ರತಿನಿತ್ಯವೂ ಕಂಡುಬರುತ್ತದೆ. ಇಲ್ಲಿ ಪದ್ಮಾವತಿಗೆ ಫಣಿವೇಣಿ ಎಂದು ಕರೆಯಲಾಗಿದೆ. ಈಕೆ ನಾಗಲೋಕದ ಒಡೆಯ ನಾಗರಾಜ, ಫನ್ನಗೇಂದ್ರ ಎನ್ನುವ ಗಂಡು ಧರಣೇಂದ್ರನ ಯಕ್ಷನ ಮಡದಿಯಾಗಿರುವಳು. ಪದ್ಮಾವತಿಯನ್ನು ಹಸೆಗೆ ಕರೆತರುವ ಸಂಪ್ರದಾಯದ ಹಾಡಿನಲ್ಲಿ ತುಂಬ ಸೊಗಸಾಗಿ ಹಾಡಿ ಹೊಗಳಿದ್ದಾರೆ.

“ಗಜದೇವನ ಪಾದಯುಗ್ಮಕಭಿನಮಿಸಿ

ಅಜನರಸಿಯು ಶಾರದೆಯನು ಸ್ಮರಿಸಿ

ಭುಜಭೂಷಣನ ಸಲಹೆಂದು

ಭಜಕರಿಗೆಂದು ನಿಜವಾದ ಮತಿಯ ಕರುಣಿಸು||

ಪುಂಡರಿಕಾಂಬಿಕೆಯರು ಬಹುವಿಧ

ತಂಡದಿ ನಾಚುತ ನಗುತಲಿ ಇಂದು

ಮಂಡಲದಂತೆ ಹೊಳೆವುತ್ತ ಪದ್ಮಾವತಿಯಮ್ಮನ
ಕೊಂಡಾಡಿ ಹಸೆಗೆ ಕರೆದಾರು||

ಒಡನಡುವಿನ ಭಾವಕಿಯರು ಗಿಳಿ
ನುಡಿಯಿಂದಲಿ ಪಾಡುವ ಹೊಗಳುತ
ಬೆಡಗನು ಬೀರುತ ನಲಿವುತ ಪದ್ಮಾವತಿಯಮ್ಮನ
ಸಡಗರದೊಳು ಹಸೆಗೆ ಕರೆದಾರು||

ನಳಿತೋಳಿನ ನವ ಮೋಹಿನಿಯರು
ಕಲಶಕುಚದ ಕೋಮಲೆಯರು
ಕಳಹಂಸ ನಡೆಯ ಚದುರೆಯರು ಪದ್ಮಾವತಿಯಮ್ಮನ
ನಸುನಗುತ ಹಸೆಗೆ ಕರೆದಾರು||[೧೧೦]

ಗಜದೇವನ ಪಾದಕ್ಕೆ ನಮಿಸಿ ಆ ಜನರಸಿಯಾದ ಶಾರದೆಯನ್ನು ಸ್ಮರಿಸಿ ಭುಜಭೂಷಣವನ್ನು ಸಲಹೆಂದು ಬೇಡಿಕೊಂಡು ಪುಂಡರಿಕಾಂಬಿಕೆಯರು ತಂಡತಂಡವಾಗಿ ಬರುತ್ತ ನಾಚುತ, ನಲಿಯುವ, ನಗುತ, ಚಂದ್ರಮಂಡಲದಂತೆ ಹೊಳೆಯುತ್ತ ಪದ್ಮಾವತಿಯನ್ನು ಹಸೆಗೆ ಕರೆತರುವ ನಾರಿಯರ ವರ್ಣನೆಯಿಂದ ಕೂಡಿದೆ. ಇಲ್ಲಿ ಹಾಡುಗಾರ ಒಡನಡುವಿನ ಭಾವಕಿಯರು, ಮಲಯಜಗಾಂಧಿಯರು, ನಳಿತೋಳಿನ ನವಮೋಹಿಯರು, ಕಲಶಕುಂಚದ ಕೋಮಲೆಯರು, ಪದ್ಮಾಂಬೆಯನ್ನು ಹಸೆಗೆ ಕರೆತರುವ ಭಂಗಿ ಶಬ್ದ ಚಿತ್ರಗಳಲ್ಲಿ ಸೊಗಸಾಗಿ ಮೂಡಿಬಂದಿದೆ. ಹಾಗೆಯೇ ಅವಳಲ್ಲಿರುವ ಸಂಪತ್ತು ಎಷ್ಟಿದೆ ಎಂಬುದನ್ನು ಉಲ್ಲೇಖಿಸಿದ್ದಾರೆ.

"ದಿನಕೆ ನೂರೆಂಟು ಬಂಡಿ ಕಂಬಿನ ಚಿನ್ನ
ಅನು ಮಾಡಿ ಕೊಡು ಜಿನದತ್ತ ಕೊಡು ಸಂಪನ್ನ
ಕನಕಾದ್ರಿ ಕೊಳವೆ ಅಂಡಿಗೆ ತುಂಬಿ ಹೊನ್ನ
ಎನುತ ಓಕುಳಿಯಾಡಿದರಂತೆ ಮುನ್ನ||

ಪಾತಾಳದೊಳ ನಿಟ್ಟು ಪಟ್ಟಣವುಂಟು
ದೂತಿಯರಿಹರು ಯಕ್ಷಿಗಳು ನೂರೆಂಟು
ಭೂತಳೇಂದ್ರನ ಫಣಿರಾಜನ ನಂಟು ನಿಮ್ಮ
ಸೋತು ಪೂಜಿಸುವರಿಗೆ ಭಾಗ್ಯ ಕೈಗಂಟು"[೧೧೧]

ಪದ್ಮಾವತಿಯ ಪಟ್ಟಣವಿರುವುದು ಪಾತಾಳದಲ್ಲಿ, ಅವಳಿಗೆ ಧೂತಿಯರು ನೂರೆಂಟು ಜನ, ಇವಳ ಗಂಡ ಭೂತಳೇಂದ್ರ ಫಣಿರಾಜ, ನಾಗಲೋಕದ ಒಡೆಯ ನಾಗರಾಜ ಫನ್ನಗೇಂದ್ರ ಧರಣೇಂದ್ರನು ಪದ್ಮಾವತಿಯ ಪತಿಯಾಗಿದ್ದಾನೆ. ಬದುಕಿನಲ್ಲಿ ಸೋತ ಮನ ಪೂಜಿಸಿದರೆ ಸಾಕು ಭಾಗ್ಯ ಕೈವಶವಾಗುತ್ತದೆ ಎಂಬುದು ಈ ಹಾಡಿನಲ್ಲಿ ವ್ಯಕ್ತವಾಗಿದೆ.

"ಕಾಯೇ ಎನ್ನ ಕಾಯೇ ಸುಜನ
ಪ್ರಿಯ ಕರುಣಧಾರೆ ಆಯತಾಕ್ಷಿ ಅಂದವುಳ್ಳ

ಕಾಯೇ ಅಬ್ಬಕಾಣಿ ನೀಯೆನ್ನ ಕಾಯೇ||

ರಕ್ಷಿಸಲು ಬೇಕು ದಯದಿ ನಿರೀಕ್ಷಿಸು ನೀ ಎನ್ನ ಜನನಿ

ವೃಕ್ಷದವನು ನಾನು ನಿನ್ನಯ ಕ್ಷಿತಿಯ ದೈವವಾ

ಆಕ್ಷಮಾಡೆ ರಾಕ್ಷಸರ ಶಿಕ್ಷಿಸಿದೆ ನಿನ್ನ ಮಹಿಮೆ

ಯ ಕ್ಷಿತಿಯೊಳಾಕ್ಷೆಯ ಸುಲಕ್ಷಣ ವಿಚಕ್ಷಣೆ||"[೧೧೮]

ಕಾಯೇ ಎನ್ನ ಕಾಯೇ ಎನ್ನುವ ಹಾಡು ಭಕ್ತನ ಹಲಬುವ ಧ್ವನಿ ಇಲ್ಲಿ ವ್ಯಕ್ತವಾಗಿದೆ. ಭಕ್ತನು ಪದ್ಮಾವತಿಯನ್ನು ವಿಧವಿಧವಾಗಿ ವರ್ಣಿಸುತ್ತ ಆಕೆಯ ಮಹಿಮೆಯನ್ನು ಸಾಧನೆಯನ್ನು ಹೊರಹಾಕಿದ್ದಾನೆ. ರಾಕ್ಷಸರ ಶಿಕ್ಷಿಸಿದೆ ಎನ್ನುವ ಮೂಲಕ ಪದ್ಮಾವತಿಯ ಶಕ್ತಿ ಪರಾಕ್ರಮಗಳನ್ನು ವೈಭವೀಕರಿಸಿದೆ. ಈ ಹಾಡಿನ ಮುಂದಿನ ಪದ್ಯಗಳಲ್ಲಿ ಪದ್ಮಾವತಿಯ ಶಕ್ತಿಯ ಪರಕಾಷ್ಠತೆಯನ್ನು ಹಾಡಿ ಹೊಗಳಿದ್ದಾರೆ. 'ಪರಾಕು' ಹೇಳುವ 'ಅಂಬಾ ಪರಾಕು' ಎನ್ನುವ ಹಾಡು ೧೧ ನುಡಿಯಲ್ಲಿ ಪೂರ್ಣಗೊಂಡಿದೆ.

"ಅಂಬಾ ಪರಾಕು ದೇವಿ ಪರಾಕು

ಅಂಬಾ ಪರಾಕು ಪದ್ಮಾಂಬ ಪರಾಕು||

ಪಣಿ ಪರಾಕು ಪದ್ಮಿಣಿ ಪರಾಕು

ಪಾರಿಶ್ವಜಿನಪನೆ ಯಕ್ಷ ಪರಾಕು||

ನಾಗಲೋಕಕೆ ಕರ್ತೆ ದೇವಿ ಪರಾಕು

ನಾಗಿಣಿಯರಿಗಧಿನಾಥೆ ಪರಾಕು ||

ಬೆಳ್ಗುಳ ಪುರವಾಸೆ ಭವ್ಯ ಪರಾಕು

ಬಾಲಕನನು ಕಾಯೆ ಜಗದಾಂಬೆ ಪರಾಕು"||[೧೧೯]

ಎನ್ನುವ ಈ ಹಾಡಿನಲ್ಲಿ ಪದ್ಮಾವತಿಯನ್ನು ಬಣ್ಣಿಸುವುದು ಕಂಡುಬರುತ್ತದೆ. ಪನ್ನಂಗೇಂದ್ರನ ಹೆಂಡತಿ, ಪಾರ್ಶ್ವನಾಥನ ಯಕ್ಷಿಣಿ, ನಾಗಲೋಕಕೆ ಕರ್ತೆ, ಪಾಪಹರನ ಭಕ್ತೆ, ಕುಕ್ಕುಟವಾಹನೆ, ಕಮಲನಯನೆ, ಪರಮದಯಾನಿಧಿ, ಸಮ್ಯಕ್‌ಕದಿ ಧೀರೆಯಾದ ಪದ್ಮಾವತಿ ಬೆಳಗೊಳ ಪುರಾವಾಸೆಯಾಗಿರುವ ನೀನು ಈ ಭಕ್ತನನ್ನು ಕಾಯೇ ಎನ್ನುವ ಉತ್ಕಟವಾದ ಹಂಬಲವಿದೆ. ಜಗದಾಂಬೆ ಎನ್ನುವ ಪದ ಅನನ್ಯತೆಯ ಭಾವನೆಯಿಂದ ಕೂಡಿದೆ. ಹೀಗೆ ಪದ್ಮಾವತಿಯನ್ನು ಹಾಡಿ ಹೊಗಳುವ ಆಕೆಯ ಸೌಂದರ್ಯದ ಆರಾಧನೆಯು ಹಲವಾರು ಹಾಡುಗಳಲ್ಲಿ ಕಾಣಬಹುದು. ಹಾಗೆಯೇ ಜನಪದ ಸಾಹಿತ್ಯದಲ್ಲಿಯೂ ಸಹ ಪದ್ಮಾವತಿ ಯಕ್ಷಿಣಿಯ ಹಾಡುಗಳೇ ಹೆಚ್ಚಾಗಿರುವುದು ಗೋಚರಿಸುತ್ತದೆ. ಇಂತಹ ಲೋಕಮಾನ್ಯ ಪದ್ಮಾವತಿಯನ್ನು ಪಡೆದ ಜೈನರು ತನ್ನದೇ ಆದಂತಹ ವಿಶಿಷ್ಟವಾದ ನಂಬಿಕೆ, ಆಚರಣೆ, ಸಂಪ್ರದಾಯಗಳನ್ನು ಮೈಗೂಡಿಸಿ ಕೊಂಡಿದ್ದಾರೆ. ಪದ್ಮಾವತಿಯ ಚರಿತ್ರೆಯನ್ನು ಜನಪದರು ಹಲವಾರು ಕಥೆಗಳು ಹಾಗೂ ಐತಿಹ್ಯಗಳಿಂದ ಸ್ಪಷ್ಟಪಡಿಸುತ್ತಾರೆ. 'ಪದ್ಮಾವತೀ' ಯಕ್ಷಿಯು ಜಿನದತ್ತರಾಯನಿಗೆ ನೆರವಾಗಿ ಆತನು ಹೊಂಬುಜವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯ ಸ್ಥಾಪಿಸಲು ನೆರವಾದಳೆಂಬ ಐತಿಹ್ಯವಿದೆ.

ಈ ಪ್ರದೇಶಕ್ಕೆ ಬಂದಾಗ ಆಕೆಯ ಬಿಂಬವನ್ನು ಜಿನದತ್ತರಾಯ ಒಂದು ಲಕ್ಕಿಯ ಗಿಡಕ್ಕೆ ಕಟ್ಟಿದ್ದರಿಂದ ಆಕೆ ಮುಂದೆ ಅಲ್ಲೇ ನೆಲೆಸುವುದಾಗಿ ಹೇಳಿದ್ದರಿಂದ ಆಕೆಗೆ 'ಲಕ್ಕಿಯಬ್ಬೆ' ಎಂಬ ಹೆಸರೂ ಬಂದಿತು. ಅಂದಿನಿಂದ ಆಕೆಯು ಲಕ್ಕಿಯ ಗಿಡದಲ್ಲಿ ನೆಲೆಸಿರುತ್ತಾಳೆ ಎಂಬುದು ಜನಮನದಲ್ಲಿ ಬೇರೂರಿದೆ. ಇಂತಹ ದೈವ ನಂಬಿಕೆಗಳಿಂದ ಪದ್ಮಾವತಿಯು ಜೈನರಲ್ಲಿ ಅತ್ಯಂತ ಶ್ರೇಷ್ಠ ಯಕ್ಷಿಣಿಯಾಗಿ ನೆಲೆಸಿದ್ದಾಳೆ. ಮುಂದಿನ ಹಾಡುಗಳು 'ಜ್ವಾಲಿನಿ' ಯಕ್ಷಿಯ ಕುರಿತಾದ ಹಾಡುಗಳಾಗಿವೆ. ಪದ್ಮಾವತಿ ಯಕ್ಷಿಣಿಯಂತೆ ಪ್ರಸಿದ್ಧಿ ಪ್ರಖ್ಯಾತಿಯಿಲ್ಲವಾದರೂ ಇತರ ಯಕ್ಷಿಯರಿಗಿಂತ ಜ್ವಾಲಾಮಾಲಿನಿ ಹೆಚ್ಚು ಪ್ರಸಿದ್ಧಿ ಪ್ರಖ್ಯಾತಿಯನ್ನು ಪಡೆದವಳಾಗಿದ್ದಾಳೆ. ಅಂತಹ ಹಾಡುಗಳು ಹೀಗಿವೆ.

"ದೇವಿಯ ನೋಡುವೆನು ಶ್ರೀ ಜ್ವಾಲಿನಿ ತಾಯೇ
ನಾ ನೋಡುವೆನಾ||

ನೋಡುವೆ ಪಾಡುವೆ ಮಾಡುವೆ ಸ್ತುತಿಗಳ
ಬೇಡಿದ ವರಗಳ ನೀಡುವೆ ಜ್ವಾಲಿನಿದೇವಿಯ
ಅಳಿಮರುಳಿನ ಬಾಲೆ ಕರ್ನದಿ ರಂಜಿಸ ದೇವಿಯೇ||

ಹೊಸ ಮುತ್ತಿನ ವಾಲೆ ರ‍್ಯಾಗಟಿಕೊಂಡವು
ಕ್ಯಾದಿಗಿ ಜಾಜಿಗಳಿಂದ ಜ್ವಾಲಿನಿ ಶೋಭಿಸು
ಭುವನ ಸಂಜೀವಿಯೇ ದೇವಿಯೇ||

ಆಭರಣವ ತೊಟ್ಟು ನಾಸಿಕದೊಳು ಮೂಗುತಿಯನಿಟ್ಟು
ಬಾಲೆಗೆ ಕಪ್ಪು ಬಾವುಲಿ ಜಾಜಿಗಳಿಂದ
ಜ್ವಾಲಿನಿ ಶೋಭಿಸ ಭುವನ ಸಂಜೀವಿಯೇ||

ಸಿಂಹಪುರಿಸ್ಥಳದಿ ಸ್ಥಿರಕರದಿರ್ಪ ದಯಾಕರದಿ
ಲಕ್ಷ್ಮೀಸೇನ ಮುನಿಪತಿ ಇಷ್ಟಾರ್ಥವ ಕೊಡುವಂಥ
ಅಕ್ಷಯ ವರಗಳ ಕೊಡುವಂಥ ತಾಯೇ||"[೧೧೪]

ಜ್ವಾಲಿನಿ ಯಕ್ಷಿಣಿಯ ವರ್ಣಿಸುವುದಾಗಿದೆ. ಭಕ್ತರು ಬೇಡಿದ ವರವನ್ನು ಕೊಡುವ ಅಕ್ಷಯವಾಗಿದ್ದಾಳೆ. ಜ್ವಾಲಿನಿ ಸಿಂಹಪುರದ ಸ್ಥಳದಲ್ಲಿ ನೆಲೆಸಿದ್ದಾಳೆ ಎಂದು ಈ ಹಾಡಿನಲ್ಲಿ ಪ್ರಸ್ತಾಪಿಸಲಾಗಿದೆ.

"ಜೈನ ಅಮ್ನಾಯಗಳಲ್ಲಿ ಈಕೆಗೆ ಬಹಳ ಮಹತ್ವ. ತಾಂತ್ರಿಕ ಸಿದ್ಧಿಗಳಿಗಾಗಿ ಈಕೆ ಪೂಜಿಸಲ್ಪಡುವುದು ಹಿಂದಿನಿಂದಲೂ ರೂಢಿಯಲ್ಲಿದೆ. ಜ್ವಾಲಾಮಾಲಿನಿ "ಕಲ್ಪ" ಮುಂತಾದ ಗ್ರಂಥಗಳು ಈಕೆಯನ್ನು ಒಲಿಸಿಕೊಳ್ಳುವ ವಿಧಾನಗಳನ್ನೇ 'ನಿರೂಪಿಸುತ್ತವೆ'. ಈಕೆ ಜನಪ್ರಿಯ ಯಕ್ಷೆ. ಗೇರುಕೊಪ್ಪೆಯ ಅಧಿದೇವತೆ"[೧೧೫] ಶ್ಯಾಮಯಕ್ಷನ ಪತ್ನಿ ಜ್ವಾಲಿನಿ ಅನೇ ತೀರ್ಥಂಕರನಾದ ಚಂದ್ರಪ್ರಭುವಿನ ಯಕ್ಷಿಣಿಯಾಗಿದ್ದಾಳೆ. ಮುಂದಿನ ಹಾಡಿನಲ್ಲಿ ಭಕ್ತನು ಜ್ವಾಲಿನಿಯನ್ನು ಬೇಡುತ್ತಿರುವ ಪರಿಯನ್ನು ವಿವರಿಸುತ್ತದೆ.

"ಪಾಲಿಸು ಪಾಲಿಸು ಪಾಲಿಸು ತಾಯೇ
ಲೋಲ ಜ್ವಾಲಿನಿ ಎನ್ನ ಅನುದಿನ ಕಾಯೇ||

ಮೊರೆಹೊಕ್ಕ ಸಿಬರ ಕಾಯಬೇಕಮ್ಮ
ಕರುಣಿಸದಿದ್ದರೆ ಕಾಯ್ವರೇ ನಮ್ಮ
ಸೆರೆಗೊಡ್ಡಿ ಬೇಡಿದೆ ಕರುಣಿಸೇ ನಮ್ಮ
ಮೊರೆಯ ಲಾಲಿಸು ತಾಯೇ ಜ್ವಾಲಿನಿಯಮ್ಮ||

ಚಂದ್ರಾರ್ಕಕೋಟಿ ಪ್ರಕಾಶದೊಳೆನ್ನ
ಚಂದ್ರ ಜಿನೇಂದ್ರ ಯಕ್ಷಿಣಿಯಮ್ಮ
ಇಂದ್ರಾದಿವಂದಿತೆ ದೇವಿಯಮ್ಮ
ಬಂದ ವಿಘ್ನಗಳನು ಪರಿಹರಿಸಮ್ಮ||

ಘನವಾದ ಬೆಳ್ಗೊಳಪುರದ ಭಕ್ತರನು
ಅನುದಿನ ಸಲಹಮ್ಮ ಪ್ರತಾಪವಿತ್ರರನು
ಕ್ಷಣ ಅಗಲದೆ ಎನ್ನ ಹೃದಯದೊಳಗೆ
ನೀನು ಮನೆ ಮಾಡಿಕೊಂಡಿರು||"[೧೧೬]

ಈ ಹಾಡು ಶ್ರವಣಬೆಳಗೊಳದ ಭಕ್ತನೇ ರಚನೆ ಮಾಡಿರುವಂತೆ ಕಾಣುತ್ತದೆ. ಏಕೆಂದರೆ ಘನವಾದ ಬೆಳ್ಗೊಳಪುರದ ಭಕ್ತರನ್ನು ಅನುದಿನ ಸಲಹಮ್ಮ ಎಂಬ ಪದ ಮೇಲಿನ ಮಾತನ್ನು ಸೂಚಿಸುತ್ತಿದೆ. ಭಕ್ತನು ಎನ್ನನ್ನು 'ಸಲುಹು ತಾಯೇ ಜ್ವಾಲಾಮಾಲಿನಿ, ಸೆರಗೊಡ್ಡಿ ಬೇಡಿದೆ ಕರುಣಿಸೇ ನಮ್ಮ' ಎನ್ನುವ ಉತ್ಕಟವಾದ ಭಕ್ತಿಯ ಹಂಬಲವಿದೆ. ಹೀಗೆ ಯಕ್ಷಿಯರ ಹಾಡುಗಳಲ್ಲಿ ಬಹುತೇಕ ಅವರ ವರ್ಣನೆ ಹಾಗೂ ಭಕ್ತನು ಬೇಡುವ ಧ್ವನಿಯಿದೆ. ಹೀಗೆ ವಿಧವಿಧವಾದ ರೀತಿಯಲ್ಲಿ ಭಕ್ತರು ವರ್ಣಿಸಿ ಸಂತೃಪ್ತರಾಗುತ್ತಾರೆ.

ಹೀಗೆ ಜೈನಧರ್ಮದಲ್ಲಿ ಯಕ್ಷ-ಯಕ್ಷಿಯರು ತೀರ್ಥಂಕರನ ಸೇವೆಗಾಗಿ ತಮ್ಮನ್ನು ಸಮರ್ಪಿಸಿಕೊಂಡವರು. ಇವರ ಸಹಾಯವಿಲ್ಲದೆಯೇ ತೀರ್ಥಂಕರರಾಗಲಿರುವವರು ತಮಗೆ ಬಂದ ವಿಘ್ನಗಳನ್ನು ನಿವಾರಿಸಿಕೊಂಡು ಕೇವಲಜ್ಞಾನ ಪಡೆಯಬಲ್ಲರು. "ತೀರ್ಥಂಕರರಿಗೆ ತಪಸ್ಸಿನ ಕಾಲದಲ್ಲಿ ಉಂಟಾಗುವ ಉಪಸರ್ಗಾದಿಗಳನ್ನು ಅವರು ನಿವಾರಿಸಿಕೊಳ್ಳುವುದಿಲ್ಲ. ತೀರ್ಥಂಕರರು ತಮ್ಮ ಪಾಡಿಗೆ ತಾವು ತಟಸ್ಥರಾಗಿ ಸ್ಥಿತಪ್ರಜ್ಞರಾಗಿ, ಅಂತರ್ಮುಖಿಗಳಾಗಿರುತ್ತಾರೆ. ಅವರು ತಮಗುಂಟಾದ ತೊಂದರೆಗಳನ್ನು ಕಳೆಯುವಂತೆ ಕೂಡ ಕೇಳುವುದಿಲ್ಲ. ಮನಸ್ಸಿನಲ್ಲಿ ಅಂಥ ಪರಿಹಾರದ ಆಲೋಚನೆ ಮಾಡುವುದಿಲ್ಲ. ಆದರೆ ಯಕ್ಷ-ಯಕ್ಷಿಯರೇ ಆತ್ಮ ಪ್ರೇರಣೆಯಿಂದ(ಅಂಥವಿಘ್ನ-ನಿವಾರಣೆ) ಮುಂದಾಗುತ್ತಾರೆ."[೧೧೭] ಪ್ರತಿಯೊಬ್ಬ ತೀರ್ಥಂಕರರಿಗೂ ಒಬ್ಬೊಬ್ಬರಂತೆ ಯಕ್ಷಿಯರು ಇರುತ್ತಾರೆ. ಇವರ ಬಗ್ಗೆ ಅನೇಕ ಜನಪದ ಗೀತೆಗಳು ಶಿಷ್ಟ ಹಾಡುಗಳಲ್ಲಿ ಯಕ್ಷ-ಯಕ್ಷಿಯರ ಕುರಿತಾದ ಸಾಕಷ್ಟು ಹಾಡುಗಳು ಹುಟ್ಟಿಕೊಂಡಿವೆ. ಇವುಗಳಲ್ಲಿ ಯಕ್ಷರಿಗಿಂತ ಯಕ್ಷಿಯರಿಗೇ ಹೆಚ್ಚು ಮಹತ್ವ ಕೊಟ್ಟಿರುವುದನ್ನು ಹಾಡುಗಳಲ್ಲಿ ಗಮನಿಸಬಹುದು. ಬಹುತೇಕ ಯಕ್ಷಿಯರಲ್ಲಿ ಪ್ರಸಾದ, ವರಗಳನ್ನು ಬೇಡುವ ಹಾಡುಗಳೇ ಹೆಚ್ಚಾಗಿ ಕಂಡುಬರುತ್ತವೆ. ಹಾಗೆಯೇ ಯಕ್ಷಿಣಿಯರನ್ನು ಕುರಿತು ವರ್ಣಿಸುವ ಸೌಂದರ್ಯದ ಆರಾಧನೆ, ಪ್ರಾರ್ಥನೆ, ಸ್ತುತಿ ಮಾಡುವ ಹಾಡುಗಳಾಗಿವೆ.

ಒಟ್ಟಿನಲ್ಲಿ ಜನಪದ ಹಾಡುಗಳಲ್ಲಿ ಇರುವಂತೆ ಶಿಷ್ಟ ಜೈನ ಹಾಡುಗಳಲ್ಲಿಯೂ ಸಹ ಯಕ್ಷಿಯನ್ನು ಆರಾಧಿಸುವ, ಪ್ರಾರ್ಥಿಸುವ, ಪೂಜಿಸುವ, ವರಗಳನ್ನು ಬೇಡುವ, ಸೌಂದರ್ಯದ ಪರಿಯನ್ನು ವಿವರಿಸುವ

ಮಹತ್ವವಾದ ಜೈನ ಹಾಡುಗಳಾಗಿವೆ. ಇಂತಹ ಹಾಡುಗಳು ಜೈನರ ಆಚಾರ-ಸಂಪ್ರದಾಯಗಳಲ್ಲಿ ಅನಾವರಣಗೊಳಿಸುತ್ತವೆ. ಹಾಗೆಯೇ ಪ್ರಾದೇಶಿಕವಾಗಿ ಜೈನರಲ್ಲಿ ಇರುವಂತಹ ನಂಬಿಕೆ ಧಾರ್ಮಿಕ ವಿಚಾರಗಳನ್ನು ಹೊರ ಹಾಕುತ್ತವೆ. ಇಂತಹ ಹಾಡುಗಳು ಒಂದು ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ಬಿಂಬಿಸುವಲ್ಲಿ ಮಹತ್ವಪೂರ್ಣವಾದ ಪಾತ್ರ ವಹಿಸುತ್ತವೆ.

### ೪.೩. ಜನಪದ ಆಚರಣೆಯ ಹಾಡುಗಳು

#### ೪.೩.೧. ಜೋಗುಳದ ಹಾಡು

ಜೈನರಲ್ಲಿ ಬಳಕೆಯಲ್ಲಿರುವ ಜೋಗುಳದ ಹಾಡುಗಳು ವಸ್ತು ದೃಷ್ಟಿಯಿಂದ ನೋಡಿದಾಗ ತುಂಬ ಮಹತ್ವವುಳ್ಳ ಹಾಡುಗಳಾಗಿ ಕಂಡುಬರುತ್ತವೆ. ಬಹುತೇಕ ಜೋಗುಳದ ಹಾಡುಗಳು ತ್ರಿಪದಿಯಿಂದ ಕೂಡಿರುತ್ತವೆ. ಆದರೆ ಇಲ್ಲಿ ಆ ಲಕ್ಷಣ ಕಂಡುಬರುವುದಿಲ್ಲ. ೨ ಸಾಲು, ೪ ಸಾಲುಳ್ಳ ಹಾಡುಗಳು ಕಂಡುಬರುತ್ತವೆ. ಇವು ಹೆಚ್ಚಾಗಿ ತೀರ್ಥಂಕರರನ್ನು ಕುರಿತದ್ದಾಗಿವೆ. ಮುಂದೆ ತೀರ್ಥಂಕರನಾಗಲಿರುವ ಶಿಶುವಿನ ಹುಟ್ಟಿನ ಪೂರ್ವ ಸೂಚನೆಗಳನ್ನು ನಾಮಕರಣ, ಜನ್ಮಾಭಿಷೇಕ, ಹಾಗೂ ಧರ್ಮದ ಪ್ರಚಾರ-ಪರಿಚಯ ಮುಂತಾದ ವಿವರವನ್ನು ತಿಳಿಯಪಡಿಸುತ್ತದೆ.

'ತೊಟ್ಟಿಲದೊಳಗೊಂದು ತೊಳೆದ ಮುತ್ತನ್ನು ಕಾಣಬಲ್ಲೆನೆಂಬ' 'ಕೂಸು ಇದ್ದ ಮನೆಗೆ ಬೀಸಣಿಕೆ ಏತಕೆ' 'ಕೂಸು ಕಂದಯ್ಯ ಒಳಹೊರಗೆ ಆಡಿದರೆ ಬೀಸಣಿಕೆ ಗಾಳಿ ಸುಳಿದಾವ' ಎಂಬ ಭಾವದಿಂದ ಹೊರಡುವ ಮಕ್ಕಳ ಲಾಲಿ, ಪೋಷಣೆ, ಹಾರೈಕೆ, ಆಟ, ತುಂಟಾಟಗಳು ಬಾಲಲೀಲೆಗಳಲ್ಲಿ ಮೈಮರೆಯುವ ತಾಯಿ ತಂದೆಯರು ತಾಯ್ತನದ ಸವಿಯನ್ನು ಅನುಭವಿಸುತ್ತ ಮಕ್ಕಳ ಜೊತೆಗಿನ ಅನುಭವವನ್ನೇ ಜನಪದ ಗೀತೆಯ ರೂಪದಲ್ಲಿ ಹಾಡಿ ಹೊಗಳಿದ್ದಾರೆ. ಮಗುವನ್ನು ಸಂತೈಸಲು ತಾಯಿ ತೊಟ್ಟಿಲನ್ನು ತೂಗಿ ಸಮಾಧಾನಿಸುವಂತಹದ್ದು ಹಾಡಿನ ಮೂಲಕ ಮಗುವಿನ ಮನಸ್ಸನ್ನು ತನ್ನ ಕಡೆ ಸೆಳೆಯುವಂತಹ ರೀತಿ ತಾಯಿಯ ಅಕ್ಕರೆಯ ಹಾರೈಕೆಯನ್ನು ಬಯಸುವ ತಾಯಿ ಮತ್ತು ಮಗುವಿನ ಬಾಂಧವ್ಯವನ್ನು ಕಟ್ಟುಕೊಡುತ್ತದೆ. ಹಾಗೆಯೇ ಜೈನರ ಶಿಷ್ಟ ಪರಂಪರೆಯಲ್ಲಿ ಜೋಗುಳದ ಹಾಡುಗಳು ನಮಗೆ ಕಂಡುಬರುತ್ತವೆ.

ಮುರಕು ತೊಟ್ಟಿಲಿಗೊಂದು ಹರಕ ಚಾಪೆಯ ಹಾಸಿ
ಅರಚು ಪಾಪನ ಮಲಗಿಸಿ | ಅವರಕ್ಕ
ಕಲಕೇತ ಹಾಡಿ ಹಿಗ್ಗ್ಯಾಳ ||

ಲಾಲೀಯ ಹಾಡಿದರ ಲಾಲೀಸಿ ಕೇಳ್ಯಾನ
ತಾಯಿ ಹಂಬಲ ಮರೆತಾನ ಕಂದಯ್ಯ
ತೋಳ ಬೇಡ್ಯಾನ ತಲೆದಿಂಬ||[೧೯]

ಇಂತಹ ಜನಪದೀಯರ ಜೋಗುಳದ ಹಾಡುಗಳ ನುಡಿಯೇ ಚಂದ. ಲಯದ ಗತಿ, ದೇಸಿಯ ಪದಗಳಿಂದ ಎಂತಹವರ ಮನಸ್ಸನ್ನು ಸೆಳೆಯುವ ಮೋಡಿ ಈ ಹಾಡುಗಳಲ್ಲಿ ಕಂಡುಬರುತ್ತದೆ. "ಇಲ್ಲಿ ಹಾಲಿನ ಹಂಬಲಕ್ಕಿಂತ ಲಾಲಿಯು(ಜೋಗುಳದ ಬೆಂಬಲ ಮಕ್ಕಳಿಗೆ ಹಸಿವು-ನಿದ್ರೆಯನ್ನು) ಹಿಂಗಿಸುವುದು.

ಹೀಗೆ ಜೋಗುಳದ ಹಾಡುಗಳು ತಮ್ಮದೇ ಆದ ಮಹತ್ವವನ್ನು ಕಾಯ್ದುಕೊಂಡು ಬಂದಿದ್ದು, ಶಿಷ್ಟ ಸಂಪ್ರದಾಯದ ಕವಿಗಳ ಈ ಮಾಧ್ಯಮವನ್ನು ತಮ್ಮ ಕಾವ್ಯ ಸಂವಹನಕ್ಕೆ ಬಳಸಿಕೊಳ್ಳಲಾಗಿದೆ. ಅಧ್ಯಯನ ಉಯ್ಯಾಲೆ ಪದ ೨೩ ಪದ್ಯಗಳಿಂದ ಕೂಡಿದೆ. ಹಾಗೆಯೇ ಅಕ್ಕಮಹಾದೇವಿಯ ತೂಗಿದೆನು ನಿಜದುಯ್ಯಾಲೆ ೨ ನುಡಿಗಳ ಸ್ವರವಚನಗಳು ಜೋಕಾಲಿ ಜೀಕುವ ಧಾಟಿಯಲ್ಲಿ ರಚನೆಗೊಂಡಂತಹವುಗಳು. ಭಕ್ತಿ, ಜ್ಞಾನ, ಶಕ್ತಿ, ವೈರಾಗ್ಯವನ್ನು ಪ್ರತಿಪಾದಿಸುವುದಕ್ಕಾಗಿ, ಮುಕ್ತಿಗಧಿಕವಾದ ಆರಾಧ್ಯ ದೈವವನ್ನು ಕೊಂಡಾಡುವುದಕ್ಕಾಗಿ ಮಾಡಿಕೊಂಡ ಸುಂದರ ರೂಪಕಗಳ ಪದಗುಚ್ಛಗಳು ಈ ಜೋಗುಳದ ಹಾಡುಗಳು."[೧೧೮] ಇಂತಹ ಹಾಡುಗಳು ಜೈನರಲ್ಲಿರುವುದು ಕಂಡುಬರುತ್ತದೆ. ಇವುಗಳನ್ನು ಜನಪದ ಸಾಹಿತ್ಯವೆಂದು ಕರೆಯುವುದಕ್ಕಿಂತ ಜನಪದ ಹಾಡಿನ ಪ್ರಕಾರವೊಂದನ್ನು ಬಳಸಿಕೊಂಡು ರಚನೆಯಾದ ಶಿಷ್ಟ ಜನಪದ ಮಾದರಿಗಳೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಜೈನರರ ಇಂತಹ ಜೋಗುಳದ ಹಾಡುಗಳನ್ನು ಅಧ್ಯಯನ ದೃಷ್ಟಿಯಿಂದ ವಿವೇಚಿಸುವುದು ಅಗತ್ಯವೆನಿಸುತ್ತದೆ.

ತೊಟ್ಟಿಲನ್ನು ಕಟ್ಟುವಾಗಿನಿಂದ ಆರಂಭವಾಗಿ ಕೊನೆಗೆ ಜೊತೆಗೆ ಜೈನತತ್ವ ಸಿದ್ಧಾಂತಗಳನ್ನು ಹಾಗೂ ಜೋಗುಳ ಹಾಡುವ ಸ್ತ್ರೀಯರ ಗುಣಾತಿಶಯವನ್ನು ಕಟ್ಟಿಕೊಡುವಲ್ಲಿ ಈ ಹಾಡು ಸಫಲತೆಯನ್ನು ಪಡೆದಿದೆ.

"ಅಷ್ಟಕಂಬದ ಮಂಟಪವಲಂಕರಿಸಿ
ಪಟ್ಟೆಪೀತಾಂಬರಗಳನ್ನು ಶೃಂಗರಿಸಿ
ಬಟ್ಟ ಮುತ್ತಿನ ಜಲ್ಲಿಗಳು ತಂದಿರಿಸಿ
ತೊಟ್ಟಿಲ ಕಟ್ಟಿದರಾಗ ಸಂಭ್ರಮದಿ ಜೋ ಜೋ"||[೧೧೯]

ಮತ್ತೊಂದು ಹಾಡಿನಲ್ಲಿ ಹಾಸಿಗೆಯ ಹಾಸುವುದರಿಂದ ಹಿಡಿದು, ತೊಟ್ಟಿಲಿಗೆ ಗಂಧ ಕಸ್ತೂರಿಯ ಸುವಾಸನೆಯನ್ನು ಹಚ್ಚಿ ವಿಧವಿಧವಾಗಿ ಹಾಡುಗಳನ್ನು ಹೇಳಿ ಕಂದನನ್ನು ತೊಟ್ಟಿಲಲ್ಲಿ ಹಾಕಿ ತೂಗಿದರು ಎಂಬ ಭಾವನಾತ್ಮಕವಾದ ಹಾಡಾಗಿದೆ.

"ಮೃದುತಲದಲಿ ಹಾಸಿಗೆಯ ಹಾಸಿದರು
ಒಲವಿಂದ ಗಂಧಕಸ್ತೂರಿಯ ಪೂಸಿದರು
ವಿಧ ವಿಧ ರಾಗದಿ ಪಾಡುತ ಶಿಶುವನು||"
ಮುದದಿಂದ ತೊಟ್ಟಲೊಳಿರಿಸಿ ತೂಗಿದರು ಜೋ ಜೋ||[೧೨೦]

ಹಾಗೆಯೇ ಮುಂದಿನ ಹಾಡಿನಲ್ಲಿ "ಜೋ ಜೋ ಪುರಪರಮೇಶನ ಕಂದ" ಎನ್ನುವ ಹಾಡಿನಲ್ಲಿ ಪುರಪರಮೇಶನ ಮಗುವನ್ನು ವರ್ಣಿಸುವ ಹಾಡಾಗಿದೆ.

"ಜೋ ಜೋ ಪುರುಪರಮೇಶನ ಕಂದ
ಜೋ ಜೋ ಸುನಂದ ನಯನಾನಂದ
ಜೋ ಜೋ ಭುವಿನುತ ಚರಣಾರವಿಂದ
ಜೋ ಜೋ ನಿರ್ಮಲ ಸದ್ಗುಣವೃಂದ||"[೧೨೧]

ಹಾಗೆಯೇ ಪುರಪರಮೇಶ್ವರನನ್ನು ಕುರಿತ ಹಾಡಿನಲ್ಲಿ ಮನಭೂಮಿ ಪತಿವಂಶನಾದ ಇವನಿಗೆ ಯಾರು ಸಾಟಿಯಿಲ್ಲ. ಯಾಕೆಂದರೆ ಈತನಾಗೆ ಬೇರಾರೂ ಇಲ್ಲ.

"ಆದಿ ಚಕ್ರೇಶನ ಒಡಹುಟ್ಟಿದನುಜ
ಮೇದಿನಿಯೊಳು ವಿತರನ ಕಲ್ಪಭೂಜ
ಆದಿತ್ಯಮಂಡಲ ಸುರಚಿರ ತೇಜ
ಶ್ರೀ ದಿವಿಜಾನನ ಚರಣ ಸರೋಜ||"[೧೨]

ಎಂದು ವರ್ಣಿಸುವ ಹಾಡಾಗಿದೆ.

ಈ ಹಾಡಿನಲ್ಲಿ "ಅಳುವುದ್ಯಾತಕೆ ಕಂದಾ" ಎಂಬ ಹಾಡು ಕಂದನ ಅಳುವಿಗೆ ಕಾರಣ ಕೇಳುವ ತಾಯಿಯ ಪ್ರೀತಿಯ ಸಂಭಾಷಣೆಯಿಂದ ಕೂಡಿದೆ.

"ಅಳುವುದ್ಯಾತಕೆ ಕಂದಾ ಅತ್ತಿರಂಜಿಸು ಗುಮ್ಮಾ
ಏಳಯ್ಯಾ ಕಾರುಣ್ಯ ನೆಲಸಿದ ನಿನ್ನೊಳಗೆ
ವಜ್ರದ ಪಡಿಗಳ ಸೋಂಕಿದ ಕಿರುಲೆರ
ಳುಳುಕಿತೆ ನಿನಗಲರಡಿಯ ಕಂದಯ್ಯ||

ಗರಳದಾ ಮಡುವಿನಲಿ ಧುಮುಕಿದಾ ಕಾರಣದಿ
ಚರಣವು ನೊಂದಿತೆ ಪುಷ್ಪಿನ ಮಳೆಯಲಿ
ತರಲು ದೇಹ ಬಳಲಿತೆ ಕಂದಾ||

ಕುರುಹನರಿದು ಪಂಚಗಂಧಿಯರೀ ವಿಕರಣದಿ
ಕರಿಯ ಗೆಲಿದು ಹರಿಯಳವಡಿಸುವ ಭೂ
ವರರ ಸೋಲಿಸಿ ಕರ ನೊಂದಿತೆ ನಿನಗೇ||"[೧೩]

ಎಂದು ಕೇಳುವ ತಾಯಿ ಗರಳದ ಮಡುವಿನಲ್ಲಿ ಧುಮುಕಿದ ಕಾರಣ ಕಾಲ ನೊಂದೀತೆ? ಹೂವಿನ ಮಳೆಯನ್ನು ಇಳೆಗೆ ತರಲು ಹೋದಾಗ ನಿನ್ನ ದೇಹ ಬಳಲೀತೆ? ಭೂವರರ ಸೋಲಿಸಿದಾಗ ನಿನ್ನ ಕರ ನೊಂದೀತೆ? ಹೀಗೆ ಪರಿಪರಿಯಾಗಿ ತಾಯಿ ಕಂದನನ್ನು ಕೇಳುವ ಉತ್ಕಟವಾದ ಪ್ರೀತಿ ಇಲ್ಲಿ ವ್ಯಕ್ತವಾಗಿದೆ. ಹಾಗೇ ಪ್ರಶ್ನಿಸುತ್ತ ಹೋಗುವಲ್ಲಿ ಆ ಕಂದನ ಗುಣಾತಿಶಯವಾದ ಪರಾಕ್ರಮಗಳನ್ನು ಪರಿಚಯಿಸುತ್ತ ಹೋಗಿರುವುದನ್ನು ನೋಡಬಹುದು. ಜೋ ಜೋ ಜೋ ಜಯ ಎನ್ನುವ ಹಾಡು ಸ್ತುತಿಸುವ ಪ್ರಾರ್ಥನಾ ಪದ್ಯವಾಗಿದೆ.

ಜೋ ಜೋ ಜೋ ಜೋ ಜಯನೃಪಸುತನೆ
ಜೋ ಜೋ ಜೋ ಜೋ ಪೃಥ್ವಿನಂದನೆ
ಜೋ ಜೋ ಜೋ ಜೋ ಕುರುಕುಲವರನೆ
ಜೋ ಜೋ ಜೋ ಜೋ ವಿಕ್ರಮಂಧರನೇ||"[೧೪]

ಸಮುದ್ರದ ಮಧ್ಯದಲ್ಲಿ ಮಂದಗಿರಿ ಬಲಭಾಗದಲೀ ಮಗಧರೇಶವೆಂಬುವುದು ಅಲ್ಲಿ ಕನಕಪುರವೆಂಬುದು ಅತ್ಯಂತ ವೈಭವಯುತವಾಗಿದೆ ಎನ್ನುವ ಈ ಹಾಡು ಜೈನರ ಪವಿತ್ರ ಧಾರ್ಮಿಕ ಕ್ಷೇತ್ರಗಳನ್ನು ಪರಿಚಯಿಸುತ್ತದೆ.

ಸುತ್ತಿನ ಲವಣ ಸಮುದ್ರದ ಮಧ್ಯದಲೀ
ನಿಂತ ಮಂದರಗಿರಿ ಬಲದ ಭಾಗದಲೀ

ಆರ್ತ ವಿರಾಜಿತ ಮಗಧ ದೇಶದಲೀ
ಚಿತ್ರದಿ ರಂಜಿಸ ಕನಕಪುರದಲಿ||"

ಜನಕ ಜಯಂಧರನೆಂಬ ನೃಪಾಲಾ
ಜನನಿ ಪೃಥ್ವೀದೇವಿಯೆಂಬ ಸುಶೀಲೆ
ವನಧಿ ಶಶಾಂಕ ವಂಶಜನತಿ ಲೋಲ
ತನಯನಾದನು ವಿಕ್ರಮಂಧರ ಬಾಲಾ||"[೧೫]

ಎನ್ನುವ ಹಾಡಿನಲ್ಲಿ ಜಯಂಧರನೆಂಬ ಅರಸ ತಾಯಿ ಪೃಥ್ವೀದೇವಿಯವರ ಮಗನ ವಿಕ್ರಮಂಧರನ ಬಾಲ್ಯಜೀವನದ ಜೊತೆಗೆ ವಂಶದ ಚಾರಿತ್ರ್ಯವನ್ನು ತಿಳಿಸುತ್ತದೆ.

ಜೈನ ಪರಿಕಲ್ಪನೆಯಲ್ಲಿ "ತೀರ್ಥಂಕರರು ಗರ್ಭಕಲ್ಯಾಣವಾಗುವಾಗ ತೀರ್ಥಂಕರನ ಅವತಾರ ಭೂಲೋಕದಲ್ಲಿ ಆಗುವುದನ್ನು ಅರಿತು ಇಂದ್ರ ಅದಕ್ಕೆ ತಕ್ಕ ಸಿದ್ಧತೆಗಳನ್ನು ಎಚ್ಚರಿಕೆಯಿಂದ ಮಾಡುತ್ತಾನೆ. ತೀರ್ಥಂಕರರು ಹುಟ್ಟುವ ಆರು ತಿಂಗಳು ಮೊದಲು ತೀರ್ಥಂಕರನ ಜನನವಾಗುವ ರಾಜ್ಯದಲ್ಲಿ ಒಂದೇ ಸಮನೆ ಸುವರ್ಣವೃಷ್ಟಿ ಕರೆಸುತ್ತಾನೆ. ಶ್ರೀಹೀ ಮೊದಲಾದ ದೇವಿಯರು ತೀರ್ಥಂಕರ ತಾಯಿಯ ಗರ್ಭಶೋಧ ಮಾಡುತ್ತಾರೆ. ಗರ್ಭ ಬೆಳೆಯಲು ತೀರ್ಥಂಕರನ ತಾಯಿಗೆ ಅಪೂರ್ವವಾದ ಬಯಕೆಯಾಗ ತೊಡಗುತ್ತದೆ. ಆಕೆಗೆ ಕ್ಷೀರದಲ್ಲಿ ಜಿನಮಜ್ಜನ ಮಾಡಿಸುವ, ಜಿನೇಂದ್ರಪೂಜೆ, ಮಾಡುವ, ಜಿನಾಲಯಗಳ ಸಮೂಹವನ್ನು ನಿರ್ಮಿಸುವ ಜಿನಪ್ರತಿಷ್ಠಾಪಿಸುವುದು ನಾಲ್ಕು ದಾನಗಳನ್ನು ಮಾಡುವ ಬಯಕೆಯಾಗುತ್ತದೆ. ಜಿನ ತೀರ್ಥಾಶಯ, ಜಿನ ಜನನಿಯ ಪುತ್ರಾಕಾಂಕ್ಷೆಯ ಅತಿಶಯತೆ ಇವನ್ನು ಕೇಳಲು ಅವ್ವೀಯಾಗುತ್ತದೆ. ತೀರ್ಥಂಕರನ ತಾಯಿಗೆ ಹದಿನಾರು ಶುಭ ಸ್ವಪ್ನಗಳು ಕಾಣಿಸಿಕೊಳ್ಳುತ್ತವೆ. ತೀರ್ಥಂಕರನಾಗುವ ಜೀವ ತಾಯಗರ್ಭದಲ್ಲಿ ಬಂದು ಸೇರುತ್ತದೆ. ಇಂದ್ರನೇ ಮೊದಲಾದವರು ಬಂದು ತೀರ್ಥಂಕರನ ತಂದೆ-ತಾಯಿಗಳಿಗೆ ಮಂಗಳಾಭಿಷೇಕ ಮಾಡಿ ಉತ್ಸವ ಮಾಡುತ್ತಾರೆ.

ಹೀಗೆ ಜನ್ಮಾಭಿಷೇಕ ಕಲ್ಯಾಣ ಸಹ ನವಮಾಸಗಳು ಕಳೆದ ಮೇಲೆ ಶುಭದಿನವೊಂದರಲ್ಲಿ ತೀರ್ಥಂಕರನು ತಾಯಿಯ ಹೊಟ್ಟೆಯಿಂದ ಹೊರಬರುವ ಮುನ್ನವೇ ಆತನ ಆಗಮನವನ್ನರಿತ ಇಂದ್ರಾದಿಗಳು ಬರುತ್ತಾರೆ. ಸಾಧಮೇಂದ್ರನ ಅಪ್ಪಣೆಯಂತೆ ಇಂದ್ರನಿಗೆ ತೀರ್ಥಂಕರನ ತಾಯಿಗೆ ಮಾಯಾನಿದ್ರೆ ಬರುವಂತೆ ಮಾಡಿ ಆಕೆಯ ಅಕ್ಕಪಕ್ಕದಲ್ಲಿ ಮಾಯಾಶಿಶುವನ್ನಿಟ್ಟು ತೀರ್ಥಂಕರನನ್ನು ದೇವಲೋಕಕ್ಕೆ ತರುತ್ತಾಳೆ. ಇಂದ್ರ ಆ ಮಗುವನ್ನು ತೆಗೆದುಕೊಂಡು ದೇವತೆಗಳೊಡನೆ ಮೇರು ಪರ್ವತಕ್ಕೆ ಹೋಗುತ್ತಾನೆ. ಅಲ್ಲಿನ ಪಾಂಡುಕಶಿಲೆಯಲ್ಲಿ ಮಗುವನ್ನು ಪೂರ್ವಾಭಿಮುಖವಾಗಿ ಕೂರಿಸಿ ಹಾಲಿನಿಂದ ಅಭಿಷೇಕ ಮಾಡಿಸುತ್ತಾರೆ. ಅನಂತರ ಮಗುವನ್ನು ತಂದು ತಾಯಿಯ ಪಕ್ಕದಲ್ಲಿಟ್ಟು ಮಗುವಿಗೆ ಹೆಸರಿಟ್ಟು ಹೋಗುತ್ತಾರೆ."[೧೬] ಇಂತಹ ಪರಿಕಲ್ಪನೆವುಳ್ಳ ತೀರ್ಥಂಕರರ ಜನನ, ಜನ್ಮಾಭಿಷೇಕ ಕಲ್ಯಾಣ ಮುಂತಾದ ತೀರ್ಥಂಕರರ ಕುರಿತಾದ ಚರಿತ್ರೆ ಸಾಧನೆಗಳನ್ನು ಈ ಹಾಡುಗಳು ಕಟ್ಟಿಕೊಡುವಲ್ಲಿ ಸಫಲತೆಯನ್ನು ಪಡೆದಿವೆ.

ಜೋ ಜೋ 'ಸುಪರಿರಿಶ್ವ' ಎನ್ನುವ ಹಾಡು ಪಾರ್ಶ್ವನಾಥನ ಜನಪದ ವರ್ಣನೆಯನ್ನು ಕಟ್ಟಿಕೊಡುತ್ತದೆ. ಅವು ಈ ಕೆಳಗಿನಂತಿವೆ.

"ಜೋ ಜೋ ಜೋ ಜೋ ಸುಪಾರಿಶ್ವನಾಥ
ಜೋ ಜೋ ಜೋ ಜೋ ತ್ರಿಲೋಕ್ಯಪ್ರಖ್ಯಾತ
ಜೋ ಜೋ ಜೋ ಜೋ ಶತ ಇಂದ್ರವಂದಿತ
ಜೋ ಜೋ ಜೋ ಜೋ ಮೋಕ್ಷಲಕ್ಷ್ಮೀನಾಥ||"[೧೨೩]

ಎನ್ನುವ ಹಾಡು ಪಾರ್ಶ್ವನಾಥನ ಸುತ್ತಿಸುವ ಹಾಡಾಗಿದೆ. ಇಲ್ಲಿ ಪಾರ್ಶ್ವನಾಥನ ಮೂರು ಲೋಕದ ಒಡೆಯ, ಇಂದ್ರನಿಂದ ವಂದಿತಗೊಂಡ ಮೋಕ್ಷ ಲಕ್ಷ್ಮಿಯನ್ನು ಸಂಪಾದಿಸಿದವನೆ ಎನ್ನುವ ಆಶಯ ಈ ಹಾಡಿನಲ್ಲಿದೆ. ಮುಂದೆ ಜನನದ ವರ್ಣನೆಯಿರುವುದನ್ನು ನೋಡಬಹುದು.

ಇನ್ನಾರುದಿಂಗಳಿಗುದಯಿಪರೆಂದು
ಮುನ್ನಾ ದೇವೇಂದ್ರನರಿದ ಕಾಣಮ್ಮ
ರನ್ನದ ಮಣಿಯನು ಕರೆದು ಬಾರೆಂದು
ಚೆನ್ನ ಕುಬೇರಗೆ ಬೆಸಸಿದರಮ್ಮಾ ಜೋ ಜೋ||

ಸರ್ವಾರ್ಥ ಸಿದ್ಧಿಯಿಂದ ಸ್ವಾಮಿ ತಾ ಬಂದ
ಬ್ರಹ್ಮಲದೇವಿ ಗರ್ಭವಾಸ ತಾ ನಿಂದ
ನವಮಾಸ ತುಂಬಿತು ತಾಯಿಗಾನಂದ
ಜನ್ಮ ಕಲ್ಯಾಣಕ್ಕೆ ಶತಯಿಂದ್ರ ತಾ ಬಂದ ಜೋ ಜೋ||"[೧೨೪]

ತೀರ್ಥಂಕರ ಜನ್ಮ ಕಲ್ಯಾಣವಾಗುವಾಗ ಇಂದ್ರನು ಬಂದು ಆ ಮಗುವನ್ನು ತೆಗೆದುಕೊಂಡು ದೇವತೆಗಳೊಡನೆ ಸೇರಿ ಹಾಲಿನಾಭಿಷೇಕ ಮಾಡಿ ಪುನಃ ತಾಯಿಯ ಪಕ್ಕದಲ್ಲಿ ಬಿಡುತ್ತಾರೆ ಎಂಬುದು ಜೈನಪುರಾಣಗಳಲ್ಲಿ ಕಂಡುಬರುವ ಪರಿಕಲ್ಪನೆಗಳು. ಹಾಗೆಯೇ ಈ ಹಾಡುಗಳು ಸಹ ಅದೇ ರೀತಿಯಲ್ಲಿ ರಚಿಸಿರುವುದನ್ನು ನೋಡಬಹುದು. ಇಂತಹ ಜೈನ ಹಾಡುಗಳು, ಪುರಾಣಗಳು, ಕಾವ್ಯಗಳು, ವಸ್ತುಗಳನ್ನು ತೆಗೆದುಕೊಂಡು ಸರಳವಾಗಿ ಬಿಡಿ ಬಿಡಿಯಾದ ಪದ್ಯಗಳಲ್ಲಿ ಕಟ್ಟಿಕೊಟ್ಟಿರುವುದು ವಿಶೇಷವಾಗಿದೆ.

"ಗ್ರಾಮದ ನಾರಿಯರು ಎಲ್ಲರೂ ಬಂದು
ತುಂಬಿದ ಕೊಡದಲ್ಲಿ ನೀರನೆ ತಂದು
ಬಂದ ಮತ್ತೈದೆಯರು ಬಹುಮಾನನಿಂದು
ಎಲೆ ಅಡಿಕೆ ಕನಿವಾರ ಕೊಟ್ಟಾರು ತಂದು ಜೋ ಜೋ||"[೧೨೫]

ನಮ್ಮ ಗ್ರಾಮೀಣ ಪ್ರದೇಶದಲ್ಲಿ ಮಗು ಹುಟ್ಟಿದಾಗ ಹಲವು ಮುತ್ತೈದೆಯರು ಬಂದು ಮಗುವಿಗೆ ಸ್ನಾನ ಮಾಡಿಸಿ, ಆ ಮಗುವಿಗೆ ತಂದ ಕಾಣಿಕೆಯನ್ನು ಕೊಟ್ಟು ಎಲೆ ಪನಿವಾರು ಕೊಡುವುದು ಕಂಡುಬರುತ್ತದೆ. ಅಂತಹ ಚಿತ್ರಣವನ್ನು ಹೊಂದಿರುವ ಈ ಹಾಡು ಗ್ರಾಮೀಣ ಸಮುದಾಯದ ಸಂಪ್ರದಾಯವನ್ನು ಬಿಂಬಿಸುತ್ತದೆ. ಹಾಗೆಯೇ ಜೈನರಲ್ಲಿ ಸಹ ಈ ಆಚರಣೆ ಸಂಪ್ರದಾಯಗಳು ಇವೆ ಎಂಬುದನ್ನು ಈ ಹಾಡು ಸ್ಪಷ್ಟಪಡಿಸುತ್ತದೆ.

ಹಾಗೆಯೇ ಶ್ರೀ ಆದಿ ಜಿನೇಶನ ಜನನದ ಕುರಿತ ದೀರ್ಘ ಹಾಡನ್ನು ಹೊಂದಿದೆ. ಈ ಹಾಡು ಆದಿಜಿನೇಶನ ಹುಟ್ಟು, ತಂದೆ, ತಾಯಿ, ಹುಟ್ಟಿದ, ನಂತರ ಆಗುವಂತಹ ಜನ್ಮಾಭಿಷೇಕವನ್ನು ವಿಧ ವಿಧ

ರೀತಿಯಲ್ಲಿ ವರ್ಣಿಸಿರುವುದು ಕಂಡುಬರುತ್ತದೆ. ಈಗಾಗಲೇ ತೀರ್ಥಂಕರರ ಜನನವಾಗುವಾಗ ಜೈನರ ಪರಿಕಲ್ಪನೆ ಏನೆಂಬುದನ್ನು ಪ್ರಸ್ತಾಪಿಸಿದ್ದೇವೆ. ಅದೇ ರೀತಿಯಲ್ಲಿಯೇ ಈ ಹಾಡು ಇರುವುದು ಹೆಚ್ಚು ವಿಶೇಷತೆಯಿಂದ ಕೂಡಿದೆ.

ಜೋ ಜೋ ಜೋ ಜೋ ಶ್ರೀ ಆದಿಜಿನೇಶ ಎಂದು ಆರಂಭವಾಗುವ ಈ ಹಾಡು ೨೦ ಪದ್ಯಗಳಲ್ಲಿ ಆದಿಜಿನೇಶನ ಜನನದ ವರ್ಣನೆಯನ್ನು ಕುರಿತಾಗಿದೆ.

ಸರ್ವಾರ್ಥ ಸಿದ್ಧಿಯ ಬಿಟ್ಟು ನೀ ಬಂದು
ಮರುದೇವಿಯ ಶುದ್ಧ ಉ
ದರದೊಳ್ಬಂದು ಇಂದ್ರನರಿದು ವಿದತ್ತಪತಿ
ಕರೆದಂದು ಅನುಜ್ಞಯನಮಳೆ ಪೇಳ್ವೆರೆಂದು?
ಅಯೋಧ್ಯನಗರಿಗೆ ಹೋಗು ನೀ ಬೇಗ
ನಾಭಿರಾಜನ ಗೃಹ ಬಾಹ್ಯದೊಳಗಾ
ರತ್ನಾದ ಮಳೆಗೆರೆ ಶೀಘ್ರದೊಳೀಗ
ಮೂರು ಕಾಲದಿ ಮೂರುವರೆ ಕೋಟಿ ದೇವಿ ಈಗ॥"[೧೩೦]

ಎನ್ನುವ ಈ ಹಾಡಿನಲ್ಲಿ ವೃಷಭದೇವನ ತಂದೆ-ತಾಯಿಗಳಾದ ನಾಭಿರಾಜ ಮರುದೇವಿಯರನ್ನು ಪ್ರಸ್ತಾಪಿಸುತ್ತಾನೆ. ಇಲ್ಲಿ ಹಾಡುಗಾರ ವೃಷಭದೇವನ ಜನನವಾಗುವುದು. ಅಯೋಧ್ಯನಗರಿಗೆ ಹೋಗಿ ನಾಭಿರಾಜನ ಮನೆಯ ಮುಂದೆ ರತ್ನದ ಮಳೆಯನ್ನು ಭರಿಸು ಎನ್ನುವ ಅತಿಶಯವಾದ ವರ್ಣನೆಯಿದೆ. ತೀರ್ಥಂಕರರು ಹುಟ್ಟುವ ಮುನ್ನ ಆರು ತಿಂಗಳ ಕಾಲ ಸುವರ್ಣ ಮಳೆಯಾಗುತ್ತದೆ ಎಂಬುದು ಜೈನ ಪರಿಕಲ್ಪನೆ. ಈ ರೀತಿಯೇ ಈ ಹಾಡಿನಲ್ಲಿ ವ್ಯಕ್ತವಾಗಿರುವುದು ಕಂಡುಬರುತ್ತದೆ.

ಮುಂದಿನ ಹಾಡು ಆದಿಪ್ರಾಸದಿಂದ ಕೂಡಿದೆ. ಜೈನ ಸಿದ್ಧಾಂತಗಳನ್ನು ಹಾಗೂ ತೀರ್ಥಂಕರರಾಗುವ ಮುನ್ನ ಜಯಸಿದ ಅಂಶವನ್ನು ಈ ಹಾಡು ಹೇಳುತ್ತದೆ.

"ಪಂಚಕಲ್ಯಾಣ ಪರಂಜ್ಯೋತಿ
ಪಂಚಮಗತಿನಾಥ ಪಾವನಮೂರ್ತಿ
ಪಂಚಬಾಣಜಿತ ಜಿನಚಕ್ರವರ್ತಿ
ಪಂಚಮ ಜ್ಞಾನಕ್ಕೆ ನೀನೆ ಅಧಿಪತಿ॥"[೧೩೨]

ತೀರ್ಥಂಕರರ ಐದು ಕಲ್ಯಾಣಗಳನ್ನು ಮತ್ತು ಐದು ಗತಿಗಳನ್ನು ದಾಟಿ ಪಂಚಜ್ಞಾನಕ್ಕೆ ನೀನಾದೆ. ಅಧಿಪತಿ ಎಂಬ ಭಾವನೆ ಈ ಹಾಡಿನಲ್ಲಿ ವ್ಯಕ್ತವಾಗಿದೆ. ಇಲ್ಲಿ ತೀರ್ಥಂಕರರಿಗೆ ಐದು ಕಲ್ಯಾಣಗಳ ಮೂಲಕ ಜೀವನಚರಿತ್ರೆಯನ್ನು ಕಟ್ಟಿಕೊಡುತ್ತದೆ. ಹಾಗೆಯೇ ತೀರ್ಥಂಕರನಾಗಬೇಕಾದರೆ ಐದು ಗತಿಯನ್ನು ದಾಟಬೇಕು ಎಂಬುದು ಜೈನರ ಪರಿಕಲ್ಪನೆಯಾಗಿದೆ. ಮುಂದಿನ ಪದ್ಯಗಳು ೨೪ ತೀರ್ಥಂಕರರನ್ನು ಹೆಸರಿಸುವ ಹಾಡಾಗಿದೆ.

"ವೃಷಭ ಅಜಿತ ಶಂಭವ ಗುಣರಾಶಿ
ಅಭಿನಂದನ ಸುಮತಿ ಅಪ್ರದ್ವಂಶಿ

ಪದ್ಮಪ್ರಭು ಸರ್ವಜ್ಞ ಪ್ರಕಾಶಿ
ವರಸುಪಾರೀಶ್ವ ಮಹಾತತ್ವ ಭಾಷಿ||

ಚಂದ್ರಪ್ರಭ ಪುಷ್ಪದಂತ ಜಿನೇಶ
ಶೀತಳ ಶ್ರೇಯಾಂಶ ಬುದ್ಧಿವಿಶೇಷ
ವಾಸುಪೂಜ್ಯ ವಿಮಲ ಕರ್ಮನಾಶ
ತಾನಂತ ಧರ್ಮಶಾಂತಿ ಕಂಥುಗಣೇಶಾ||

ಆರಮಲ್ಲಿಮುನಿ ಸುವ್ರತನೇಮಿನಾಥ
ನೇಮಿ ಜಿನೇಂದ್ರ ತ್ರೈಲೋಕ್ಯ ಪ್ರಖ್ಯಾತ
ಪಾರಿಶ್ವ ವರ್ಧಮಾನ ಶ್ರೀ ಮುಕ್ತಿನಾಥಾ
ಇಪ್ಪತ್ತನಾಲ್ವರ ಗುಣಗಾಣ ಕಥಾ||"[೧೩೨]

ಈ ಹಾಡು ೨೪ ಜನ ವರ್ತಮಾನ ಕಾಲದ ತೀರ್ಥಂಕರರ ಹೆಸರನ್ನು ಪ್ರಸ್ತಾಪಿಸುತ್ತದೆ. ಜೊತೆಗೆ ಅವರ ಗುಣ ವಿಶೇಷಗಳನ್ನು ನೋಡಬಹುದು. ಮುಂದಿನ ಹಾಡುಗಳಾದ ಶ್ರೀ ಜಿನರಡಿಗಳ ಹರುಷದಿ ಜೋ ಜೋ ಶ್ರೀವೀರನಾಥ, ಜೋ ಜೋ ಪುರಪರಮೇಶ ಹಾಡುಗಳಲ್ಲಿ ವರ್ಣನೆಯಿರುವುದು ಕಂಡುಬರುತ್ತದೆ. ಜೈನರಲ್ಲಿ ಜೋಗುಳದ ಹಾಡುಗಳು ತೀರ್ಥಂಕರರ ಜನನ, ಯೌವ್ವನ, ಸಾಧನೆ, ವೈರಾಗ್ಯ ವಿಷಯಗಳನ್ನು ಪ್ರಸ್ತಾಪಿಸುತ್ತ ಅವುಗಳಿಗೆ 'ಲಯ' ಕಟ್ಟಿ ಹಾಡುವುದನ್ನು ಪ್ರತಿಬಿಂಬಿಸುತ್ತವೆ. ಇಂತಹ ಅಮೂಲ್ಯವಾದ ಹಾಡುಗಳು ಒಂದು ಧರ್ಮದ ಸಾಂಸ್ಕೃತಿಕ ಜಗತ್ತನ್ನು ಅನಾವರಣಗೊಳಿಸುತ್ತವೆ. ಅಲ್ಲಿಯ ಸಂಸ್ಕೃತಿ ಆಚಾರ-ವಿಚಾರ, ಸಂಪ್ರದಾಯಗಳನ್ನು ಹಾಡುಗಳಲ್ಲಿ ಹೆಣೆಯಲಾಗಿದೆ.

### ೪.೩.೨. ಶೋಭಾನದ ಹಾಡು

ಕನ್ನಡ ಶೋಭಾನ ಹಾಡುಗಳಲ್ಲಿ, ಸೊಲ್ಲುಗಳಲ್ಲಿ 'ಶಿವ' ಶಬ್ದದ ಇದೇ ಅರ್ಥವನ್ನು ಕಾಣಬಹುದಾಗಿದೆ. "ಕನ್ನಡಗರಿಗೆ ಶಿವನೆಂದರೆ ದೇವರು ಹೌದು ಶುಭಮಂಗಳವೂ ಹೌದು. ಶೋಭಾನಗಳಲ್ಲಿ ಈ ಶಿವನೇ 'ಶಂವೋ', 'ಸೋ' ಆಗಿದೆ. ಈ ಸೋ+ಪಾನ (ಸೇವನೆ-ಉಚ್ಚಾರಣೆಯೇ ಶೋಭಾನವಾಗಿದೆ. ಅಥವಾ ಮಂತ್ರೋಚ್ಚಾರಣೆಯಾಗಿದೆ. ಇದರಂತೆಯೇ ಶಿವನೇ ಲಿಂಗ, ಲಿಂಗವೇ ಶಿವ, ಕಾರಣ ಶಿವಲಿಂಗವೇ ಸೋಲಿಂಗವಾಗಿದೆ. ಆದುದರಿಂದ 'ಶಿವ' ಇದರ ಸಂಬೋಧನವು ಶೋಭಾನಗಳಲ್ಲಿ ಸೋ ಎಂಬುವುದು ನಿಸ್ಸಂದೇಹವಾದುದು.

ಸೋಬಾನವೆನ್ನಿರೆ ಸೋಬಾನವೆನ್ನಿರೆ

ಸೋಬಾನವೆನ್ನೆ ಶಿವನನ್ನು ||ಸೊ||

ಈ ಪಲ್ಲವಿಯು ಶೋಭಾನವೆನ್ನೆ ಶಿವನನ್ನೇ ಎಂಬ ಸೊಲ್ಲು ಸೋಬಾನವೆನ್ನುವುದೇ ಶಿವನೆನ್ನುವುದು ಎಂಬರ್ಥವನ್ನೇ ಕೊಡುವುದು. 'ಓಂ' ಇದು ಓಂಕಾರ ಪ್ರಣವವಾಗಿದೆ. 'ಸೋಂ' ಇದು (ಶಿವ+ಓಂ) ಶಿವೋಂ ಶಬ್ದದ ವಿಕೃತ ರೂಪವಾಗಿದೆ. ಹೀಗೆ ಈ ಬೀಜ ಮಂತ್ರಾಕ್ಷರಗಳು ವಿಕೃತ ಹೊಂದಿ ಕನ್ನಡಿಗರಿಗೆ ಮಂಗಲ ಶಬ್ದಗಳಾಗಿ ಪರಂಪರೆಯಿಂದ ಬಂದಿವೆ."[೧೩೩]

ಇಂತಹ ಶೋಭಾನೆ ಪದಗಳನ್ನು ಶುಭಕರವಾದ ಕಾರ್ಯಗಳಲ್ಲಿ ಹಾಡುವುದನ್ನು ನಾವು ಪರಂಪರೆಯಿಂದ ನೋಡುತ್ತ ಬಂದಿದ್ದೇವೆ. ಮದುವೆ, ದೇವರಪೂಜೆ ಇಂತಹ ಸಂಪ್ರದಾಯ ಆಚರಣೆಗಳಲ್ಲಿ ಶೋಭಾನೆ ಪದ ಹಾಡುವುದನ್ನು ನೋಡುತ್ತೇವೆ. ಹಾಗೆಯೇ ಪ್ರತಿಯೊಂದು ಗ್ರಾಮೀಣ ಪ್ರದೇಶದಲ್ಲೂ ಶೋಭಾನೆ ಪದಗಳಿವೆ. ಎಂದು ಹೇಳಬಹುದು. ಅಂತಹ ಮಹತ್ವದ ಶೋಭಾನೆ ಹಾಡುಗಳು ಜೈನರಲ್ಲಿ ಅತ್ಯಂತ ವಿಶೇಷವಾಗಿ ಕಂಡುಬರುತ್ತವೆ.

ಸೋಬಾನ ಇಲ್ಲವೆ ಶೋಭಾನೆವೆಂದರೆ ಒಂದು ರೀತಿಯಲ್ಲಿ ಕಾಂತಿಯುಳ್ಳದ್ದು ಹೊಳಪುಳ್ಳದ್ದು ಎಂಬಿತ್ಯಾದಿ ಅರ್ಥಗಳಿವೆ. ಮದುವೆಯಲ್ಲಿ ಹಲವು ಶಾಸ್ತ್ರಗಳಿಗೆ ತಕ್ಕಂತೆ ಹಾಡುವ ಈ ಪದಗಳು ಜನಪದೀಯ ರಲ್ಲಿ ಅತ್ಯಂತ ವಿಶಿಷ್ಟ ಸ್ಥಾನ ಗಳಿಸಿಕೊಂಡಿವೆ. ಈ ಹಾಡುಗಳು ಹೆಂಗಸರಿಗೆ ಹೆಚ್ಚು ಮೀಸಲಾಗಿರುವವು. ಮುಮ್ಮೇಳ, ಹಿಮ್ಮೇಳಗಳಿಂದ ಪರಿಪೂರ್ಣಗೊಳ್ಳುತ್ತಿದೆಯಾದರೂ ಪ್ರದೇಶದಿಂದ ಪ್ರದೇಶಕ್ಕೆ ಇವುಗಳ ಧಾಟಿಯಲ್ಲಿ ಭಿನ್ನತೆಯನ್ನು ಕಾಣಬಹುದು. ಇಂತಹ ಶೋಭಾನೆ ಹಾಡುಗಳು, ಜೈನ ಹಾಡುಗಳು ಶೋಭಾನದ ತೀರ್ಥಂಕರರ ವಿವಾಹ ಮಹೋತ್ಸವದ ವರ್ಣನೆ ಕುರಿತಾದವುಗಳಾಗಿವೆ. ಹಸೆಗೆ ನಾರಿಯರು ವಧುವನ್ನು ಕರೆತರುವ ಸಂದರ್ಭದಲ್ಲಿ ಬರುವ ವಿಶೇಷ ಹಾಡುಗಳಾಗಿವೆ. ಭರತೇಶನನ್ನು ಹಸೆಗೆ ಕರೆಯುವ ಹಾಗೂ ಭರತೇಶನ ಆಯುಧಗಾರದಲ್ಲಿ ಚಕ್ರರತ್ನ ಹುಟ್ಟಿತ್ತು, ನಂತರ ಯುದ್ಧಕ್ಕೆ ಹೊರಟಿತು ಎಂಬುದನ್ನು ಅತ್ಯಂತ ಸಡಗರ ಸಂಭ್ರಮದಂತೆ ಚಿತ್ರಿಸಲಾಗಿದೆ. ಪದ್ಮಾವತಿಯನ್ನು ಹಸೆಗೆ ಕರೆಯುವ ಹಾಡೊಂದು ತುಂಬಾ ವೈಶಿಷ್ಟ್ಯದಿಂದ ಕೂಡಿದ ಶೋಭಾನದ ಹಾಡಾಗಿದೆ. ರಾಮಾಯಣ, ಮಹಾಭಾರತದ ಹಾಡು, ಬೇರೆ ಬೇರೆ ಪುರಾಣ ಕಥೆಗಳು ಹಾಡಿನ ರೂಪದಲ್ಲಿದ್ದು ಭಗವಂತನ ಲೀಲೆಗಳನ್ನು, ಭಕ್ತರ ಆದರ್ಶ ಜೀವನದ ಘಟನೆಗಳನ್ನು ಮತ್ತು ಸಾಹಸಮಯ ಜೀವನ ಚಿತ್ರಗಳನ್ನು, ನೀತಿ ಪ್ರತಿಪಾದನೆ ಇದ್ದುದರಿಂದ ನಮ್ಮ ಉಜ್ವಲ ಸಂಸ್ಕೃತಿಯ ಪರಿಜ್ಞಾನ, ಅನುಕರಣೆ, ರಕ್ಷಣೆ, ಪೋಷಣೆಗಾಗಿ ಇವು ಸಹಕಾರಿಗಳಾಗುತ್ತಿದ್ದವು. ಇಂತಹ ಶೋಭಾನೆ ಹಾಡುಗಳು ಒಂದು ಸಂಸ್ಕೃತಿಯ ಪ್ರತೀಕವಾಗಿಯೂ ಇರುವುದನ್ನು ಕಾಣುತ್ತೇವೆ. ಇಂತಹ ಜೈನರ ಶೋಭಾನೆ ಹಾಡುಗಳು ಏನನ್ನು ಪ್ರತಿನಿಧಿಸುತ್ತವೆ ಎಂಬುದನ್ನು ವಿವೇಚಿಸುವುದು ಸೂಕ್ತವೆನಿಸುತ್ತದೆ.

'ಶ್ರೀ ಮದನಾದಿ ವಸ್ತು' ಎಂಬ ಹಾಡು ೫೩ ನುಡಿಗಳಿಂದ ಕೂಡಿದ ಸುದೀರ್ಘವಾದ ಹಾಡಾಗಿದೆ. ಈ ಹಾಡಿನಲ್ಲಿ ತೀರ್ಥಂಕರನಾದ ವೃಷಭನಾಥನ ಮಹೋತ್ಸವವನ್ನು ಬಣ್ಣಿಸುವ ಸಲುವಾಗಿ ವಿಧವಿಧವಾದ ರೀತಿಯಲ್ಲಿ ಜೈನರ ಆಚರಣೆ ಸಂಪ್ರದಾಯಗಳನ್ನು ವರ್ಣಿಸಿದೆ.

"ಪುರಮೇಶನುದರಾಬ್ಧಿ ಚಂದ್ರ  
ನೆರೆ ಚಕ್ರಿ ಭರತರಾಜೇಂದ್ರ  
ನರಸುರ ನಾಗಲೋಕವ ಸಾಧಿಸಿದ  
ಧರೆಗಾದಿಕುವರನ ಧವಳ ಶೋಭಾನವ  
ನೊರವೆ ಲಾಲಿಪದು ರಸಿಕರು"

ಪಚ್ಚೆಯ ಪಾದಪೀಠಗಳು  
ಸ್ವಚ್ಛಪ್ರವಾಳ ಕಂಭಗಳು

ಅಚ್ಚರಿ ಮರಕತ ಮಣಿಬೋದಿಗೆಗಳು
ಬೆಚ್ಚಂತಿಹ ವೈಡೂರ್ಯದ ತೊಲೆಗಳು
ಮುಚ್ಚುವಲಗೆ ಗೋಮೇಧಿಕ ವಜ್ರದ
ಗುಚ್ಚರುಚಿಲೋವೆ ಮೆರೆದುದು||"[೧೩೪]

ಇಲ್ಲಿ ತೀರ್ಥಂಕರನ ವಿವಾಹ ಮಹೋತ್ಸವಕ್ಕೆ ಮಂಟಪದ ಸಿಂಗಾರದ ವರ್ಣನೆ ಮನಸೂರೆಗೊಂಡಿದೆ. ಪಚ್ಚೆಯ ಪಾದಪೀಠಗಳು, ಸ್ವಚ್ಛಪ್ರವಾಳ ಕಂಭಗಳು, ಮಣಿಬೋದಿಗೆಗಳು ವೈಡೂರ್ಯದ ತೊಲೆಗಳು, ಮಾಣಿಕ್ಯಮಣಿ ಪುತ್ಥಳಿಗಳು ಕನ್ನಡಿಗಳು ಕಲ್ಯಾಣ ಮಂಟಪ ಅಲಂಕೃತಗೊಂಡಿದೆ ಎಂಬುದನ್ನು ಹೇಳುತ್ತದೆ. ಪ್ರಾಚೀನ ಕಾಲದಿಂದಲೂ ಜೈನಕವಿಗಳು ಅತಿಶಯವಾದ ವರ್ಣನೆಗಳಿಂದ ಕೂಡಿದ ಪುರಾಣ ಕಾವ್ಯಗಳನ್ನು ಕಟ್ಟಿಕೊಂಡು ಬಂದಿರುವುದನ್ನು ನೋಡುತ್ತೇವೆ. ಇಂತಹ ವರ್ಣನೆಗಳನ್ನು ಹಾಡುಗಾರನು ಸಹ ಸಮರ್ಥವಾಗಿ ಕಟ್ಟಬಲ್ಲ ಎಂಬುದಕ್ಕೆ ಈ ಮೇಲಿನ ಪದ್ಯಗಳೇ ಸಾಕ್ಷಿಯಾಗಿವೆ.

ಇಲ್ಲಿಯ ಶುಭ ಸಂದರ್ಭಕ್ಕೆ ನವಯೌವನೆಯಾದ ವಿದ್ಯಾಧರ ದಂಪತಿಗಳು, ಆದ್ಯರು, ಉಪಾಧ್ಯಾಯರು, ಕಿನ್ನರರು, ಗಂಧರ್ವರು, ಗರುಡ ಯಕ್ಷೇಂದ್ರರು ಆಗಮಿಸಿದ್ದಾರೆ ಎಂಬುದಕ್ಕೆ ಈ ಕೆಳಗಿನ ಹಾಡುಗಳು ಹೀಗಿವೆ.

"ನವಮಣಿದೊಡಿಗೆಯ ಮುಯ್ಯಗಳ ತಂದ
ನವಯೌವನೆಯರು ಸಹ ಬಂದರು
ರವಿಕಾಂತಿ ತೇಜ ಹಸೆಗೇಳುಂ||

ವಿದ್ಯುಲ್ಲತೆಯ ರೂಪಾಂತೋಲು
ವಿದ್ಯಾಧರ ದಂಪತಿಗಳು
ಆದ್ಯಂತರು ದಿವ್ಯಾಭರಣಗಳು
ಕಿನ್ನರೇಂದ್ರನು ಗಂಧರ್ವೇಂದ್ರ
ಸನ್ನುತ ಗರುಡ ಯಕ್ಷೇಂದ್ರ
ಸ್ವರ್ಣಾಂಬರ ದಿವ್ಯರತ್ನಭೂಷಣವ||"[೧೩೫]

ಇವರ ವಿವಾಹ ಮಹೋತ್ಸವಕ್ಕೆ ಯಕ್ಷರು-ಯಕ್ಷಿಯರು, ವಿದ್ಯಾಧರ ದಂಪತಿಗಳು ಬಂದು ಸುಪ್ರಸನ್ನ ಗುಣವನ್ನು ಹರಸುವ ಹಸೆಗಳು ಎನ್ನುವ ಭಾವನಾತ್ಮಕ ಆಶಯ ಈ ಹಾಡಿನಲ್ಲಿದೆ.

"ಹರಳೋಲೆ ಹಸ್ತ ಕಡಗವ
ಬೆರಲ ಮುದ್ರಿಕೆ ಹಾರ ಮೆರೆವ
ಚರಣ ನೂಪುರ ಚಿತ್ರಾಂಬರನುಡಿಸಿ
ವರ ಮೋಹನಕಾರಕಂಚುಕಿ ತೊಡಿಸಿ
ಉರಗಿಣಿಯರು ಷಟ್ಖಂಡದರಸುಗಳು
ಪರಿಪಾಲಿಪನರಸಿಯ ಕರೆತನ್ನಿ||"[೧೩೬]

ಎಂಬ ಹಾಡು ವಿವಿಧ ಆಭರಣಗಳಿಂದ ಶೃಂಗಾರಗೊಂಡ ವಧುವನ್ನು ಕರೆತನ್ನಿ ಹಸೆಮಣೆಗೆ ಎನ್ನುವ ಧ್ವನಿ ಈ ಹಾಡಿನಲ್ಲಿದೆ. ಹಾಗೆ ಕರೆತರುವ ಪ್ರಸಂಗದಲ್ಲಿ ಸಂಗೀತ, ನಾಟ್ಯ, ನೃತ್ಯಗಳಿಂದ ವಿಜೃಂಭಿಸುತ್ತಿತ್ತು ಎಂಬುದನ್ನು ಈ ಹಾಡಿನಲ್ಲಿ ಕಟ್ಟಿಕೊಟ್ಟಿದ್ದಾರೆ.

"ಅವ್ರಜ ಚೆಂಗು ಮೃದಂಗ
ಲೇವಿಧ ಸ್ವರ ವ್ರಷಾಂಗ
ಭಾಮೆಯರಾಳಪವು ತಾಳದಂಡಿಗೆ
ಭೂವಳೆಯದ ಬಹು ವಾದ್ಯ ಘೋಷಣೆಗೆ
ದೇವಗಣಿಕೆಯರು ನರ್ತನ ಮಾಡುವ
ಭಾವವನೆಂತು ಪೊಗುಳವೆ||"[೧೩೭]

ಹಾಗೆಯೇ ಮುಂದಿನ ಹಾಡಿನಲ್ಲಿ ನಟಿಸುವ ಭಂಗಿಯನ್ನು ಕುಣಿಯುವ ಭಂಗಿಯನ್ನು ಹಾಡುಗಾರ ಕಣ್ಣಿಗೆ ಕಟ್ಟುವಂತೆ ಚಿತ್ರಿಸಲು ಪ್ರಯತ್ನಿಸಿರುವುದನ್ನು ನೋಡುತ್ತೇವೆ.

"ತತ್ತತೇಂಗಿಣಧಿಮಕೆನುತ
ವೃತ್ತಿ ಕುಚೆಯರಾಳಾತಿಪಿಸುತ
ತತ್ತಿತ್ತೈತ್ತೈತದಿಂತರಿಕ್ಕಣ
ಏತ್ತೋಂಗಿಣ ತರಿಕಿಟಕಿಧಿಕ್ಕಿಟ ತಕ
ಧಿತ್ತಾಂ ಧಿಗಿಧಿಗಿ ಝಣಾಂತರಿಕ್ಕಿಣ
ಧಿತ್ತಿತ್ತೊಂಗೆನುತ ನಟಿಸುತ||"[೧೩೮]

ಇಲ್ಲಿ ಕವಿಯು ನಟಿಸುವ ಭಂಗಿಯನ್ನು ನಿರೂಪಿಸಿರುವುದು ಹಾಡುಗಾರನ ಉತ್ಸಾಹ ಹಾಗೂ ಭಕ್ತಿಯ ಪರಾಕಾಷ್ಠತೆಯನ್ನು ಈ ಹಾಡಿನಲ್ಲಿ ಕಾಣುತ್ತೇವೆ.

ಮುಂದಿನ ಪದ್ಯದಲ್ಲಿ ವಧು-ವರರಿಗೆ ಅರಿಶಿನ ಎಣ್ಣೆಯನ್ನು ಎರೆಯುವ ಸಂಪ್ರದಾಯವನ್ನು ವರ್ಣಿಸಲಾಗಿದೆ.

"ಕಸ್ತೂರಿ ತಿಲಕವನಿಟ್ಟು
ವಿಸ್ತಾರ ಮುತ್ತಿನ ಬೊಟ್ಟು
ಸಿಸ್ತಾಗಲು ಫಲಪುಂಜವ ಕೊಟ್ಟು
ಮಸ್ತಕ ಕಡಿಯಿಂದ ಸೇಸೆಯನಿಟ್ಟು
ವಸ್ತು ವಾಹನ ಸಾಮ್ರಾಜ್ಯ ಸುಪುತ್ರರಾ
ರಸ್ತೆಂದು ಹರಸಿ ಮುದದಿಂದಾ||"[೧೩೯]

ಎಂದು ಆಶೀತದೀನರರು ಎಂಬ ಭಾವವಿದೆ. ಹೀಗೆ ಹಾಡಿನಲ್ಲಿ ಒಂದು ಮದುವೆಯ ಆರಂಭ ಕಾರ್ಯಗಳಿಂದ ಹಿಡಿದು ಮುಕ್ತಾಯದವರೆಗೂ ನಡೆಯುವಂತಹ ಹಲವಾರು ಶಾಸ್ತ್ರ-ಸಂಪ್ರದಾಯಗಳನ್ನು ಇಲ್ಲಿ ಹಾಡುಗಾರ

ಸೆರೆ ಹಿಡಿದಿದ್ದಾನೆ. ಇಂತಹ ಸೊಗಸಾದ ವರ್ಣನೆಗಳ ಮೂಲಕ ಹಾಡುಗಾರ ಹಾಡನ್ನು ಕಟ್ಟುವಲ್ಲಿ ಯಶಸ್ವಿಯಾಗಿದ್ದಾನೆ. ಇಂತಹ ಹಾಡುಗಳು ಒಂದು ಧಾರ್ಮಿಕ ಸಂಪ್ರದಾಯ, ಶಾಸ್ತ್ರ, ಆಚರಣೆಗಳನ್ನು ಪುನಃ ಪುನಃ ಮರುಕಳಿಸುವಂತೆ ಮಾಡುತ್ತವೆ.

'ಶ್ರೀ ಸುರಪತಿ-ನರಪತಿ' ಎಂಬ ಶೋಭಾನದ ಹಾಡಿನಲ್ಲಿ ಭರತೇಶನನ್ನು ಹಸೆಗೆ ಕರೆಯುವ ಹಾಡಾಗಿದ್ದು ಇದು ೨೬ ಪದ್ಯಗಳಿಂದ ಒಡಗೂಡಿದೆ. ಇಲ್ಲಿ ಭರತೇಶ ಹಸೆಗೆ ಕರೆಯುವುದರ ಜೊತೆಗೆ ಭರತನ ದಿಗ್ವಿಜಯದ ಸನ್ನಿವೇಶ ಸಂದರ್ಭಗಳನ್ನು ಈ ಹಾಡಿನಲ್ಲಿ ಕಟ್ಟಿಕೊಡಲಾಗಿದೆ. ಭರತನನ್ನು ಹಸೆಗೆ ಕರೆತರುವಾಗ ಹಾಡುಗಾರ ಕಲ್ಪಿಸಿಕೊಂಡಿರುವ ಸಂಗತಿ ವಿಶೇಷವಾಗಿದೆ.

"ನವರತ್ನಖಚಿತ ರಚಿತ ಮಂಟಪದೊಳು
ದಿವಿಜತಂನೆಯರೈತಂದು ಪರಿವಾರವೈದು
ತವಕದೊಳು ತರುಣಿಯರು ಸಂದಣಿ
ಕವಿಜನ ಸುತ್ತಿಯಿಂದ ಪಾಡುತ
ಭುವನವೊಡೆಯನ ಭರತರಾಜನ
ನವ ಕಳೆವವರ ಸಾರ್ವಭೌಮನ
ಯುವತಿಯರ ಹಸೆಗೆ||"[೧೪೦]

ರತ್ನಾಕರವರ್ಣಿಯಂತೆಯೇ ಹಾಡುಗಾರ ಭರತನನ್ನು ಹಸೆಗೆ ತರುವಂತಹ ಸಂದರ್ಭದಲ್ಲಿ ಅತಿಶಯವಾದ ನವರತ್ನ ಖಚಿತವಾದ ಮಂಟಪದಲ್ಲಿ ಈತನನ್ನು ನೋಡಲು ತರುಣಿಯರು ತವಕದಲ್ಲಿ ಕಾದು ನಿಂತಿರುವ ಅಂಶವನ್ನು ವಿವರಿಸಿದ್ದಾನೆ. ಕವಿಗಳು ಪ್ರಾರ್ಥನೆ ಹಾಡುತ್ತ ಭೂಮಿಯ ಒಡೆಯ ಭರತನನ್ನು ಹಸೆಗೆ ಕರೆತರುತ್ತಾರೆ. ಹಾಗೆಯೇ ಭರತನನ್ನು ತರುಣಿಯರು ಕರೆತರುತ್ತಿದ್ದಾರೆ ಎಂಬುದನ್ನು ಹಾಗೂ ಭರತನನ್ನು ಹೊಗಳಿರುವುದನ್ನು ಕಾಣಬಹುದು. ಹಾಗೆಯೇ ದಿಗ್ವಿಜಯದ ಸನ್ನಿವೇಶವನ್ನು ಹಾಡುಗಾರ ಕಟ್ಟಿಕೊಟ್ಟಿರುವುದು ಹೀಗಿದೆ.

"ಆಯುಧ ಶಾಲೆಯೊಳಗೆ ಸುದರ್ಶನ ಚಕ್ರ
ಆಯತದೊಳು ಜನಿಸಿ ಸಕಲಸುರದಿ
ಕಾರ್ಯರೆಲ್ಲರು ಸುತ್ತಿಸಿ ವ್ಯಂತರ ದೇವ
ಕೊಯ್ಯರದೊಳು ಭಜಿಸಿ ಮಂಗಲವೆರಸಿ
ದಾಯದಲಿ ಪದಿನಾಲ್ಕು ರತ್ನ ನಿಕಾಯ ಸಂಜನಿಸಲ್ಕೆ ದೊರೆಗಳ

ಮುತ್ತಿನಹಸೆ ಸಂವಿಧಾನದೊಳು ಗೆಯ್ದು ಕಸ್ತೂರಿ ತಂತು ಮವಸಾರಣೆಗೈದು||
ರಾಯನುಮ್ಮಳವೇರಿ ಮನದೊಳು ಪ್ರೇಮದಿಂ ದಿಗ್ವಿ ಜಯ ಸಾಧಿಪರಾಯನ ಹಸೆಗೆ ಕರೆದಾರು||"[೧೪೧]

ಭರತೇಶನಿಗೆ ಆಯುಧಾಗಾರದಲ್ಲಿ ಚಕ್ರರತ್ನ ಉದಯಿಸಿತು. ಅದು ಯುದ್ಧಕ್ಕೆ ಹೊರಟಿದ್ದ ಸಂದರ್ಭ ಮತ್ತು ಷಟ್ಖಂಡಗಳನ್ನು ಗೆದ್ದು ದಿಗ್ವಿಜಯ ಸಾಧಿಸಿದ ಎಂಬುದನ್ನು ಮಹಾಕಾವ್ಯಗಳಲ್ಲಿ ಉಲ್ಲೇಖಿಸಿದ

ಪ್ರಸಂಗಗಳನ್ನು ಹಾಡಿನಲ್ಲಿ ಸೆರೆಹಿಡಿದಿದ್ದಾರೆ. ಹಾಗೆಯೇ ಪ್ರತಿಯೊಂದು ಭರತನ ಸಾಧನೆಯನ್ನು ಕೊಂಡಾಡುತ್ತ ಹಸೆಗೆ ಕರೆಯಿರಿ ಎನ್ನುವ ಭಾವ ಈ ಹಾಡಿನಲ್ಲಿ ವ್ಯಕ್ತಗೊಂಡಿದೆ.

"ಧರೆಯುಳೀತನಕವೀ ಶೋಭಾನ
ಸಿದ್ಧವಾಗಿರಲಿ ಸಕಲಜನರು ನಿರುತಪಾಡಿ
ಪರಮ ಸಂಭ್ರಮವೇರಲು
ಬಾರಲು ಮನ ಹರುಷದೊಳೋಲಾಡಲು ಆನಂದ
ದೋರಲು ಧರೆಯ ಚಕ್ರ ನರೇಂದ್ರನಂದದಿ
ಸ್ಥಿರ ಸುಖದೊಳೊಲಾಡಿ
ಹರುಷದೊಳಿರದೆ ಮುಕ್ತಿಕಾಂತೆಗೆ ತಾ
ನಿರತರಾಗುವರೆಂದು ಪೇಳಿದ
ಭರತಕಲ್ಯಾಣ ಧವಳಾರ||"[೧೪೨]

ಕವಿಯ ಆಶಯ ಭೂಮಿಯು ಇರುವತನಕ ಶೋಭಾನೆ ಪದ ಜನರ ಬಾಯಲ್ಲಿ ನಲಿಯುತ್ತ ಸಂಭ್ರಮಿಸುತ್ತಿರಲಿ, ಹಾಗೆಯೇ ಭರತ ಕಲ್ಯಾಣ ಧವಳಾರವೆಂದು ಬಣ್ಣಿಸುತ್ತಾನೆ. ಇಂತಹ ಶೋಭಾನವನ್ನು ಹೇಳುವ, ಹಾಡುವ ಜನ ಸಂತೋಷದಿಂದ ಸುಖವಾಗಿರಲಿ ಭರತೇಶನಂತೆ ಸಕಲ ಸಂಪತ್ತು ಲಭಿಸಿ ದಿನ ನಿತ್ಯವೂ ಕಲ್ಯಾಣದಂತೆ ವೈಭವದಲ್ಲಿ ಮೆರೆಯಲಿ ಎಂಬ ಆಶಯವನ್ನು ವ್ಯಕ್ತಪಡಿಸುತ್ತಾನೆ.

ಮುಂದಿನ ಹಾಡಿನಲ್ಲಿ ರಘುರಾಮ ಜಾನಕಿಯರ ಕಲ್ಯಾಣವನ್ನು ಕುರಿತಾದ ಹಾಡಾಗಿದ್ದು, ಜೈನರಲ್ಲಿ ರಾಮಸೀತೆಯರ ಕಲ್ಯಾಣವನ್ನು ಪ್ರಸ್ತಾಪಿಸಿರುವುದು ವಿಶೇಷವಾಗಿದೆ.

"ಕರಿಮುಖನಂಘ್ರಿಕೋಮಲಕೆರಗುವೆನು
ಕರುಣದಿಂದೊಲವಿತ್ತುದ್ಧರಿಸಯ್ಯ ನೀನು
ವಿರಚಿಪೆ ಶ್ರೀ ರಘುರಾಮ ಜಾನಕಿಯ
ಪರಮ ವೈಭವದಲ್ಲಿ ವೈಭವದಿಂದ
ಧರಣೀ ಭೂಪಾಲರು ಭೂಸುರರು ವಿವಾಹಕ್ಕೆ
ಪರಿ ಪರಿ ಭೂರಿ ಭೋಜನವಾಗಿ ಕಡೆಯಲ್ಲಿ
ವರವೆ ತಾಂಬೂಲ ಪದನಾವ||"[೧೪೩]

ಎನ್ನುವ ಮೂಲಕ ಶ್ರೀ ರಘುರಾಮ ಜಾನಕಿಯ ವಿವಾಹಕ್ಕೆ ರಾಜರು ರಾಕ್ಷಸರು ಬಂದಿದ್ದಾರೆ. ಅಲ್ಲಿ ವಿಶೇಷವಾದ ಭೂರಿ ಭೋಜನದಿಂದ ಕೂಡಿದೆ ಎನ್ನುವ ವರ್ಣನೆ ಈ ಹಾಡಿನಲ್ಲಿದೆ. ಮುಂದಿನ ನುಡಿಯಲ್ಲಿ ಹಲವು ರಾಜಮನೆತನಗಳು ಶ್ರೀರಘುರಾಮ ಜಾನಕಿಯ ಮದುವೆಗೆ ಸಾಕ್ಷಿಯಾದರು ಎಂಬುದನ್ನು ಈ ಹಾಡಿನಲ್ಲಿ ಉಲ್ಲೇಖಿಸುತ್ತಾನೆ.

"ನೀಲವ್ರಜದಲ್ಲಿ ಪಚ್ಚೆ ತೋಳುಗಳು
ಸಾಲು ಸಾಲಿನ ಲೋವೇಕತನ ಲೋವೆಗಳು

ಮೇಲುಕಟ್ಟಿನ ಚಪ್ಪರದ ಮಧ್ಯೆ

ಬಾಲೆ ಶ್ರೀ ಲೋಲಾಡುವತ ಲಾಸಿಗೆ ಹಾಸಿ

ಮಾಳವ ಗೌಳವ ಕರ್ನಾಟಕದ

ಚೋಳಮಗಧ ಪಾಂಡ್ಯಕ್ಷಿತಿಯ

ಪಾಲಕರು ವಾಲಗಗೊಟ್ಟು ಸಭೆಯೆಲ್ಲ||”[೧೪೪]

ಕೊನೆಯಲ್ಲಿ ಈ ಹಾಡು ಹೀಗಿದೆ.

ಮಂಗಲ ಜಯ ಜಯ ರಾಮು ಜಾನಕಿಗೆ

ಮಂಗಲ ಜಯ ಜಯ ಕರವೈರಿ ಸಿರಿಗೆ

ಮಂಗಲ ಜಯ ಜಯ ಶಶಿಕರ ಹರಗೆ

ಮಂಗಲ ಜಯ ಜಯ ಕೃತಿರಿಪ್ರವಿನಯಗೆ

ಮಂಗಲ ಜಯ ಜಯ ಮಧುಸೂಧನಿಗೆ

ಮಂಗಲ ಜಯ ಜಯ ಪೊಡವೀಶನಿಗೆ

ಮಂಗಳಾರತಿಯ ಬೆಳಗೀರೇ||”[೧೪೫]

ಈ ಹಾಡಿನಲ್ಲಿ ಮಂಗಲ ಎನ್ನುವ ಪದದ ಮೂಲಕ ಹಾಡು ಕೊನೆಗೊಳ್ಳುತ್ತದೆ.

‘ಓಲಗೊಂಬೆ ಶ್ರೀ ಪದ್ಮಾವತಿಯ’ ಎಂಬ ಹಾಡು ಪದ್ಮಾವತಿಯ ಮಹಿಮೆ ಮತ್ತು ಆಕೆಯ ಚರಿತ್ರೆಯನ್ನು ಕಟ್ಟಿಕೊಡುವ ಹಾಡಾಗಿದೆ.

“ಒಲಿದಿಹಬೇಕೆಂದು ಮತಿಯ

ಸುಲಲಿತ ಪದಗಳ ಪಾಡುತ ಮುದದಿ

ಲಲನೆಯರೆಲ್ಲರು ನೆರೆದತಿಮುದದಿ

ಚೆಲುವಿ ಪದ್ಮಾವತಿ ದೇವಿ ಧರಣೇಂದ್ರನ

ಲಲನೆಯರು ಹಸೆಗೆ ಕರೆದಾರು||”[೧೪೬]

ಇಲ್ಲಿ ದೇವಿಯನ್ನು ಒಲಿಸಿಕೊಳ್ಳಬೇಕಾದರೆ ಭಕ್ತ ಒಳ್ಳೆಯ ಪದಗಳಿಂದ ಹಾಡಿ ಲಲನೆಯರೆಲ್ಲರು ಸೇರಿ ಪದ್ಮಾವತಿ ದೇವಿ ಹಾಗೂ ಪತಿಯಾದ ಧರಣೇಂದ್ರನನ್ನು ನಾರಿಯರು ಹಸೆಗೆ ಕರೆಯಿರಿ ಎನ್ನುವ ಧ್ವನಿಯಾಗಿದೆ. ಮುಂದಿನ ಹಾಡಿನಲ್ಲಿ ಪದ್ಮಾವತಿ ದೇವಿಯು ಹೊಂಬುಜದಲ್ಲಿ ನೆಲೆಸಿದ್ದಕ್ಕೆ ಹಲವಾರು ಕಥೆಗಳು, ಐತಿಹ್ಯಗಳಿವೆ. ಇಂತಹ ಕಥೆಯನ್ನು ಈ ಹಾಡಿನಲ್ಲಿ ತಂದಿರುವುದು ವಿಶೇಷವಾಗಿದೆ.

“ಪಡೆದು ತಂದೆಯು ಪ್ರಾಣಕೆಣೆಸಿ

ಬಿಡದೆ ತೇಜಿಯನೇರಿಗಮಿಸಿ

ಪೊಡವಿಪತಿ ಜಿನದತ್ತನಿಗಂದು

ಧೃಡವಾಗಿ ವರವಿತ್ತು ಹೊಂಬುಜಗೆಂದು

ನಡೆದು ಬರಲು ಲೊಕ್ಕಿಮರ

ದಡಿ ತಳರಿಂದ ಒಡಲೆ ಬಾ ಹಸೆಗೆ ಕರೆದಾರು||”[೧೪೭]

ಜೈನರು ಪದ್ಮಾವತಿಯು ಹೊಂಬುಜಕ್ಕೆ ಬಂದು ನೆಲೆಸಿರುವುದಕ್ಕೆ ಅವರಲ್ಲಿರುವ ನಂಬಿಕೆಗಳು ಕಾರಣವಾಗಿವೆ. ಭಗದತ್ತನು ಭರ್ಜರಿ ಸೈನ್ಯದೊಂದಿಗೆ ಜಿನದತ್ತರಾಯನನ್ನು ಮುಗಿಸಲು ಆತನ ಅರಮನೆಗೆ ಬಂದರು. ಸೈನ್ಯವು ಅಲ್ಲಿ ಜಿನದತ್ತ ರಾಯ ಮತ್ತು ಇತರರು ಪರಾರಿಯಾದ ಸುದ್ದಿಯನ್ನು ತಿಳಿದು ಮಿಂಚಿನ ವೇಗದಲ್ಲಿ ಜಿನದತ್ತರಾಯನ ಬೆನ್ನಟ್ಟಿ ಬಂದು ಜಿನದತ್ತರಾಯನನ್ನು ಸಮೀಪಿಸಿತು. ತಕ್ಷಣದಲ್ಲಿ ಮುನಿಗಳ ಆದೇಶದಂತೆ ತಾನು ಹೊತ್ತು ತಂದ ಪದ್ಮಾವತೀ ದೇವಿಯ ಪುರುಷ ಮೂರ್ತಿಯನ್ನು ಹಿಂಬಾಲಿಸುವ ಸೈನ್ಯಕ್ಕೆ ಮುಖಮಾಡಿ ತೋರಿಸಿದಾಗ ಸೈನ್ಯವು ನೂರಾರು ಗಾವುದ ದೂರ ಸರಿಯಿತು. ಎಲ್ಲರಿಗೂ ಆಶ್ಚರ್ಯವಾಯಿತು. ಇದೇ ರೀತಿ ಹಲವು ಬಾರಿ ನಡೆಯಿತು. ಇದರಿಂದ ಬೆನ್ನಟ್ಟಿ ಬಂದ ಸೈನ್ಯ ಸೋತು ಜಿನದತ್ತರಾಯನಿಗೆ ಶರಣಾಯಿತು. ಆಗ ಜಿನದತ್ತರಾಯನಿಗೆ ಅರವಿ ಬಂದು ಈ ಪದ್ಮಾವತೀ ದೇವಿಯನ್ನು ಸ್ಮರಿಸಿ ಅವರೆಲ್ಲರಿಗೂ ಅಭಯ ನೀಡಿದ್ದಾನೆ. ಎಲ್ಲರೂ ಶಾಂತರಾಗಿ ಮುದದಿಂದಿದ್ದಾಗ ಒಂದು ತಂಪಾದ ಪ್ರದೇಶ ಸಿಕ್ಕಿತು. ಅಲ್ಲಿ ನೀರು ಹರಿಯುತ್ತ ಇದ್ದಲ್ಲಿ ಒಂದು ಲೊಕ್ಕಿಯ ವೃಕ್ಷ ಗೋಚರಿಸಿತು. ಜಿನದತ್ತನ ಕುದುರೆಯನ್ನು ಮರಕ್ಕೆ ಕಟ್ಟಿ ತನ್ನ ಚೀಲವನ್ನು ಮರದ ಕೊಂಬೆಗೆ ನೇತುಹಾಕಿ ಆಯಾಸವನ್ನು ಕಳೆದುಕೊಳ್ಳಲು ಮರದ ಬುಡ್ಡದಲ್ಲೇ ಮಲಗಿದನು. ಆಗ ದಿವ್ಯವಾಣಿಯ ಮೂಲಕ "ನಾನು ಇಲ್ಲಿಂದ ಮುಂದೆ ಬರಲಾರೆ" ಎಂಬ ವಾಣಿಯು ಕೇಳಿಸಿತು. ಆಗ ಜಿನದತ್ತ ತನ್ನ ಚೀಲದಿಂದ ಮೂರ್ತಿಯನ್ನು ತೆಗೆಯಲು ಹೋಗಿ ಸೋತನು. ಆಗ ಪದ್ಮಾವತೀ ದೇವಿಯು ಮಗನೇ, ದುಃಖಿಸಬೇಡ ನಾನು ಇಲ್ಲೇ ನೆಲೆ ನಿಲ್ಲುತ್ತೇನೆ ಎಂದು ವಾಗ್ದಾನವಿತ್ತಳು. ಅದರಂತೆ ಈ ಕಾಡು ಮುಂದಕ್ಕೆ ಸುಂದರ ನಾಡಾಗಿ ಬಣ್ಣದ ಬೀಡಾಗುವುದು. ನನ್ನ ಮೂರ್ತಿಗೆ ಕಬ್ಬಿಣ ಸೋಂಕಿಸಿದಾಗ ಕ್ಷಣದಲ್ಲೇ ಬಂಗಾರವಾಗುವುದು ಎಂದು ಹೇಳುತ್ತಾಳೆ. ಹಾಗೇ ಈ ಸ್ಥಳ ಪೊನ್ನುರ್ಚಿತು ಅಂದರೆ ಬಂಗಾರ ಹೊರಹೊಮ್ಮಿತು ಎಂಬರ್ಥ. ಅದೇ ರೀತಿ ಈ ಸ್ಥಳವು ಪೊಂಬುಜ, ಹೊಂಬುಜವೆಂದು ನಾಮಾಂಕಿತಗೊಂಡಿದೆ. ಈ ನಂಬಿಕೆಯು ಬಹುತೇಕ ಅಲ್ಲಿಯ ಜನರು ನಂಬಿರುವ ಪದ್ಮಾವತಿಯಕ್ಷಿಣಿಯ ಕಥೆಯಾಗಿದೆ. ಇಂತಹ ಕಥೆ ಮತ್ತು ಐತಿಹ್ಯಗಳನ್ನು ಹಾಡುಗಾರ ಸಮರ್ಥವಾಗಿ ಬಳಸಿಕೊಂಡಿರುವುದನ್ನು ಕಾಣುತ್ತೇವೆ.

"ನೆರೆ ಶುಕ್ರವಾರದಿಂ ಬಂದು ತರುಣಿ
ಪುರುಷರೆಲ್ಲ ನಿಂದು ಮರುಗುಮಲ್ಲಿಗೆ ಜಾಜಿ
ಸ್ವರಗಿಯ ತಂದು ಹರುಷದಿ ಪೂಜೆಯ ಮಾಡುವೆನೆಂದು
ಧರಣೇಂದ್ರನರಸಿ ಪದ್ಮಾವತಿಯಮ್ಮಗೆ
ಕುರುಜಿನರಾರತಿಯ ಬೆಳಗೀರೇ||"[೧೪೪]

ಇಲ್ಲಿ ನೆರೆ ಶುಕ್ರವಾರದಿಂ ಎನ್ನುವುದು ಪದ್ಮಾವತೀ ದೇವಿಗೆ ಪ್ರತಿ ಶುಕ್ರವಾರದಂದು ವಿಶೇಷ ಪೂಜೆ ನಡೆಯುತ್ತದೆ. ಜೊತೆಗೆ ಸಕಲ ಮುತ್ತೈದೆಯರೆಲ್ಲರೂ ಫಲ ಪುಷ್ಪಗಳನ್ನು ಅರ್ಪಿಸುತ್ತಾರೆ. ಇದು ಹೊಂಬುಜ ದಲ್ಲಿ ಇಂದಿಗೂ ಸಹ ಆಚರಣೆಯಲ್ಲಿದೆ. ಇದು ಪುರಾತನ ಕಾಲದಿಂದಲೂ ನಡೆದು ಬಂದಿರುವುದು ಮತ್ತು ಈ ಹಾಡಿನಲ್ಲಿ ಉಲ್ಲೇಖವಾಗಿರುವುದು ನೋಡಿದರೆ ಆಚರಣೆಗಳು ಮತ್ತು ಸಂಪ್ರದಾಯಗಳ ಪರಂಪರೆಯನ್ನು ಜೈನರೂ ರೂಪಿಸಿಕೊಂಡು ಬಂದಿರುವುದು ತಿಳಿಯುತ್ತದೆ.

ಇಂತಹ ಹಾಡುಗಳಲ್ಲಿ ಆಯಾ ಧರ್ಮದ ಜನಾಂಗಕ್ಕೆ ಸಂಬಂಧಿಸಿದ ಧಾರ್ಮಿಕ ಆಚಾರ-ವಿಚಾರಗಳು ಸೇರಿಕೊಂಡಿರುತ್ತವೆ. ಇಂತಹ ಹಾಡುಗಳು, ನಮ್ಮ ಹಿಂದಿನ ಪೀಳಿಗೆಗಳು ಹಾಗೂ ಅವರು ಕೆಲಸ ಕಾರ್ಯಗಳಲ್ಲಿ ತೊಡಗಿರುವಾಗ ದೇವರು-ದೇವತೆಗಳ ನೆನೆಯುತ್ತ ಶುಭ ಭಾವನೆಯನ್ನು ಹೊಂದಿದ್ದವರು. ಒಟ್ಟಿನಲ್ಲಿ ಜೈನರ ಹಾಡುಗಳಲ್ಲಿ ಜೈನದೇವ ದೇವತೆಗಳು ಪ್ರಾರ್ಥನೆ-ಸ್ತುತಿಗಳು, ಅವರಿಗೆ ಸಂಬಂಧಿಸಿದಂತಹ ಪುರಾಣೋಕ್ತ ಐತಿಹ್ಯಗಳು ಜೈನರ ಧಾರ್ಮಿಕ ನಂಬಿಕೆಗಳು, ಜೈನತತ್ವಗಳು ಸೇರಿಕೊಂಡು ಒಂದು ಸಾಂಸ್ಕೃತಿಕ ಜಗತ್ತನ್ನು ನಿರ್ಮಾಣ ಮಾಡುತ್ತವೆ.

**೪.೩.೩. ಮಂಗಳಾರತಿ ಹಾಡು**

ಜೈನರಲ್ಲಿ ಮಂಗಳಾರತಿಯ ಹಾಡುಗಳು ಇವೆ ಎಂಬುದಕ್ಕೆ ಈಗಾಗಲೇ ಹಲವಾರು ವಿದ್ವಾಂಸರು ಸಂಪಾದಿಸಿ ಪ್ರಕಟಿಸಿರುವುದರಿಂದ ತಿಳಿಯುತ್ತದೆ. ಮಂಗಳಾರತಿಯ ಹಾಡುಗಳನ್ನು ಒಳ್ಳೆಯ ಅಥವಾ ಶುಭ ಕಾರ್ಯಗಳ ಆರಂಭ ಮತ್ತು ಮುಕ್ತಾಯದಲ್ಲಿ ಹಾಡುತ್ತಾರೆ. ದೇವರ ಪೂಜೆ ಮಾಡುವಾಗ ದೇವತಾಸ್ತೋತ್ರ ಗಳನ್ನು ಹೇಳುವುದರ ಮೂಲಕ ದೀಪಾರಾಧನೆ ಮಾಡಿ ಪದಕಟ್ಟಿ ನೆನೆಯುವ ಸ್ತೋತ್ರಗಳನ್ನು ಮಂಗಳಾರತಿಯ ಹಾಡುಗಳೆಂದು ಕರೆಯುತ್ತಾರೆ. ಪ್ರಮುಖವಾಗಿ ಮಂಗಳಾರತಿಯ ಹಾಡುಗಳು ತಮ್ಮ ಇಷ್ಟದೈವಗಳ ಮೇಲೆ ರಚಿಸಿ ಹಾಡಿದ್ದಾರೆ. ಇಂತಹ ಹಾಡುಗಳು ಕೇವಲ ಸ್ತೋತ್ರಗೀತೆಗಳಾಗಿವೆ. ಇವು ಸ್ಥಳೀಯ ಸಂಸ್ಕೃತಿಯ ಪರಿಚಯವನ್ನು ಚರಿತ್ರೆಯ ಮೂಲಕ ಅನಾವರಣಗೊಳಿಸುತ್ತದೆ. ಜೊತೆಗೆ ಸ್ಥಳ ಮಹಾತ್ಮೆಗಳ ವಂದನೆಗಳು ಈ ಹಾಡುಗಳಲ್ಲಿ ಅನಾವರಣಗೊಂಡಿವೆ. 'ಮಂಗಳಂ ಮಂಗಳಂ ಬ್ರಹ್ಮದೇವಿಗೆ' ಎನ್ನುವ ಮೂಲಕ ಹಾಡು ಆರಂಭವಾಗುತ್ತದೆ.

"ಚಾರುಸಿರಿಗೆ ತವರೂರಾದ ಬೆಳ್ಗೊಳ
ಧಾರುಣಿಧರದ ಮಧ್ಯದಿ ನೆಲೆಸಿ
ಚಾರುಕೀರ್ತಿಮುನಿ ಪಂಡಿತಾರ್ಯರಿಗುಪ
ಕಾರಿಯಾದ ಬ್ರಹ್ಮದೇವರಿಗೆ||"[೧೯೯]

ಈ ಹಾಡು ಸ್ಥಳೀಯ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಚಾರುಸಿರಿ ಜೈನ ಪಂಡಿತರ ಸ್ವಂತ ಊರು ಬೆಳ್ಗೊಳ ಎನ್ನುವುದನ್ನು ಸಂಕೇತಿಸುತ್ತದೆ. ಅಲ್ಲಿ ಬ್ರಹ್ಮದೇವರು ಎಂಬ ದೈವವಿದೆ ಎಂಬುದಾಗಿದೆ. ಮುಂದಿನ ಹಾಡಿನಲ್ಲಿ ತೀರ್ಥಂಕರರ ಕಲ್ಯಾಣಗಳನ್ನು ಕುರಿತು ಹೇಳುತ್ತದೆ. ಆ ಹಾಡು ಹೀಗಿದೆ.

"ಪ್ರಥಮಬ್ಬಿ ಗರ್ಭವತರಣ ಪರಾಕು
ದ್ವಿತೀಯ ಕಲ್ಯಾಣಭಿಷೇಕ ಪರಾಕು
ತೃತೀಯಾದಿ ಪರಿನಿಷ್ಕಮಣ ಪರಾಕು
ಕರಿಯ ಕಟ್ಟಾಣೆ ಕೇವಲಿಯೇ ಪರಾಕೆಂದು
ಜಿನೇಂದ್ರನಿಗಾರತಿಯ ಬೆಳಗಿದರು||"[೨೦೦]

ಈ ಹಾಡಿನಲ್ಲಿ ಜೈನರ ಪರಿಕಲ್ಪನೆಯಲ್ಲಿ ತೀರ್ಥಂಕರರಿಗೆ ಐದು ಕಲ್ಯಾಣಗಳು ಜರುಗುತ್ತವೆ. ಅಂತಹ ಪಂಚ ಕಲ್ಯಾಣಗಳನ್ನು ಈ ಹಾಡಿನಲ್ಲಿ ತಂದಿರುವುದು ಕೊನೆಗೆ ಕೇವಲಿಜ್ಞಾನಿಯಾಗಿ ಮುಕ್ತಾತ್ಮವನ್ನು

ಪಡೆಯುವುದು ಎನ್ನುವ ಮೂಲಕ ಜಿನೇಂದ್ರನಿಗೆ ಆರತಿಯನ್ನು ಬೆಳಗಿರಿ ಎನ್ನುವ ಆಶಯ ಇದೆ. ಮುಂದಿನ 'ಬೆಳಗಪ್ಪ ಜಾವದಲ್ಲಿ' ಎಂಬ ಹಾಡಿನಲ್ಲಿ,

"ಆದಿಶಾಸ್ತ್ರವ ಬಲ್ಲವ ಆಚಾರ್ಯರೈದು ಜನ,
ಭೋದಿಸುವ ಪಂಡಿತರು ನಾಲ್ಕಾರ ಜನ ಸಹಿತ
ಪಾದಮಾರ್ಗದಿ ಬರುವ ನಮ್ಮ ಮನೆಗೆ"||[೧೫೧]

ಎನ್ನುವ ಮೂಲಕ ಅಂದಿನ ಶಿಕ್ಷಣ, ಶಿಷ್ಯರು, ಪಂಡಿತರ ಶೈಕ್ಷಣಿಕ ಚಟುವಟಿಕೆಯನ್ನು ಈ ಹಾಡು ವಿವರಿಸುತ್ತದೆ. ಹಾಗೆಯೇ ಆ ಕಾಲದಲ್ಲಿ ಮುನಿಗಳಿಗೆ, ಪಂಡಿತರಿಗೆ ಗೌರವ ಸ್ಥಾನಮಾನಗಳು ಹೇಗೆ ಇದ್ದವು ಎಂಬುದನ್ನು ಹೇಳುತ್ತದೆ.

"ಬಂದ ಮುನಿಗಳ ನಾನು ವಂದಿಸಿ ಬಲಗೊಂಡು
ಚೆಂದದಿಂದವರ ಬಾವಲಿಯನಿರಸಿ
ವಂದನೆಯ ಮಾಡಿ ಮಂದಿರಕೆ ಕರೆದೊಯ್ದು
ಇಂದು ಮುನಿರಾಯ ಬರುವುದು ಕಂಡೆ||"[೧೫೨]

ಅಂದಿನ ಕಾಲದಲ್ಲಿ ಮುನಿಗಳು, ಮಂದಿರಗಳು ಶ್ರೇಷ್ಠನ ಭಾವನೆಯನ್ನು ಹೊಂದಿದ್ದವು. ಜನಸಾಮಾನ್ಯರು ಸಹ ಅವಕ್ಕೆ ತಕ್ಕಂತೆ ಮರ್ಯಾದೆ ಗೌರವ ಸ್ಥಾನಮಾನಗಳನ್ನು ನೀಡುತ್ತಿದ್ದರು ಎಂಬುದನ್ನು ಸೂಕ್ಷ್ಮವಾಗಿ ವಿವೇಚಿಸುವುದಾಗಿದೆ.

"ಅಂಗನೆಯರೈವರು ಮಂಗಳಾರತಿಯವಿಡಿದು
ಶೃಂಗಾರವಾಗಿ ತಾವು ಭಕ್ತಿಯಿಂದ
ರಂಗುಳೇದಾರುತಿಯೆತ್ತುವ ಮಾಡಿ ಕೋಗಿಲೆಯಂತೆ
ರಾಗವನು ಪಾಡುತ್ತ ಯೋಗಿ ಸಿದ್ಧಾಂತರಿಗೆ||

ಆರತಿಯನೆತ್ತಿ ಆಗಮ ಸಿದ್ಧಾಂತಯೋಗಿಗಳ
ಧರ್ಮೋಪದೇಶವನು ಯೋಗಿಗಳ
ಉಪದೇಶವನು ಮುಗುಳ್ನಗೆಯಿಂದ ಪೇಳಿದ
ಶ್ರಾವಕ ಸೋಮಗಳಿಗೆ||"[೧೫೩]

ಎನ್ನುವ ಹಾಡು ಮುತ್ತೈದೆಯರೆಲ್ಲರು ಸೇರಿ 'ರಂಗುಳೇ' ಎಂಬ ಬಣ್ಣದ ಆರತಿಯನ್ನು ಮಾಗಿಯ ಕಾಲದಲ್ಲಿ ಇಂಪಾಗಿ ಹಾಡುವ ಕೋಗಿಲೆಯಂತೆ ಹಾಡುವ ಮೂಲಕ ಸಿದ್ಧಾಂತರಿಗೆ ಆರತಿಯನ್ನು ಎತ್ತಿರಿ ಎಂಬುದು ಭಕ್ತಿಯ ಭಾವವಾಗಿದೆ. ಜೈನಧರ್ಮದಲ್ಲಿ ಸಿದ್ಧಾಂತರು ಅಂದರೆ ಪಂಚಪರಮೇಷ್ಠಿಗಳಲ್ಲಿ ಗುರುತಿಸಿಕೊಳ್ಳುವವರು ಜೈನಧರ್ಮ ಮಂತ್ರದಲ್ಲಿಯೇ ಇವರ ಪಠ್ಯವಿದೆ. ಣಮೋ ಸಿದ್ಧಾಣಂ ಅಂದರೆ (ಸಿದ್ಧರಿಗೆ ನಮಸ್ಕಾರ) ಎನ್ನುವ ಪರಿಕಲ್ಪನೆ ಜೈನರಲ್ಲಿದೆ. ಇಂತಹ ಜೈನ ಪರಿಕಲ್ಪನೆಗಳನ್ನು ಹಾಡುಗಳ ಮೂಲಕ ವ್ಯಕ್ತಪಡಿಸುತ್ತಿರುವುದು ಹಾಡಿಗಿರುವ ವಿಸ್ತಾರವಾದ ನೋಟವಾಗಿದೆ ಎನ್ನಬಹುದು. ಮುಂದಿನ ಹಾಡು ಶಾರದೆಯನ್ನು ಆರಾಧಿಸುವ ಹಾಡಾಗಿದೆ.

"ಮಂಗಲಂ ಮಂಗಲಂ ಶಾರದದೇವಿ
ಮಂಗಲಂ ಮಂಗಲಂ ಭವ್ಯರಪ್ರಿಯೆ
ಮಂಗಲಂ ಮಂಗಲಂ
ಮಂಗಲಂ ಚಂದ್ರನ ಶಾಂತೆ ಮಂಗಲಂ||

ಧರೆಯೊಳತ್ಯಧಿಕ ಬೆಳ್ಗುಳಪುರ ಮಠವಾಸೆ
ಸ್ಥಿರದಿ ಭವ್ಯಗತಿ ಗುಣಗಣವಾಸೆ
ಗುರುಪಂಡಿತಾರ್ಯೋಧರಣೆ ವಿಚಕ್ಷಣೆ
ಪರಮ ದಯಾನಿಧಿ ಶ್ರೀ ಶಾರದದೇವಿಗೆ||"[೧೫೪]

ಎನ್ನುವ ಈ ಹಾಡು ಮೊದಲು ನುಡಿಯಲ್ಲಿ ಶಾರದೆಯನ್ನು ಗುಣಗಾನ ಮಾಡುವ ಮೂಲಕ ಜಯಕಾರವನ್ನು ಹೇಳುವುದಾಗಿದೆ. ಹಾಗೆಯೇ ಮುಂದಿನ ನುಡಿಯಲ್ಲಿ "ಧರೆಯೊಳತ್ಯಧಿಕ ಬೆಳ್ಗುಳಪುರ ಮಠವಾಸೆ" ಎನ್ನುವುದು ಅಂದಿನ ಕಾಲದಲ್ಲಿ "ಶ್ರವಣಬೆಳ್ಗೊಳ ಒಂದು ದೊಡ್ಡ ಶೈಕ್ಷಣಿಕ ಕೇಂದ್ರವಾಗಿತ್ತು. ಅಲ್ಲಿಯ ಮಠಗಳು ಪಾಠಶಾಲೆಗಳಾಗಿ ಬೋಧನೆಯನ್ನು ಮಾಡುತ್ತಿದ್ದವು. ಇಲ್ಲಿ 'ಶಾರದದೇವಿಯ ಮಠವಾಸೆ' ಎಂಬುವುದರ ಅರ್ಥವಾಗಿದೆ.

ಮುಂದಿನ ಹಾಡಿನಲ್ಲಿ ಜೈನರಲ್ಲಿ ಕೂಷ್ಮಾಂಡಿ ಯಕ್ಷಿಣಿ ತುಂಬ ಶಕ್ತಿಶಾಲಿಯಾಗಿ ಕಾಣಿಸಿಕೊಳ್ಳುತ್ತಾಳೆ. ಇವಳು ೨೨ನೇ ತೀರ್ಥಂಕರನಾದ ನೇಮಿನಾಥನ ಯಕ್ಷಿಣಿಯಾಗಿದ್ದಾಳೆ. ಈಕೆಯನ್ನು ಹಲವಾರು ಹೆಸರುಗಳಿಂದ ಗುರುತಿಸುತ್ತಾರೆ. ಅಮ್ಮ-ಕೂಷ್ಮಾಂಡೀ, ಅಂಬಾ, ಅಂಬಿಲಾ, ತಾರಾ, ಗೌರೀ, ವಜ್ರಾ ಮುಂತಾದ ಹೆಸರುಗಳಿಂದ ವರ್ಣಿಸಿದ್ದಾರೆ. ಈಕೆಯ ವಾಹನ ಸಿಂಹವಾಗಿದೆ."[೧೫೫] ಇಂತಹ ಕೂಷ್ಮಾಂಡಿಣಿಯನ್ನು ಜೈನ ಹಾಡುಗಾರ ಪರಿಭಾವಿಸಿಕೊಂಡ ಬಗೆಯನ್ನು ಹೀಗೆ ನೋಡಬಹುದು.

"ಜಯಮಂಗಲಂ ನಿತ್ಯ ಶುಭ ಮಂಗಲಂ
ಜಯ ಸರ್ವಾಣೇಕ್ಷ್ಣ ಕೂಷ್ಮಾಂಡಿಣಿ ದೇವಿಗೆ
ಜಯಂಮಂಗಲಾ ನಿತ್ಯ ಶುಭಮಂಗಲಂ||"[೧೫೬]

ಎನ್ನುವ ಮೂಲಕ ಕೂಷ್ಮಾಂಡಿಣಿಗೆ ದಿನನಿತ್ಯವೂ ಶುಭ ಮಂಗಲ ಎನ್ನುವ ಭಾವನೆಯು ಈ ಹಾಡಿನಲ್ಲಿದೆ.

"ಸಿಂಹವಾಹನದಿರೆ ಸುಜ್ಞಾನ ಗುಣಾದರೆಗೆ
ಸಿಂಹಮಧ್ಯದ ದೇವಿ ಸುಗುಣ ಗಂಭೀರೆ
ಸಿಂಹ ಪೀಠಕ್ಕೆ ಕರ್ತೆ ಸುರಕುಜಕೆ ಸಮದಾತೆ
ಸಾಮಜಾಂತಕದೇವಿ ಭಕ್ತವತ್ಸಲೆಗೆ||"[೧೫೭]

ಎನ್ನುವ ಹಾಡು ಸಿಂಹವಾಹನದಲ್ಲಿ ಕುಳಿತ ಕೂಷ್ಮಾಂಡಿಣಿಯನ್ನು ವರ್ಣಿಸುವ ಮೂಲಕ ಗುಣಗಾನ ಮಾಡುತ್ತಿರುವುದಾಗಿದೆ.

ಕ್ಷಿತಿಯೊಳಗತಿಶಯದ ಚಂದ್ರಗಿರಿಯೊಳೆಸೆವ
ಅತಿಶಯದ ಕತ್ತಲೆಯ ಬಸದಿಯೊಳ ನೆಲೆಸಿ

ಸತತ ಶ್ರೀಗುರು ಪಂಡಿತಾರ್ಯನು ರಕ್ಷಿಸುತಿರ್ಪ

ಅತಿಶಯದ ಮೂರ್ತಿ ಶ್ರೀ ಕೂಷ್ಮಾಂಡಿಣಿ ದೇವಿಗೆ||"[೧೫೮]

ಈ ಹಾಡು ಸ್ಥಳ ಮತ್ತು ಅಲ್ಲಿಯ ಸಂಸ್ಕೃತಿಯನ್ನು ಬಿಂಬಿಸುವ ಹಾಡಾಗಿದೆ. ಇಲ್ಲಿ ಚಂದ್ರಗಿರಿಯಲ್ಲಿರುವಂತಹ ಕತ್ತಲೆ ಬಸದಿಯನ್ನು ಪ್ರಸ್ತಾಪಿಸುತ್ತದೆ. ಈ ಕತ್ತಲೆ ಬಸದಿಯಲ್ಲಿ ಕೂಷ್ಮಾಂಡಿಣಿದೇವಿ ನೆಲೆಸಿದ್ದಾಳೆ. ಇದು ಪಾರ್ಶ್ವನಾಥನ ಬಸದಿಗೆ ಸೇರಿಕೊಂಡಿದೆ. ಇಂತಹ ಮಹತ್ವವಾದ ಐತಿಹಾಸಿಕ ಚರಿತ್ರೆಯನ್ನು ಈ ಹಾಡು ದಾಖಲಿಸುತ್ತದೆ. ಮುಂದಿನ ಹಾಡು ೨೪ ತೀರ್ಥಂಕರನ ಕುರಿತು ವರ್ಣಿಸುವ ಅವರ ಸಿರಿ ಸಾಧನೆಗಳನ್ನು ಗುಣಗಾನ ಮಾಡುವುದಾಗಿದೆ.

"ಆದಿಯೊಳಗೆ ಚಟ್ಟರಪಡೆಯ ಗೆಲ್ದು

ಸಾಧಿಸಿ ಮುಕ್ತಿ ಪದವ ಪಡೆದ

ವಿಧವಿಧ ರತ್ನತ್ರಯಗಳ ಪೇಳ್ದ

ಆದಿ ಜಿನೇಶರಾರತ್ತಿಯತ್ತಿರೇ||"[೧೫೯]

ಎನ್ನುವ ಪದ್ಯದಿಂದ ಆರಂಭವಾಗಿ...

ಪದ್ಮವದನೆ ಪದ್ಮಸದನೆ ಪದ್ಮನಯನೆ

ಪದ್ಮಗಂಭಿನಿಪಾಶ ವರಪಾಣಿಗೆ

ಪದ್ಮ ಸನ್ನಿಭ ಪಾದಯುಗಳಿಗೆ ಪದ್ಮಾಂಬೆಗೆ

ಪದ್ಮಿಣಿಯರು ಗಳಾರತಿಯತ್ತಿರೇ"[೧೬೦]

ಪದ್ಮಾವತೀ ಯಕ್ಷಿಣಿಗೆ ಆರತಿಯೆತ್ತಿರಿ ಎನ್ನುವ ಈ ಹಾಡು ಸುದೀರ್ಘವಾಗಿದೆ. ಜೈನರು ಆಚಾರ-ವಿಚಾರ-ಸಂಪ್ರದಾಯಗಳನ್ನು ಕಡ್ಡಾಯವಾಗಿ ಅನುಸರಿಸಬೇಕು ಎಂಬುದು ಜೈನರಲ್ಲಿತ್ತು. ಮತ್ತು ಅದನ್ನು ಪರಿಪಾಲಿಸಿಕೊಂಡು ಹೋಗುವಂತೆ ಸೂಚಿಸಲು ಚಾರರು ಮುನಿಗಳು ಇರುತ್ತಿದ್ದರು ಎಂಬುದು ಈ ಹಾಡಿನಲ್ಲಿ ವ್ಯಕ್ತವಾಗಿದೆ.

"ಆಚಾರವನು ಬಿಟ್ಟು ನಡೆವ ಜೀವಗಳಿಗೆ

ಆಚರಣೆಯನು ಪೇಳಿ ಬೋಧಿಸುವ

ಖೇಚರನರಸುರವಂದ್ಯರೆಂದೆನಿಸುವ

ಆಚಾರ್ಯನರತಿಗಾರತಿಯೆತ್ತಿರೇ"[೧೬೧]

ಎನ್ನುವ ಹಾಡುವ ಜೈನರ ಧಾರ್ಮಿಕ ಆಚಾರ-ವಿಚಾರಗಳನ್ನು ಸದಾ ಜಾಗೃತಿಯಲ್ಲಿ ಇಟ್ಟುಕೊಂಡು ಹೋಗುವಂತಹ ಆಚಾರ್ಯರಿಗೆ ಆರತಿಯೆತ್ತಿರಿ ಹಾಡಿನಲ್ಲಿ ಪಂಚ ಪರಮೇಷ್ಠಿಗಳನ್ನು ಕುರಿತು ಹೇಳುವ ಹಾಡು ಹೀಗಿದೆ.

ಅರಹಂತ ಸಿದ್ಧಾಂತಾಚಾರ್ಯರುಪಾದ್ಯಾಯ

ವರಸರ್ವಸಾಧುಗಳೆನಿಸುವ

ಗುರುಗಳೈವರ ಮಂತಧ್ಯಾನ ಪಿಡಿದು ಪಂಚ

ಗುರುಗಳಿಗೊಲಿದಾರತಿಯೆತ್ತಿರೇ||"[೧೬೨]

ಈ ಮೇಲಿನ "ಅರಹಂತ ಸಿದ್ಧಾಂತಾಚಾರ್ಯರುಪಾದ್ಯಾಯ" ಎಂಬ ಪದದಲ್ಲಿ ಐದು ಜನ ಪಂಚ ಪರಮೇಷ್ಠಿಗಳಿರುವುದನ್ನು ಗುರುತಿಸಬಹುದು. ಅರ್ಹಂತರು, ಸಿದ್ಧರು, ಉಪಾಧ್ಯಾಯರು, ಆಚಾರ್ಯರು, ಸಾಧುಗಳು. ಇವರ ಐವರ ಮಂತ್ರವಾದ

ಣಮೋ ಅರಹಂತಾಣಂ(ಅರ್ಹಂತರಿಗೆ ನಮಸ್ಕಾರ)

ಣಮೋ ಸಿದ್ಧಾಣಂ(ಸಿದ್ಧರಿಗೆ ನಮಸ್ಕಾರ)

ಣಮೋ ಅಯರಿಯಾಣಂ(ಆಚಾರ್ಯರಿಗೆ ನಮಸ್ಕಾರ)

ಣಮೋ ಉವಜ್ಝಾಯಣಂ(ಉಪಧ್ಯಾಯರಿಗೆ ನಮಸ್ಕಾರ)

ಣಮೋ ಲೋಕಸತ್ಯ ಸಾಹೂಣಂ(ಯಾಕದೊಳಗಿನ ಸುರಸಾರುಗಳಾಗಿ ನಮಸ್ಕಾರ)"[೧೬೩]

ಎನ್ನುವ ಮಂತ್ರವನ್ನು ಹಿಡಿದು ಆರತಿ ಎತ್ತಿರಿ ಎನ್ನುವ ಭಾವ ಹಾಡುಗಾರನಲ್ಲಿದೆ. ಈ ಹಾಡಿನಲ್ಲಿ ಜೈನ ಸಿದ್ಧಾಂತಗಳನ್ನು ಒರೆಗೆ ಹಚ್ಚುವುದರ ಮೂಲಕ ತತ್ವ ಸಿದ್ಧಾಂತಗಳ ಮಹತ್ವವನ್ನು ಹೇಳುತ್ತದೆ.

ಮುಂದಿನ ಹಾಡು ೨೪ ತೀರ್ಥಂಕರರನ್ನು 'ಜಯ ಜಯ' ಎನ್ನುವ ಮೂಲಕ ಪ್ರಾರ್ಥಿಸುವ ಹಾಡಾಗಿದೆ. ಅದು ಹೀಗಿದೆ.

"ಪುರಪರಮೇಶ್ವರ ಸುರನುತ ಜಯ ಜಯ

ಪರಮಾನಂದ ಸುಖಾಸ್ಪರ ಜಯ ಜಯ||

ಅಜಿತ ಜಿನಾಧಿಪ ಅಚಲಿತ ಜಯ ಜಯ

ವಿಜಿತ ಮನೋಹರ ಭುಜಬಲಿ ಜಯ ಜಯ||

ಶಂಭವ ಗಂಭೀರಾಂಬುಧಿ ಜಯ ಜಯ

ಶುಂಬಿತನು ತೀರ್ಥೇಶ್ವರ ಜಯ ಜಯ||

ಹೀಗೆ ಆರಂಭವಾದ ಹಾಡು

ಶ್ರೀ ವರ್ಧಮಾನವಲ್ಲಭ ಜಯ ಜಯ

ಸಧರ್ಮ ಪ್ರತಿಪಾದಕ ಜಯ ಜಯ||

ಜಯ ದೇವೇಂದ್ರ ವೃಂದ ವಂದಿತ ಚರಣ||[೧೬೪]"

ಎನ್ನುವಲ್ಲಿ ಕೊನೆಗೊಳ್ಳುತ್ತದೆ.

'ಮಂಗಲಂ ಮಂಗಲಂ ಜ್ವಾಲಿನಿ' ಎನ್ನುವ ಈ ಹಾಡು ಜ್ವಾಲಾಮಾಲಿನಿಯನ್ನು ವರ್ಣಿಸುವ ಹಾಡಾಗಿದೆ. ಜ್ವಾಲಿನಿ ಎನೇ ತೀರ್ಥಂಕರನಾದ ಚಂದ್ರಪ್ರಭನ ಯಕ್ಷಿಣಿ. ಈಕೆಯ ಪತಿ ವಿಜಯಕ್ಷ. ಇಲ್ಲಿ ಜ್ವಾಲಿನಿಯನ್ನು ಭಕ್ತನು ವಿವಿಧ ಬಗೆಯಲ್ಲಿ ಅವಳ ಸ್ವರೂಪವನ್ನು ಈ ಹಾಡಿನಲ್ಲಿ ಕಟ್ಟಿಕೊಟ್ಟಿರುವುದನ್ನು ನೋಡಬಹುದು.

ಮಂಗಲಂ ಮಂಗಲಂ ಜ್ವಾಲಿನಿದೇವಿ

"ಅಷ್ಟಭುಜದ ದಿಟ್ಟೆ ದ್ರುಷ್ಟಮೂರುತಿ ತಾಯೆ

ಶ್ರೇಷ್ಠದಿ ಮೆರೆವ ಶ್ರೀ ಜಗನ್ಮಾತೆಯೇ

ದೃಷ್ಟ ಮೂರುತಿ ವಿಜಯಾಕ್ಷನ ರಾಣಿಯೇ

ಸೃಷ್ಟಿಯೊಳತಿಶಯ ಜಿನಪನ ಭಕ್ತೆ

ಚಂದ್ರನಜಿನನ ಯಕ್ಷೆ, ಶಶಿನಿಭ ವದನೆಯೆ

ಚಂದ್ರಪ್ರಕಾಶದ ಮುಕುರ ಶೋಭಿತಳೆ

ಚಂದದಿಂದೆಸೆವ ಮುತ್ತಿನ ಹಾರಲಂಕೃತಿ

ಚಂದದಿಂ ಭವ್ಯವರು ಸಲಹು ಪ್ರಿಯೆ||[೧೬೫]

ಇಲ್ಲಿ ಜ್ವಾಲಿನಿದೇವಿಯ ದೇಹ ಮತ್ತು ಸ್ವರೂಪವನ್ನು ವರ್ಣಿಸುವ ಜೊತೆಗೆ ಆಕೆಯ ಪತಿಯಾದ ವಿಜಯಕ್ಷ ಮತ್ತು ಚಂದ್ರಪ್ರಭ ತೀರ್ಥಂಕರನನ್ನು ಈ ಹಾಡು ಪರಿಚಯಿಸುತ್ತದೆ. ಇಂತಹ ಹಾಡುಗಳು ಜೈನ ಜನಪದೀಯರಲ್ಲಿ ಸಾಕಷ್ಟು ಸಿಗುತ್ತವೆ. ಹಾಗೆಯೇ ಮೇಲಿನ ಪದ್ಯ ಆದಿಪ್ರಾಸದಿಂದ ಕೂಡಿರುವುದು ಮತ್ತೊಂದು ವಿಶೇಷವಾಗಿದೆ.

ಹಾಗೆಯೇ ಮುಂದಿನ 'ಮಂಗಲಂ ಮಂಗಲಂ ಗೊಮ್ಮಟ' ಎನ್ನುವ ಹಾಡು ಗೊಮ್ಮಟೇಶ್ವರನ ಚರಿತ್ರೆಯನ್ನು ಹೇಳುವುದಾಗಿದೆ. ಮಂಗಲಂ ಮಂಗಲಂ ಗೊಮ್ಮಟ ಜಿನಪತೆ ಎಂದು ಆರಂಭವಾಗುತ್ತದೆ.

"ಆದಿನಾಥನ ಪುತ್ರ ಆಧಾರಯುತನಿಗೆ

ಮೇದಿನಿಯೊಳಗತಿ ಮೆರವವಗೆ

ಆದಿ ಚಕ್ರಿಯೊಳು ಯುದ್ಧವ ಮಾಡಿ ಗೆಲಿದವಗೆ

ಅದರ ಮೂರ್ತಿ ಸುನಂದ ದೇವಿ ಗರ್ಭಜಗೆ"||[೧೬೬]

ಆದಿ ತೀರ್ಥಂಕರನು ವೃಷಭನಾಥನ ಮಗನಾದ ಭರತ ಇವನು ಜೈನರಲ್ಲಿ ಮೊದಲ ಚಕ್ರವರ್ತಿ. ಇವನ ತಮ್ಮನೇ ಬಾಹುಬಲಿ. ಬಾಹುಬಲಿಯಿಂದ ಭರತ ಸೋಲುತ್ತಾನೆ. ಕೊನೆಗೆ ಬಾಹುಬಲಿ ವೈರಾಗ್ಯವನ್ನು ತಾಳುತ್ತಾನೆ. ಇಂತಹ ಕಥೆಯನ್ನು ಪುರಾಣ ಕಾವ್ಯಗಳಲ್ಲಿ ಚಿತ್ರಿಸುತ್ತ ಬಂದಿದ್ದಾರೆ. ಆದರೆ ಇಲ್ಲಿ ಹಾಡುಗಾರ ಒಂದು ನುಡಿಯಲ್ಲಿಯೇ ಅವನನ್ನು ಮತ್ತು ದಿಗ್ವಿಜಯವನ್ನು ಕುರಿತು ಗೀತೆಯಲ್ಲಿ ಕಟ್ಟಿಕೊಡುವುದು ನಿಜಕ್ಕೂ ಆಶ್ಚರ್ಯಕರವಾದುದು.

ಮುಂದಿನ ಹಾಡಾದ 'ವರವಾಣಿಯೊಳು'ಯಲ್ಲಿ ಹಾಡುಗಾರ ತರುಣಿಯರ ಆರತಿ ಎಂದಿರುವುದು ನಿಜಕ್ಕೂ ರಸಿಕತೆಯ ಒಂದು ಸೂಕ್ಷ್ಮತೆಯನ್ನು ಇಲ್ಲಿ ಗುರುತಿಸಬಹುದಾಗಿದೆ. ಆ ಹಾಡು ಹೀಗಿದೆ.

"ವರವಾಣಿಯೊಳು ಮತಿಬೇಡಿ

ಹರಿಣನೇತ್ರಿಯರೆಲ್ಲ ಕೂಡಿ

ಕರಕಮಲದರಿಮಾರತಿಗಳ ಹೂಡಿ

ಸುರಸತಿಯರ ನಿಭಕಾಂತಿಯ ಗೂಡಿ

ಸುರಪತಿವಿನುತ ಶ್ರೀಚಂದ್ರ ಜಿನೇಂದ್ರಗೆ

ತರುಣಿಯರಾರತಿಯ ಬೆಳಗಿರೇ"[೧೬೭]

ಎನ್ನುವುದರಲ್ಲಿ ಹಾಡುಗಾರ ಯುವತಿಯರನ್ನು ಆರತಿಗೆ ಆಹ್ವಾನ ಮಾಡುತ್ತಿರುವುದು ಒಂದು ವಿಶೇಷವಾದ ಸಂಗತಿಯೆಂದೇ ತಿಳಿಯಬೇಕಾಗುತ್ತದೆ. ಹಾಗೆಯೇ ಮುಂದೆ

"ಬಾಲಕೋಗಿಲೆ ಧ್ವನಿಯಿಂದ
ಮೋಲನೇತ್ರೆಯ ರಾಗದಂ
ಸಾಲಾಗಿನಿಂದ ಸತಿಯರ ಚಂದ
ಬಾಲಚಂದ್ರನ ಕಾಂತಿ ಮುಖದೊಳುನಿಂದ
ಲೀಲೆಯಿಂದಲಿಯಾರತಿಗಳ ತಂದೆ
ಮೂಲೋಕದೊಡೆಯ ಶ್ರೀಚಂದ್ರ ಜಿನೇಂದ್ರಗೆ
ಬಾಲೆಯರಾರತಿಯ ಬೆಳಗಿರೇ||"[೧೬೮]

ಇಲ್ಲಿ 'ತರುಣಿಯರು' 'ಬಾಲೆಯರು' ಎಂದು ಹಾಡುಗಾರ ವಿಶೇಷವಾಗಿ ಬಳಸಿರುವುದು ಕಂಡುಬರುತ್ತದೆ. ಈ ಹಾಡಿನಲ್ಲಿ ಪ್ರಮುಖವಾಗಿ ಲನೇ ತೀರ್ಥಂಕರನಾದ ಚಂದ್ರಪ್ರಭನಿಗೆ ಆರತಿಯನ್ನು ಬೆಳಗಿರಿ ಎನ್ನುವ ಭಕ್ತನ ಭಾವವೂ ಅಡಕವಾಗಿದೆ.

'ಪರಮ ಜಿನೇಂದ್ರನ ನೆನೆದು' ಎಂಬ ಹಾಡು ಪದ್ಮಾವತೀ ಯಕ್ಷಿಣಿ ಕುರಿತಾದ್ದು. ಇಲ್ಲಿ ಹಾಡುಗಾರನ ಕಲ್ಪನದೃಷ್ಟಿ ವಿಶೇಷವಾಗಿ ಕಂಡುಬರುತ್ತದೆ. ಬಹುತೇಕ ಹಾಡುಗಳು ತೀರ್ಥಂಕರರನ್ನು ನೆನೆದು ಯಕ್ಷಿಣಿಯರ ಕುರಿತಾಗಿರುತ್ತದೆ. ಜೈನರಲ್ಲಿ ತೀರ್ಥಂಕರನಿಗೆ ಮೊದಲಸ್ಥಾನ ನಂತರ ಯಕ್ಷಿಣಿಗಿದೆ. ಚಕ್ರವರ್ತಿಗಳಲ್ಲಿ ವಾಸುದೇವ-ಪ್ರತಿವಾಸುದೇವರು ಬರುತ್ತಾರೆ. ಆ ಹಾಡು ಹೀಗಿದೆ.

"ಪರಮಜಿನೇಂದ್ರನ ನೆನೆದು
ಸರಸಿಜಮುಖಿಯರು ನೆರೆದು
ಕರದಕಂಕಣ ಝಣರವಗಳೆಸೆಯಲು
ಬೆರಳ ಮುದ್ರಿಕೆ ಕಾಂತಿ ಧರೆಗೆ ರಂಜಿಸಲು
ಕಿರುನಡುವಿನ ಕಾಂಚಿಧಾಮ ಹೊಳೆಯಲು
ಧರಣಿರಾಜ ಪಟ್ಟದರಸಿ ಪದ್ಮಾಂಬೆಗೆ
ತರುಣಿಯರಾರತಿಯ ಬೆಳಗೀರೇ||"[೧೬೯]

ಎನ್ನುವ ಈ ಹಾಡು ಧರಣೇಂದ್ರನ ಹೆಂಡತಿಯಾದ ಹೊಂಬುಜದಲ್ಲಿ ನೆಲೆಸಿರುವ ಶ್ರೀ ಪದ್ಮಾವತೀ ಯಕ್ಷಿಣಿಗೆ ತರುಣಿಯರಾರತಿಯ ಬೆಳಗೀರೇ ಎನ್ನುವ ಮೂಲಕ ಹಾಡುಗಾರ ಪದ್ಮಾವತಿ ಯಕ್ಷಿಣಿಯನ್ನು ಈ ಹಾಡಿನಲ್ಲಿ 'ವ್ಯಾಲರಾಜನ ಪಟ್ಟದರಸಿ', ನಾಗರಾಜನ ರಾಣಿ, ಭೃಂಗನಂತ ಪಾಲವ, ನಂದಪುರದ ಮನೆಯ ಎನ್ನುವ, ವಿವಿಧ ಅನ್ವರ್ಥನಾಮಗಳ ಮೂಲಕ ಪದ್ಮಾವತಿಯನ್ನು ಗುರುತಿಸುತ್ತಾನೆ.

'ಜಯ ಜಯ ಆದಿ' ಎನ್ನುವ ಹಾಡಿನಲ್ಲಿ ಜೈನರ ಪರಿಕಲ್ಪನೆಯಲ್ಲಿ ಬರುವಂತಹ ಪ್ರಮುಖ ಪುಣ್ಯಪುರುಷರು ಹಾಗೂ ಧಾರ್ಮಿಕ ವಿಚಾರಗಳು, ಜೈನ ತತ್ವಗಳನ್ನು ಹಾಡುಗಾರ ಕಟ್ಟಿಕೊಟ್ಟಿರುವುದು ವಿಶೇಷವಾಗಿ ಕಂಡುಬರುತ್ತದೆ.

“ಜಯ, ಜಯ ಜಯವರ್ಮ ನೃಪಗೆ

ಜಯ ಜಯ ಮಹಾಬಾಲಕಗೆ

ಜಯ ಜಯ ಈಶಾನಕಲ್ಪಧ್ರುವಗೆ ನಿನಗೆ

ಜಯ ಜಯ ಶ್ರೀ ವಜ್ರಜಂಘಗೆ

ಜಯ ಜಯ ಭೋಗಭೂಮಿನಾಳವನಿಗೆ

ಜಯವೆಂದಾರತಿಯ ಬೆಳಗಿರೇ||

ಜಯ ಜಯ ಗರ್ಭಾವತರಣ

ಜಯ ಜಯ ಜನ್ಮಾಭಿಷವಣ

ಜಯ ಜಯ ಪರಿನಿಷ್ಕಮಣ ಕಲ್ಯಾಣ

ಜಯ ಜಯ ಕೇವಲಜ್ಞಾನ ಭಾಸ್ಕರಗೆ

ಜಯ ಜಯ ನಿರ್ವಾಣ ಪತಿಪುರದೇವಗೆ

ಜಯ ತಿವೆಂದಾರತಿಯ ಬೆಳಗಿರೇ||”[೧೬೦]

ಈ ರೀತಿಯಲ್ಲಿ ಜೈನಧರ್ಮ ಪುಣ್ಯಪುರುಷರನ್ನು ಮತ್ತು ತೀರ್ಥಂಕರರಿಗೆ ಆಗುವ ಪಂಚಕಲ್ಯಾಣಗಳನ್ನು ಹೇಳಿರುವುದು. ಕೊನೆಗೆ ಪತಿಪುರದೇವಗೆ ಆರತಿಯನ್ನು ಬೆಳಗಿರೇ ಎನ್ನುವ ಆಶಯವೂ ಈ ಹಾಡಿನಲ್ಲಿ ವ್ಯಕ್ತವಾಗಿದೆ.

‘ಸರಸಿಜ ಭವನರಸಿಯ’ ಎಂಬ ಹಾಡು ಪದ್ಮಾವತಿಯ ಆರತಿಯ ಹಾಡಾಗಿದೆ. ವೈದಿಕರಲ್ಲಿ ಮತ್ತು ಜೈನರಲ್ಲಿ ವೈದಿಕರು ಸರಸ್ವತಿ ದೇವಿಯನ್ನು ಸ್ಮರಿಸುವ ಪರಂಪರೆ ಪ್ರಾಚೀನ ಕಾಲದಿಂದಲೂ ಬಂದಿರುವುದನ್ನು ನಾವು ನೋಡಬಹುದು. ಹಾಗೆಯೇ ಜೈನ ಹಾಡುಗಳಲ್ಲಿಯೂ ಸಹ ಬಹುತೇಕ ಹಾಡುಗಳಲ್ಲಿ ಸರಸ್ವತಿಯನ್ನು ಸ್ಮರಿಸುವುದು ಕಂಡುಬರುತ್ತದೆ. ಉದಾಹರಣೆಗೆ ‘ಧರೆಯೊಳಧಿಕ ಕೇಳು’ ಜಯತು ಶಾರದೆ, ಶಾರದದೇವಿ ಮುಂತಾದ ಹಾಡುಗಳಲ್ಲಿ ಕಂಡುಬರುತ್ತದೆ. ಆ ಹಾಡು ಈ ಕೆಳಗಿನಂತಿದೆ.

“ಸರಸಿಜ ಭವನರಸಿಯ ಸರಸ್ವತಿಯನು

ನೆರೆ ಸ್ಮರಿಸುತ ಮುದದಿ

ತರುಣಿ ಪದ್ಮಿನಿಯ ಬಲಗೊಂಡು ಪದ್ಮಾವತಿಯಮ್ಮಗೆ

ತರುಣಿಯರಾರತಿ ಬೆಳಗಿರೇ||

ಅಂಬುಜಮುಖಿ ಬಿಂಬಾಧಾರೆ ಕರ

ವಾಂಬುಜ ನಯನಾಂಬಿಕೆ ತಾಯೆ

ನಂಬಿದ ಜನರ ಸಲಹು ಹೊಂಬುಜಪುರದ ಪ

ದ್ಮಾಂಬಿಕೆಗಾರತಿಯ ಬೆಳಗಿರೇ||”[೧೬೧]

ಈ ಹಾಡಿನಲ್ಲಿ ಪದ್ಮಾವತಿಯನ್ನು ಕಮಲದ ಮುಖದವಳೇ, ಕೈಯಲ್ಲಿ ಕಮಲವನ್ನು ಹಿಡಿದವಳೇ, ಸುಂದರ ಕಣ್ಣುಗಳುಳ್ಳವಳೇ, ಜನರ ಕಷ್ಟಗಳನ್ನು ಪರಿಹರಿಸುವ ಹೊಂಬುಜಪುರದ ಪದ್ಮಾವತಿಗೆ ಆರತಿಯನ್ನು

ಬೆಳಗಿರೇ ಎನ್ನುವ ಆಶಯವಿದೆ. 'ಆರತಿ ಬೆಳಗುವೆನು' ಎಂಬ ಹಾಡಲ್ಲಿ 'ಬಾಹುಬಲಿಯ' ದಿಗ್ವಿಜಯದ ವೈರಾಗ್ಯ ವಿಷಯಗಳನ್ನು ಪ್ರಸ್ತಾಪಿಸುತ್ತದೆ.

"ಆರತಿ ಬೆಳಗುವೆನು ನಿನಗೊಂದಾರತಿ ಬೆಳಗುವೆನು
ಮೇರುಗಿರಿ ಸಮಧೈರ್ಯ ನಿನಗೊಂದಾರತಿ ಬೆಳಗುವೆನು||

ಮದವೆಂಬ ಮದ್ದಾನೆಯನು ಕದನವಿಲ್ಲದೆ ಗೆದ್ದ ಹರಿಯೇ
ಚದುರ ಲಕ್ಷ್ಮೀಪತಿಯೇ ನಿನಗಾರತಿ ಬೆಳಗುವೆನು||

ಪಂಚಬಾಣನ ಗೆಲಿದನಿಗೆ ಪಂಚೇಂದ್ರಿಯ ನಿಗ್ರಹನು ನೀನೆ
ಪಂಚಕಲ್ಯಾಣಾಧಿಪ ನಿನಗೊಂದಾರತಿ ಬೆಳಗುವನೆ||"[೧೬೨]

ಎನ್ನುವ ಮೂಲಕ ಬಾಹುಬಲಿಯ ಚರಿತ್ರೆಯನ್ನು ಹಾಡುಗಾರ ಕಟ್ಟಿಕೊಡುತ್ತಾನೆ. ಇಂತಹ ಬಾಹುಬಲಿಯ ದಿಗ್ವಿಜಯದ ವರ್ಣನೆ ಕುರಿತ, ಸಾಕಷ್ಟು ಹಾಡುಗಳು ಕಂಡುಬರುತ್ತವೆ. 'ನಂಬಿದೆ ನಾ ನಿಮ್ಮಯ' ಎಂಬ ಹಾಡಲ್ಲಿ ಪದ್ಮಾವತೀ ಯಕ್ಷಿಣಿಯನ್ನು ಬೇಡುವ ಆರ್ತನಾದ ಈ ಹಾಡಿನಲ್ಲಿ ವ್ಯಕ್ತವಾಗಿದೆ. ಜೈನರು ಸಹ ತಮ್ಮ ಕಷ್ಟ, ರೋಗರುಜಿನಗಳ ಬಗ್ಗೆ ದೇವರಲ್ಲಿ ಮೊರೆಯಿಡುವ ಪದ್ಧತಿ ಕಂಡುಬಂದಿದೆ. ಇಲ್ಲಿ ಭಕ್ತನೊಬ್ಬ ಬಂದಿರುವಂತಹ ರೋಗ ಮತ್ತು ಕಷ್ಟವನ್ನು ಬಗೆಹರಿಸಿದ್ದು, ಹಾಗೆಯೇ ಈ ಸಾರಿಯು ಬಗೆಹರಿಸು ತಾಯೇ ಪದ್ಮಾವತೀ ಎನ್ನುವ ಆರ್ತಧ್ವನಿ ಈ ಹಾಡಿನಲ್ಲಿ ವ್ಯಕ್ತವಾಗಿರುವುದು ಕಂಡುಬರುತ್ತದೆ.

"ನಂಬಿದೆ ನಾ ನಿಮ್ಮಯ ಪಾದಯುಗಲವ ಅಂಬುಜವದನೆ ದೇವಿ
ಬೆಂಬಿಡದನುದಿನ ಸಲಹೋ ಎನ್ನನು ಮಾತೆ ರಂಭೆ ಪದ್ಮಾವತೀ ದೇವಿ ||ಪ||

ಘೋರೋಪಸರ್ಗದ ಜಯಿಸಿದಾತನ ಯಕ್ಷಿಧಾರೆ ನೀ ರಕ್ಷಿಸಮ್ಮ
ಸೇರಿ ನಿಮ್ಮಯ ಪಾದ ನಂಬಿದ ಭಕ್ತರ ಕಾರುಣ್ಯ ದೃಷ್ಟಿಯಲಿ||

ನಾಗರಾಜನ ರಾಣಿ ಪಾಲಿಸೆಮ್ಮಯ ಮಾತೆ ಈಗ ನಿಮ್ಮಯ ಪುತ್ರಗೆ ರೋಗ ಬಂದೆರಗಿ
ಹೋಗದೆ ನಿಲ್ಲದು ಬೇಗ ನೀ ಪರಿಹರಿಸಮ್ಮ"[೧೬೩]

ಎನ್ನುವ ಭಕ್ತನು ಪದ್ಮಾವತಿಯನ್ನು ರೋಗದಿಂದ ಮುಕ್ತಿಯನ್ನು ಕೊಡು ಎಂದು ಬೇಡಿಕೊಳ್ಳುವ ಹಾಡಾಗಿದೆ. ಹೀಗೆ ಪದ್ಮಾವತಿಯ ಕುರಿತಂತೆ ಇರುವ ಹಾಡುಗಳೇ ಹೆಚ್ಚಾಗಿವೆ. ಅಂತಹ ಹಾಡುಗಳು 'ನವರತ್ನಧಾರತಿ' 'ಮಂಗಳಂ ಮಂಗಳಂ ಭವಂತು', 'ಆಯಾಸವಹುದೇ ಪದ್ಮಿಣಿಯೇ', ಮಂಗಳಂ ಪದ್ಮಾವತೀ ಮಂಗಲಂ ಧರಣೇಂದ್ರ ಇನ್ನೂ ಮುಂತಾದ ಹಾಡುಗಳು ಪದ್ಮಾವತಿಯನ್ನು ವರ್ಣಿಸುವ, ಬೇಡುವ ಮತ್ತು ಪದ್ಮಾವತೀ ದೇವಿಯ ಚರಿತ್ರೆ, ಐತಿಹ್ಯ, ಕಥೆಗಳನ್ನು ಹೇಳುತ್ತದೆ.

'ಜಯ ಮಂಗಳಂ ನಿತ್ಯ' ಎನ್ನುವ ಹಾಡು ೨೪ ಯಕ್ಷಿಣಿಯರನ್ನು ಪ್ರಸ್ತಾಪಿಸುವುದರ ಜೊತೆಗೆ ಕೆಲವು ಧಾರ್ಮಿಕ ವಿಚಾರಗಳನ್ನು ವರ್ಣಿಸುವುದು ಕಂಡುಬರುತ್ತದೆ.

"ಜಯಂ ಮಂಗಳಂ ನಿತ್ಯಶುಭ ಮಂಗಳಂ
ಶುಭ ಮಂಗಳಂ ನಿತ್ಯ ಶ್ರುತದೇವಿಗೆ ಜಯ||

ಎನ್ನುವ ಮೂಲಕ ಆರಂಭವಾಗಿ
ಪ್ರತಿಪದದಿ ಚಕ್ರಧರೆ ದ್ವಿತೀಯದಲಿ ಕೂಷ್ಮಾಂಡಿ
ತೃತೀಯೆಯೊಳು 'ಶ್ರೀ ಗೌರಿ ಚತುರ್ಥಿಯ ಕಾಳಿ
ನುತಚರಿತೇನಂತಮತಿ ಪಂಚಮಿಯ ದಿನದಂದು
ಕ್ಷಿತಿನುತೆಯ ಭಾರತಿಯ ಷಷ್ಟಿದಿನದಿ ಜಯಮಂಗಳಂ"[೧೬೪]

ಎನ್ನುವ ಹಾಡಾಗಿದೆ. ಜೈನರಲ್ಲಿಯು ಸಹ ಹಬ್ಬ ಹರಿದಿನ ಒಳ್ಳೆಯ ಕಾರ್ಯಗಳನ್ನು ಮಾಡಬೇಕಾದರೆ ವಾರ, ಜ್ಯೋತಿಷಶಾಸ್ತ್ರವನ್ನು ನೋಡಿ ಕಾರ್ಯಕ್ರಮವನ್ನು ನಡೆಸುತ್ತಾರೆ ಎಂಬುದನ್ನು ಈ ಹಾಡು ಬಹಿರಂಗಪಡಿಸುತ್ತದೆ. ಅಂದರೆ ಯಕ್ಷಿಣಿಯರ ವಿಶೇಷ ದಿನಗಳಂದು ಜೈನರು ತಮ್ಮ ಮಂಗಳ ಕಾರ್ಯಗಳನ್ನು ಆರಂಭಿಸುತ್ತಾರೆ. ಹಾಗೆಯೇ ಪ್ರತಿಯೊಂದು ಧಾರ್ವಿಕ ಸಂಪ್ರದಾಯಗಳನ್ನು ಯಕ್ಷಿಯರ ಸಮ್ಮುಖದಲ್ಲಿ ನಡೆಯುತ್ತವೆ ಎಂಬುದನ್ನು ಈ ಹಾಡು ಸ್ಪಷ್ಟಪಡಿಸುತ್ತದೆ.

ಹೀಗೆ ಜೈನರಲ್ಲಿ ಮಂಗಳಾರತಿಯ ಹಾಡುಗಳು ಜೈನರ ಪುಣ್ಯಪುರುಷರ, ಅವರ ಧಾರ್ಮಿಕ ಆಚಾರ-ವಿಚಾರ-ಸಂಪ್ರದಾಯಗಳು ಮತ್ತು ಯಕ್ಷ-ಯಕ್ಷಿಣಿಯರನ್ನು ಆರಾಧಿಸುವ, ಬೇಡುವ, ವರ್ಣಿಸುವ ಹಾಡುಗಳಿಂದ ಕೂಡಿವೆ. ಇಂತಹ ಜೈನ ಹಾಡುಗಳು, ಜೈನರಲ್ಲಿರುವ ವಿವಿಧ ಸಂಸ್ಕೃತಿಯ ಮಜಲುಗಳನ್ನು ಈ ಹಾಡುಗಳು ಅನಾವರಣಗೊಳಿಸುತ್ತವೆ. ಜೊತೆಗೆ ಜೈನಧರ್ಮದ ತತ್ವ ಸಿದ್ಧಾಂತಗಳು ಮತ್ತು ಧಾರ್ಮಿಕ ವಿಚಾರಗಳು ಹೀಗೆ ಮುಂತಾದ ವಿಚಾರಗಳು ನಿರೂಪಿತಗೊಂಡಿವೆ ಎಂಬುದಕ್ಕೆ ಈ ಹಾಡುಗಳು ಸಾಕ್ಷಿಯಾಗಿವೆ.

**೪.೩.೪. ಸಂಕೀರ್ಣ ಹಾಡು**

ಸಂಪಾದಕರು ಅಧ್ಯಯನದ ದೃಷ್ಟಿಯಿಂದ ಜೈನ ಹಾಡುಗಳನ್ನು ಏಳು ಭಾಗಗಳಾಗಿ ಮಾಡಿದ್ದಾರೆ. ಕೊನೆಯದು ಸಂಕೀರ್ಣ ಹಾಡುಗಳು. ಈ ಭಾಗದಲ್ಲಿ ನಿಖರವಾಗಿ ಯಾವ ವಸ್ತುಗಳನ್ನು ಕುರಿತು ಹೇಳುವುದಿಲ್ಲ. ನೀತಿ-ಅನೀತಿಗಳು, ಬದುಕಿನ ಸಿದ್ಧಾಂತಗಳು, ತೀರ್ಥಂಕರರ, ಯಕ್ಷಿಯರ ತೀರ್ಥಕ್ಷೇತ್ರಗಳು, ಧ್ಯಾನ-ಆತ್ಮ-ಸ್ತುತಿಪರವಾದ ಹಾಡುಗಳು ಕಂಡುಬರುತ್ತವೆ. ಈ ಕಾರಣದಿಂದ ಹಾಡುಗಳನ್ನು ಸಂಕೀರ್ಣ ಹಾಡುಗಳೆಂದು ಸಂಪಾದಕರು ವಿಭಾಗಿಸಿದ್ದಾರೆ.

ಇಂತಹ ಸಂಕೀರ್ಣ ಹಾಡುಗಳು ಜೈನರ ಬಹುತೇಕ ವಸ್ತು ವಿಷಯಗಳನ್ನೊಳಗೊಂಡ ಪ್ರಮುಖವಾದ ಹಾಡುಗಳಾಗಿ ಗುರುತಿಸಿಕೊಳ್ಳುತ್ತವೆ. ಆ ಕಾರಣದಿಂದ ಈ ಹಾಡುಗಳನ್ನು ವಸ್ತು ವೈವಿಧ್ಯತೆ ದೃಷ್ಟಿಯಿಂದ ವಿವೇಚಿಸುವುದು ಅಗತ್ಯವಾಗಿದೆ. 'ಆರ ಸಿರಿ ಆರತನು' ಎಂಬ ಹಾಡಿನಲ್ಲಿ ಸಂಸಾರ ಜೀವನದ ನಶ್ವರತೆಯನ್ನು ಕುರಿತು ಈ ಹಾಡಿನಲ್ಲಿ ಹೇಳಿರುವುದು ಹೀಗಿದೆ.

"ಆರ ಸಿರಿ ಆರ ತನು ಧನಪುತ್ರಮಿತ್ರರು
ಆರಿಗೂ ಸ್ಥಿರವಿಲ್ಲ ಸಂಸಾರದ ವಿಭವ
ಚಾರುಶ್ರೀ ಜಿನಮತವ ನಂಬು ಜೀವನೆ
ನಿನಗೆ ಬೇರೊಂದು ಶರಣೆಲ್ಲವೈ||"[೧೬೫]

ಇಲ್ಲಿ ಮನುಷ್ಯನಿಗೆ ಸಂಪತ್ತು, ದೇಹ ಯಾವುದೂ ಶಾಶ್ವತವಲ್ಲ. ಶಾಶ್ವತವಾದುದು ಜಿನಮತದ ತತ್ವ ಸಿದ್ಧಾಂತಗಳನ್ನು ನಂಬಿ ಬಾಳು, ನಿನಗೆ ಜೀವನ ಸುಖ-ಶಾಂತಿ, ಮೋಕ್ಷ ಸಿಗುತ್ತದೆ ಎಂಬ ಭಾವ ಈ ಹಾಡಿನಲ್ಲಿದೆ. ಹಾಗೆಯೇ ಮುಂದುವರೆದು ಮತ್ತೊಂದು ನುಡಿಯಲ್ಲಿ ಹೀಗಿದೆ.

"ಶ್ರೀಯುಯೌವನ ವಿಭವ ಮಾಯ ಮದ ಮಾ
ತ್ಸರ್ಯಕಾರ್ಯನಿರ್ಮಲವಂಶ ರೂಪಸೌಭಾಗ್ಯವು
ವಾಯುಗೊಡ್ಡಿದ ಸೊಡರು ಮಿಂಚುಮಂಜಿನ ಪುಂಜ ನೀರು ಬೊಬ್ಬಳಿಕೆಯಂತೆ
ಹೇಯ ಸಂಸಾರವು, ಶರೀರ ತಾನಸ್ಥಿರವು
ಶ್ರೇಯಾಂಸಪತಿ ಶಾಂತಿ ಜಿನರ ಪಾದಗಳಿಗೇ
ಕಾಯೋ ಮನೋವಾಚನದಲ್ಲಿ ನಂಬು ಜೀವವೇ ನಿನಗೆ ಮತ್ತೊಂದು ಶರಣಿಲ್ಲವೈ"[೧೭೬]

ಮನುಷ್ಯನಿಗೆ ಲೌಕಿಕ ಸುಖಗಳು ಕ್ಷಣಿಕ. ಅಂತಹ ಆಸೆಗಳ ಬಗ್ಗೆ ಆಸಕ್ತಿ, ಆಕಾಂಕ್ಷೆಯನ್ನು ಇಟ್ಟುಕೊಳ್ಳದೆ ಶಾಶ್ವತ ಸುಖಕ್ಕೆ ಹಂಬಲಿಸಿ ಶ್ರೇಯಾಂಸ ತೀರ್ಥಂಕರನಲ್ಲಿ ಕಾರ್ಯಾ, ಮನಸಾ, ವಾಚಾ, ನಂಬಿ ಜೀವನವನ್ನು ಸಾರ್ಥಕಗೊಳಿಸಿ ಎನ್ನುವುದು ಕೃತಿಕಾರನ ಧ್ವನಿಯಾಗಿದೆ. ಹಾಗೆಯೇ ಕ್ಷಣಿಕ ಜೀವನದ ಬದುಕನ್ನು ರೂಪಕಗಳ ಮೂಲಕ ಈ ಹಾಡಿನಲ್ಲಿ ಕಟ್ಟಿಕೊಟ್ಟಿದ್ದಾನೆ. ಯೌವನ, ವಿಭವ, ಮಾಯ, ಮದ, ಮತ್ಸರ, ರೂಪ, ಸೌಭಾಗ್ಯ ಇವೆಲ್ಲವೂ ಸೊಡರು, ಮಿಂಚು, ಮಂಜಿನ ಪುಂಜ, ನೀರ ಬೊಬ್ಬಳಿಕೆಯಂತೆ ಎನ್ನುವ ಕ್ಷಣಿಕ ಜೀವನದ ಬದುಕನ್ನು ವಿಡಂಬಿಸುತ್ತವೆ. 'ಅರಿಯಲಿಲ್ಲವಲ್ಲ ಆತ್ಮನ' ಎಂಬ ಹಾಡಿನಲ್ಲಿ ಆತ್ಮದ ಶ್ರೇಷ್ಠತೆ, ಆತ್ಮವನ್ನು ನಂಬಿ ಕೆಟ್ಟವರಿಲ್ಲ ಎಂಬ ಸಂದೇಶವನ್ನು ನೀಡುವ ಹಾಡು ಇದಾಗಿದೆ.

"ಅರಿಯಲಿಲ್ಲವಲ್ಲ ಆತ್ಮನ ಮರೆದು ಕೆಟ್ಟರೆಲ್ಲ
ಹೊರಗಣ ಸೋಗೆಯ ತಿಂದೊಳಗಿಹ
ರಸದಿರವನರಿಯದಿಹ ಕುರಿಯಂತೆಲ್ಲ"[೧೭೭]

ಇಲ್ಲಿ ಕೃತಿಕಾರ 'ಆತ್ಮವನ್ನು' ಅರಿಯಬೇಕು ಇದನ್ನು ಅರಿಯದೇ ಅಶಾಶ್ವತ ಬದುಕಿನಲ್ಲಿ ಸುಖ ಸಂತೋಷವನ್ನು ಪಡುತ್ತಿದ್ದಾರೆ ಅದರಿಂದ ಕೃತಿಕಾರ "ಹೊರಗಣ ಸೋಗೆಯ ತಿಂದೊಳಗಿಹ ರಸದಿರವನರಿ ಯದಿಹ ಕುರಿಯಂತೆಲ್ಲ" ಎಂಬ ಮಾರ್ಮಿಕ ಮಾತುಗಳನ್ನಾಡಿದ್ದಾನೆ. ನಾವು ಕಬ್ಬಿನ ಸಿಪ್ಪೆಯನ್ನು ತಿಂದು ಅದರ ಒಳಗಿರುವ ರಸವನ್ನು ಕುಡಿದಂತೆ ಆಗಿದೆ ಎನ್ನುವ ಪರಿಕಲ್ಪನೆ. ಇಲ್ಲಿ ಕೃತಿಕಾರ ಆತ್ಮದ ಶ್ರೇಷ್ಠತೆಯನ್ನು ಹೇಳುತ್ತಿದ್ದಾನೆ. ಹಾಗೆಯೇ ಧರ್ಮವನ್ನು ಬಿಟ್ಟು ಮತ್ತೊಂದು ಧರ್ಮಕ್ಕೆ ಹೋಗುವವರಿಗೆ ಇಲ್ಲಿ ಹಾಡುಗಾರ ಚಾಟಿ ಏಟು ಬೀಸಿದ್ದಾನೆ.

"ಹೊಟ್ಟೆಯ ಹೊರೆವುದಕ್ಕೆ ಧರ್ಮವ ಬಿಟ್ಟು ಹೋಗುವರಿದಕೇ
ಕೆಟ್ಟಮನದ ಕೇಡಿನ ಬದುಕಿಗೆ ತಲೆಗೊಟ್ಟಳುತಿಹರಿದ ಬಿಟ್ಟು ನಿಜಾತ್ಮನ||"[೧೭೮]

ಧರ್ಮವನ್ನು ಬಿಟ್ಟು ಮತ್ತೊಂದು ಧರ್ಮಕ್ಕೆ ಸೇರುವವರನ್ನು ಹೀಯಾಳಿಸುವ ಮೂಲಕ ಪ್ರಸ್ತಾಪಿ ಸುತ್ತಾನೆ. ಅಂದರೆ ಈ ಕಾಲಕ್ಕಾಗಲೇ ಮತಾಂತರದ ಪ್ರಕ್ರಿಯೆಗಳು ಹೆಚ್ಚಾಗಿ ನಡೆಯುತ್ತಿದ್ದವು ಎಂಬುದನ್ನು

ಈ ಹಾಡು ಸಂಕೇತಿಸುತ್ತದೆ. ಮುಂದಿನ ಹಾಡು 'ಹಿಗ್ಗುವೆ ಯಾಕೋ' ಎಂಬ ಹಾಡು ಮನುಷ್ಯನನ್ನು ವಿಡಂಬಿಸುವ ಹಾಡಾಗಿದೆ.

"ಹಿಗ್ಗುತಿ ಯಾಕೋ ಈ ದೇಹಕ್ಕೆ||
ಹಿಗ್ಗುತ ತಗ್ಗುತ ಮುಗ್ಗುತ ಕುಗ್ಗುತ
ಅಗ್ನಿಯೊಳಗೆ ದಗ್ಧವಾಗುವ ದೇಹಕ್ಕೆ||

ನವ ವಿಧ ದ್ವಾರದಿ ಮಲಮೂತ್ರಗಳಿಂದ
ನೀರಿಲ್ಲದಿದ್ದರೆ ನಾರುವ ದೇಹಕ್ಕೆ||

ಏಳುತ್ತ, ಬೀಳುತ್ತ, ಬಾಳುತ್ತ ಬದುಕುತ್ತ
ಹೇಳದೆ ಹೋಗುವ ಹಾಳಾದ ದೇಹಕ್ಕೆ||
ನರರ ಸೇವೆಯ ಮಾಡಿ ನರಕ ಭಾಜನವಾಗಿ
ರೋಗ ಬಂದರೆ ತಾನೇ ಹೋಗುವ ದೇಹಕ್ಕೆ||"[೧೭೯]

ಮಾನವನ ದೇಹದ ಸುಖವನ್ನು ವ್ಯಂಗ್ಯ ವಿಡಂಬನೆಯ ಮೂಲಕ ಕೃತಿಕಾರ ದೇಹದ ಕ್ಷಣಿಕತೆಯನ್ನು ಹೇಳುತ್ತಿದ್ದಾನೆ.

ಇಂತಹ ವಸ್ತು ವಿಷಯಗಳು ದಾಸರ ಕೀರ್ತನೆ, ತತ್ವಪದಕಾರರಲ್ಲಿ, ದೇಹದ ಸಂಸಾರದ ಮಾನವ ಜನ್ಮದ ಬದುಕಿನ ಸಾರ್ಥಕತೆಯನ್ನು ಕುರಿತು ಹೇಳುವ ಹಾಡುಗಳ ಸಾಲಿಗೆ ಈ ಹಾಡುಗಳು ಬಂದು ಸೇರುತ್ತವೆ. ಇಲ್ಲಿ ಒಬ್ಬ ಜೈನ ಕೃತಿಕಾರ ಸಮಾಜದ ಮತ್ತು ಮಾನವನ ಬದುಕು ಅರ್ಥಪೂರ್ಣವಾಗಿರಬೇಕು. ಲೌಕಿಕ ಸುಖಕ್ಕಿಂತ ಆಧ್ಯಾತ್ಮಿಕ ಸುಖಕ್ಕೆ ಹೆಚ್ಚು ಗಮನ ಕೊಡಬೇಕು. ದಾನ, ಧರ್ಮ, ಮಾನವೀಯ ಸಂಬಂಧಗಳನ್ನು ತನ್ನ ಧರ್ಮದ ಚೌಕಟ್ಟಿನ ಒಳಗಡೆಯೇ ಇದ್ದು ತೋರಿಸಿರುವುದು ಒಬ್ಬ ಜೈನ ಹಾಡುಗಾರನ ವಿಶಾಲವಾದ ಮಾನವೀಯ ದೃಷ್ಟಿಯಾಗಿದೆ.

ಪಂಪನು ಸಹ ತನ್ನ ಧಾರ್ಮಿಕ ಕಾವ್ಯದ ಜೊತೆಗೆ ಮಾನವೀಯ ಸಂಬಂಧಗಳನ್ನು ಹೇಳುತ್ತಾನೆ. ಹಾಗೆಯೇ ಇಲ್ಲಿ ಜೈನ ಹಾಡುಗಳು ಸಹ ಧರ್ಮದ ತತ್ವ ಸಿದ್ಧಾಂತಗಳ ಜೊತೆಗೆ ಮಾನವೀಯ ಬದುಕನ್ನು ಹಸನುಗೊಳಿಸುವ ಅಂಶಗಳು ಇಲ್ಲಿವೆ. ಹಾಗೆಯೇ ಮುಂದಿನ ಹಾಡಿನಲ್ಲಿ 'ಧ್ಯಾನವ ಮಾಡಿರೋ' ಎಂಬ ಹಾಡು 'ಜಿನೇಶ್ವರನ' ಕುರಿತು ಅವನನ್ನು ಒಲಿಸಿಕೊಳ್ಳುವ ಪರಿ ಈ ಹಾಡಿನಲ್ಲಿ ಕಂಡುಬರುತ್ತದೆ.

"ಧ್ಯಾನವ ಮಾಡಿರೊ ಜಿನೇಶ್ವರ
ಧ್ಯಾನವ ಮಾಡಿರೋ||

ಮಾನವ ಜನರಿಗೆ ಮುಕ್ತಿ ಕೊಡುವ ಮಹಾತ್ಮನ್ನ
ಸ್ತುತಿ ಮಾಡಿ ಯುಕ್ತಿಲಿಂದ ಗತಿ ಎಂಬೊ ಮುಕ್ತಿಪಡಿರೋ||

ಪರಮ ಪಾವನ ಮೂರ್ತಿ ಧರೆಯೊಳು ಅವರ ಕೀರ್ತಿ
ಅರಹಂತ ದೇವರನ್ನು ಮರಿಯದೆ ಭಜಿಸಿರೋ||"[೧೮೦]

ಎನ್ನುವ ಮೂಲಕ ಜೈನರ ಜಿನದೇವ, ಅರಹಂತ, ಶ್ರೇಷ್ಠರನ್ನು ನೆನೆಯುವ ಮೂಲಕ ಸನ್ಮಾರ್ಗವನ್ನು ಪಡೆಯಿರಿ ಎಂಬ ಸಂದೇಶವನ್ನು ಸಾರುವ ಹಾಡಾಗಿದೆ. ಹಾಗೆಯೇ ಜೈನರ ದಿನನಿತ್ಯದ ಜೀವನದ ನಿತ್ಯ ಕ್ರಿಯೆಗಳನ್ನು ಹೇಳುವ ಹಾಡಾಗಿದೆ.

"ಜೈನರಾಗಿ ಜನಿಸಿದ ಬಳಿಕ ಕ್ರಮ ನೋಡಿ ನಡಿಬೇಕ
ಪಾಪಪುಣ್ಯ ಅರಿಬೇಕ ತಿಳಿದ ನುಡಿ ಅಡಬೇಕ
ಆಹಾರ ನೋಡಿ ಮಾಡಬೇಕ ಭೋಜನಾ|
ನೀರ ಸೋಸಿ ಕುಡೀರಿ ಪ್ರತಿದಿನಾ||
ನೀರಸೋಸಿ ಕುಡಿಯದಿದ್ದರೆ ಆಹಾರ ನೋಡಿ ಉಣದಿದ್ದರೆ
ದಾರಿ ನೋಡಿ ನಡಿದಿದ್ದರೇ
ಊರ ಸುಟ್ಟ ಮಾಡಿದಂತೆ ದಹನಾ
ತಟ್ಟುವುದು ಪಾಪದ ಬಂಧನಾ||"[೧೮೧]

ಜೈನರು ತಮ್ಮ ದಿನನಿತ್ಯದ ಜೀವನದಲ್ಲಿ ಜೈನಧರ್ಮದ ವಿಧಿಕ್ರಿಯೆಗಳನ್ನು ಅನುಸರಿಸಬೇಕೆಂಬುದು ಜೈನಧರ್ಮದ ಸಿದ್ಧಾಂತ. ಜೈನರು ಊಟ ಮಾಡುವಾಗ, ನೀರು ಕುಡಿಯುವಾಗ, ಓಡಾಡುವಾಗ, ಇಂತಹದರಲ್ಲಿ ಪ್ರಾಣಿಹಿಂಸೆ, ಅಂದರೆ ಕ್ರಿಮಿ ಕೀಟಗಳ ಹಿಂಸೆ ಆಗುತ್ತದೆ ಎನ್ನುವುದು ಜೈನಧರ್ಮದ ಪರಿಕಲ್ಪನೆ. ಅದರಿಂದ ಜೈನಧರ್ಮದಲ್ಲಿ ಅಹಿಂಸಾ ಪರಮೋಧರ್ಮ ಎಂಬುದರ ಧ್ಯೇಯವಾಕ್ಯವಾಗಿದೆ. ಇಂಥಾ ಹಿಂಸಾಮಾರ್ಗ ಜಗತ್ತಿನಲ್ಲಿದೆ. ಅಹಿಂಸೆಯ ಆಚರಣೆ ಹೇಗೆ? ಇಂತಹ ಹಿಂಸೆಯನ್ನು ಅತ್ಯಂತ ಕಡಿಮೆ ಮಾಡುವುದೇ ಈ ಧರ್ಮದ ಗುರಿ. ಹಿಂಸೆ ಕೇವಲ ಬಾಹ್ಯಕ್ರಿಯೆಯಲ್ಲಿ ಮಾತ್ರವಲ್ಲ. ಇದು ಮನುಷ್ಯ ತನ್ನ ಮನಸ್ಸನ್ನು ಸತತವಾಗಿ ಎಚ್ಚರದಲ್ಲಿಡಬೇಕು ಎಂಬುದನ್ನು ಜೈನಧರ್ಮ ಸಾರುತ್ತ ಬಂದಿದೆ. ಇಂತಹ ಹಿಂಸೆ-ಅಹಿಂಸೆಯ ಬಗ್ಗೆ ಅರ್ಥಪೂರ್ಣವಾದ ಚರ್ಚೆ ಜೈನಗ್ರಂಥಗಳಲ್ಲಿ, ಪುರಾಣ, ಕಾವ್ಯಗಳಲ್ಲಿ ಕಂಡುಬರುತ್ತವೆ. ಅಹಿಂಸೆಯ ಪರಿಕಲ್ಪನೆ ವಿಶ್ವದ ಬೇರೆ ಯಾವುದೇ ಧರ್ಮದಲ್ಲೂ ಕಂಡುಬರುವುದಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯ ವಾಗಿದೆ.

"ಸ್ಥೂಲ ಮತ್ತು ಸೂಕ್ಷ್ಮ ದ್ರವ್ಯ ಮತ್ತು ಭಾವ, ಬಾಹ್ಯ ಮತ್ತು ಅಂತರ್ಗತ, ವ್ಯವಹಾರ ಮತ್ತು ನಿಶ್ಚಯ ದೃಷ್ಟಿ ಹೀಗೆ ಹಿಂಸೆಯನ್ನು ಕುರಿತು ವಿಸ್ತೃತವಾಗಿ ವಿಚಾರ ಮಾಡಲಾಗಿದೆ."[೧೮೨] ಇಂತಹ ಜೈನಧರ್ಮದ ತತ್ವ ಸಿದ್ಧಾಂತಗಳನ್ನು ಈ ಹಾಡುಗಳಲ್ಲಿ ಸರಳವಾಗಿ ಅರ್ಥೈಸಿರುವುದು ಅತ್ಯಂತ ಉಚಿತವಾಗಿದೆ. ಹಾಗೆಯೇ ಮುಂದಿನ ಹಾಡಿನಲ್ಲಿ ಜೈನರಾಗಿ ಹುಟ್ಟಿದ ಮೇಲೆ ಏನೇನು ಮಾಡಬೇಕು ಎನ್ನುವ ಅಂಶಗಳನ್ನು ಹೇಳುತ್ತದೆ.

"ಜೈನರಾಗಿ ಹುಟ್ಟಿಬಂದ ಣಮೋಕಾರ ಮಂತ್ರ ಒಂದ
ಅನಬೇಕಾಗಿ ಒಪ್ಪಿಗೆ ಬಂದ ಮನಾ ತೊಳದ ಮಾಡಬೇಕ ಜಳಕ
ಸಂದೇಹವಿಲ್ಲದ ದೊರಕುವದು ಮೋಕ್ಷ||"[೧೮೩]

ಜೈನರಾಗಿ ಹುಟ್ಟಿದ ಮೇಲೆ ಜೈನರ ಮಂತ್ರವಾದ 'ಣಮೋಕಾರ'ವನ್ನು ಎಲ್ಲ ಜೈನರು ಸ್ಮರಿಸಬೇಕು. ಇದರಲ್ಲಿ ಅರಿಹಂತರು, ಸಿದ್ಧರು, ಉಪಾಧ್ಯಾಯರು, ಆಚಾರ್ಯರು, ಸಾಧುಗಳು, ಇದ್ದು. ಇವರು ಮುಕ್ತ

ಜೀವರು ಇವರಿಗೆ ಪಂಚ ಪರಮೇಷ್ಠಿಗಳೆಂದು ಹೆಸರು. ಇವರು ಪೂಜ್ಯರು ಆಗಿರುವುದರಿಂದ ಈ ಐದು ಮಂತ್ರಗಳಲ್ಲಿ ಣಮೋಕಾರ ಮಂತ್ರಗಳೆಂಬ ಹೆಸರು ಬಂದಿದೆ. ಇಂತಹವರನ್ನು ನೆನೆದು ಬಂದರೆ ಸಂದೇಹವಿಲ್ಲದೆ ಮೋಕ್ಷ ಪದವಿ ಲಭಿಸುವುದು.

ಹಾಗೆಯೇ ಜೈನಧರ್ಮದಲ್ಲಿ ನೋಂಪಿಯ ವ್ರತಗಳ ಬಗ್ಗೆ ಹೆಚ್ಚಿನ ಮಹತ್ವವಿದೆ. ಈ ನೋಂಪಿಯ ಬಗ್ಗೆ ಪ್ರಾಚೀನ ಕಾಲದಿಂದಲೂ ಜೈನರು ಕಥೆ, ಕಾವ್ಯ, ಪುರಾಣಗಳಲ್ಲಿ ಪ್ರಸ್ತಾಪಿಸುತ್ತ ಬಂದಿರುವುದನ್ನು ಕಾಣಬಹುದು. ಅಂತಹ ನೋಂಪಿಗಳನ್ನು ಜೈನ ಹಾಡುಗಳಲ್ಲಿ ಹಾಡುಗಾರ ಕಟ್ಟಿಕೊಟ್ಟಿರುವುದನ್ನು ನೋಡುತ್ತೇವೆ.

"ಪುಣ್ಯ ಪಡಿಯುವುದಕ್ಕ ಹುಣಾವಿ ನೋಂಪಿ ಬೆಳಗಬೇಕ
ಸಿದ್ಧಶಾಸ್ತ್ರ ಓದಬೇಕ ಅಹಿಂಸಾದಿಂದ ಸಾಗಬೇಕ
ಸತ್ಯಾಸತ್ಯತೆ ತಿಳಿದ ನಡಿಯಬೇಕ"[೧೮೪]

ಜೈನರಲ್ಲಿ ಪ್ರತಿಯೊಂದು ನೋಂಪಿಗೆ ಒಂದೊಂದು ಪರಿಹಾರ ಅಂಶಗಳನ್ನು ರೂಢಿಸಿರುವುದು ನೋಂಪಿಯ ಕಥೆಗಳಲ್ಲಿ ಕಂಡುಬರುತ್ತವೆ. ಈ ನೋಂಪಿಗಳು ಜೈನಧರ್ಮದ ತತ್ವ ಸಿದ್ಧಾಂತಗಳನ್ನೊಳಗೊಂಡ ಆಚಾರಗಳೇ ಈ ನೋಂಪಿಗಳಾಗಿವೆ. ಸಿದ್ಧಶಾಸ್ತ್ರವನ್ನು ಓದಬೇಕು. ಅಹಿಂಸೆಯಿಂದ ನಡೆಯಬೇಕು ಸತ್ಯಾಸತ್ಯತೆಯನ್ನು ಕಾಯ್ದುಕೊಳ್ಳಬೇಕು. ಇದನ್ನು ತಿಳಿದು ನಡೆದರೆ ಪುಣ್ಯವು ಲಭಿಸುತ್ತದೆ ಎನ್ನುವುದು ಈ ಹಾಡಿನಲ್ಲಿ ಕಂಡುಬರುತ್ತದೆ.

"ತೀರ್ಥಕ್ಷೇತ್ರ ನೋಡಬೇಕ ದಾನಧರ್ಮ ಮಾಡಬೇಕ
ಪುಣ್ಯೇದ ಗಂಟ ಕಟ್ಟಬೇಕ ಮಾಡಿ ಇಟ್ಟಾಂಗ ಸ್ವಾಕ
ದೊರಕೀತ ಮುಂದಿನ ಜನ್ಮಕ್ಕ||[೧೮೫]

ತೀರ್ಥಕ್ಷೇತ್ರದ ಮಹತ್ವವನ್ನು ಹೇಳುತ್ತದೆ. ಇಲ್ಲಿ ಹಿಂದೂಧರ್ಮದ ಪರಿಕಲ್ಪನೆಯಂತೆ ತೀರ್ಥಕ್ಷೇತ್ರಗಳನ್ನು ದರ್ಶನ ಮಾಡುವ ಪರಿ ಜೈನರಲ್ಲಿ ಇದೆ. ದಾನ ಧರ್ಮದಿಂದ ಪುಣ್ಯವನ್ನು ಸಂಪಾದಿಸಿ ಮುಂದಿನ ಜನ್ಮದಲ್ಲಿ ಸಾರ್ಥಕ ಜೀವನ ಪಡೆಯುವ ಆಶಯವನ್ನು ಈ ಹಾಡು ವ್ಯಕ್ತಪಡಿಸುತ್ತದೆ. ಹಾಗೆಯೇ ಕೊನೆಯ ಹಾಡಿನಲ್ಲಿ ಎಲ್ಲರೂ ಸಹ ಜಿನೇಶನ ದರ್ಶನಕ್ಕೆ ಬರಬೇಕು. ಮರಿಕಲ್ಲ ಸಖಿ ಹೇಳಿದ ಬಳಿಕ ಎಂಬುದು ಮರಿಕಲ್ಲ ಎಂಬುವನು ಜೈನ ಕವಿಯಾಗಿರಬೇಕು ಮತ್ತು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ತಿಗಡೊಳ್ಳಿ ಎಂಬ ಊರನ್ನು ಇಲ್ಲಿಯ ಹಾಡುಗಾರ ಪ್ರಸ್ತಾಪಿಸುತ್ತಾನೆ. ಹಾಗೆಯೇ ಮುಂದಿನ 'ಕರೆ ಕರೆ ಕರೆ ಘನ' ಎಂಬ ಹಾಡು ಬೆಡಗಿನ ಹಾಡಾಗಿದೆ.

ಇಬ್ಬರಂತೆಯರೊಳು ಒಬ್ಬಳುಳಿದಳು ಮ
ತ್ತೊಬ್ಬಳ ಕರೆಕರೆದಾರೆ ನಾ
ನಿರ್ಬುದ್ಧಿಯಿಂದೈವರು ಮೈದುನರುಂಟು
ವಿಬುಧಿಯಲ್ಲೆನ್ನ ಬಾಳುವೆಗೆ||"[೧೮೬]

ಎನ್ನುವ ಮೂಲಕ ಪಂಚೇಂದ್ರಿಯಗಳ ವಿಷಯ ವಾಸನೆಯಿಂದ ಆತ್ಮದ ಉನ್ನತಿ ಒಳಿತಿಲ್ಲದ ಸ್ಥಿತಿಯನ್ನು ವಿವರಿಸುತ್ತದೆ. ಹಾಗೆಯೇ ಕೊನೆಯ ಚರಣದಲ್ಲಿ

"ಅರ್ಹನಲ್ಲದೆ ಪರದೈವಕೆರಗನು
ಕೊರಟಗೆರೆಯ ಬ್ರಹ್ಮಸ್ವಾಮಿಯನು
ಸ್ಥಿರದಿಂದ ಬಲ್ಲಿದರೈವರು ಒಡಗೊಂಡು
ಬರುತಲವರು ತವರೂರಿಗೆ||"[೧೮೭]

ನಂಬಿದ ದೈವವನ್ನೇ ತನ್ನ ಕಷ್ಟ ಪರಿಹಾರಕ್ಕೆ ಗಟ್ಟಿಯಾಗಿ ಕೈ ಹಿಡಿವೆನೆಂಬ ದೃಢಸಂಕಲ್ಪವಾಗಿದೆ. ಹಾಗೆಯೇ ಕೊರಟಗೆರೆಯಲ್ಲಿ ನೆಲೆಸಿರುವ ಬ್ರಹ್ಮಸ್ವಾಮಿಯನ್ನು ಅಲ್ಲಿಯ ಸ್ಥಳ ಸಂಸ್ಕೃತಿಯನ್ನು ಪ್ರಸ್ತಾಪಿಸುತ್ತದೆ. 'ಏನಿರಲೇನು ನಿನಗೆ' ಎಂಬ ಹಾಡು ಜೀವನ ಬಾಧಿಸುವ ಪಾಪಾಸ್ತ್ರಗಳನ್ನು ತೊಲಗಿಸಲು ಧ್ಯಾನವೊಂದೇ ಪರಿಹಾರ ಎನ್ನುವ ಹಾಡು ಹೀಗಿದೆ.

"ಧ್ಯಾನವೆಡೆ ಬಿಟ್ಟು ಧರ್ಮಶುಕ್ಲಹಗಳೆಂಬ
ಧ್ಯಾನವ ಮನದ ಕೊನೆಯೊಳಿರಿಸಿ
ಜಾನಂತ್ರಿ ಕೊಲ್ಲಿಪಾಕ ಪುರದಿ
ಜಿನೇಶನ ಜೀವ ನನ್ನಂತರಂಗದೊಳಿಟ್ಟು||"[೧೮೮]

ಇಲ್ಲಿ ಭಕ್ತನು ಪೂಜಿಸುವ ಪರಿಯನ್ನು ಹೇಳುತ್ತಾನೆ. ಹಾಗೆಯೇ "ಜ್ಞಾನಿಹೊರಗೊಂದು ಚಿಂತಿಸದಿರು" "ನಾನಿರಬಂದೆನೇ ಎರವಿದ ಮನೆಯಲ್ಲಿ", "ಬಹುಚಿಂತೆ ನಮಗೇಕೆ", "ಕಷ್ಟ ಸಂಸಾರದೊಳಗೆ ನಾ ತೊಳಲುತಿ" ಎಂಬಂತಹ ಹಾಡುಗಳು ಸಾಧಕನ ಸಾಧನೆಯ ಮಾರ್ಗದ ಆರಂಭದ ಸ್ಥಿತಿಗಳಾಗಿವೆ. ಇದರಿಂದ ಪಾಠ ಮಾಡಲು ಜಿನನಾಥನ, ತೀರ್ಥಂಕರರನ್ನು ನೆನೆಯುವ ಪರಿಪಾಟವಿದೆ. 'ಇರಬಂದನೆ ನಾನಿರಬಂದನೆ' ಎನ್ನುವ ಹಾಡು ಬೆಡಗಿನ ರೂಪಕದಿಂದ ಕೂಡಿದ ಹಾಡಾಗಿದೆ.

ಕೆರೆಯ ಮೇಗಣ ವೃಕ್ಷದ ಪಕ್ಷಿಗೆ
ಮರದ ಕೂಡೊಡೆ ಮರಣವೇ
ಕರಗಿ ಬೀಳುವ ಕಷ್ಟದ ಮೈಯೊಳು
ಪರಮ ನಾ ನಿನ್ನಗಲ್ಪುದು ಬೆರೆದು||"[೧೮೯]

ಹಾಗೆಯೇ

"ಅರು ತಪದೊಳುನಾಗಿ ಸೊಯಿಗೆ
ಮೂರು ದೇಹದ ಒರಳನಿದು
ನೀರೆ ಧ್ಯಾನದ ಒನಕೆವಿಡಿದು
ಕೇರು ಬೇಗ ಬುದ್ಧಿಯ ಮೊರಡಿ||"[೧೯೦]

ಇಂತಹ ಬೆಡಗಿನ ಹಾಡುಗಳು ಜೀವನದ ನಶ್ವರತೆಯನ್ನು ಮಾರ್ಮಿಕವಾಗಿ ಹೇಳುತ್ತವೆ. ಹೀಗೆ ಜೈನ ಹಾಡುಗಳು ಹತ್ತು ಹಲವಾರು ವಸ್ತು ವಿಷಯಗಳನ್ನೊಳಗೊಂಡು ಜೈನಧರ್ಮದ ಚೌಕಟ್ಟಿನಲ್ಲಿಯೇ ಧರ್ಮತತ್ವ

ಸಿದ್ಧಾಂತಗಳನ್ನು ಹೇಳುವುದರ ಮೂಲಕ ಲೋಕನೀತಿ ತತ್ವಗಳನ್ನು ಬಿತ್ತರಿಸುತ್ತವೆ. ಕೇವಲ ಈ ಹಾಡುಗಳು ಜೈನಧರ್ಮದ ಆಚಾರ-ವಿಚಾರ ಸಂಪ್ರದಾಯಗಳಿಗೆ ಸೀಮಿತವಾಗಿರದೆ, ಸಮಾಜದ ಹಸನಾದ ಜೀವನಕ್ಕೆ ಮತ್ತು ಬದುಕಿನ ಸತ್ಯಾಸತ್ಯತೆಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಈ ಹಾಡುಗಳು ಮಹತ್ವವಾಗಿ ಕಾಣಿಸಿ ಕೊಳ್ಳುತ್ತವೆ.

ಇಂತಹ ಜೈನ ಹಾಡುಗಳು ಸಮಗ್ರವಾದ ವಸ್ತು ವಿಷಯಗಳನ್ನೊಳಗೊಂಡ ಆಕರವಾಗಿ ಕಂಡುಬರುವುದು. ಈ ಹಾಡುಗಳಲ್ಲಿ ರಾಮಾಯಣ-ಮಹಾಭಾರತದಂತಹ ಕಥಾ ಸಂದರ್ಭ ಪಾತ್ರಗಳನ್ನು ಪ್ರಸ್ತಾಪಿಸುತ್ತ ಜೀವನದ ಸತ್ಯಾಸತ್ಯತೆಯನ್ನು ತಿಳಿಸಲು ಪ್ರಮುಖವಾಗಿವೆ. ಹಾಗೆಯೇ ಜೈನಹಾಡುಗಳಲ್ಲಿ ವೀರಶೈವ ಧರ್ಮದ ಹೆಚ್ಚು ಪ್ರಭಾವವಿದ್ದಂತೆ ಕಂಡುಬರುವುದರಿಂದ ಅನೇಕ ಪಾರಿಭಾಷಿಕ ಪದಗಳನ್ನು ಈ ಜೈನಹಾಡುಗಳಲ್ಲಿ ಕಂಡುಬರುತ್ತವೆ. ಅನುಭಾವ, ಬಯಲು, ಶರಣ, ಕೈವಲ್ಯ ಹಾಗೆಯೇ ಶಿವಶಂಕರ, ಪರಮೇಶ ಮುಂತಾದವು ಕಂಡುಬರುತ್ತವೆ. ವೈದಿಕ ದಾಸ ಪರಂಪರೆಯಿಂದ ಕೀರ್ತನ ಸಾಹಿತ್ಯವನ್ನು ಈ ಜೈನಹಾಡುಗಳು ಕರಗತ ಮಾಡಿಕೊಂಡಿರುವುದು ಈ ಜೈನಹಾಡುಗಳು ಸಾಕ್ಷಿಯಾಗಿ ನಿಲ್ಲುತ್ತವೆ. ಇಂತಹ ಎಲ್ಲ ಪ್ರಭಾವ, ಪ್ರೇರಣೆ ಹಾಗೂ ಸಾಹಿತ್ಯಕ ಅಂಶಗಳನ್ನು ಪಡೆದುಕೊಂಡಿದ್ದರೂ ಸಹ ಎಲ್ಲಿಯೂ ತನ್ನ ಧರ್ಮದ ತತ್ವ-ಸಿದ್ಧಾಂತಗಳು ಧಾರ್ಮಿಕ ಆಚಾರ-ವಿಚಾರಗಳನ್ನು ಬಿಟ್ಟುಕೊಡದೇ ತನ್ನ ಧರ್ಮದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವುದು ಈ ಹಾಡುಗಳಲ್ಲಿ ಕಂಡುಬರುತ್ತದೆ. ಇದಕ್ಕೆ ಉದಾಹರಣೆಯಾಗಿ ರತ್ನಾಕರನು ವೀರಶೈವ ಧರ್ಮಕ್ಕೆ ಮತಾಂತರ ಹೊಂದಿದ್ದನು ಎಂದು ವಿದ್ವಾಂಸರ ಅಭಿಪ್ರಾಯವಿದೆ. ಇದು ಸತ್ಯವೋ ಅಥವಾ ಸುಳ್ಳೋ ಎಂಬುದು ಬೇರೆ ಸಂಗತಿ. ಆದರೆ ವೀರಶೈವ ಧರ್ಮದ ಪ್ರಭಾವ, ಪ್ರೇರಣೆಯಾಗಿರುವುದು ಕಂಡುಬರುತ್ತದೆ. ಇಲ್ಲಿ ರತ್ನಾಕರ, ಧರ್ಮದ ಶ್ರೇಷ್ಠತೆಗೆ, ಧರ್ಮದ ತತ್ವ ಸಿದ್ಧಾಂತಗಳಿಗೆ ಬದ್ಧನಾಗಿ ನಡೆದಿರುವುದು ಕಂಡುಬರುತ್ತದೆ. ಬೇರೆಯ ಧರ್ಮದ ತತ್ವಗಳಿಗೆ, ಸಿದ್ಧಾಂತಗಳಿಗೆ ಎಲ್ಲಿಯೂ ಮಣೆ ಹಾಕದೇ ಧರ್ಮನಿಷ್ಠೆ, ಧಾರ್ಮಿಕ ನಿಷ್ಠೆಯ ಪರವಾಗಿ ನಿಲ್ಲುತ್ತಾನೆ.

**ಕೊನೆ ಟಿಪ್ಪಣಿಗಳು**

೧. ಹತ್ತು ಶತಮಾನಗಳ ಕನ್ನಡ ಸಾಹಿತ್ಯ, ಇಪ್ಪತ್ತೈದು ಅಧ್ಯಾಯಗಳು, ಸಂಶೋಧನ ಪ್ರಬಂಧ ಮಹಾಸಂಪುಟ. ಪುಟ ೧೬೯.

೨. ರತ್ನಾಕರವರ್ಣಿಯ ಕವಿ, ಕಾವ್ಯ ವಿಚಾರ, ಪುಟ ೧೦೮.

೩. ಅದೇ ಪುಟ ೧೦೮.

೪. ರತ್ನಾಕರನ ಹಾಡುಗಳು, ಪ್ರಸ್ತಾವನೆ, ಪುಟ XXI.

೫. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿಶ್ವವಿದ್ಯಾನಿಲಯ, ಪುಟ ೬೪೨.

೬. ರತ್ನಾಕರನ ಹಾಡುಗಳು, ಹಂಪ ನಾಗರಾಜಯ್ಯ, ಪ್ರಸ್ತಾವನೆ, XXI.

೭. ಜೈನಧರ್ಮದ ಪರಿಭಾಷೆ, ಮ.ಪ್ರ.ಪೂಜಾರ, ಪುಟ ೮೫.

೮. ಜೈನ ಜಾನಪದ ಸಾಹಿತ್ಯ: ತೌಲನಿಕ ಅಧ್ಯಯನ, ಎಸ್.ಪಿ. ಪದ್ಮಪ್ರಸಾದ್, ಪುಟ ೨೪೧.

೯. ಕನ್ನಡ ಜೈನಹಾಡುಗಳು, ಸಂಪಾದನೆ, ಪುಟ ೨, ೩.

೧೦. ಅದೇ ಪುಟ ೯.

೧೧. ಅದೇ ಪುಟ ೯, ೧೦.

೧೨. ಅದೇ ಪುಟ.೧೯

೧೩. ಅದೇ ಪುಟ.೨೦

೧೪. ಅದೇ ಪುಟ ೨೨, ೨೩.

೧೫. ಅದೇ ಪುಟ ೨೮.

೧೬. ಅದೇ ಪುಟ ೨೮, ೨೯.

೧೭. ಅದೇ ಪುಟ ೩೧.

೧೮. ಅದೇ ಪುಟ ೩೧.

೧೯. ಅದೇ ಪುಟ ೬೦, ೬೧.

೨೦. ರತ್ನಾಕರನ ಹಾಡುಗಳು, ಹಂಪ ನಾಗರಾಜಯ್ಯ, ಪುಟ ೩.

೨೧. ರತ್ನಾಕರವರ್ಣಿಯ ಕವಿ, ಕಾವ್ಯ ವಿಚಾರ, ಪುಟ ೮೩.

೨೨. ರತ್ನಾಕರನ ಹಾಡುಗಳು, ಪುಟ ೫.

೨೩. ಜೈನ ಧರ್ಮದ ಮಾನವೀಯ ಮೌಲ್ಯಗಳು, ಪುಟ ೨೯.

೨೪. ಕನ್ನಡ ಜೈನಹಾಡುಗಳು, ಕವಿವಿ, ಪುಟ ೧-೨.

೨೫. ರತ್ನಾಕರನ ಹಾಡುಗಳು, ಹಂಪ ನಾಗರಾಜಯ್ಯ, ಪುಟ ೧೨-೧೩.

೨೬. ಕನ್ನಡ ಜೈನಹಾಡುಗಳು, ಕವಿವಿ, ಪುಟ ೩-೪.

೨೭. ಅದೇ ಪುಟ ೩-೪

೨೮. ಜೈನಧರ್ಮದ ಪರಿಭಾಷೆ, ಮ.ಪ್ರ.ಪೂಜಾರ, ಪುಟ ೧೩೪.

೨೯. ರತ್ನಾಕರನ ಹಾಡುಗಳು, ಹಂಪ ನಾಗರಾಜಯ್ಯ, ಪುಟ ೮೧.

೩೦. ಅದೇ ಪುಟ ೮೧

೩೧. ಅದೇ ಪುಟ ೮೧-೮೨-೮೩.

೩೨. ಅದೇ ಪುಟ.

೩೩. ಅದೇ ಪುಟ.

೩೪. ಅದೇ ಪುಟ.

೩೫. ಅದೇ ಪುಟ.

೩೬. ಜೈನಧರ್ಮದ ಪರಿಭಾಷೆ, ಮ.ಪ್ರ.ಪೂಜಾರ, ಪುಟ ೧೦೭.

೩೭. ಕನ್ನಡ ಜೈನಹಾಡುಗಳು, ಕವಿವಿ, ಪುಟ ೧೦೦-೧೦೧.

೩೮. ಅದೇ ಪುಟ ೪.

೩೯. ಅದೇ ಪುಟ ೮.

೪೦. ಅದೇ ಪುಟ ೮೬.

೪೧. ರತ್ನಾಕರನ ಹಾಡುಗಳು, ಹಂಪ ನಾಗರಾಜಯ್ಯ, ಪುಟ ೧೨೫.

೪೨. ಅದೇ ಪುಟ ೧೯೫.

೪೩. ಕನ್ನಡ ಜೈನಹಾಡುಗಳು, ಕವಿವಿ, ಹಂಪಿ, ಪುಟ ೯೨-೯೩.

೪೪. ಅದೇ ಪುಟ ೧೩೬-೧೩೭.

೪೫. ಅದೇ ಪುಟ ೭೧-೭೨.

೪೬. ಅದೇ ಪುಟ ೮೧-೮೨.

೪೭. ಅದೇ ಪುಟ ೯೭.

೪೮. ರತ್ನಾಕರನ ಹಾಡುಗಳು, ಹಂಪ ನಾಗರಾಜಯ್ಯ, ಪುಟ ೨.

೪೯. ಕನ್ನಡ ಜೈನಹಾಡುಗಳು, ಕವಿವಿ, ಪುಟ ೧೨.

೫೦. ಅದೇ ಪುಟ ೧೫.

೫೧. ಅದೇ ಪುಟ ೧೬

೫೨. ಅದೇ ಪುಟ.೧೭.

೫೩. ಅದೇ ಪುಟ ೧೮.

೫೪. ಅದೇ ಪುಟ ೨೧.

೫೫. ಅದೇ ಪುಟ ೨೨.

೫೬. ಅದೇ ಪುಟ ೨೨-೨೩.

೫೭. ಅದೇ ಪುಟ ೨೩-೨೪.

೫೮. ಅದೇ ಪುಟ ೨೪.

೫೯. ಅದೇ ಪುಟ ೨೫-೨೬.

೬೦. ಅದೇ ಪುಟ ೨೭.

೬೧. ಅದೇ ಪುಟ ೫೩-೫೪

೬೨. ಅದೇ ಪುಟ ೬೦

೬೩. ಅದೇ ಪುಟ ೬೧-೬೨.

೬೪. ಅದೇ ಪುಟ ೬೫.

೬೫. ಅದೇ ಪುಟ ೬೬.

೬೬. ಅದೇ ಪುಟ ೭೫.

೬೭. ಅದೇ ಪುಟ ೧೦೨.

೬೮. ಅದೇ ಪುಟ ೧೦೩.

೬೯. ಅದೇ ಪುಟ ೧೧೭-೧೧೮.

೭೦. ರತ್ನಾಕರನ ಹಾಡುಗಳು, ಹಂಪ ನಾಗರಾಜಯ್ಯ, ಪುಟ ೩೫.

೭೧. ಅದೇ ಪುಟ ೪೦-೪೧.

೭೨. ಅದೇ ಪುಟ ೧೪೯.

೭೩. ಜೈನಧರ್ಮದ ಪರಿಭಾಷೆ, ಮ.ಪ್ರ.ಪೂಜಾರ, ಪುಟ ೧೦೮-೧೦೯.

೭೪. ಅದೇ ಪುಟ.೧೩೪

೭೫. ಕನ್ನಡ ಜೈನಹಾಡುಗಳು, ಪ್ರಸ್ತಾವನೆ, ಕವಿವಿ, ಹಂಪಿ, ಪುಟ ೨೦.

೭೬. ಅದೇ ಪುಟ ೧೩೮.

೭೭. ಅದೇ ಪುಟ ೧೩೮.

೭೮. ಅದೇ ಪುಟ.೧೪೧

೭೯. ಅದೇ ಪುಟ ೧೪೧-೧೪೨-೧೪೩.

೮೦. ಅದೇ ಪ್ರಸ್ತಾವನೆ, ಪುಟ ೨೧.

೮೧. ಅದೇ ಪುಟ ೧೪೬.

೮೨. ಅದೇ ಪುಟ ೧೪೬.

೮೩. ಅದೇ ಪುಟ ೧೪೩.

೮೪. ಅದೇ ಪುಟ ೧೪೮.

೮೫. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿ.ವಿ. ಲೇಖನ, ಅಧ್ಯಾಯ ೭೬, ಪುಟ ೭೧೨.

೮೬. ಕನ್ನಡ ಜೈನಹಾಡುಗಳು, ಕ.ವಿ.ವಿ, ಪುಟ ೧೪೮.

೮೭. ಭಾರತೀಯ ಸಂಸ್ಕೃತಿಗೆ ಜೈನರ ಕೊಡುಗೆಗಳು, ಪುಟ ೬೬.

೮೮. ಕನ್ನಡ ಜೈನಹಾಡುಗಳು, ಕವಿವಿ, ಪುಟ ೧೫೪-೧೫೫-೧೫೬-೧೫೮.

೮೯. ಅದೇ ಪುಟ ೧೫೯.

೯೦. ಅದೇ ಪುಟ ೧೬೦.

೯೧. ಅದೇ ಪುಟ ೧೬೩.

೯೨. ಅದೇ ಪುಟ ೧೬೫.

೯೩. ಅದೇ ಪುಟ ೧೬೬.

೯೪. ಸಾಧನ ಪತ್ರಿಕೆ ಸಂಪುಟ-೨೩, ೧೯೯೪.

೯೫. ಕನ್ನಡ ಜೈನಹಾಡುಗಳು, ಕ.ವಿ.ವಿ, ಪುಟ ೧೬೭.

೯೬. ಕನ್ನಡ ಜೈನಹಾಡುಗಳು, ಕ.ವಿ.ವಿ, ಪುಟ ೧೬೭.

೯೭. ಅದೇ ಪುಟ ೧೭೪-೭೫.

೯೮. ಅದೇ ಪುಟ ೨೦೨-೨೦೩.

೯೯. ಅದೇ ಪುಟ ೨೦೭-೨೦೮.

೧೦೦. ಅದೇ ಪುಟ ೨೧೦.

೧೦೧. ಅದೇ ಪುಟ ೨೧೦-೨೧೧.

೧೦೨. ಅದೇ ಪುಟ ೨೧೧-೨೧೦.

೧೦೩. ಅದೇ ಪುಟ ೨೧೧-೨೧೦.

೧೦೪. ಅದೇ ಪುಟ ೨೧೨-೨೧೩.

೧೦೫. ಅದೇ ಪುಟ ೨೧೯.

೧೦೬. ಯಕ್ಷ-ಯಕ್ಷಣಿಯರು, ಹಂಪಾ ನಾಗರಾಜಯ್ಯ, ಪುಟ.೪೭

೧೦೭. ಯಕ್ಷ-ಯಕ್ಷಣಿಯರು, ಹಂಪ ನಾಗರಾಜಯ್ಯ, ಪುಟ ೧, ಜೈನಹಾಡುಗಳ ಪ್ರಸ್ತಾವನೆ, ಪುಟ ೨೩-೨೪.

೧೦೮. ಅದೇ ಪುಟ ೨.

೧೦೯. ಕನ್ನಡ ಜೈನಹಾಡುಗಳು, ಕ.ವಿ.ವಿ, ಹಂಪಿ, ಪುಟ ೨೪೩-೨೪೪

೧೧೦. ಅದೇ ಪುಟ ೨೪೪-೨೪೫

೧೧೧. ಅದೇ ಪುಟ.೨೪೫

೧೧೨. ಅದೇ ಪುಟ.೨೪೬

೧೧೩. ಅದೇ ಪುಟ ೨೪೯-೨೫೦.

೧೧೪. ಅದೇ ಪುಟ ೨೪೪-೨೫೫.

೧೧೫. ಯಕ್ಷ-ಯಕ್ಷಿಯರು, ಹಂಪಾ ನಾಗರಾಜಯ್ಯ, ಪುಟ ೨೪.

೧೧೬. ಕನ್ನಡ ಜೈನಹಾಡುಗಳು, ಕವಿವಿ, ಹಂಪಿ, ಪುಟ ೨೫೫.

೧೧೭. ಯಕ್ಷ-ಯಕ್ಷಿಯರು, ಹಂಪ ನಾಗರಾಜಯ್ಯ, ಪುಟ ೨೪.

೧೧೮. ಕನ್ನಡ ಜೈನಹಾಡುಗಳ ಪ್ರಸ್ತಾವನೆ, ಪುಟ ೨೬.

೧೧೯. ಕನ್ನಡ ಜೈನಹಾಡುಗಳು, ಕವಿವಿ, ಹಂಪಿ, ಪುಟ ೨೫೭.

೧೨೦. ಅದೇ ಪುಟ ೨೫೭.

೧೨೧. ಅದೇ ಪುಟ ೨೫೮.

೧೨೨. ಅದೇ ಪುಟ ೨೫೮.

೧೨೩. ಅದೇ ಪುಟ ೨೫೯-೨೬೦.

೧೨೪. ಅದೇ ಪುಟ ೨೬೦.

೧೨೫. ಅದೇ ಪುಟ ೨೬೦.

೧೨೬. ವೀರಶೈವ ಪುರಾಣಗಳು : ಒಂದು ಅಧ್ಯಯನ, ವಿದ್ಯಾಶಂಕರ ಎಸ್, ಪುಟ ೫೨.

೧೨೭. ಕನ್ನಡ ಜೈನಹಾಡುಗಳು, ಪುಟ ೨೬೧.

೧೨೮. ಅದೇ ಪುಟ ೨೬೨.

೧೨೯. ಅದೇ ಪುಟ ೨೬೨.

೧೩೦. ಅದೇ ಪುಟ ೨೬೨-೨೬೩.

೧೩೧. ಅದೇ ಪುಟ ೨೬೪.

೧೩೨. ಅದೇ ಪುಟ ೨೬೪.

೧೩೩. ಲೋಕ ಗೀತೆಗಳು ಸೋಬಾನದ ಹಾಡುಗಳು, ಡಾ. ಬಿ.ಎಸ್. ಗದ್ದಿಗಿಮಠ, ಸಂಪಾದಕರು, ಪುಟ ೭೮.

೧೩೪. ಕನ್ನಡ ಜೈನಹಾಡುಗಳು, ಪುಟ ೨೬೯-೭೦.

೧೩೫. ಅದೇ ಪುಟ ೨೭೧.

೧೩೬. ಅದೇ ಪುಟ ೨೭೨.

೧೩೭. ಅದೇ ಪುಟ ೨೭೩.

೧೩೮. ಅದೇ ಪುಟ ೨೭೩.

೧೩೯. ಅದೇ ಪುಟ ೨೭೬.

೧೪೦. ಅದೇ ಪುಟ ೨೮೦.

೧೪೧. ಅದೇ ಪುಟ ೨೮೦.

೧೪೨. ಅದೇ ಪುಟ ೨೮೫..

೧೪೩. ಕನ್ನಡ ಜೈನಹಾಡುಗಳು, ಕವಿವಿ, ಪುಟ ೨೮೯.

೧೪೪. ಅದೇ ಪುಟ ೨೮೯.

೧೪೫. ಅದೇ ಪುಟ ೨೯೧.

೧೪೬. ಅದೇ ಪುಟ ೨೯೧-೨೯೨.

೧೪೭. ಅದೇ ಪುಟ ೨೯೨.

೧೪೮. ಅದೇ ಪುಟ ೨೯೨.

೧೪೯. ಅದೇ ಪುಟ ೨೯೪.

೧೫೦. ಅದೇ ಪುಟ.೨೯೪.

೧೫೧. ಅದೇ ಪುಟ ೨೯೫.

೧೫೨. ಅದೇ ಪುಟ ೨೯೫.

೧೫೩. ಅದೇ ಪುಟ ೨೯೬.

೧೫೪. ಅದೇ ಪುಟ ೨೯೬-೨೯೭.

೧೫೫. ಯಕ್ಷ-ಯಕ್ಷಿಯರು, ಪುಟ ೧೨೧.

೧೫೬. ಕನ್ನಡ ಜೈನಹಾಡುಗಳು, ಕವಿವಿ, ಪುಟ ೨೯೭.

೧೫೭. ಅದೇ ಪುಟ ೨೯೭.

೧೫೮. ಅದೇ ಪುಟ ೨೯೭.

೧೫೯. ಅದೇ ಪುಟ ೨೯೯-೩೦೦.

೧೬೦. ಅದೇ ಪುಟ ೩೦೩.

೧೬೧. ಅದೇ ಪುಟ ೩೦೩.

೧೬೨. ಅದೇ ಪುಟ ೩೦೪.

೧೬೩. ಜೈನಧರ್ಮದ ಪರಿಭಾಷೆ, ಮ.ಪ್ರ.ಪೂಜಾರ, ಪುಟ ೧೦೭.

೧೬೪. ಕನ್ನಡ ಜೈನಹಾಡುಗಳು, ಕವಿವಿ, ಪುಟ ೩೦೫.

೧೬೫. ಅದೇ ಪುಟ ೩೧೨.

೧೬೬. ಅದೇ ಪುಟ ೩೧೯.

೧೬೭. ಅದೇ ಪುಟ ೩೨೧.

೧೬೮. ಅದೇ ಪುಟ ೩೨೧.

೧೬೯. ಅದೇ ಪುಟ ೩೨೪.

೧೭೦. ಅದೇ ಪುಟ ೩೨೫-೨೬.

೧೭೧. ಅದೇ ಪುಟ ೩೨೮.

೧೭೨. ಅದೇ ಪುಟ ೩೩೫.

೧೭೩. ಅದೇ ಪುಟ ೩೪೩.

೧೭೪. ಅದೇ ಪುಟ ೩೫೨.

೧೭೫. ಅದೇ ಪುಟ ೩೮೭.

೧೭೬. ಅದೇ ಪುಟ ೩೮೭.

೧೭೭. ಅದೇ ಪುಟ ೩೯೧.

೧೭೮. ಅದೇ ಪುಟ ೩೯೧.

೧೭೯. ಅದೇ ಪುಟ ೪೦೬.

೧೮೦. ಅದೇ ಪುಟ ೪೦೭.

೧೮೧. ಕನ್ನಡ ಜೈನಹಾಡುಗಳು, ಕವಿವಿ, ಹಂಪಿ, ಪುಟ ೪೦೮.

೧೮೨. ಅದೇ ಪುಟ ೨೩.

೧೮೩. ಕನ್ನಡ ಜೈನ ಹಾಡುಗಳು, ಕವಿವಿ ಹಂಪಿ, ಪುಟ ೪೦೯.

೧೮೪. ಕನ್ನಡ ಜೈನಹಾಡುಗಳು, ಕವಿವಿ, ಹಂಪಿ, ಪುಟ ೪೦೯.

೧೮೫. ಅದೇ ಪುಟ ೪೦೯.

೧೮೬. ಅದೇ ಪುಟ ೩೬೧.

೧೮೭. ಅದೇ ಪುಟ ೩೬೧.

೧೮೮. ಅದೇ ಪುಟ ೩೬೭.

೧೮೯. ಅದೇ ಪುಟ ೩೬೯.

೧೯೦. ಅದೇ ಪುಟ ೩೬೯.

❑❑❑

ಅಧ್ಯಾಯ : ಐದು

# ಕನ್ನಡ ಜೈನ ಹಾಡುಗಳು : ಸಾಂಸ್ಕೃತಿಕ ನಿರ್ವಚನ

## ಅಧ್ಯಾಯ : ಐದು

# ಕನ್ನಡ ಜೈನ ಹಾಡುಗಳು : ಸಾಂಸ್ಕೃತಿಕ ನಿರ್ವಚನ

ಮನುಷ್ಯ ಜೀವನವನ್ನು ರೂಪಿಸುವಲ್ಲಿ ಸಂಸ್ಕೃತಿ ಬಹಳ ಮುಖ್ಯವಾದ ಪಾತ್ರ ವಹಿಸುತ್ತದೆ. ಇಂತಹ ಸಂಸ್ಕೃತಿಯ ಸ್ವರೂಪವನ್ನು ಕುರಿತಂತೆ ಈಗಾಗಲೇ ದೇಶೀಯ ಮತ್ತು ವಿದೇಶಿಯ ವಿದ್ವಾಂಸರು ಬೇರೆ ಬೇರೆ ಕಾಲಘಟ್ಟಗಳಲ್ಲಿ ತಮ್ಮದೇ ಆದ ಪರಿಭಾಷೆಯಲ್ಲಿ ತಮ್ಮ ಅಭಿಪ್ರಾಯಗಳನ್ನು ಅರ್ಥೈಸುತ್ತಾ ಬಂದಿದ್ದಾರೆ. ಹಾಗೆಯೇ ಇಂದಿಗೂ ಸಹ ಸಂಸ್ಕೃತಿಯನ್ನು ಅರ್ಥೈಸುವ ಚಿಂತನೆಗಳು ನಡೆಯುತ್ತಲೇ ಸಾಗಿವೆ. ಈ ಎಲ್ಲಾ ಸಂಸ್ಕೃತಿ ಚಿಂತಕರ ವ್ಯಾಖ್ಯಾನಗಳು, ಮಾನವನನ್ನು ಪ್ರಾಣಿ ಸಮಾಜಕ್ಕಿಂತ ಭಿನ್ನ ಹಾಗೂ ವೈಶಿಷ್ಟ್ಯತೆಯಿಂದ ಕೂಡಿದ್ದಾಗಿದೆ. ಜೊತೆಗೆ ಮನುಷ್ಯನ ಬದುಕನ್ನು ವಿವೇಚಿಸುವ ಒಂದು ಪರಿಕಲ್ಪನೆಯೇ ಸಂಸ್ಕೃತಿಯಾಗಿದೆ ಎಂದು ನಿರ್ವಚಿಸಿದ್ದಾರೆ.

ಸಂಸ್ಕೃತಿ ಸಾಮಾಜಿಕ ಪ್ರಕ್ರಿಯೆಯಾಗಿದ್ದು ಸಮಾಜ ಮತ್ತು ಸಂಸ್ಕೃತಿಗಳ ಸಹಸಂಬಂಧವನ್ನು ಹೊಂದಿರುತ್ತದೆ. ಪ್ರಾದೇಶಿಕವಾಗಿ ಪ್ರತಿಯೊಂದು ಪ್ರದೇಶವು ತನ್ನದೇ ಆದ ಸಂಸ್ಕೃತಿಯ ವೈವಿಧ್ಯತೆಯಿಂದ ಕೂಡಿರುತ್ತದೆ. ಇಂತಹ ಸಂಸ್ಕೃತಿಯ ವೈವಿಧ್ಯತೆಯನ್ನು ತಿಳಿಯಬೇಕಾದರೆ ಅಲ್ಲಿಯ ಜನಾಂಗ, ಸಮುದಾಯ, ವೃತ್ತಿ, ಜೀವನ ವಿಧಾನ, ಆಚಾರ-ವಿಚಾರ, ನಂಬಿಕೆ, ಸಂಪ್ರದಾಯ, ಭಾಷೆ, ಧರ್ಮ, ಸಾಮಾಜಿಕ ಪದ್ಧತಿ, ಕಟ್ಟುಪಾಡುಗಳು ಮುಂತಾದ ಸಂಸ್ಕೃತಿಯ ವಿಶಿಷ್ಟ ಅಂಶಗಳು ಅಲ್ಲಿರಬೇಕಾಗುತ್ತದೆ. ಇಂತಹ ಸಾಂಸ್ಕೃತಿಕ ಅನನ್ಯತೆಯ ಅಂಶಗಳು ಪ್ರತಿಯೊಂದು ಮತಧರ್ಮ, ಜನಾಂಗ, ಸಮುದಾಯಗಳಲ್ಲಿ ಅಡಗಿರುತ್ತದೆ. ಇವುಗಳನ್ನು ಅಧ್ಯಯನ ಮಾಡುವುದರ ಮೂಲಕ ನಮ್ಮ ಹಿಂದಿನ ಮಾನವನ ಬದುಕನ್ನು ನಿರ್ದೇಶಿಸಿರುವ ಸಾಂಸ್ಕೃತಿಕ ಅಂಶಗಳಾದ ಸಾಮಾಜಿಕ, ಆರ್ಥಿಕ, ರಾಜಕಾರಣ, ಸಾಹಿತ್ಯ ಹಾಗೂ ಧಾರ್ಮಿಕ ತತ್ವಗಳ ಮುಖಾಂತರ ವಿವೇಚಿಸುತ್ತಾ ಬರಲಾಗಿದೆ.

ಭಾರತವು ವೈವಿಧ್ಯತೆಯನ್ನು ಒಳಗೊಂಡ ಹಲವು ಸಂಸ್ಕೃತಿಗಳ ನೆಲೆವೀಡಾಗಿದೆ. ಇಲ್ಲಿ ಸಂಸ್ಕೃತಿಯನ್ನು ಎರಡು ಬಗೆಯಲ್ಲಿ ಗುರುತಿಸುತ್ತಾರೆ. ಮೊದಲನೆಯದು 'ವೈದಿಕ ಸಂಸ್ಕೃತಿ', ಎರಡನೆಯದು 'ಶ್ರಮಣ ಸಂಸ್ಕೃತಿ', ಇವೆರಡೂ ಭಾರತದ ಅತ್ಯಂತ ಪ್ರಾಚೀನ ಸಂಸ್ಕೃತಿಗಳು. ಶ್ರಮಣ ಸಂಸ್ಕೃತಿಯಲ್ಲಿ ಜೈನ ಮತ್ತು ಬೌದ್ಧ ಎಂಬ ಎರಡು ಧರ್ಮಗಳು ವಿಕಸಿತಗೊಂಡಿವೆ. ಹೀಗೆ ಕರ್ನಾಟಕದಲ್ಲಿ ವೈದಿಕ, ವೀರಶೈವ, ಜೈನ

ಈ ಮೂರು ಮುಖ್ಯ ವಾಹಿನಿಗಳು ತಮ್ಮ ಮತ-ಧರ್ಮದ ಪ್ರಚಾರ ಹಾಗೂ ತತ್ವ ಸಿದ್ಧಾಂತಗಳ ಪ್ರಚಾರಕ್ಕೆ ಮಹತ್ವದ ಪಾತ್ರ ವಹಿಸಿವೆ. ಜೊತೆಗೆ ಕನ್ನಡ ನಾಡಿನ ಸಂಸ್ಕೃತಿಯ ಶ್ರೀಮಂತಿಕೆಗೆ ಕಾರಣವಾಗಿವೆ. ಈ ಸಂದರ್ಭದಲ್ಲಿ ಜೈನ ಧರ್ಮ ತನ್ನ ಅಸ್ತಿತ್ವ ಹಾಗೂ ತತ್ವಸಿದ್ಧಾಂತಗಳನ್ನು ಉಳಿಸಿಕೊಳ್ಳುವ ಮೂಲಕ ಜನಮುಖಿಯಾಗಿಸಲು ಸಾಕಷ್ಟು ಬಿಕ್ಕಟ್ಟುಗಳನ್ನು ಎದುರಿಸಬೇಕಾಯಿತು. ಹತ್ತನೇ ಶತಮಾನದಲ್ಲಿ ಕರ್ನಾಟಕದಲ್ಲಿ ಜೈನಧರ್ಮ ಅತ್ಯುನ್ನತಿಯನ್ನು ಕಂಡುಕೊಂಡಿತು. ನಂತರ ರಾಜಾಶ್ರಯಗಳು ತಪ್ಪಿದ್ದರಿಂದ ಹಾಗೂ ವೀರಶೈವ ಮತ್ತು ವೈಷ್ಣವ ಧರ್ಮಗಳ ಹೊಸ ಸವಾಲನ್ನು ಎದುರಿಸಬೇಕಾದ ಅನಿವಾರ್ಯ ಪರಿಸ್ಥಿತಿ ಜೈನಧರ್ಮಕ್ಕೆ ಎದುರಾಯಿತು. ಈ ಸಮಯದಲ್ಲಿ ವೀರಶೈವರು ಮತ್ತು ವೈಷ್ಣವರು ತಮ್ಮ ಧರ್ಮದ ಪ್ರಚಾರದಲ್ಲಿ ಪೈಪೋಟಿಯನ್ನು ನೀಡುತ್ತಾ ತಮ್ಮ ತಮ್ಮ ಧರ್ಮದ ವಿಚಾರಗಳನ್ನು ವಿವರಿಸುವಲ್ಲಿ ನಿರತವಾದವು. ಈ ಎರಡು ಧರ್ಮಗಳ ಪೈಪೋಟಿಯಿಂದ ಜೈನಧರ್ಮ ತನ್ನ ಉಳಿವಿಗಾಗಿ ಸಾಕಷ್ಟು ಪ್ರಯತ್ನ ಮಾಡಿತು. ವೀರಶೈವ, ವೈಷ್ಣವ, ಜೈನಧರ್ಮ ಇವುಗಳ ಸಂಘರ್ಷದ ನಡುವೆ ಸಮಾಜದಲ್ಲಿ ಅನೇಕ ಆಚಾರ-ವಿಚಾರಗಳು ಮತ್ತು ಸಾಹಿತ್ಯ ವಲಯದಗಳಲ್ಲಿ ಸಾಕಷ್ಟು ಪರಿವರ್ತನೆ ಕಂಡುಕೊಂಡಿತು. ಹೀಗೆ ತಮ್ಮ ಮತಧರ್ಮದ ಧಾರ್ಮಿಕ ವಿಚಾರಗಳನ್ನು ಲೋಕೋತ್ತರ ಮಾಡಲು, ತಮ್ಮ ಧರ್ಮ ಸಿದ್ಧಾಂತಗಳನ್ನು ಸರಳೀಕರಿಸಲು ಮುಂದಾದರು. ಹೀಗೆ ಕರ್ನಾಟಕದಲ್ಲಿ ಈ ಮೂರು ಧರ್ಮಗಳು ಸಂಸ್ಕೃತಿ, ಸಾಹಿತ್ಯ, ತತ್ವಸಿದ್ಧಾಂತ, ಧಾರ್ಮಿಕ ವಿಚಾರಗಳನ್ನು ಅಳಿಸಲು ಸಾಧ್ಯವಾಗದಂತೆ ಈ ನೆಲದಲ್ಲಿ ಹಾಸುಹೊಕ್ಕಾಗಿ ನಿಂತಿವೆ.

### ೫.೧. ಕರ್ನಾಟಕ ಜೈನಸಂಸ್ಕೃತಿ

ಕರ್ನಾಟಕದಲ್ಲಿ ಜೈನಧರ್ಮವು ಬಹುನಿಕಟವಾದ ಸಂಬಂಧ ಹೊಂದಿದೆ. ಕರ್ನಾಟಕದ ಕಲೆ, ಸಾಹಿತ್ಯ, ಸಂಸ್ಕೃತಿ ಮತ್ತು ಕನ್ನಡ ಭಾಷೆಯ ಪ್ರಾಚೀನತೆಗೆ ಜೈನಧರ್ಮದ ಪಾತ್ರ ಮಹತ್ತರವಾದುದು. ಜೈನಧರ್ಮದಲ್ಲಿ ಎಲ್ಲ ತೀರ್ಥಂಕರರೆಲ್ಲರೂ ಉತ್ತರಭಾರತದಲ್ಲಿ ಜನಿಸಿದರೆ, ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಜೈನಾಚಾರ್ಯರೆಲ್ಲ ಜನಿಸಿದರು. ಜೈನಧರ್ಮದ ಪ್ರಖ್ಯಾತಿಗೆ ಕಾರಣರಾದರು. ಕುಂದಕುಂದ, ಸಮಂತಭದ್ರ, ಪೂಜ್ಯಪಾದ, ಕವಿಪರಮೇಷ್ಠಿ, ವಿದ್ಯಾನಂದಿ, ಆಗಲಂಕ, ವೀರಸೇನ ಮುಂತಾದ ಜೈನಾಚಾರ್ಯರು ಕನ್ನಡ ನಾಡಿನಲ್ಲಿ ಜೈನಧರ್ಮವನ್ನು ಮಾನವೀಯ ನೆಲೆಯಲ್ಲಿ ಹಾಗೂ ವೈಚಾರಿಕ ನಿಲುವುಗಳುಳ್ಳ ಧರ್ಮವಾಗಿಸಿದರು. ಹೀಗೆ ಜೈನಧರ್ಮ ಪ್ರಾಚೀನಕಾಲದಿಂದಲೂ ತನ್ನ ಧಾರ್ಮಿಕ ಮತ್ತು ತತ್ವಸಿದ್ಧಾಂತಗಳನ್ನು ಸಂಸ್ಕೃತಿಯ ಚಹರೆಗಳನ್ನು ಪುರಾಣ, ಚರಿತ್ರೆ, ಐತಿಹ್ಯ, ಸಾಹಿತ್ಯ ಮತ್ತು ಧರ್ಮಗ್ರಂಥಗಳ ಮೂಲಕ ಲೋಕಾರ್ಪಣೆ ಮಾಡುತ್ತ ಬಂದಿದೆ. ಈ ಎಲ್ಲ ಆಕರಗಳು, ತತ್ವಸಿದ್ಧಾಂತಗಳು ಜೈನ ಪುಣ್ಯಪುರುಷರ ಚರಿತ್ರೆಯನ್ನು ಹೇಳುವುದರ ಮೂಲಕ ಜೈನರ ಸಂಸ್ಕೃತಿಯ ಅನನ್ಯತೆಯನ್ನು ಬಿಂಬಿಸುವಲ್ಲಿ ಬಹಳ ಮುಖ್ಯವಾದ ಪಾತ್ರ ವಹಿಸಿವೆ.

ಜೈನಧರ್ಮ ತನ್ನ ಅಸ್ತಿತ್ವದ ನೆಲೆಗೆ ಪ್ರಾಚೀನಕಾಲದಿಂದಲೂ ಅನೇಕ ಮತಧರ್ಮಗಳ ಸಂಘರ್ಷ ಹಾಗೂ ಅವನತಿಗೆ ಒಳಗಾಗುತ್ತ ಬಂದಿದೆ. ಆದರೂ ಸಹ ತನ್ನ ತತ್ವಸಿದ್ಧಾಂತಗಳನ್ನು, ಧಾರ್ಮಿಕ

ವಿಚಾರಗಳನ್ನು ಎಲ್ಲಿಯೂ ಬಿಟ್ಟುಕೊಡದೆ ತನ್ನತನವನ್ನು ಸಾಧಿಸಿರುವುದು ಜೈನಧರ್ಮದ ಮತ್ತೊಂದು ವಿಶೇಷತೆ. ಏಕೆಂದರೆ ಜೈನಧರ್ಮದ ಪ್ರತಿಯೊಂದು ತತ್ತ್ವ ವಿಚಾರಗಳು, ಧಾರ್ಮಿಕ ವಿಚಾರಗಳು, ಸಂಸ್ಕೃತಿಯ, ವಿಧಿ-ವಿಧಾನಗಳು ಒಂದು ವೈಜ್ಞಾನಿಕ ಮತ್ತು ವಿಚಾರಪೂರ್ಣ ಆತ್ಮವಿಜ್ಞಾನವಾಗಿದೆ. "ಜೈನಧರ್ಮವು ಆತ್ಮದ ಸರ್ವಾಂಗೀಣ ವಿಕಾಸ ಜ್ಞಾನೋನ್ನತಿ ಮಾಡಿಕೊಳ್ಳುವ ಮೋಕ್ಷಮಾರ್ಗದ ಧರ್ಮವಾಗಿದೆ. ಜೈನದರ್ಶನ, ಜೈನತತ್ತ್ವಜ್ಞಾನವೂ ಅನ್ಯದರ್ಶನಗಳ ತುಲನೆಯಲ್ಲಿ ಅತ್ಯಂತ ಪ್ರಾಚೀನ ವಿಚಾರಧಾರೆಯುಳ್ಳದರ ಪ್ರತಿನಿಧಿತ್ವವನ್ನು ಮಾಡುವ ಒಂದು ಸ್ವತಂತ್ರವಾದ, ವೈಶಿಷ್ಟ್ಯಪೂರ್ಣವಾದ ದರ್ಶನವಿರುತ್ತದೆ. ಭಾರತೀಯ ದರ್ಶನಗಳು-ವಿಚಾರಶೀಲ ಮತ್ತು ಚಿಂತನಶೀಲ ಪರಂಪರೆಯಲ್ಲಿ ಜೈನದರ್ಶನಕ್ಕೆ ಒಂದು ವಿಶಿಷ್ಟವಾದ ಸ್ಥಾನವಿದೆ. ಜೈನಧರ್ಮವು ಪ್ರತಿಯೊಂದು ತತ್ತ್ವವಿಚಾರಗಳಿಗೂ ಅತ್ಯಂತ ಸೂಕ್ಷ್ಮವಾಗಿ ವಿವೇಚಿಸಿ ಮಾಡುವ ಪ್ರವೃತ್ತಿ ಹಾಗೂ ತರ್ಕಬದ್ಧ, ತರ್ಕಯುಕ್ತ ಶಾಸ್ತ್ರೀಯ ಪದ್ಧತಿಯಿಂದ ಆಲೋಚನೆ, ವಿವೇಚನೆ ಮಾಡಿ 'ಸ್ಯಾದ್ವಾದ' ಅಥವಾ ಅನೇಕಾಂತದ ದೃಷ್ಟಿಕೋನವನ್ನು ಜಗತ್ತಿನಲ್ಲಿರುವ ದ್ರವ್ಯವಸ್ತುಗಳನ್ನು ಪರಿಶೀಲನ ಹಾಗೂ ಆ ವಸ್ತುಗಳ ನಿರ್ಣಯ ಸ್ಪಷ್ಟವಾಗಿ ಬೋಧನೆ ಮಾಡಿಕೊಡುತ್ತದೆ".[೧] ಇಂತಹ ಜೈನ ಧರ್ಮವೂ ಪ್ರತಿಯೊಂದು ವಸ್ತು ಹಾಗೂ ತತ್ತ್ವವಿಚಾರಗಳಲ್ಲಿ ಒಂದು ಮಾನವೀಯ ಪರವಾದ ಅರ್ಥವನ್ನು ಒಳಗೊಂಡಿರುತ್ತದೆ. ಜೈನಧರ್ಮದಲ್ಲಿ ಬರುವಂತಹ ಪ್ರತಿಯೊಂದು ಆಚಾರ-ವಿಚಾರಗಳನ್ನು ಗಮನಿಸಿದಾಗ ಮಾನವನ ಕಲ್ಯಾಣಕ್ಕೆ ಮತ್ತು ಮಾನವನು ಆದರ್ಶ ಜೀವನವನ್ನು ನಡೆಸಲು ಇರಬೇಕಾದಂತಹ ಈ ಎಲ್ಲ ತತ್ತ್ವ ವಿಚಾರಗಳು ಈ ಧರ್ಮದಲ್ಲಿ ಅಡಗಿರುವುದು ಜೈನಧರ್ಮದ ಶ್ರೇಷ್ಠತೆಗೆ ಮತ್ತೊಂದು ಕಾರಣವೆಂತಲೂ ಹೇಳಬಹುದು. ಅಂತಹ ಲಕ್ಷಣಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

ಜೈನರು ದೇವರನ್ನು ಪೂಜಿಸುವ ದೃಷ್ಟಿಕೋನ ವಿಶಿಷ್ಟವಾದುದು. ಏಕೆಂದರೆ ತೀರ್ಥಂಕರರು ಮೊದಲಾದವರನ್ನು ಪೂಜಿಸುತ್ತಾರೆ. ಆದರೆ ಅವರು ತೀರ್ಥಂಕರರ ಅಮರ ಆದರ್ಶಗುಣಗಳ ಮೌಲ್ಯಗಳನ್ನು ಆರಾಧಿಸುತ್ತಾರೆ. ಜೈನಧರ್ಮ ವ್ಯಕ್ತಿಪೂಜೆಯನ್ನು ಗೌರವಿಸದೆ ಆದರ್ಶ ಗುಣಗಳ ಆರಾಧನೆಯನ್ನು ಪ್ರೋತ್ಸಾಹಿಸುತ್ತದೆ. ಈ ಪರಿಕಲ್ಪನೆ ಜೈನರ ವೈಚಾರಿಕತೆಗೆ ಮಹತ್ವವಾದುದು. ಆದರೆ ಇತ್ತೀಚಿನ ದಿನಗಳಲ್ಲಿ ಈ ಪರಿಕಲ್ಪನೆ ಜೈನರಲ್ಲಿ ಕಣ್ಮರೆಯಾಗಿದೆ. ಜೈನರು ಸಹ ಹಿಂದೂ ಧರ್ಮದ ಪೂಜೆ-ವಿಧಿ-ವಿಧಾನಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ಮೊದಲು ಇದ್ದಂತಹ ದೃಷ್ಟಿಕೋನ ಬದಲಾಗಿದೆ.

ಜೈನಧರ್ಮವು 'ಅನೇಕಾಂತವಾದ'ದ ಮೂಲಕ ಸತ್ಯವನ್ನು ಹುಡುಕಲು ಪ್ರಯತ್ನ ಪಡುತ್ತದೆ. ಅಂದರೆ ಸತ್ಯಕ್ಕೆ ಒಂದು ಮುಖವಿಲ್ಲ. ಅದು ಬಹುಮುಖಿಯಾದುದು. ಸತ್ಯ ಜೊತೆಗೆ ಒಂದು ಸಾಧನವೆಂದು ಜೈನಧರ್ಮ ಭಾವಿಸಿದೆ. ಇದಕ್ಕೆ ಉದಾಹರಣೆಯಾಗಿ. ಒಬ್ಬ ಒಂದು ಆನೆಯ ಸೊಂಡಿಲನ್ನು ಮುಟ್ಟಿ ಹಗ್ಗದಂತಿದೆ ಎಂದು ಹೇಳುತ್ತಾನೆ. ಇನ್ನೊಬ್ಬ ಹೊಟ್ಟೆಯನ್ನು ಮುಟ್ಟಿ ಗೋಡೆಯಂತಿದೆ ಎಂದು ವಿವಿಧವಾದ ಅರ್ಥಗಳನ್ನು ಹೇಳುತ್ತಾರೆ. ಈ ಹೇಳಿಕೆಗಳಲ್ಲಿ ಸತ್ಯಾಂಶಗಳನ್ನು ಸಂಗ್ರಹಿಸಿ ಸೂಕ್ತ ರೀತಿಯಲ್ಲಿ ಜೋಡಿಸಿಕೊಂಡಾಗ ಸತ್ಯವೆಂಬ ಆನೆಯ ಚಿತ್ರ ಮನಸ್ಸಿನಲ್ಲಿ ರೂಪುಗೊಳ್ಳುತ್ತದೆ. ಹಾಗೆಯೇ ವೈದಿಕರ ಪುರಾಣ-ಕಾವ್ಯಗಳಲ್ಲಿ ಬರುವಂತಹ ಎಲ್ಲ ಖಳನಾಯಕರು, ಜೈನಧರ್ಮದ ಕಾವ್ಯಗಳಲ್ಲಿ ಉದಾತ್ತ ಗುಣಗಳನ್ನು

ಹಾಗೂ ಅವರ ವೀರ-ಪರಾಕ್ರಮಗಳನ್ನು ಕೊಂಡಾಡಿದ್ದಾರೆ. ಹೀಗೇ ಸತ್ಯಕ್ಕೆ ಬಹುಮುಖವಾದ ನೆಲೆಗಳು ಇರುತ್ತವೆ. ಇದನ್ನೇ ಜೈನಧರ್ಮ ತನ್ನ ಅಭಿಪ್ರಾಯ ಸರಿ ಎಂಬ ಹಠಮಾರಿತನವನ್ನು ಬಿಡಬೇಕು. ಹಾಗೆಯೇ ಪರರ ಅಭಿಪ್ರಾಯಗಳನ್ನು ಆಸಕ್ತಿಯಿಂದ ಕೇಳುವ ಸಹನೆ ತೋರಬೇಕು. ಇದು ಅನೇಕಾಂತ ದೃಷ್ಟಿಯಿಂದ ಚರ್ಚೆ ಅರ್ಥಪೂರ್ಣವಾಗುವುದು. ಈ ಕಾರಣದಿಂದಲೇ ಜೈನಧರ್ಮ ಇಂದಿಗೂ ತನ್ನ ವಿಶಿಷ್ಟತೆಯನ್ನು ಕಾಪಾಡಿಕೊಂಡಿರುವುದಕ್ಕೆ ಕಾರಣವೆಂದು ಹೇಳಬಹುದು.

೧. ಜೈನರಲ್ಲಿ ಆತ್ಮದ ಪರಿಕಲ್ಪನೆ ರಾಗ ದ್ವೇಷಗಳಿಂದ ರಹಿತವಾದುದು, ನಿರ್ವಿಕಲ್ಪ ಮನಸ್ಸೇ ನಿಜವಾದ "ಆತ್ಮ" ಜೈನಧರ್ಮದ ಪ್ರಶಾಂತ ಆತ್ಮವೂ ಸ್ವತಂತ್ರವಾದುದು.

೨. ಜೈನಧರ್ಮದ ಅಹಿಂಸೆಯ ಪರಿಕಲ್ಪನೆ ಬಹಳ ಉನ್ನತವಾದುದು. ಇದು ಜೈನಧರ್ಮದ ಜೀವಂತಿಕೆಯಾಗಿದೆ. "ಅಹಿಂಸಾ ಪರಮೋಧರ್ಮ" ಎಂಬುದು ಜೈನಧರ್ಮದ ಧ್ಯೇಯ ವಾಕ್ಯವಾಗಿದೆ. ಇದರಲ್ಲಿ ಹಲವಾರು ಹಿಂಸೆಗಳ ವಿಧಗಳನ್ನು ಪರಿಚಯಿಸುತ್ತಾರೆ.

೩. ಕೇವಲಜ್ಞಾನ ಜೈನಧರ್ಮದ ಮತ್ತೊಂದು ವಿಶೇಷವಾದ ಅಂಶ. ಅಹಿಂಸೆ, ಸತ್ಯ, ಅಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯೆ ಇವುಗಳ ಪರಿಪಾಲನೆಯ ಮೂಲಕ ಮನುಷ್ಯ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನಗಳು ಲಭಿಸುತ್ತವೆ. ಹಾಗೆಯೇ ಜೈನಧರ್ಮದಲ್ಲಿ ಇವರಿಗೆ ಮೋಕ್ಷ ಪದವಿ ಲಭಿಸುತ್ತದೆ ಎಂಬ ಬಲವಾದ ನಂಬಿಕೆಯಾಗಿದೆ.

೪. ಜೈನಧರ್ಮದ ರತ್ನತ್ರಯಗಳು: ಜೈನಧರ್ಮದ ಬಹುಮುಖ್ಯವಾದ ಮೂರು ತಾತ್ವಿಕ ಅಂಗಗಳು ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ ಮತ್ತು ಸಮ್ಯಕ್ ಚಾರಿತ್ರ್ಯ. ಈ ಮೂರಕ್ಕೂ ರತ್ನತ್ರಯ ಎಂದು ಹೆಸರು. ಇವುಗಳ ಮೂಲಕ ಮೋಕ್ಷ ಪದವಿಯನ್ನು ಪಡೆಯಲು ಸಾಧನವಾಗಿವೆ.

೫. ಜೈನಧರ್ಮದಲ್ಲಿ 'ಕರ್ಮದ' ಪರಿಕಲ್ಪನೆ ಬಹಳ ತರ್ಕಯುಕ್ತವಾದುದು. "ಜೀವ-ಅಜೀವದೊಡನೆ ಕೂಡಿದಾಗ ಕೆಲಸ ಮಾಡುತ್ತದೆ. ಈ ಕೆಲಸದ ಫಲವೇ ಕರ್ಮ. ಕರ್ಮ ಪುದ್ಗಲರೂಪವಾದದ್ದು. ಸೂಕ್ಷ್ಮವಾದ ಕರ್ಮ ಪುದ್ಗಲ ಜೀವದ ಮೇಲೆಲ್ಲ ಲೇಪವಾಗಿ ಜೀವಕ್ಕೆ ಬಂಧನವಾಗಿ ಪರಿಣಮಿಸುತ್ತದೆ. ಈ ಕರ್ಮಬಂಧನ ಜೀವದ ಊರ್ಧ್ವಗತಿಯನ್ನು ಪಡೆದು, ಕೆಳಗಿಳಿದು ಅದನ್ನು ಸಂಸಾರದಲ್ಲಿ ಸಿಕ್ಕಿಸುತ್ತದೆ. ಜೀವಕರ್ಮದ ಹೊರೆ ಹೊತ್ತು ತನ್ನ ಅನಂತಚತುಷ್ಟಯವನ್ನು ಕಳೆದುಕೊಂಡು ಹುಟ್ಟು ಸಾವುಗಳ ಚಕ್ರದಲ್ಲಿ ತೊಳಲುತ್ತಿರ ಬೇಕಾಗುತ್ತದೆ".[೨] ಕರ್ಮಗಳನ್ನು ಎರಡು ವಿಧಗಳಾಗಿ ವಿಂಗಡಿಸುತ್ತಾರೆ. "ಒಂದು ಘಾತಿಕರ್ಮ, ಇನ್ನೊಂದು ಅಘಾತಿಕರ್ಮ. ಇವುಗಳನ್ನು ನಾಲ್ಕು ವಿಧಗಳನ್ನಾಗಿ ವಿಭಾಗಿಸುತ್ತಾರೆ. ಘಾತಿಕರ್ಮಗಳು:- ೧. ಜ್ಞಾನಾವರಣೀಯ ೨. ದರ್ಶನಾವರಣೀಯ ೩. ಅಂತರಾಯ ೪. ಮೋಹನೀಯ. ಅಘಾತಿಕರ್ಮಗಳು:- ೧. ಆಯುಃಕರ್ಮ ೨. ನಾಮಕರ್ಮ ೨. ಗೋತ್ರಕರ್ಮ ೪. ವೇದನೀಯಕರ್ಮ".[೩] ಇವು ಜೈನಧರ್ಮದಲ್ಲಿರುವಂತಹ ಕರ್ಮದ ವಿಚಾರಗಳು.

೬. ಜೈನರಲ್ಲಿ ಪಂಚಪರಮೇಷ್ಠಿಗಳ ಸ್ಥಾನ ಮಹತ್ವವಾದುದು. ಜೈನರು ಪೂಜಿಸುವುದು ಪ್ರಾರ್ಥಿಸುವುದು ಈ ಪಂಚಪರಮೇಷ್ಠಿಗಳನ್ನು. ಪಂಚಪರಮೇಷ್ಠಿಗಳಾದ ಅರ್ಹತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು

ಇವರು ತಪಸ್ಸಿನಿಂದ ಘಾತಿ ಕರ್ಮಗಳನ್ನೆಲ್ಲಿ ನಾಶ ಮಾಡಿ ಕೇವಲಜ್ಞಾನ ಪಡೆದು ಜೀವನ್ಮುಕ್ತರಾದವರು. ಇವರನ್ನು ಸಂಯೋಗ ಕೇವಲಿಗಳೆಂದು ಕರೆಯುತ್ತಾರೆ. ಪ್ರತಿಯೊಬ್ಬ ಜೈನರು ಇವರನ್ನು ನಮಸ್ಕರಿಸುವ ಪರಿಪಾಟ ಕಾಲ ಕಾಲದಿಂದಲೂ ನಡೆಯುತ್ತಾ ಬಂದಿದೆ. ಹೀಗೆ ಜೈನಧರ್ಮ ಹಲವಾರು ಧಾರ್ಮಿಕ ಆಚರಣೆಗಳು ತತ್ವ-ಸಿದ್ಧಾಂತಗಳನ್ನು ಪ್ರಚಾರಪಡಿಸುತ್ತ ಮತ್ತು ಸರಳೀಕರಿಸುತ್ತ ಬಂದಿರುವುದು ಗಮನೀಯ ವಾದುದು. ಹೀಗೆ ಹತ್ತು ಹಲವಾರು ವಿಚಾರಗಳನ್ನು ಜೈನಧರ್ಮವು ಗರ್ಭೀಕರಿಸಿಕೊಂಡು ಅದನ್ನು ಕಾಪಾಡುತ್ತ ಮತ್ತು ಸರ್ವಮಾನ್ಯ ಮಾಡುತ್ತ ಬಂದಿದೆ. ಇಂತಹ ಅನೇಕ ವಿಚಾರಗಳನ್ನು ಸಾಂಸ್ಕೃತಿಕ ಅಧ್ಯಯನದಡಿಯಲ್ಲಿ ವಿವೇಚಿಸುವುದು ಅಗತ್ಯವಾಗಿದೆ.

ಒಂದು ರಾಷ್ಟ್ರದ ಅಥವಾ ಒಂದು ನಾಡಿನ ಚರಿತ್ರೆಯು ಸಾಮಾನ್ಯವಾಗಿ ಅಲ್ಲಿಯ ಜನಜೀವನ-ಅವರ ಆಚಾರ-ವಿಚಾರ ಮತ್ತು ಸಂಸ್ಕೃತಿಯನ್ನು ಒಳಗೊಂಡಿರುತ್ತದೆ. ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡ ಬೇಕೆಂದರೆ ಸಾಹಿತ್ಯದ ಅಗತ್ಯ ಬಹಳವಾಗಿರುತ್ತದೆ. ಏಕೆಂದರೆ ಅದರಲ್ಲಿ ವಿಕಸಿತಗೊಂಡಿರುವ ಚಾರಿತ್ರಿಕಪ್ರಜ್ಞೆ ಹಾಗೂ ಆಕೃತಿಯ ಬಗ್ಗೆ ಮಾಡಬಹುದಾದ ವಿಮರ್ಶೆಯನ್ನು ಇವೆರಡನ್ನೂ ಒಟ್ಟುಗೂಡಿಸಿಯೇ ಕಾವ್ಯವನ್ನು ಗ್ರಹಿಸಬೇಕಾಗುತ್ತದೆ. ಸಾಹಿತ್ಯ ಸಾಂಸ್ಕೃತಿಕ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ. ಸಾಹಿತ್ಯಕೃತಿಯೊಂದು ರಚನೆಯಾದ ಕಾಲದ ಜನರ ಆಚಾರ-ವಿಚಾರ, ಸಂಪ್ರದಾಯ ನಂಬಿಕೆಗಳು, ಸಮಾಜದ ಚಿತ್ರಣ ಆಕೃತಿಯಲ್ಲಿ ಸೇರಿರುತ್ತವೆ. ರಾಜಕೀಯ ವಿಚಾರಗಳು, ಮೌಲ್ಯಗಳು, ಆಳರಸರ ಚರಿತ್ರೆ ಸಾಹಿತ್ಯ ಕೃತಿಯ ಮೇಲೆ ಪ್ರಭಾವ ಬೀರಿರುತ್ತದೆ. ಹೀಗೆ ಜೈನಧರ್ಮದ ಸಾಹಿತ್ಯವನ್ನು ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ವಿವೇಚಿಸಿದಾಗ, ಜೈನರ ಪ್ರಾಚೀನ ಸಾಹಿತ್ಯದಿಂದ ಇಂದಿನ ಸಾಹಿತ್ಯದವರೆಗೂ ಅವರ ಸಂಸ್ಕೃತಿಯನ್ನು ಬಿಂಬಿಸುವ ಕೆಲಸ ಮಾಡುತ್ತ ಬಂದಿದೆ.

"ಪ್ರಾಚೀನ ಕಾವ್ಯಗಳಲ್ಲಿ ಕವಿ ತನ್ನ ಸುತ್ತಲೂ ಜಗತ್ತಿನಿಂದ ಪಡೆದ ಜೀವನಾನುಭವಗಳನ್ನು ಬೇರೆ ಬೇರೆ ಸ್ವರೂಪಗಳಲ್ಲಿ ಹಿಡಿದಿಟ್ಟಿದ್ದಾನೆ. ಲೌಕಿಕ ಬಂಧಗಳ, ಅಲೌಕಿಕಗಳಲ್ಲಿ ಒಟ್ಟು ಕಾವ್ಯದ ಮುಖ್ಯ ಆಲೋಚನೆಗಳನ್ನು ವಿವರಿಸುವ ಬಂಧಗಳಾಗಿವೆ. ಕವಿಯು ಅಭಿವ್ಯಕ್ತಿಸಲು ಬಯಸುವ ಚಾರಿತ್ರಿಕಪ್ರಜ್ಞೆಯ ಅಂಶಗಳು ಕಾವ್ಯದ ವಸ್ತುವಿನಲ್ಲಿ ಅಂದರೆ ವಸ್ತು ಸ್ವಂತದ್ದೇ ಆಯ್ಕೆ ಮಾಡಿಕೊಂಡು ವಸ್ತುವಿನ ಮೂಲಕ ಹಿಡಿದಿಡುವ ತನ್ನ ಕಾಲದ ಚಾರಿತ್ರಿಕಾಂಶಗಳು ಮತ್ತು ಅದು ವಿವರಿಸಲ್ಪಡುವ ಮಾನವ ಬದುಕಿನ ವೈಚಾರಿಕ ನೆಲೆಗಳು ಇವೆರಡು ದ್ವಂದ್ವದಲ್ಲಿಯೇ ಹುಟ್ಟಿಕೊಳ್ಳುತ್ತವೆ. ಕಾವ್ಯದ ಆಂತರಿಕ ಸ್ವರೂಪ ಹಾಗೂ ಅದರ ಮೇಲೆ ಪ್ರಭಾವ ಬೀರಿರುವ ಸಾಂಸ್ಕೃತಿಕ ಕಾರಣಗಳು ಕೃತಿಯ ಚಾರಿತ್ರಿಕ ಸಂದರ್ಭವನ್ನು ಹಾಗೂ ಕೃತಿಯು ಸಾಧಿಸುವ ಸಾರ್ವಕಾಲಿಕ ಅಂಶಗಳು ಇವುಗಳ ಒಂದರೊಡನೊಂದು ಸಂಬಂಧವೇರ್ಪಡಬೇಕಾಗುತ್ತದೆ. ಶ್ರೇಷ್ಠ ಸಾಹಿತ್ಯ ರಚನೆಗಳು ವಿವರಿಸುವ ಚಾರಿತ್ರಿಕಪ್ರಜ್ಞೆ ಮನುಷ್ಯಜೀವನವನ್ನು ಗ್ರಹಿಸಲು ಮಾಡಿದ ಉತ್ತಮ ಪ್ರಯತ್ನವೆಂದೇ ಹೇಳಬೇಕು."[೪] ಇಂತಹ ಚಾರಿತ್ರಿಕಪ್ರಜ್ಞೆಯ ಅಂಶಗಳು ಕನ್ನಡ ಜೈನಹಾಡುಗಳಲ್ಲಿ ಹೆಚ್ಚಿನ ಆದ್ಯತೆ ಪಡೆಯದಿರುವುದು ಕಾಣುತ್ತದೆ. ಇವುಗಳ ಉದ್ದೇಶ ಸ್ತುತಿಪ್ರಧಾನ ಹಾಡುಗಳಾಗಿರುವುದರಿಂದ ಇವುಗಳಿಂದ ಆ ಕಾಲದ ಜನಜೀವನವನ್ನು ಚಿತ್ರಿಸಲು ಸಾಧ್ಯವಾಗುವುದಿಲ್ಲ. ಕಾರಣ ಜೈನಹಾಡುಗಳು ರಚನೆಯ

ಸಂದರ್ಭ ಒಂದು ಒತ್ತಡದ ಅನಿವಾರ್ಯ ಸ್ಥಿತಿಯೊಳಗೆ ರೂಪುಗೊಂಡಿರುವುದು ವಚನಗಳ ಉದಯದಿಂದ ಕನ್ನಡ ನಾಡಿನಲ್ಲಿ ಸಾಮಾಜಿಕ, ಸಾಹಿತ್ಯಕ, ವಿಷಯಗಳಲ್ಲಿ ಮಹತ್ವಪೂರ್ವ ಬದಲಾವಣೆಗಳಾದವು. ಮಹಮದೀಯರ ಆಗಮನ, ದಾಸ ಸಾಹಿತ್ಯದ ಉಗಮ, ರಾಜಕೀಯ ಸ್ಥಿತ್ಯಂತರಗಳಿಂದ ನಾಡಿನ ಸಾಂಸ್ಕೃತಿಕ ಜೀವನದಲ್ಲಿ ವ್ಯತ್ಯಾಸ ಉಂಟಾದವು. ಸಾಹಿತ್ಯದ ಭಾಷೆ, ವಸ್ತುರೂಪ ಮೊದಲಾದ ಅಂಶಗಳಲ್ಲಿ ಅವಸ್ಥಾಂತರಗಳಾದವು. ವಚನಕಾರರ ನಂತರ ಲಘುರಚನೆ ಪ್ರಾರಂಭವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಸಾಹಿತ್ಯ ಸೃಷ್ಟಿಯಾಯಿತು. ಸಾಹಿತ್ಯ ರಚನೆಯಲ್ಲಿ ಹೆಚ್ಚು ಜನ ಪಾಲ್ಗೊಂಡರು. ರಾಜಾಶ್ರಯದಿಂದ ಮುಕ್ತಗೊಂಡು ಸಾಹಿತ್ಯ ಸಾಮಾನ್ಯ ಜನತೆಯಿಂದಲೂ ರಚನೆಯಾಗತೊಡಗಿತು.

ವಚನಕಾರರು ಹಾಗೂ ದಾಸರು ಧರ್ಮಕ್ಕೆ ಅಂಟಿದ ಢಾಂಬಿಕತೆಯನ್ನು ತಿರಸ್ಕರಿಸಿ ಭಕ್ತಿಗೆ ಪ್ರಾಮುಖ್ಯತೆ ನೀಡಿದರು. ವೀರಶೈವ ಮತ್ತು ವೈದಿಕ ಧರ್ಮಗಳ ದಾರ್ಶಕನಿಕರು ಕನ್ನಡ ನಾಡಿನ ಸಾಂಸ್ಕೃತಿಕ ಜೀವನಕ್ಕೆ ಹೊಸ ತಿರುವನ್ನು ಉಂಟುಮಾಡಿದರು. ಜೈನಧರ್ಮ ಈ ಹೊಸ ಗಾಳಿಗೆ ತತ್ತರಿಸುವಂತಾಯಿತು. ಶರಣರು ದಾಸರನ್ನು ಅನುಸರಿಸಿ ಹಾಡುಗಳ ರಚನೆಗೆ ತೊಡಗುವುದರ ಜೊತೆಗೆ ಅವರ ಸಾಹಿತ್ಯಕ ವಿಚಾರಗಳು ಧರ್ಮ ಸಿದ್ಧಾಂತಗಳನ್ನು ಬಿಟ್ಟುಕೊಡದೆ ಜೈನಧರ್ಮದ ತಾತ್ವಿಕ ವಿಚಾರಗಳನ್ನು ಹಾಡುಗಳಲ್ಲಿ ಪ್ರತಿಪಾದಿಸಿದರು. ಜೊತೆಗೆ ಧರ್ಮೋನ್ನತಿ ಅವರ ಆಶಯವಾಗಿದ್ದರಿಂದ ಇಲ್ಲಿ ಸಾಂಸ್ಕೃತಿಕ ಅಂಶಗಳು ಗೌಣ. ಧರ್ಮ ಕೀರ್ತನೆಗೆ, ನೀತಿ ನಿರೂಪಣೆಗೆ ಹೆಚ್ಚು ಒತ್ತು ಕೊಟ್ಟರು. ಈ ಜೈನ ಹಾಡುಗಳನ್ನು ಅಧ್ಯಯನ ದೃಷ್ಟಿಯಿಂದ ಪರಿಭಾವಿಸಿದಾಗ ಅವರ ಸಾಂಸ್ಕೃತಿಕ ಅನನ್ಯತೆಯು ಕಂಡುಬರುತ್ತದೆ.

### ೫.೨. ತೀರ್ಥಂಕರರ ಚರಿತ್ರೆಗಳು

ಜೈನಧರ್ಮವು ತೀರ್ಥಂಕರರಿಗೆ ಅಗ್ರಸ್ಥಾನವನ್ನು ನೀಡಿದೆ. ಜೈನರಲ್ಲಿ ದೇವರ ಕಲ್ಪನೆಯಿಲ್ಲವಾದರೂ, ಆತ್ಮಕ್ಕೆ ತುಂಬ ಪ್ರಾಶಸ್ತ್ಯವಿದೆ. ತೀರ್ಥಂಕರರು ಅಂದರೆ ನಾಲ್ಕು ರೀತಿಯ ಘಾತಿಕರ್ಮಗಳನ್ನು ನಾಶ ಮಾಡಿಕೊಂಡು, ಅನಂತ ಜ್ಞಾನ, ಅನಂತ ದರ್ಶನ, ಅನಂತ ಸುಖವೀರ್ಯಗಳನ್ನು ಶುಭ್ರ ದೇಹಿಗಳು ಮತ್ತು ಪರಿಶುದ್ಧರು ಎಂಬುದು ಜೈನಧರ್ಮೀಯರ ಪರಿಕಲ್ಪನೆಯಾಗಿದೆ. ಈ ತೀರ್ಥಂಕರರು ಹದಿನೆಂಟು ರೀತಿಯ ವಿಷಾದಗಳಿಂದ, ದೋಷಗಳಿಂದ ಮುಕ್ತರಾದವರು. ಭೂಮಿಯ ಪಾಪವನ್ನು ಹಗುರ ಮಾಡಲಿಕ್ಕೆ, ತಾಮಸ ಹೃದಯವನ್ನು ಬೆಳಗಿಸುವುದಕ್ಕೆ ಈ ಭೂಮಿಯ ಮೇಲೆ ಜನ್ಮ ತಾಳಿದ್ದಾರೆ. ಎಂಬುದು ಜೈನಧರ್ಮದಲ್ಲಿರುವ ವಿಶೇಷ ಪರಿಕಲ್ಪನೆಯಾಗಿದೆ. ಇಂತಹ ವಿಶೇಷವಾದ ನಂಬಿಕೆಯನ್ನು ಆಧಾರಿಸಿ ಜೈನಧರ್ಮವು ಆ ಮೂಲಕ ತೀರ್ಥಂಕರರನ್ನು ಲೋಕೋದ್ಧಾರಕವಾಗಿಸಿಕೊಂಡು ಒಂದು ಪರಿಶುದ್ಧವಾದ ಸಮಾಜವನ್ನು ನಡೆಸುವ ಎಲ್ಲ ಗುಣಗಳನ್ನು ಈ ತೀರ್ಥಂಕರರಿಗೆ ಮೈಗೂಡಿಸಿಕೊಂಡಿದೆ. ಆ ಮೂಲಕ ತನ್ನ ಧರ್ಮಪ್ರಸಾರ ಮತ್ತು ಧಾರ್ಮಿಕ ತತ್ತ್ವವಿಚಾರಗಳಲ್ಲಿ ಸಮೀಕರಿಸಿದ್ದಾರೆ.

ಜೈನಧರ್ಮದಲ್ಲಿ ಬರುವ ೨೪ ಜನ ತೀರ್ಥಂಕರರು ಒಂದೊಂದು ಯುಗದಲ್ಲಿ ಮಾನವನ ವಿಕಾಸ ಮತ್ತು ಅಭಿವೃದ್ಧಿಗೆ ಮಾರ್ಗದರ್ಶಕರಾಗಿ ಕಂಡುಬರುತ್ತಾರೆ. ಇಲ್ಲಿ ತೀರ್ಥಂಕರರನ್ನು ವರ್ತಮಾನ, ಭೂತಕಾಲ, ಭವಿಷ್ಯತ್‌ಕಾಲದ ತಲಾ ೨೪ ಜನ ತೀರ್ಥಂಕರರನ್ನು ವರ್ಗೀಕರಿಸಿರುವುದು ಜೈನಧರ್ಮದ ಚರಿತ್ರೆಯಲ್ಲಿ

ನೋಡಬಹುದು. ನಾವಿಲ್ಲಿ ವರ್ತಮಾನಕಾಲದ ತೀರ್ಥಂಕರರ ಚರಿತ್ರೆಗಳನ್ನು ಮಾತ್ರ ಗಮನಿಸಲಾಗಿದೆ. ಈ ತೀರ್ಥಂಕರರ ಚರಿತ್ರೆಗಳನ್ನು ಪ್ರಸಾರ ಮಾಡಲು ಅನೇಕ ಜೈನ ಮುನಿಗಳು ಮತ್ತು ಜೈನಕವಿಗಳು ಸಂಸ್ಕೃತ, ಪ್ರಾಕೃತ ಮತ್ತು ಕನ್ನಡದಲ್ಲಿ ತಮ್ಮ ಅಮೋಘವಾದ ಧಾರ್ಮಿಕ ಸಾಹಿತ್ಯ ಕೃತಿಗಳ ಮೂಲಕ ಪ್ರಚಾರ ಪಡಿಸಿದರು. ಕನ್ನಡದ ಜೈನ ಧಾರ್ಮಿಕ ಕಾವ್ಯಗಳಲ್ಲಿ ತೀರ್ಥಂಕರರ ಚರಿತ್ರೆಯನ್ನು ತಮ್ಮದೇ ಆದಂತಹ ವಿಶಿಷ್ಟವಾದ ಶೈಲಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಲೋಕಾಕರ ಕಥನ, ತೀರ್ಥ ಮಹಿಮಾ, ಸಮರ್ಥನ ಚತುರ್ಗತಿ, ಸ್ವರೂಪ, ನಿರೂಪಣ, ತಪೋದಾನ, ವಿಧಾನ, ವರ್ಣನ ಮತ್ತು ತತ್ಫಲಪ್ರಾಪ್ತಿ ಪಂಚಲಕ್ಷಣಗಳನ್ನು ಇಟ್ಟುಕೊಂಡು ಅವರ ಹುಟ್ಟು, ಜನ್ಮಾಭಿಷೇಕ ಕಲ್ಯಾಣ, ಪರಿನಿಷ್ಕ್ರಮಣ ಕಲ್ಯಾಣ, ಕೇವಲಜ್ಞಾನ, ಪರಿನಿರ್ವಾಣ ಎಂಬ ಪಂಚಕಲ್ಯಾಣಗಳ ಮೂಲಕ ತೀರ್ಥಂಕರರ ಚರಿತ್ರೆಯನ್ನು ಕಟ್ಟಿಕೊಡುತ್ತ ಬಂದಿದ್ದಾರೆ. ಪ್ರತಿಯೊಬ್ಬ ತೀರ್ಥಂಕರರ ಕಾವ್ಯಗಳಲ್ಲಿ ಧರ್ಮಧರನಾದ ತೀರ್ಥಂಕರರು, ಚಕ್ರಧರರಾದ ಚಕ್ರವರ್ತಿಗಳು ಅವರವರ ಕಾಲಗಳಲ್ಲಿದ್ದ ನಾರಾಯಣ, ವಾಸುದೇವ, ಪ್ರತಿವಾಸುದೇವರುಗಳ ಚರಿತವೇ ಜೈನ ಪುರಾಣವಾಗಿದೆ. ಇಲ್ಲಿ ತೀರ್ಥಂಕರರ ಭವಾವಳಿಗಳನ್ನು ಮತ್ತು ಪಂಚಕಲ್ಯಾಣಗಳನ್ನು ವಿವರಿಸುವುದರ ಜೊತೆಗೆ ಜೈನಧರ್ಮವನ್ನು ಬೋಧಿಸುತ್ತವೆ. "ಕರ್ಮಬದ್ಧವಾಗಿ ಚತುರ್ಗತಿರೂಪವಾದ ಸಂಸಾರದಲ್ಲಿ ತೊಳಲುತ್ತಿರುವ ಜೀವನ ತನ್ನ ಪಾಪಗಳ ಫಲವಾಗಿ ಕರ್ಮಬಂಧನವನ್ನು ಹೆಚ್ಚಿಸಿಕೊಂಡು ನರಕವಾಸಿಯಾಗಿ ಕಷ್ಟವನ್ನನುಭವಿಸುವುದಕ್ಕೂ ಪುಣ್ಯದ ಫಲವಾಗಿ ಕರ್ಮಬಂಧನವನ್ನು ಕಡಿಮೆ ಮಾಡಿಕೊಂಡು ಸ್ವರ್ಗ ಲೋಕವಾಸಿಯಾಗಿ ಸುಖವನ್ನನು ಭವಿಸುವುದಕ್ಕೂ ಪುಣ್ಯ ಪಾಪಗಳೆರಡನ್ನು ಕಳೆದುಕೊಂಡು ಜಿನನಾಗುವುದು ಸ್ವತಂತ್ರನು. ಆದರೆ ಇಹಲೋಕದ ಸುಖಕ್ಕೆ ಸಹಜವಾಗಿ ಮಾರುಹೋಗುವ ಜೀವ ಸಂಸಾರಬದ್ಧವಾಗಿ ತೊಳಲುತ್ತಾನೆ. ಧರ್ಮೋಪದೇಶ ಉತ್ತಮರ ಸಂಸರ್ಗ, ಅಭವ್ಯನಾಗಿದ್ದ ಜೀವನ ಪುಣ್ಯಕಾರ್ಯಗಳಿಂದ ದೂರಭವ್ಯನಾಗಿ, ಆಸನ್ನಭವ್ಯವಾಗಿ, ಕಡೆಗೆ ಭವ್ಯವಾಗಿ ಆತ್ಮೋದ್ಧಾರದ ಹಾದಿಯನ್ನು ಹಿಡಿಯಬಲ್ಲನು. ಹೀಗೆ ಜೀವನ ಕಾಲಲಬ್ಧಿಯಿಂದ ಭವ್ಯವಾಗಿ, ಉತ್ತಮ ಜನ್ಮಗಳನ್ನು ಎತ್ತುತ್ತಾ ಮೇಲೆ ಏರಿ ಹೋಗಿ ಕಡೆಗೆ ತೀರ್ಥಂಕರತ್ವವನ್ನು ಪಡೆಯುವುದೇ ಜೈನಪುರಾಣದ ಕಥಾವಸ್ತು"[೫](ಅನಂತನಾಥ ಪುರಾಣ ಕಾವ್ಯ ಸಂಗ್ರಹ-ಪು. ೮). ಇಂತಹ ವಸ್ತುವನ್ನು ಕನ್ನಡ ಜೈನಕವಿಗಳು ತನ್ನ ಪೂರ್ವದಲ್ಲಿದ್ದಂತಹ ಗುಣಭದ್ರಾಚಾರ್ಯ ಮತ್ತು ಜಿನಸೇನರ ಪೂರ್ವಪುರಾಣ ಮತ್ತು ಉತ್ತರಪುರಾಣ ಗಳಿಂದ ವಸ್ತುವನ್ನು ಆಯ್ದುಕೊಂಡು ತೀರ್ಥಂಕರ ಚರಿತ್ರೆಗಳ ಸ್ವಂತಿಕೆಯನ್ನು ಕಾವ್ಯಗಳಲ್ಲಿ ತುಂಬಿರುವುದು ಕಂಡುಬರುತ್ತದೆ. ಆ ಮೂಲಕ ಜೈನಧರ್ಮದ ಸಾರವನ್ನು ಸಾರಲಿಕ್ಕೆ ಅವರು ಮಾಡಿದಂತಹ ಒಂದು ವಿಶಿಷ್ಟವಾದ ಅಭಿವ್ಯಕ್ತಿ ಮಾಧ್ಯಮವಾಯಿತೆಂದು ಹೇಳಬಹುದು.

ಹೀಗೆಯೇ ಎಲ್ಲ ಕನ್ನಡ ಜೈನಕವಿಗಳನ್ನು ಅವಲೋಕಿಸಿದಾಗ ಅವರು ಸಾಹಿತ್ಯ ಕೃಷಿಯನ್ನು ಮಾಡಿದ್ದು ಒಂದು ವಿಧಾನದಿಂದಲ್ಲ, ಅವರು ಹಲವಾರು ಅಭಿರುಚಿಗಳಿಂದ ಹಲವು ವಿಷಯಗಳನ್ನು ಕುರಿತು ಕಾವ್ಯವನ್ನು ರಚಿಸಿದವರು. ವ್ಯಾಕರಣ, ಧಾರ್ಮಿಕಕಾವ್ಯ, ಲೌಕಿಕಕಾವ್ಯ, ಶಾಸ್ತ್ರಗ್ರಂಥಗಳು, ಛಂದಸ್ಸು, ವೈದ್ಯಕೀಯ ಶಾಸ್ತ್ರಗ್ರಂಥಗಳು ಮುಂತಾದ ಹಲವು ಹತ್ತು ವಸ್ತುವಿಷಯಗಳನ್ನು ಬಳಸಿಕೊಂಡವರು. ಇಂತಹವುಗಳಲ್ಲಿ ತಮ್ಮ ಧರ್ಮದ ಪ್ರಸಾರಕ್ಕಾಗಿ ಮತ್ತು ಧರ್ಮದ ಏಳಿಗೆಗಾಗಿ ಪ್ರತ್ಯೇಕವಾಗಿ ಧಾರ್ಮಿಕ ಕಾವ್ಯಗಳನ್ನು ಬರೆಯಲು ಅನುವು ಮಾಡಿಕೊಂಡವರು. ಹಾಗೆ ಜೈನರು ಸುಮಾರು ೨೫ ಧಾರ್ಮಿಕ ಕೃತಿಗಳಲ್ಲಿ ೨೪ ಜಿನ

ತೀರ್ಥಂಕರ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ. ಅವು ಪಂಪನ ಆದಿಪುರಾಣ, ಪೊನ್ನನ ಶಾಂತಿಪುರಾಣ, ರನ್ನನ ಅಜಿತನಾಥ ಪುರಾಣ, ಕರ್ಣಪಾರ್ಯನ ನೇಮಿನಾಥ ಪುರಾಣ, ನೇಮಿಚಂದ್ರನ ನೇಮಿನಾಥ ಪುರಾಣ, ಅಗ್ಗಳನ ಚಂದ್ರಪ್ರಭ ಪುರಾಣ, ಆಚಣ್ಣನ ವರ್ಧಮಾನ ಪುರಾಣ, ಬಂಧುವರ್ಮನ ಹರಿವಂಶಾಭ್ಯುದಯ, ಪಾರ್ಶ್ವಪಂಡಿತನ ಪಾರ್ಶ್ವನಾಥ ಪುರಾಣ, ಎರಡನೇ ಗುಣವರ್ಮನ ಪುಷ್ಪದಂತ ಪುರಾಣ, ಕಮಲಭವನ ಶಾಂತೀಶ್ವರ ಪುರಾಣ, ಮಹಾಬಲ ಕವಿಯ ನೇಮಿನಾಥಪುರಾಣ, ಬಾಹುಬಲಿ ಪಂಡಿತನ ಧರ್ಮನಾಥ ಪುರಾಣ ಇವು ಹಳಗನ್ನಡದ ಪ್ರೌಢ ಚಂಪೂ ಕಾವ್ಯಗಳಾದರೆ, ಚಾವುಂಡರಾಯನ ತ್ರಿಷಷ್ಠಿ ಲಕ್ಷಣ ಮಹಾಪುರಾಣ (ಚಾವುಂಡರಾಯ ಪುರಾಣ), ಹಸ್ತಿಮಲ್ಲನ ಆದಿಪುರಾಣಗಳ ಹಳಗನ್ನಡರ ಪ್ರೌಢ ಗದ್ಯಕಾವ್ಯಗಳು. ಮೂರನೇ ಮಂಗರಸನ ನೇಮಿಜಿನೇಶ ಸಂಗತಿ, ದೊಡ್ಡಯ್ಯನ ಚಂದ್ರಪ್ರಭ ಚರಿತ್ರೆಗಳು, ಸಾಂಗತ್ಯ ಕಾವ್ಯಗಳು, ಶಾಂತಿಕೀರ್ತಿ ಮುನಿಯ ಶಾಂತಿನಾಥ ಚರಿತೆ, ಪದ್ಮಕವಿಯ ವರ್ಧಮಾನ ಚರಿತ್ರೆ ದೊಡ್ಡಣಾಂಕನ ಚಂದ್ರಪ್ರಭ ಷಟ್ಪದಿ, ಇವು ಷಟ್ಪದಿ ಕಾವ್ಯಗಳು. ಹೀಗೆ ತೀರ್ಥಂಕರರ ಚರಿತ್ರೆಯನ್ನು ಕುರಿತು ಕೃತಿಗಳನ್ನು ರಚಿಸಿದ್ದಾರೆ.

ಇಂತಹ ಧಾರ್ಮಿಕ ಕೃತಿಗಳನ್ನು ರಚಿಸಲು ಜೈನಧರ್ಮದಲ್ಲಿರುವಂತಹ ವಿಶ್ವಮಾನ್ಯವಾದ ತತ್ವಗಳಾದ ಸತ್ಯ, ಅಹಿಂಸೆ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬುವು ಮಹತ್ವವಾದವು. ಇವನ್ನು ಯಾವ ತತ್ವಜ್ಞಾನಿಯೂ ಅಲ್ಲಗಳೆಯುವಂತಿಲ್ಲ. ಇಂತಹ ಆದರ್ಶ ವ್ಯಕ್ತಿಗಳ ಜೀವನ ಸಾಫಲ್ಯತೆ. ಧರ್ಮನಿಷ್ಠತೆ, ಸಾಧಿಸಿರುವ ಸಿದ್ಧಿ ಅನುಕರಣೀಯವಾಗಿದೆ. ಆದುದರಿಂದ ಎಲ್ಲ ಜೈನಕವಿಗಳು ತೀರ್ಥಂಕರರ ಚರಿತ್ರೆಯನ್ನು ಎಲ್ಲ ಜನರಿಗೂ ಒದಗಿಸಿದ್ದಾರೆ. ಉತ್ತಮ ಜೀವನಕ್ಕೆ ಪ್ರೇರಣೆ ನೀಡಲೆಂದು ಪ್ರಾಚೀನ ಕಾಲದಿಂದಲೂ ಎಲ್ಲ ಜೈನ ಕವಿಗಳು. ತೀರ್ಥಂಕರರ ಚರಿತ್ರೆಯನ್ನು ಕೇವಲ ಶಿಷ್ಟಕಾವ್ಯ ಪರಂಪರೆಯಲ್ಲಿ ಅಷ್ಟೇ ಅಲ್ಲದೇ ಜೈನ ಧರ್ಮದ ಸಾಹಿತ್ಯದ ನಿರಂತರತೆಯನ್ನು ಕಾಯ್ದುಕೊಂಡುಬಂದ ಶಿಷ್ಟ ಜೈನಹಾಡುಗಳಲ್ಲಿಯೂ ಸಹ ಕಟ್ಟಿಕೊಟ್ಟಿರುವುದು ವಿಶೇಷ ಸಂಗತಿಯಾಗಿದೆ. ಜೈಮಧರ್ಮದ ತತ್ವವಿಚಾರಗಳನ್ನು ಸರಳವಾಗಿ ಲಯಾನ್ವಿತವಾಗಿ ಹಾಡುಗಳ ಮುಖಾಂತರ ಜನಸಾಮಾನ್ಯರನ್ನು ತಲುಪಿದ್ದು ಮತ್ತೊಂದು ವಿಶೇಷವಾದ ಸಂಗತಿ. ಇಂತಹ ೨೪ ತೀರ್ಥಂಕರರ ಚರಿತ್ರೆಯನ್ನು ಶಿಷ್ಟಕಾವ್ಯಗಳಲ್ಲಿ ನಿರೂಪಿಸಿರುವಂತಹ ಚಿತ್ರಣವನ್ನು ಒಬ್ಬ ಹಾಡುಗಾರ ಸಮರ್ಥವಾಗಿ ಓದಿ ಗ್ರಹಿಸಿಕೊಂಡು ಅವರ ಜೀವನ ಚರಿತ್ರೆಯ ಸಂಗತಿಗಳನ್ನು ಹಾಡುಗಳ ಮುಖಾಂತರ ಕಟ್ಟಿಕೊಟ್ಟಿದ್ದಾನೆ. ನಾನು ಇಲ್ಲಿ ಪ್ರಮುಖವಾಗಿ ಜೈನ ಹಾಡುಗಳಲ್ಲಿ ಅತಿ ಹೆಚ್ಚು ಉಲ್ಲೇಖವಾಗಿರುವಂತಹ ಪ್ರಮುಖ ತೀರ್ಥಂಕರರನ್ನು ಗುರುತಿಸಿಕೊಂಡು ಆ ಮೂಲಕ ಶಿಷ್ಟಕಾವ್ಯಗಳ ಪರಂಪರೆಯಲ್ಲಿ ಬಂದಿರುವಂತಹ ತೀರ್ಥಂಕರರ ಚರಿತ್ರೆಯನ್ನು ತುಲನೆ ಮಾಡಿದ್ದೇನೆ.

ತೀರ್ಥಂಕರರ ಚರಿತ್ರೆಗಳು ಹೊರನೋಟಕ್ಕೆ ಒಬ್ಬ ವ್ಯಕ್ತಿಯ ಚರಿತ್ರೆಯಾಗಿ ಕಂಡರೂ ಅವುಗಳಲ್ಲಿ ಜೈನಧರ್ಮದ ವಿಚಾರಧಾರೆಯು ಅಡಕವಾಗಿರುತ್ತದೆ.

### ೫.೨.೧. ವೃಷಭನಾಥ

ಜೈನರ ಮೊದಲನೆಯ ತೀರ್ಥಂಕರ ಈ ವೃಷಭನಾಥ. ಈತನನ್ನು ಆದಿನಾಥ, ಆದಿದೇವ, ಆದಿಬ್ರಹ್ಮ ಎಂಬುದಾಗಿ ಕರೆಯುವುದು ರೂಢಿಯಾಗಿದೆ. ಈತನ ಚರಿತ್ರೆಯನ್ನು ಆಧರಿಸಿದ ಪಂಪ 'ಆದಿಪುರಾಣ' ಎಂಬ ಕೃತಿಯನ್ನು ರಚಿಸಿದ. ಈ ಕೃತಿ ಜೈನಕಾವ್ಯ ಪರಂಪರೆಯಲ್ಲಿಯೇ ಶ್ರೇಷ್ಠವಾದ ಕೃತಿಯಾಗಿದೆ. ಮುಂದಿನ ಅನೇಕ ಜೈನ ಕವಿಗಳಿಗೆ ಈತನ ಧಾರ್ಮಿಕ ಕಾವ್ಯ ಸ್ವರೂಪ ಪ್ರೇರಣೆಯಾಯಿತು.

| | |
|---|---|
| ೧ನೇ ತೀರ್ಥಂಕರ | ವೃಷಭನಾಥ |
| ತಂದೆ | ನಾಭಿರಾಜ |
| ತಾಯಿ | ಮರುದೇವಿ |
| ಜನ್ಮ ಸ್ಥಳ | ಅಯೋಧ್ಯೆ |
| ನಿರ್ವಾಣ ಸ್ಥಳ | ಕೈಲಾಸ |
| ಯಕ್ಷ | ಗೋಮುಖ |
| ಯಕ್ಷಿ | ಚಕ್ರೇಶ್ವರಿ |
| ಲಾಂಛನ | ಎತ್ತು |
| ಮೈಬಣ್ಣ | ಹೊಂಬಣ್ಣ |
| ಭವಾವಳಿ | ೧೧ |
| ವಂಶ | ಇಕ್ಷ್ವಾಕುವಂಶ |

ಈ ಮೊದಲಾದವು ಆದಿನಾಥನ ವಿಶಿಷ್ಟ ಲಕ್ಷಣಗಳು.

ಪಂಪನು ತನ್ನ ಪೂರ್ವಕವಿಗಳು ಬರೆದಂತಹ ಉತ್ತರಪುರಾಣ ಮತ್ತು ಪೂರ್ವಪುರಾಣಗಳನ್ನು ಆಧರಿಸಿ ಆದಿಪುರಾಣವನ್ನು ಬರೆಯುತ್ತಾನೆ. ಈ ಕೃತಿಯ ನಾಯಕ ಮೊದಲನೇ ತೀರ್ಥಂಕರನಾದ ವೃಷಭನಾಥ. ಈತನ ಕಥೆಯ ಜೊತೆಗೆ ಅವನ ಇಬ್ಬರು ಮಕ್ಕಳಾದ ಭರತ, ಬಾಹುಬಲಿ ಮತ್ತು ಇನ್ನು ಐವರು ಮಕ್ಕಳು- ಹಾಗೆಯೇ ಶ್ರೇಯಾಂಸ ಹಾಗೂ ವೃಷಭಸೇನರೆಂಬುವರ ಪೂರ್ವಜನ್ಮಗಳ ಹಾಗೂ ವರ್ತಮಾನ ಜನ್ಮಗಳ ಕತೆಗಳು ಇಲ್ಲಿ ನಿರೂಪಿತವಾಗಿವೆ. ವೃಷಭನಾಥ ಪ್ರಥಮ ತೀರ್ಥಂಕರ. ಭರತ ಆ ಕಾಲದ ಚಕ್ರವರ್ತಿ. ಬಾಹುಬಲಿ ಪ್ರಥಮ ಕಾಮದೇವ ಇವರ ಮಕ್ಕಳು. ಜನ್ಮ ಜನ್ಮಗಳಲ್ಲಿ ಸುಖದುಃಖಾನುಭವ ಮಾಡಿದ ಆತ್ಮೀಯ ಸಹಚರಜೀವರು. ಶ್ರೇಯಾಂಸ ಆದಿದಾನ ತೀರ್ಥಪ್ರವರ್ತಕ, ವೃಷಭಸೇನ, ಇವರು ಮುಖ್ಯರು. ಈ ವ್ಯಕ್ತಿಗಳೆಲ್ಲರು ಹಲವು ಜನ್ಮಗಳಲ್ಲಿ ಆದಿನಾಥನ ಜೊತೆಗೆ ಸುಖದುಃಖಗಳನ್ನು ಅನುಭವಿಸುತ್ತ ಪರಿಪಕ್ವಗೊಂಡು ಧರ್ಮದ ಹಾದಿಯನ್ನು ತಿಳಿದು ನಡೆದು ಒಟ್ಟಿಗೆ ಮುಕ್ತರಾಗುತ್ತಾರೆ. ಇಂತಹ ಕಥೆಯ ಹಂದರವನ್ನು ಇಟ್ಟುಕೊಂಡು ಪಂಪ ತನ್ನ ಕೃತಿಯನ್ನು ಬರೆಯಲು ಪ್ರಾರಂಭಿಸುತ್ತಾನೆ.

"ಲೋಕ, ದೇಶ, ಪುರ, ರಾಜ್ಯ ತೀರ್ಥ, ತಪೋಧಾಮ, ಗತಿ, ಮುಕ್ತ ಫಲ ಎಂಬುದಾಗಿ ಎಂಟು ಆಖ್ಯಾನಗಳು ಜೈನಪುರಾಣದ ಲಕ್ಷಣಗಳು ಅಥವಾ ಅವಯವಗಳೆನಿಸಿವೆ."[೬] ಈ ಚರಿತ್ರೆಯ ಹಂದರದೊಳಗೆ ಆದಿನಾಥನ ಕಥೆಯ ಬಳ್ಳಿಯನ್ನು ಪಂಪಕವಿ ಹಬ್ಬಿಸಿದ್ದಾನೆ. ಆದಿನಾಥನ ಪೂರ್ವಜನ್ಮದ ಕಥೆಗಳನ್ನು ವರ್ತಮಾನದ ಭವದ ಕತೆಗಳನ್ನು ಹಾಗೂ ಅದರ ಭಾಗವಾಗಿ ಬರುವ ಪಂಚಕಲ್ಯಾಣಗಳ ವಿವರಗಳನ್ನು ಯಥಾವತ್ತಾಗಿ ನಿರೂಪಿಸಿದ್ದಾನೆ. ಪೂರ್ವಜನ್ಮಗಳ ಕತೆ ಅಂದರೆ, ಆದಿನಾಥನು ಎತ್ತಿದ ಮೊದಲ ಜನ್ಮ ಜಯವರ್ಮ. ಇಲ್ಲಿ ರಾಜ್ಯದ ರಾಜನಾಗಲಿಲ್ಲವೆಂಬ ಕಾರಣಕ್ಕಾಗಿ, ಮುಂದಿನ ಜನ್ಮದಲ್ಲಿ ರಾಜನಾಗಬೇಕೆಂದು ಹುತ್ತದಲ್ಲಿ ಕೈ ಹಿಟ್ಟು ಹಾವಿನಿಂದ ಕಡಿಸಿಕೊಂಡು ಸಾಯುತ್ತಾನೆ. ೨ನೇ ಜನ್ಮದಲ್ಲಿ ಮಹಾಬಲನಾಗಿ ೩ನೇ

ಜನ್ಮದಲ್ಲಿ ಲಲಿತಾಂಗನಾಗಿ ೪ನೇ ಜನ್ಮದಲ್ಲಿ ವಜ್ರಜಂಘನಾಗಿ ೫ನೇ ಜನ್ಮದಲ್ಲಿ ಆರ್ಯನಾಗಿ ೬ನೇ ಜನ್ಮದಲ್ಲಿ ಶ್ರೀಧರದೇವನಾಗಿ ೭ನೇ ಜನ್ಮದಲ್ಲಿ ಸುವಿಧಿಯಾಗಿ ೮ನೇ ಜನ್ಮದಲ್ಲಿ ಅಚ್ಯುತೇಂದ್ರನಾಗಿ ೯ನೇ ಜನ್ಮದಲ್ಲಿ ವಜ್ರನಾಭಿ ೧೦ನೇ ಜನ್ಮದಲ್ಲಿ ಆಹಮಿಂದ್ರನಾಗಿ ನಂತರ ೧೧ನೇ ಜನ್ಮದಲ್ಲಿ ಆದಿನಾಥನಾಗಿ ಜನಿಸುತ್ತಾನೆ. ಅನುಕ್ರಮವಾಗಿ ೧೦ ಮನುಷ್ಯಜನ್ಮ ಮತ್ತು ದೇವಜನ್ಮಗಳಿಗೆ ಸಂಬಂಧಿಸಿದ ಕತೆಗಳು ನಿರೂಪಿತವಾಗಿವೆ. ನಂತರ ವೃಷಭನಾಥನ ಜನನವಾಗುತ್ತದೆ. ಇವನಿಗೆ ಪಂಚಕಲ್ಯಾಣಗಳು ಅಂದರೆ ಪುಣ್ಯಶಾಲಿಯಾದ ತೀರ್ಥಂಕರನ ಹುಟ್ಟು ತನ್ನ ಭೌತಿಕವಾದ ದೇಹವನ್ನು ಕಳಚುವವರೆಗೂ ಅವನ ಬದುಕಿನ ಪ್ರಮುಖ ಘಟ್ಟಗಳಲ್ಲಿ ನಡೆಸುವ ಐದು ಮಹೋತ್ಸವಗಳು ನಡೆಯುತ್ತವೆ. ಇವನ್ನು ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನ ಮತ್ತು ಪರಿನಿರ್ವಾಣ ಕಲ್ಯಾಣಗಳೆಂದು ಕರೆಯುತ್ತಾರೆ. ಆದಿನಾಥನ ತಾಯಿ ಮರುದೇವಿಯ ಗರ್ಭದಲ್ಲಿ ಶಿಶುವಾಗಿ ನೆಲೆಸಿದಾಗಿನಿಂದ ಹಿಡಿದು ಅವನ ವೈರಾಗ್ಯ ಪರನಾಗಲು ನೀಲಾಂಜನೆಯ ದೇವನರ್ತಕಿಯ ನೃತ್ಯ ಸಂದರ್ಭದಲ್ಲಿ ದೇಹ ನಿತ್ಯತೆಯನ್ನು ಮನಗೊಂಡು ವೈರಾಗ್ಯಗೊಳ್ಳುತ್ತಾನೆ. ನಂತರ ಪುರದ ಹೊರಗೆ ಆಲದಮರ ಒಂದರ ಕೆಳಗೆ ಕೇವಲಜ್ಞಾನ ಉಂಟಾಗುತ್ತದೆ. ಕೊನೆಗೆ ಕೈಲಾಸ ಪರ್ವತದಲ್ಲಿ ಸಿದ್ಧಕೂಟದಲ್ಲಿ ನಿರ್ವಾಣ ಹೊಂದುತ್ತಾನೆ. ಈ ಇಷ್ಟು ಪಂಚ ಕಲ್ಯಾಣಗಳನ್ನು ಕಾಲಕಾಲಕ್ಕೆ ಇಂದ್ರನು ಬಂದು ನೇರವೇರಿಸಿ ಹೋಗುತ್ತಾನೆ. ಇದಿಷ್ಟು ವೃಷಭನಾಥನ ಸಂಕ್ಷಿಪ್ತ ಚರಿತ್ರೆ. ಮುಂದೆ ಪಂಪ ವೃಷಭನಾಥನ ಮಕ್ಕಳಾದ ಭರತ, ಬಾಹುಬಲಿಯವರ ಕಥೆಯನ್ನು ಹೇಳುತ್ತಾನೆ. ಇಲ್ಲಿ ಭರತ ಚಕ್ರವರ್ತಿಯ ದಿಗ್ವಿಜಯ ವೃತ್ತಾಂತ ಕತೆಗಳು, ಭರತ, ಬಾಹುಬಲಿಯವರ ವೈಮನಸ್ಸು ಸಾಮರಸ್ಯಗಳು, ಸನ್ನಿವೇಶಗಳು ಕಂಡುಬರುತ್ತವೆ. ಈ ಕಥೆಯನ್ನು ಪಂಪ ಸವಿಸ್ತಾರವಾಗಿ ಎಳೆದುಕೊಂಡು ಹೋಗಿದ್ದಾನೆ. ಭರತ ಚಕ್ರವರ್ತಿಯ ವಿಜಯ ವೈಭವಗಳ ಭಾಗವನ್ನು ಬೇರೆ ಮಾಡಿಯೂ ಅದರ ಪ್ರಾಶಸ್ತ್ಯವನ್ನು ಅರಿಯಲು ಸಾಧ್ಯವಿದೆ. ಈ ಎಲ್ಲ ಕಥೆಗಳ ನಡುವೆಯೂ ದೊಡ್ಡ ತೊರೆ ಹರಿಯುವಾಗ ಅದಕ್ಕೆ ಸೇರಿಕೊಳ್ಳುವ ಕಾಲುಹೊಳೆ, ಹಳ್ಳ ಝರಿಗಳ ಹಾಗೆ ತೀರ್ಥಂಕರನ ಸಹಚರ ಜೀವದ ಜನ್ಮಕಥೆಗಳು ತತ್ತ್ವೋಪದೇಶಗಳು ಸೇರಿಕೊಂಡು ಬರುತ್ತವೆ. ಇಂತಹ ವೈಶಿಷ್ಟ್ಯಪೂರ್ಣವಾದ ಕಾವ್ಯವನ್ನು ಮುಂದಿನ ಅನೇಕ ಜೈನಕವಿಗಳಿಗೆ ಆದರ್ಶವಾಗಿ ಪ್ರತಿಯೊಬ್ಬ ಜೈನ ಕವಿಯ ಒಬ್ಬೊಬ್ಬ ತೀರ್ಥಂಕರನನ್ನು ಕುರಿತು ಕಾವ್ಯವನ್ನು ಬರೆಯಲು ಈ ಆದಿಪುರಾಣ ಕಾವ್ಯಮಾರ್ಗವಾಯಿತು. ಇಷ್ಟಕ್ಕೆ ಕೇವಲ ಶಿಷ್ಟ ಜೈನಕವಿಗಳಿಗೆ ಈ ತೀರ್ಥಂಕರರ ಚರಿತ್ರೆ ಸಿಮೀತವಾಗದೆ ಮುಂದೆ ೧೬ನೇ ಶತಮಾನದಲ್ಲಿ ಹಾಡುಗಬ್ಬ ಪರಂಪರೆಯಲ್ಲಿ ಮತ್ತು ಹಾಡುಗಳಲ್ಲಿ ತೀರ್ಥಂಕರರ ಚರಿತ್ರೆಯನ್ನು ಚಿಕ್ಕದಾದ ಹಾಡಿನಲ್ಲಿ ಹಿರಿದಾದ ಚರಿತ್ರೆಯನ್ನು ತುಂಬ ಸೊಗಸಾಗಿ, ಲಯಬದ್ಧ ವಾಗಿ ಸರಳವಾದ ಭಾಷೆಯಲ್ಲಿ ಹಿಡಿದಿಟ್ಟಿರುವುದು ವಿಶೇಷವಾದದ್ದು, ಇದೇ ವೃಷಭನಾಥನ ಚರಿತ್ರೆಯನ್ನು ಒಬ್ಬ ಹಾಡುಗಾರ ೬೫ ಪದ್ಯಗಳಲ್ಲಿ ಉಲ್ಲೇಖಿಸಿರುವುದನ್ನು ಗಮನಿಸಬಹುದು.

"ಸರ್ವಾರ್ಥ ಸಿದ್ಧಿಯ ಬಿಟ್ಟು ನೀ ಬಂದು
ಮರುದೇವಿಯ ಶುದ್ಧ ಉ
ದರದೊಳ್ನಿಂದು ಇಂದ್ರನರಿದು ವಿದತ್ತಪತಿ
ಕರೆದಂದು ಅನುಜ್ಞಯನಮಳೆ ಪೇಳ್ವರೆಂದು ||

ಅಯೋಧ್ಯಾನಗರಿಗೆ ಹೋಗು ನೀ ಬೇಗ
ನಾಭಿರಾಜನ ಗೃಹ ಬಾಹ್ಯದೊಳಗಾ
ರತ್ನದಾ ಮಳೆಗರೆ ಶ್ರೀಘದೊಳೀಗ
ಮೂರು ಕಾಲದಿ ಮೂರುತರೆ ಕೋಟಿ ಈಗ ||

ಒಂಬತ್ತು ತಿಂಗಳು ತುಂಬಲು ಬೇಗ
ಹಡೆದಳು ಮರುದೇವಿ ವೃಷಭೇಶನಾಗ
ಶಚಿದೇವಿ ಸಹಿತ ಇಂದ್ರನು ಬಂದನಾಗ
ಪ್ರಸೂತಿ ಗೃಹವ ಹೊಕ್ಕಳು ಶಚಿ ಬೇಗ ||

ಅಲ್ಲೊಂದು ಮಾಯದ ಶಿಸುವನ್ನ ಇರಿಸಿ
ತೆಗೆದುಕೊಂಡಳು ಸಂಪ್ರೀತಿಯೆವರೆಸಿ
ಇಂದ್ರನ ಕರೆಯಗದೊಳು ತಾನಿರಿಸಿ
ಸ್ತುತಿ ಸಹಸ್ರಗಳಿಂದ ದೇವನಾ ಸ್ತುತಿಸಿ ||

ಐರಾವತವನೇರಿಸಿ ಬಂದನಾಗ
ಪಾಂಡಕಾ ಶಿಲೆಯೊಳು ಇರಿಸಿದಾಬೇಗ
ಭೋರೆಂಬ ವಾದ್ಯದಿ ಜಯವೆಂದರಾಗ ||

ಅಂಗವಸ್ತ್ರದಿ ಮಗ್ಗಿಲೊಳು ದೇವ
ವಿರಿಸಿ ಇಂದ್ರ ಹೋದನು ತನ್ನ ದೇವಿಯ
ವೆರಸಿ ಇತ್ತಲು ನಾಭಿರಾಜನ ಪಟ್ಟ
ಧರಿಸಿ ಮಗನ ಮುಖವ ನೋಡಿ ಸುಖಿಯಾಗಿ ಹರಸಿ ||

ವಿಶ್ವಕರ್ಮ ನಿರ್ಮಿಸಿದ ತೊಟ್ಟಿಲವು
ರತ್ನದಿ ನಿರ್ಮಿತ ಚಿತ್ರದ ಕೆಲವು
ಮತ್ತೆ ನಾನಾವಿಧ ಪ್ರತಿಮೆಯ ಚೆಲವು
ಅಭವನಿದ್ರಗೈಯ್ಯ ಭವದ ಚೆಲವು ||

ನಾಕಾದಿ ಸ್ತ್ರಿಯರು ಎಲ್ಲರೂ ಕೂಡಿ
ಮಲಹರಿ ದೀಪಾಕಿ ರಾಗದಿ ಹಾಡಿ
ನಾನಾ ಮಾರ್ಗಗಳಿಂದ ಜೀವನ ಕೊಂಡಾಡಿ
ಹರುಷ ಕ್ಷೀರಾಬ್ಧಿಯೊಳ್ಮುಳುಗಿ ಚೆನ್ನಾಗಿ"[೭]

ಇಲ್ಲಿ ಹಾಡುಗಳು ಶಿಷ್ಟ ಕಾವ್ಯಗಳಲ್ಲಿ ರಚಿತವಾದಂತಹ ವೃಷಭನಾಥನ ಗರ್ಭಕಲ್ಯಾಣ ಮತ್ತು ಜನ್ಮಾಭಿಷೇಕ ಕಲ್ಯಾಣವನ್ನು ಚೆನ್ನಾಗಿ ಗ್ರಹಿಸಿದವನಾಗಿರಬೇಕು. ಆದ್ದರಿಂದ ಅವನ ಬಿಡಿಯಾದ ೧೦

ಪದ್ಯಗಳಲ್ಲಿ ವೃಷಭನಾಥನ ಎರಡು ಕಲ್ಯಾಣಗಳನ್ನು ಬಹಳ ಸೊಗಸಾಗಿ ಲಯಾನ್ವಿತವಾಗಿ ಚಿತ್ರಿಸಿದ್ದಾನೆ. ಶಿಷ್ಟ ಧಾರ್ಮಿಕ ಕಾವ್ಯಗಳಲ್ಲಿ ಜರುಗುವಂತಹ ಗರ್ಭಕಲ್ಯಾಣ ಹಾಗೂ ಜನ್ಮಾಭಿಷೇಕ ಕಲ್ಯಾಣಗಳನ್ನು ಇಂದ್ರನರಿತು ಇದಕ್ಕೆ ತಕ್ಕುದಾದ ಸಿದ್ಧತೆಗಳನ್ನು ಎಚ್ಚರಿಕೆಯಿಂದ ಮಾಡುತ್ತಾನೆ. ತೀರ್ಥಂಕರ ಹುಟ್ಟುವ ಆರು ತಿಂಗಳು ರತ್ನದ ಮಳೆ ಸುರಿಯಲು ಕುಬೇರನಿಗೆ ಆಜ್ಞೆ ಮಾಡುತ್ತಾನೆ. ಇದರಂತೆ ರತ್ನದ ಮಳೆ ರಾಜ್ಯದಲ್ಲಿ ಸುರಿಯುತ್ತದೆ. ಶ್ರೀ. ಹ್ರೀ. ಮೊದಲಾದ ದೇವಿಯರು ತೀರ್ಥಂಕರನ ತಾಯಿಯ ಗರ್ಭಶೋಧ ಮಾಡಿ ಗರ್ಭ ಬೆಳೆಯಲು ತೀರ್ಥಂಕರನ ತಾಯಿಗೆ ಅಪೂರ್ವವಾದ ಬಯಕೆಗಳು ಉಂಟಾಗುತ್ತವೆ. ಆಕೆಗೆ ಕ್ಷೀರದಲ್ಲಿ ಜನಮಜ್ಜನ ಮಾಡಿಸುವ, ಜಿನೇಂದ್ರ ಪೂಜೆ ಮಾಡುವ, ಜಿನಾಲಯಗಳ ಸಮೂಹವನ್ನು ನಿರ್ಮಿಸುವ, ಜಿನ ಪ್ರತಿಷ್ಠಾಪನೆಯನ್ನು ಮಾಡುವ ನಾಲ್ಕು ಬಗೆಯ ದಾನಗಳನ್ನು ಮಾಡುವ ಬಯಕೆ ಯಾಗುತ್ತದೆ. ತೀರ್ಥಂಕರನ ತಾಯಿಗೆ ಹದಿನಾರು ರೀತಿಯ ಶುಭ ಸ್ವಪ್ನಗಳನ್ನು ಕಾಣುತ್ತಾಳೆ. ತೀರ್ಥಂಕರನಾಗುವ ಜೀವ ಆಗ ಗರ್ಭದಲ್ಲಿ ಸೇರುತ್ತದೆ. ಇಂದ್ರನೇ ಮುಂದೆ ನಿಂತು ತೀರ್ಥಂಕರನ ತಂದೆ ತಾಯಿಗೆ ಮಂಗಳಾ ಭಿಕ್ಷೆ ಮಾಡಿ ಉತ್ಸವ ಮಾಡುತ್ತಾರೆ. ಇದು ಎಲ್ಲ ಶಿಷ್ಟ ಜೈನ ಧಾರ್ಮಿಕ ಕಾವ್ಯಗಳಲ್ಲಿ ಇರುವಂತಹ ಚಿತ್ರಣ.

ಹಾಗೆಯೇ ಜನ್ಮಾಭಿಷೇಕ ಕಲ್ಯಾಣದಲ್ಲಿ ತೀರ್ಥಂಕರನು ತಾಯಿಯಿಂದ ಹೊರಬರುವ ಮುನ್ನವೇ ಅವನ ಆಗಮನವನ್ನರಿತು ಇಂದ್ರಾದಿಗಳು ಬರುತ್ತಾರೆ. ಸೌಧಮೇಂದ್ರ ಅಪ್ಪಣೆಯಂತೆ ಇಂದ್ರಾಣಿ ಅಥವಾ ಶಚಿದೇವಿ ತೀರ್ಥಂಕರನ ತಾಯಿಗೆ ಮಾಯಾನಿದ್ರೆ ಬರಿಸಿ, ಆಕೆಯ ಪಕ್ಕದಲ್ಲಿನ ಎಳೆಯ ಮಗುವನ್ನು ತೆಗೆದುಕೊಂಡು ದೇವತೆಗಳೊಡನೆ ಮೇರುಪರ್ವತಕ್ಕೆ ಹೋಗುತ್ತಾನೆ. ಅಲ್ಲಿ ಪಾಂಡುಕಶಿಲೆಯಲ್ಲಿ ಮಗುವನ್ನು ಪೂರ್ವಭಿಮುಖವಾಗಿ ಕೂರಿಸಿ ಹಾಲಿನಿಂದ ಅಭಿಷೇಕ ಮಾಡಿಸುತ್ತಾರೆ(ಮುಂದೆ ಬರುವ ಬೇರೆ ಬೇರೆ ಧಾರ್ಮಿಕ ಕಾವ್ಯಗಳಲ್ಲಿ ೯ ರೀತಿಯ ಅಭಿಷೇಕವನ್ನು ಮಾಡಿರುವುದು ಚಿತ್ರಣಗೊಂಡಿದೆ). ಅನಂತರ ಮಗುವನ್ನು ತಂದೆ-ತಾಯಿಯ ಪಕ್ಕದಲ್ಲಿಟ್ಟು ಮಗುವಿಗೆ ನಾಮಕರಣ ಮಾಡಿ ಹೋಗುತ್ತಾರೆ. ಇದು ಜನ್ಮಾಭಿಷೇಕದ ಕಲ್ಯಾಣ. ಇಂತಹ ಶಿಷ್ಟ ಧಾರ್ಮಿಕ ಕಾವ್ಯ ಪರಂಪರೆಯ ಚರಿತ್ರೆಯನ್ನು ಎಲ್ಲ ಜೈನ ಕವಿಗಳು ಪಾಲಿಸಿಕೊಂಡು ಬಂದಂತೆ ಒಬ್ಬ ಜೈನ ಹಾಡುಗಾರ ಸಹ ತೀರ್ಥಂಕರರ ಚರಿತ್ರೆಯನ್ನು ನಿರೂಪಿಸಿದ್ದಾನೆ(ಕೇವಲ ಶಿಷ್ಟ ಭಾಷೆಗೆ). ಇಲ್ಲಿ ಪಂಡಿತ ಭಾಷೆಯಲ್ಲಿ ಇದ್ದಂತಹ ತೀರ್ಥಂಕರರ ಚರಿತ್ರೆಯನ್ನು ಒಬ್ಬ ಹಾಡುಗಾರ ಜನ ಸಾಮಾನ್ಯರ ಭಾಷೆಗೆ ತಂದದ್ದು ಮತ್ತೊಂದು ಮಹತ್ವದ ಸಂಗತಿ. ಹಾಗೆಯೇ ತೀರ್ಥಂಕರ ಚರಿತ್ರೆಯನ್ನು ಜನಸಾಮಾನ್ಯರಿಗೂ ತಲುಪುವ ಹಾಗೆ ಮಾಡಿದ್ದು ಹಾಗೂ ಪ್ರಚಾರಪಡಿಸಿದ್ದು ಮತ್ತೊಂದು ಹೆಗ್ಗಳಿಕೆಯ ವಿಷಯ. ಇಲ್ಲಿ ಹಾಡುಗಾರ ಆದಿನಾಥನ ಐದು ಕಲ್ಯಾಣಗಳನ್ನು ಜೊತೆಗೆ ಅವನು ಚರಿತ್ರೆಯಲ್ಲಿ ಅವತರಿಸಿದ ಅನೇಕ ಜನ್ಮಗಳ ಭವಾವಳಿಗಳನ್ನು ೨, ೩ ಪದ್ಯಗಳಲ್ಲಿ ಹಿಡಿದು ತೋರಿಸಿದ್ದಾನೆ.

"ಜಯಮಂಗಲಂ ನಿತ್ಯ ಶುಭಮಂಗಲಂ
ಜಯಶೀಲ ವಿಮಲ ನಿತ್ಯಾನಂದಗೆ ||

ವಿಳೆವೆಣ್ಣನುಳಿದು ಜಯವರ್ಮಭೂಪಗೆ ಮಹಾ
ಬಲನಾದ ವಿದ್ಯಾಧರಧಿಪತಿಗೆ

ತೊಳತೊಳುಗುವೆ ಶಾಪ ಕಲ್ಪದೊಳು ಮರೆವ ಬ

ಬ್ಬುಳಿಯನಿಸಿ ಮರೆತ ಲಲಿಂತಾಗ ದೇವನಿಗೆ ||

ಧರಣಿಪತಿ ವಜ್ರಜಂಗಗೆ ಭೋಗಭೂಮಿಯ ಜಗ

ವರ ಸುಖಾಂಬುಧಿಗೆ ಶ್ರೀಧರದೇವಗೆ ||

ಸರಸ ಸದ್ಗುಣ ಸಿಂದು ಸುವಿಧಿಗಚ್ಚುತವ ಕಲ್ಪ

ತರುನಾದ ದೇವದೇವೋತ್ತಮನಿಗೆ ||

ಸರ್ವ ಭೂಮಿಯನಾಳ್ದ ವಜ್ರನಾಭಿಗೆ ಮಹಾ

ಸರ್ವಾರ್ಥ ಸಿದ್ಧಪತಿಗಹಮೀಂದ್ರಗೆ

ಸರ್ವಜ್ಞಾನದಿ ಪರಮೇಶ್ವರಗೆ ಸಹಜ ಕೃಪೆಲೋರ್ವಿ

ಸರ್ವರ ಕಾವ ಸರ್ವತೋಮುಖಿಗೆ ||"[೮]

ಇಲ್ಲಿ ಹಾಡುಗಾರ ವೃಷಭನಾಥನ ೧೧ ಭವಾವಳಿಗಳನ್ನು ಎತ್ತಿ ವೃಷಭನಾಥನು ವಜ್ರನಾಭಿ ಮತ್ತು ತುಂಬುದೇವಿಗೆ ಮಗನಾಗಿ ಹುಟ್ಟುತ್ತಾನೆ ಎಂಬ ಸಂಗಾತಿಯನ್ನು ಹಾಡುಗಾರ ಈ ಮೇಲಿನ ಹಾಡುಗಳಲ್ಲಿ ಸುಶ್ರಾವ್ಯವಾಗಿ ಹೇಳಿದ್ದಾನೆ. ಇಲ್ಲಿ ವೃಷಭನಾಥನು ಮೊದಲನೇ ಜನ್ಮದಲ್ಲಿ ಜಯವರ್ಮ, ಎರಡನೇ ಜನ್ಮದಲ್ಲಿ ಮಹಾಬಲ, ಲಲಿತಾಂಗ ವಜ್ರಜಂಘ, ಶ್ರೀಧರದೇವ, ಸುವಿಧಿ, ಅಚ್ಯುತೇಂದ್ರ ವಜ್ರನಾಭಿ ಮತ್ತು ಅಹಮೀಂದ್ರನಿಗೆ ೧೧ನೇ ಭವದಲ್ಲಿ ವೃಷಭನಾಥನಾಗಿ ಜನಿಸುತ್ತಾನೆ. ಇಂತಹ ತೀರ್ಥಂಕರನ ಚರಿತ್ರೆಯನ್ನು ಪಂಚಕಲ್ಯಾಣಗಳ ಮೂಲಕ ತೋರಿಸುವುದಾಗಿದೆ. ಇಂತಹ ವಿವರಗಳನ್ನು ಹಾಡುಗಾರ ಒಂದು ಪದ್ಯದಲ್ಲಿ ವೃಷಭನಾಥನ ಪಂಚಕಲ್ಯಾಣಗಳನ್ನು ಹೇಳಿರುವುದು.

"ಜಯ ಜಯ ಗರ್ಭಾವತರನಾ|

ಜಯ ಜಯ ಜನ್ಮಾಭಿಷೇಕ

ಜಯ ಜಯ ಪರಿನಿಷ್ಕ್ರಮಣ ಕಲ್ಯಾಣ

ಜಯ ಜಯ ಕೇವಲಜ್ಞಾನ ಭಾಸ್ಕರಗೆ

ಜಯ ಜಯ ನಿರ್ವಾಣ ಪತಿಪುರದೇವಗೆ

ಜಯವೆಂದಾರತಿಯ ಬೆಳಗಿರೇ ||"[೯]

ಹೀಗೆ ವೃಷಭನಾಥನ ಚರಿತ್ರೆಯನ್ನು ಹಾಡುಗಾರ ತನ್ನ ಹಾಡುಗಳಲ್ಲಿ ಹಿಡಿದಿಡುವ ಮೂಲಕ ಅದನ್ನು ಜನಸಾಮಾನ್ಯರ ಬಳಿಗೆ ತಂದು ಅದು ಲೋಕಮಾನ್ಯ ಮಾಡಲು ಹಾಡುಗಾರಪಟ್ಟ ಶ್ರಮ ಶ್ಲಾಘನೀಯವಾದದ್ದು.

ಪಂಪನ ಆದಿಪುರಾಣದಲ್ಲಿ ವೃಷಭನಾಥನ ಚರಿತ್ರೆಯನ್ನು ಬಿಟ್ಟರೇ ಈತನ ಮಕ್ಕಳಾದ ಭರತ, ಬಾಹುಬಲಿಯವರ ಚಿತ್ರಣವನ್ನು ಸೇರಿಸಿದ್ದಾನೆ. ಇಂತಹ ಚಕ್ರವರ್ತಿಯ ಚರಿತ್ರೆಯನ್ನು ಹಾಡುಗಾರ ಸುಮಾರು

೯೫ ಪದ್ಯಗಳಲ್ಲಿ ಪ್ರಸ್ತಾಪಿಸಿದ್ದಾನೆ. ಪಂಪನ ಆದಿಪುರಾಣದ ಉತ್ತರಭಾಗದಲ್ಲಿ ಭರತ, ಬಾಹುಬಲಿಯ ಕಥೆಯು ನಿರೂಪಿತಗೊಂಡಿದೆ. ಇದರಲ್ಲಿ ಭರತನ ದಿಗ್ವಿಜಯ, ಭರತ-ಬಾಹುಬಲಿಯ ವೈಮನಸ್ಸು, ಸನ್ನಿವೇಶಗಳು ಸವಿಸ್ತಾರವಾಗಿ ಹರಡಿಕೊಂಡಿದೆ. ಇಂತಹ ಚಕ್ರವರ್ತಿಗಳ ಕಥೆಯನ್ನು ಹಾಡುಗಳಲ್ಲಿ ಕಟ್ಟಿರುವುದು ಹೀಗಿದೆ.

"ತ್ರಿಭುವನಪತಿ ಶ್ರೀ ಭುಜಬಲಿಯಂತೆ
ಅಭಯವನಿತ್ತವನಂತೆ ||ಪ||

ನಾಭಿಯ ಪುತ್ರಾದಿ ಜಿನರ ಸುರನಂತೆ
ಈ ಭೂಮಿಯ ಚಕ್ರಿಯ ತಮ್ಮನಂತೆ
ಶ್ರೀ ಭುಜಬಲಿಯಾದ ಮನ್ಮಥನಂತೆ
ಶೋಭಿಪ ಬೆಳ್ಗೊಳದೊಳಗಿರ್ಪನಂತೆ ||

ವರಸುರುಮಾಭ್ಯಪಾದನ ಭೂಪನಂತೆ
ಶರವ ಮೇಲ್ಯೆದು ಬಿಲ್ಲು ತೈದನಂತೆ
ಶರದಿ ದಿಗ್ಗಜಕೆ ಪೂರ್ವಜಾಯುಷ್ಯನಂತೆ
ಹರಿತಾಂಗರುಚಿ ಶೌರ್ಯವೀರ್ಯ ತಾನಂತೆ ||

ಮೇರುವಧಿಕ ಗಂಭೀರ ತಾನಂತೆ
ನಾರಿ ಸುನಂದದೇವಿಯರ ಪುತ್ರನಂತೆ
ನೀರಿಯರೆದ್ದು ಸಾಸಿರ ಸ್ತ್ರೀಯರಂತೆ
ಕಾರುಣ್ಯನಿಧಿ ಕಲ್ಪಮರವಂದ್ಯನಂತೆ ||

ಭರತಣ್ಣಗೊಲಿದ ಚಕ್ರದ ಮೂಲವಂತೆ
ಧರಿಸಿತು ರೌದ್ರ ಕಾಮಣ್ಣನಿಗಂತೆ
ಗಿರಿ ಮೇರು ಎರಡು ಒಂದಿದಿರೊಡ್ಡಿದಂತೆ
ಧರೆಗಧಿಕ ದೇಹಗೆಲ್ಲರಿದಾಯಿತಂತೆ||

ಜಲ ದೃಷ್ಟಿ ಮಲ್ಲಯುದ್ಧವಗೈದರಂತೆ
ತೊಲಗಿ ಚಕ್ರಿಗೆ ಮಾನಭಂಗವಾಯಿತಂತೆ
ಛಲದಂಕ ಚಕ್ರಕಾಮಿನೀ ಗೆದ್ದನಂತೆ
ಬಲಗೊಂಡು ಬೆಸನ ತಕ್ಷಣ ಬೇಡಿತಂತೆ ||

ಅರುಕಾಂಡ ದೀಪಗಾಯ್ತುಪಮಾನವಂತೆ
ಮಾರಣವೈರಾಗ್ಯ ತಕ್ಷಣ ಪುಟ್ಟಿತಂತೆ

ಸೇರಿದ ಚಕ್ರಾದಿಪಾಗೆಂದನಂತೆ

ಮಾರ ನಿಗಮಪ್ರೊರ್ವಮಗೆ ಬಿದ್ದರಂತೆ"[೧೦]

ಹೀಗೆ ಹಾಡು ಮುಂದುವರೆದಿದೆ. ಭರತ, ಬಾಹುಬಲಿಗಳ ನಡುವೆ ಜಲ, ದೃಷ್ಟಿ, ಮಲ್ಲ ಯುದ್ಧಗಳಲ್ಲಿ ಭರತನ ಅಹಂಕಾರ, ಭರತನ ಸೋಲಿನಿಂದ ಗೆದ್ದಂತಹ ಆರು ಕಾಂಡಗಳಿಗೂ ಅಪಮಾನವಾಯಿತ್ತೆಂಬುದನ್ನು ಚಿತ್ರಿಸಿದ್ದಾನೆ. ಕೊನೆಗೆ ಬಾಹುಬಲಿ ತನ್ನ ಅಣ್ಣನನ್ನು ಸೋಲಿಸಿದ ಪಶ್ಚಾತ್ತಾಪದಿಂದ ವೈರಾಗ್ಯ ಉಂಟಾಗಿ ರಾಜ್ಯವನ್ನು ತ್ಯಜಿಸಿ ಕೈಲಾಸ ಪರ್ವತಕ್ಕೆ ತೆರಳುತ್ತಾನೆ. ಇಂತಹ ಕಥೆಯ ಹಂದರವನ್ನು ಈ ಮೇಲಿನ ಹಾಡಿನಲ್ಲಿ ಕಾಣಬಹುದು.

**೫.೨.೨. ಶಾಂತಿನಾಥ**

೧೬ನೇ ತೀರ್ಥಂಕರನಾದ ಶಾಂತಿನಾಥನನ್ನು ಕುರಿತು ಪೊನ್ನ ಚಂಪೂವಿನಲ್ಲಿ ಕಾವ್ಯ ರಚಿಸಿದ್ದಾನೆ. ಈ ಕಥೆಯಲ್ಲಿ ಶಾಂತಿನಾಥ ೧೧ ಭವಗಳನ್ನು ಎತ್ತಿ ತೀರ್ಥಂಕರನಾಗುವ ಕಥೆಯ ಹಂದರವನ್ನು ಪೊನ್ನ ಬೆಳೆಸಿದ್ದಾನೆ.

| | |
|---|---|
| ೧೬ನೇ ತೀರ್ಥಂಕರ | ಶಾಂತಿನಾಥ |
| ತಂದೆ | ವಿಶ್ವಸೇನ |
| ತಾಯಿ | ಐರಾದೇವಿ |
| ವಂಶ | ಕುರುವಂಶ |
| ಜನ್ಮನಗರ | ಹಸ್ತಿನಾಪುರ |
| ನಿರ್ವಾಣ ಸ್ಥಳ | ಸಮ್ಮೇರಾ ಶಿಖರ |
| ಯಕ್ಷ | ಗರುಡ |
| ಯಕ್ಷಿ | ಮಾನಸಿ |
| ಮೈಬಣ್ಣ | ಹೊಂಬಣ್ಣ |
| ಭವಾವಳಿ | ೧೧ ಭವಗಳು |
| ಲಾಂಛನ | ಜಿಗರೆ |

ಇವು ಶಾಂತಿನಾಥನ ಪ್ರಮುಖ ಲಕ್ಷಣಗಳು.

ಪೊನ್ನ ೧೬ನೇ ತೀರ್ಥಂಕರನಾದ ಶಾಂತಿನಾಥನನ್ನು ಕುರಿತು ಹೀಗೆ ಪ್ರಾರಂಭ ಮಾಡುತ್ತಾನೆ. ಪ್ರಾಚೀನ ಭಾರತದ ಉತ್ತರ ಭಾಗದಲ್ಲಿ ರತ್ನಪುರಿ ಎಂಬ ಹೆಸರಿನ ಪಟ್ಟಣದಲ್ಲಿ ಶರೀಷೇಣನೆಂಬ ಅರಸನಿದ್ದನು. ಅವನೊಬ್ಬ ಶ್ರಾವಕನಾಗಿದ್ದನು. ಒಂದು ಬಾರಿ ಚಾರಣಮುನಿಗಳಿಗೆ ಆಹಾರ ದಾನ ಮಾಡಿ ಪಂಚಾಶ್ಚರ್ಯ ಗಳನ್ನು ಪಡೆದನು. ಬಳಿಕ ಉತ್ತಮ ಭೋಗ ಭೂಮಿಯಲ್ಲಿ ಹುಟ್ಟಿ ಸುಖ ಸಂತೋಷದಿಂದಿದ್ದನು. ಹೀಗೆ ಹಲವಾರು ಜನ್ಮಗಳನ್ನು ಧರಿಸಿ ಮೇಘಧರನೆಂಬ ಅರಸನಾಗಿ ಹುಟ್ಟಿದನು. ಆಗ ಇವನು ಓರ್ವ ಕೇವಲಿಗಳ ಪಾದಕ್ಕೆ ಷೋಡಶ ಕಾರಣ ಭಾವನೆಗಳನ್ನು ಆರಾಧಿಸಿ ತೀರ್ಥಂಕರನಾಗುವಂಥ ಪುಣ್ಯಗಳಿಸಿದನು. ಅಲ್ಲಿಂದ ಸರ್ವಾರ್ಥಸಿದ್ಧಿ ಸ್ವರ್ಗದಲ್ಲಿ ಹುಟ್ಟಿ ಬಂದನು. ನಂತರ ಭಾರತದ ಹಸ್ತಿನಾವತಿಯ ಅರಸ ವಿಶ್ವಸೇನ

ಮತ್ತು ಅವನ ಮಡದಿ ಐರಾದೇವಿಗೆ ಸರ್ವಾರ್ಥ್ಯ ಸಿದ್ಧಿಯಲ್ಲಿರುವ ಅಹಮೀಂದ್ರನ ಆತ್ಮವು ಆಗಮಸಿ ಶಾಂತಿನಾಥನೆಂಬ ಹೆಸರಿನಿಂದ ಜನಿಸಿದನು. ಇವನೇ ಹದಿನಾರನೆಯ ತೀರ್ಥಂಕರನಾಗಿ ಜನ್ಮ ತಾಳಿದನು. ಚಿಗರೆಯ ಲಾಂಛನವನ್ನು ಪಡೆದಿದ್ದನು.

ಈತನು ಐದನೆಯ ಚಕ್ರವರ್ತಿ ಮತ್ತು ಮನ್ಮಥನೂ ಆಗಿದ್ದನು. ಬಹುಕಾಲ ರಾಜ್ಯವಾಳಿ ಒಮ್ಮೆ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡಾಗ ಮುಖ ಎರಡಾಗಿ ಕಂಡಿತು. ಆದರಿಂದ ವೈರಾಗ್ಯ ತಾಳಿ ಭಿಕ್ಷಧಾರಿಗಳಾಗಿ ಹದಿನಾರು ವರ್ಷಗಳ ಕಾಲ ವಿಹಾರ ಮಾಡಿ ಧರ್ಮೋಪದೇಶ ಮಾಡಿದರು. ಕರ್ಮ ಸಮೀಪಿಸುತ್ತ ಇನ್ನು ಕೆಲವೇ ದಿನಗಳಿದ್ದ ಕಾಲದಲ್ಲಿ ನಿಂತು ಸಕಲ ಕರ್ಮಕ್ಷಯ ಮಾಡಿ ಮುಕ್ತನಾದನು. ಇಂತಹ ಸಂದರ್ಭದಲ್ಲಿ ಇಂದ್ರನು ಕಾಲಕಾಲಕ್ಕೆ ಪಂಚಕಲ್ಯಾಣಗಳನ್ನು ನೆರವೇರಿಸುತ್ತಾನೆ. ಇತರ ಸೇವೆಯನ್ನು ಗರುಡ ಯಕ್ಷ ಮಾನಸಿ ಯಕ್ಷಿಯರು ಮಾಡಿದರು. ಇಂತಹ ಸುದೀರ್ಘವಾದ ಚರಿತ್ರೆಯ ಕಥೆಯನ್ನು ಒಬ್ಬ ಹಾಡುಗಾರ ತನ್ನ ಹಾಡುಗಳಲ್ಲಿ ಚರಿತ್ರೆಯನ್ನು ಧಾರಣ ಮಾಡಿಕೊಂಡು ಸುಮಾರು ೫೫ ಹಾಡುಗಳಲ್ಲಿ ಶಾಂತಿನಾಥನ ಚರಿತ್ರೆಯನ್ನು ಸಮರ್ಥವಾಗಿ ಹೆಣೆದಿದ್ದಾನೆ. ಅಂತಹ ಹಾಡುಗಳಲ್ಲಿ ಕೆಲವೊಂದು ಹಾಡುಗಳನ್ನು ನೋಡಬಹುದು.

"ಮಂಗಲಾರತಿಯ ತಂದೆತ್ತಿರೆ ಜಗದೊಡೆಯ ಶಾಂತಿ
ಜಿನರಾಜಗೆ ಮಂಗಳಾರತಿಯ ತಂದೆತ್ತಿರೆ ||ಪಲ್ಲ||
ಕರಿಪುರಪತಿ ವಿಶ್ವಸೇನ ನೃಪೇಂದ್ರಗೆ
ತರುಣೆ ಐರಾದೇವಿ ಎಂಬಳಿಗೆ
ವರಸುತನಾಗಿ ಸಂಜನಿಸಿದ ದೇವಗೆ
ಪರಮ ಪುರುಷಗಾರತಿ ಎತ್ತಿದೆ ಮಂಗಳಾರತಿಯ||

ಲಕ್ಷಪರಮಾಯುಷಿ ಇಕ್ಷಾಕುವಂಶಗೆ
ಅಕ್ಷತ ಸುಖ ಫಲದಾಯಕಗೆ
ಮೋಕ್ಷ ಪದ್ಮೆಕ ಲಕ್ಷಣ ಕನಕಾಂಗಗೆ
ಅಕ್ಷರ ನಿರಘಗಾರತಿ ಎತ್ತಿರೆ ಮಂಗಳಾರತಿಯ||

ವರಚಕ್ರಿ ನಾಲ್ವತ್ತು ಬಿಲ್ಲುತ್ಸೇಧಗೆ
ವರವೀವ ಗರಡು ಯಕ್ಷೇಂದ್ರನಿಗೆ
ಪರಮ ದಯಾಳು ಮಾನಸಿಯಕ್ಷಿದೇವಿಗೆ
ನಿರಘನ ಸ್ತುತಿಸಿ ಆರತಿಯತ್ತಿರೆ ಮಂಗಳಾರತಿಯ||

ಕ್ಷಿತಿಯೊಳೈದನೆಯ ಚಕ್ರೇಶಗೆ ಭೂಪಗೆ
ಅತಿಸುಖವ ಸಂಪತ್ತಲಿರ್ದವಗೆ
ಗತಿನಾಲ್ಕು ಸುಲಭದಿ ಗೆಲಿದ ಮಹಾತ್ಮಗೆ
ಅತಿ ಪುಣ್ಯನಿಧಿಗಾರತಿಯೆತ್ತಿರೆ ಮಂಗಳಾರತಿಯ||

ಭವ ಭವದೊಳು ಬಹುಸುಖ ಉಂಡದೇವಗೆ
ಭುವನೇಶ ಹರಿಣೆಯ ಲಾಂಛನಗೆ
ಸುವಿದ್ರಾದಿ ಸಮ್ಮೇದ ಮೋಕ್ಷ ಪಡದಂಗೆ
ಭುವನ ಪ್ರಖ್ಯಾತಗಾರತಿಯತ್ತಿರೆ ಮಂಗಳಾರತಿಯ-"||[೧೧]

ಎನ್ನುವ ಈ ಹಾಡಿನಲ್ಲಿ ೧೬ನೇ ತೀರ್ಥಂಕರನ ಚರಿತ್ರೆಯನ್ನು ಮಂಗಳಾರತಿ ಸೊಗಸಾಗಿ ನಿರೂಪಿಸಿದ್ದಾನೆ. ಇಲ್ಲಿ ಹಾಡುಗಾರ ಅವನ ತಂದೆ ತಾಯಿ, ಕುಲ ಲಾಂಛನ, ಅವನ ಯಕ್ಷ-ಯಕ್ಷಿಯರು ಕೊನೆಗೆ ನಿರ್ವಾಣವಾದ ಸಮ್ಮೇದ ಶಿಖರವನ್ನು ಹಾಡುಗಳಲ್ಲಿ ಚರಿತ್ರೆಯ ಅಂಶಗಳನ್ನು ಹಿಡಿದಿಡುವುದನ್ನು ನೋಡಬಹುದು, ಕೇವಲ ೭ ಪದ್ಯಗಳಲ್ಲಿ ಇಡೀ ಚರಿತ್ರೆಯನ್ನೇ ಸಮರ್ಥವಾಗಿ ಜೀರ್ಣಿಸಿಕೊಂಡು ಹೇಳಿರುವುದು ಹಾಡುಗಾರನ ವಿಶೇಷತೆ ಎನ್ನಬಹುದು.

### ೫.೨.೩. ನೇಮಿನಾಥ

ನೇಮಿನಾಥ ಪುರಾಣವು ೨೨ನೇ ತೀರ್ಥಂಕರನನ್ನು ಆಧರಿಸಿ ಬರೆದಿರುವ ಜೈನ ಧಾರ್ಮಿಕ ಕಾವ್ಯ. ಕನ್ನಡದಲ್ಲಿ ಸುಮಾರು ೧೫ ಜನ ತೀರ್ಥಂಕರರನ್ನು ಕುರಿತು ಪುರಾಣಗಳನ್ನು ರಚಿಸಿದ್ದಾರೆ. ಅದರಲ್ಲಿ ಹರಿವಂಶವಾದ ನೇಮಿನಾಥ ಚರಿತ್ರೆಯಲ್ಲಿ ಕೃಷ್ಣನ ಚರಿತ್ರೆಯೂ ಬರುತ್ತದೆ. ಅಲ್ಲದೆ ಹರಿವಂಶದವರು ಕುರು ವಂಶದವರ ಸಂಗಡ ಸಂಬಂಧ ಬೆಳೆಸುವುದರಿಂದ ಕೌರವ ಪಾಂಡವರ ಕಥೆಯೂ ಈ ಪುರಾಣದಲ್ಲಿ ಅಡಕವಾಗಿದೆ. ಇಂತಹ ಚರಿತ್ರೆಯನ್ನು ಆಧರಿಸಿ ಕನ್ನಡದಲ್ಲಿ ನೇಮಿಚಂದ್ರನ ನೇಮಿನಾಥಪುರಾಣ, ಅರ್ಧ ನೇಮಿನಾಥ ಪುರಾಣ, ಮಹಾಬಲನ ನೇಮಿನಾಥ ಪುರಾಣಗಳು ರಚಿತವಾಗಿವೆ. ಆದರೆ ಈ ಅಧ್ಯಯನದಲ್ಲಿ ನೇಮಿಚಂದ್ರನ ಕೃತಿಯಾದ ಅರ್ಧನೇಮಿ ಪುರಾಣ ಚರಿತ್ರೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

| | |
|---|---|
| "೨೨ನೇ ತೀರ್ಥಂಕರ | ನೇಮಿನಾಥ |
| ವಂಶ | ಇಕ್ವಾಕುವಂಶ |
| ತಂದೆ | ಸಮುದ್ರ ವಿಜಯ |
| ತಾಯಿ | ಶಿವಾದೇವಿ |
| ಜನ್ಮನಗರ | ಶೌರಿಪುರ |
| ನಿರ್ವಾಣ | ಗಿರಿನಾಥಗಿರಿ |
| ಲಾಂಛನ | ಶಂಖ |
| ಯಕ್ಷ | ಸರ್ವಾಹಣ |
| ಯಕ್ಷಿ | ಕೂಷ್ಮಾಂಡಿನಿ |
| ಮೈಬಣ್ಣ | ಮಯೂರ ಕಂಠವರ್ಣ |
| ಭವಾವಳಿ | ಒಂಬತ್ತು ಭವಗಳು-"[೧೨] |

ಇಲ್ಲಿ ನೇಮಿಚಂದ್ರನ ಅರ್ಧನೇಮಿ ಪುರಾಣವನ್ನು ಹಾಡುಗಾರ ಓದಿ ತಿಳಿದವನಾಗಿದ್ದಾನೆ. ಆ ಕಾರಣದಿಂದಲೇ ಹಾಡುಗಳ ಮೂಲಕ ಇಲ್ಲಿ ಕಟ್ಟಿಕೊಟ್ಟಿರುವುದನ್ನು ನೋಡಬಹುದು. ಸುಮಾರು ೩೬೨ ಪದ್ಯಗಳಲ್ಲಿ ನೇಮಿನಾಥ ಚರಿತ್ರೆಯನ್ನು ಹಾಡುಗಾರ ಚಿತ್ರಿಸಿದ್ದಾನೆ.

"ನೇಮಿಜಿನೇಶ್ವರಸ್ವಾಮಿ ಕೇಳಿಮನವೊಲಿದು

ನೇಮಿಶ್ವರ ಸ್ವಾಮಿ ಪದವಿಯನು"||[೧೩]

ಹೀಗೆ ಪ್ರಾರಂಭವಾದ ೨೭೩ ಹಾಡುಗಳಲ್ಲಿ ನೇಮಿನಾಥನ ಹುಟ್ಟಿನಿಂದ ಹಿಡಿದು ನಿರ್ವಾಣ ಹೊಂದುವತನಕ ಆಗುವ ಎಲ್ಲ ಕ್ರಿಯೆಗಳನ್ನು ವರ್ಣಿಸುವ ಮೂಲಕ ಕಣ್ಣಿಗೆ ಕಟ್ಟುವಂತೆ ಕಥೆಯನ್ನು ಓದಿದಂತೆ ಭಾಸವಾಗುತ್ತದೆ. ಕೆಲವೊಂದು ಹಾಡುಗಳು ಈ ಕೆಳಗಿನಂತಿವೆ.

ನೇಮಿನಾಥನ ಪಂಚಕಲ್ಯಾಣವನ್ನು ಹೇಳ್ವೆ

ನೇಮದಿಂದ ಶಮಭವಗಳ ಸಹಿತವಾಗಿ||

ವರಜಂಬೂದ್ವೀಪದ ಪೂರ್ವವಿದೇಹದೊಳು

ದುರತರ ಪುಷ್ಕಳ ವಿಷಯ ದೇಶದೊಳಿಹೆ||"[೧೪]

ಇಲ್ಲಿ ಹಾಡುಗಾರ ಶಿಷ್ಟಕಾವ್ಯ ಪರಂಪರೆಯಂತೆ ಪದ ಜಂಜೂದ್ವೀಪದೊಳ ಪೂರ್ವ ವಿದೇಹ ಎಂಬ ನಗರ ವರ್ಣನೆಯಿಂದ ಪ್ರಾರಂಭಿಸುತ್ತಾನೆ. ಕೊನೆಗೆ

"ನೇಮಿನಾಥನ ಪಂಚಕಲ್ಯಾಣವಿದು ಮತ್ತೆ

ಪ್ರೇಮದಿ ಚಂದ್ರಸೂರ್ಯರ ಕಾಲ ಪರಿಪರಿಯಿಂದ ||

ನೇಮಿನಾಥನ ಪದವನು ಕೇಳುವವರಲ್ಲ

ನೇಮದಿ ಶ್ರೀಮುಕ್ತಿ ಲಕ್ಷ್ಮಿಯ ಪಡೆವರು||

ಮಂಗಲಮಸ್ತು ಶುಭಮಸ್ತು ಸುರುಮಸ್ತು

ತುಂಗನೇಮಿಶವಸ್ತು ಶುಭವಸ್ತು ಶ್ರೀರಸ್ತು"||[೧೫]

ಎಂದು ಕೊನೆಗೊಳ್ಳುತ್ತದೆ. ಇಲ್ಲಿ ನೇಮಿನಾಥನ ಚರಿತ್ರೆಯನ್ನು ಹೇಳುವುದಷ್ಟೆಯಲ್ಲ; ಅದನ್ನು ಭಕ್ತಿ ಪೂರ್ವಕವಾಗಿ ಜನಸಮೂಹಕ್ಕೆ ಅರ್ಪಿಸುತ್ತಿದ್ದಾನೆ. ನೇಮಿನಾಥನ ಚರಿತ್ರೆಯ ಮಹಾತ್ಮೆಯನ್ನು ಹೊಗಳುತ್ತಿದ್ದಾನೆ. ಇಂತಹ ಅಮೂಲ್ಯವಾದ ಚರಿತ್ರೆಯನ್ನು ಹಾಡುಗಾರ ನಿರೂಪಿಸುವ ಕ್ರಮ ಬಹಳ ವಿಶೇಷವಾದುದಾಗಿದೆ. ಹಾಗೆಯೇ ಈ ಹಾಡನ್ನು ಲಯಬದ್ಧವಾಗಿ ಪದಬಂಧಗಳಿಂದ ಕಟ್ಟಿಕೊಟ್ಟಿದ್ದಾನೆ.

### ೫.೨.೪. ಅಜಿತನಾಥ

ರನ್ನ ಕವಿಯು ರಚಿಸಿದ ಅಜಿತನಾಥ ಪುರಾಣವು ೨ನೇ ತೀರ್ಥಂಕರನಾದ ಅಜಿತನಾಥನ ಕಥೆ. ಈ ಕಾವ್ಯವು ೭೮೧ ಪದ್ಯಗಳು ಮತ್ತು ಗದ್ಯದಿಂದ ಕೂಡಿದೆ. ಈ ಅಜಿತನಾಥ ತೀರ್ಥಂಕರ ಅತ್ತಿಮಬ್ಬೆಯ ಮನೆದೇವರು ಆದ ಕಾರಣ ಈ ಕೃತಿಯ ಸಾವಿರ ಪ್ರತಿಗಳನ್ನು ಮಾಡಿಸಿ ಪ್ರಸಾರ ಮಾಡಿದಳು ಎಂಬ ಉಲ್ಲೇಖವಿದೆ.

| | |
|---|---|
| ೨ನೇ ತೀರ್ಥಂಕರ | ಅಜಿತನಾಥ |
| ತಂದೆ | ಜಿತಾಶತ್ರು |
| ತಾಯಿ | ವಿಜಯದೇವಿ |

| | |
|---|---|
| ಜನ್ಮನಗರ | ಅಯೋಧ್ಯೆ |
| ನಿರ್ವಾಣ ಸ್ಥಳ | ಸಮ್ಮೇದ ಶಿಖರ |
| ಯಕ್ಷ | ಮಹಾಯಕ್ಷ |
| ಯಕ್ಷಿ | ರೋಹಿಣಿ |
| ಲಾಂಛನ | ಆನೆ |
| ಮೈಬಣ್ಣ | ಹೊಂಬಣ್ಣ |
| ಭವಾವಳಿ | ೨ ಭವಗಳು |
| ವಂಶ | ಇಕ್ಷ್ವಾಕುವಂಶ |

ಈ ಮೇಲಿನ ಲಕ್ಷಣಗಳ ಮಾಹಿತಿಯು ಅಜಿತನಾಥ ತೀರ್ಥಂಕರನ ಚರಿತ್ರೆಗೆ ಸಂಬಂಧಿಸಿದವು. ಅಜಿತನಾಥ ಪುರಾಣದಲ್ಲಿ ಕಥೆಯು ಹೀಗೆ ಪ್ರಾರಂಭವಾಗುತ್ತದೆ. ಸುಸೀಮಾನಗರದ ವಿಮಲವಾಹನ ರಾಜನು ತನ್ನ ಕೆನ್ನೆಯಲ್ಲಿನ ನೆರೆಕೂದಲನ್ನು ನೋಡಿ ವೈರಾಗ್ಯದಿಂದ ತಪಸ್ಸಿಗೆ ತೆರಳಿದನು. ಮರಣಾನಂತರ ಆ ಜೀವ ಸಾಕೇತಪುರದ ಜಿತಶತ್ರು ವಿಜಯಸೇನಾದೇವಿ ದಂಪತಿಗಳಿಗೆ ಅಜಿತನಾಥ ತೀರ್ಥಂಕರನಾಗಿ ಹುಟ್ಟಿದನು. ನಂತರ ಅಜಿತನಾಥನಿಗೆ ಪ್ರಾಪ್ತವಯಸ್ಸಿನಲ್ಲಿ ವಿವಾಹ ಬಂಧ ಮತ್ತು ಪಟ್ಟ ಬಂಧವಾಯಿತು. ಒಮ್ಮೆ ಉಲ್ಕಾಪಾತವನ್ನು ಕಂಡು ಅಜಿತನಾಥನು ವೈರಾಗ್ಯ ಮೂಡಿ ತಪಸ್ಸನ್ನು ಕೈಗೊಂಡನು. ನಂತರ ಕೇವಲ ಜ್ಞಾನ ಪಡೆದನು. ಇದೇ ಅವಧಿಯಲ್ಲಿ ಆಗಿ ಹೋದ ಸಗರ ಚಕ್ರವರ್ತಿಯ ಹಿಂದಿನ ಭವಗಳ ಹಿತೈಷಿಯಾದ ಮಣಿಕೇತು ಬ್ರಾಹ್ಮಣ ರೂಪದಲ್ಲಿ ಬಂದು ವೈರಾಗ್ಯ ಮೂಡಿಸಿದನು. ಇಲ್ಲಿಯೂ ಸಹ ತೀರ್ಥಂಕರನನ್ನು ಎರಡೇ ಭವಗಳಲ್ಲಿ ಅಜಿತನಾಥ ಚರಿತ್ರೆಯನ್ನು ಹೇಳಿ ಸುಗಮ ಮಾಡಿದ್ದಾನೆ. ಹಾಗೆಯೇ ಈ ಸಂದರ್ಭದಲ್ಲಿ ಇಂದ್ರನು ಕಾಲಕಾಲಕ್ಕೆ ತೀರ್ಥಂಕರನಾಗಿ ನಡೆಯುವ ಪಂಚಕಲ್ಯಾಣಗಳನ್ನು ಪ್ರಭಾವಶಾಲಿಯಾಗಿ ನಿರೂಪಿಸಿದ್ದಾನೆ. ರನ್ನ ಪೂರ್ವಕವಿಗಳ ಮಾರ್ಗವನ್ನು ಅನುಸರಿಸಿದರೂ ಕೆಲವೊಂದು ಸ್ವಂತಿಕೆಗಳನ್ನು ಈ ಕಾವ್ಯದಲ್ಲಿ ಮೆರೆದಿದ್ದಾನೆ. ಇಂತಹ ಅಮೂಲ್ಯವಾದ ತೀರ್ಥಂಕರನ ಚರಿತ್ರೆಯ ಕಥೆಯನ್ನು ಜೈನಹಾಡುಗಳಲ್ಲಿ ಅಲ್ಲಲ್ಲಿ ಉಲ್ಲೇಖಿತವಾಗಿರುವುದು ಕಂಡುಬರುತ್ತದೆ. ಆದರೆ ಸಂಪೂರ್ಣವಾಗಿ ಅಜಿತನಾಥನ ಪಂಚಕಲ್ಯಾಣಗಳ ವರ್ಣನೆಗಳು ಈ ಹಾಡಿನಲ್ಲಿ ಬರುವುದಿಲ್ಲ. ಅದರ ಬದಲಾಗಿ ಬಿಡಿಬಿಡಿಯಾಗಿ ೮-೯ ಪದ್ಯಗಳಲ್ಲಿ ಉಲ್ಲೇಖವಾಗಿರುವುದನ್ನು ಗಮನಿಸಬಹುದು. ಆ ಹಾಡು ಹೀಗಿದೆ.

"ಭಜಿಸುವ ಭಕ್ತಿಯಿಂದಲಿ ನಾನೊಮ್ಮೆ
ಅಜಿತ ಜಿನರ ಪಾದಯುಗವಾ||ಪಲ್ಲ||
ಗಜರಿಪು ವಿಷ್ಟ್ರದ ಸುಜನ ಮನೋರಥ
ಅಜನುತ ಪಾದಪಯೋಜನಿಗೆ
ಗಜಲಾಂಛನಧರ ಶಿವದಾತನಿಗೆ
ಅಜಿತ ಜಿನೇಶ್ವರ ಪರಮೇಶನಿಗೆ||"[೨೮]

ಇಂತಹ ಕೆಲವೊಂದು ಬಿಡಿಯಾದ ಪದ್ಯಗಳು ಸಿಗುವುದರಿಂದ ಸಂಪೂರ್ಣವಾದ ಚರಿತ್ರೆ ಈ ಹಾಡುಗಳಲ್ಲಿ ಕಂಡುಬರುವುದಿಲ್ಲ. ಆದರೆ ಇಲ್ಲಿ ಹಾಡುಗಾರ ಭಕ್ತಿಯಿಂದ ಅಜಿತನಾಥನ ಮಾಹಿತಿಯನ್ನು ಭಜಿಸುವ ಮತ್ತು ವಿಶಿಷ್ಟ ಗುಣಗಳನ್ನು ಪ್ರಸ್ತಾಪಿಸಿದ್ದಾನೆ.

### ೫.೨.೫. ಧರ್ಮನಾಥ

ಧರ್ಮನಾಥ ಪುರಾಣವು ೧೫ನೇ ತೀರ್ಥಂಕರನಾದ ಧರ್ಮನಾಥನನ್ನು ಆಧರಿಸಿದ ಕಥೆಯಾಗಿದೆ. ಈ ಧರ್ಮನಾಥ ತೀರ್ಥಂಕರನನ್ನು ಕುರಿತು ಕನ್ನಡದಲ್ಲಿ ಎರಡು ಕೃತಿಗಳು ರಚಿತವಾಗಿವೆ. ಒಂದು ಬಾಹುಬಲಿ ಕವಿ ರಚಿತವಾದುದು. ಇನ್ನೊಂದು ಮಧುರ ಕವಿ ರಚಿಸಿದುದು. ಈ ಎರಡು ಕವಿಗಳು ಧರ್ಮನಾಥನನ್ನೇ ಕುರಿತಾಗಿ ಬರೆದಿದ್ದಾರೆ.

| | |
|---|---|
| ೧೫ನೇ ತೀರ್ಥಂಕರ | ಧರ್ಮನಾಥ |
| ತಂದೆ | ಭಾನುರಾಜ |
| ತಾಯಿ | ಸುಪ್ರಭಾ(ಸುವ್ರತಾ) |
| ಜನ್ಮನಗರ | ಹಸ್ತಿನಾಪುರ(ರತ್ನಪುರ) |
| ನಿರ್ವಾಣಸ್ಥಳ | ಸಮ್ಮೇದ ಶಿಖರ |
| ಯಕ್ಷ | ಕಿನ್ನರ |
| ಯಕ್ಷಿ | ಅಂತಮತಿ |
| ಲಾಂಛನ | ವಜ್ರದಂಡ |
| ಮೈಬಣ್ಣ | ಹೊಂಬಣ್ಣ |
| ವಂಶ | ಕುರುವಂಶ |
| ಭವಾವಳಿ | ಮೂರು ಭವಗಳು |

ಬಾಹುಬಲಿ ರಚಿಸಿದ ಧರ್ಮನಾಥ ಪುರಾಣ ೧೬ ಆಶ್ವಾಸಗಳಿಂದ ಕೂಡಿದೆ. ಈ ಕಥೆಯು ಜಂಬೂ ದ್ವೀಪದ ದಕ್ಷಿಣ ದಿಶಾಭಾಗದಲ್ಲಿ ಭರತ ಕ್ಷೇತ್ರವು ರಾರಾಜಿಸುತ್ತಿತ್ತು. ಉತ್ತರ ಕೌಶಲದೇಶ ವಿರಾಜಮಾನ ವಾಗಿತ್ತು. ಅಲ್ಲಿ ಮಹಾಸೇನ ಮಹಾರಾಜ ಮತ್ತು ಅವನ ಹೆಂಡತಿ ಸುವ್ರತಾದೇವಿ ಇವರು ಸಮಸ್ತ ಭೋಗ ಭಾಗ್ಯಗಳನ್ನು ಅನುಭವಿಸುತ್ತಿದ್ದರು. ಆದರೆ ಇವರಿಗೆ ಮಕ್ಕಳಿರಲಿಲ್ಲ. ಇದನ್ನು ಚಾರಣಋಷಿಗಳೊಡನೆ ಬೋಧನೆಯನ್ನು ಕೇಳಿ ತರುವಾಯ ಭವಾಂತರ ಪ್ರಪಂಚವನ್ನು ನಿರೂಪಿಸುತ್ತಾನೆ. ಆಗ ಜಂಬೂದ್ವೀಪದ ಮೇರುಗಿರಿಯ ಪ್ರದೇಶದಲ್ಲಿ ಭಾನುರಾಜ ಅವನ ಹೆಂಡತಿ ಚಿತ್ರವಲ್ಲಭೆ ಮನೋಹರಿ ಇವರಿಗೆ ದಶರಥನೆಂಬ ಮಗನಾಗಿ ಹುಟ್ಟುತ್ತಾನೆ. ಇವನ ತರುವಾಯ ಅಹಮೀಂದ್ರನಾಗಿ ಅವಧಿಜ್ಞಾನ ಪಡೆದು ನಂತರ ಮಹಾಸೇನ ಮಹಾರಾಜ ಮತ್ತು ಸುವ್ರತ ಮಹಾದೇವಿಯರಿಗೆ ಹದಿನೈದನೆಯ ತೀರ್ಥಂಕರನಾಗಿ ಹುಟ್ಟುತ್ತಾನೆ. ನಂತರ ಎಲ್ಲ ತೀರ್ಥಂಕರರ ಧಾರ್ಮಿಕ ಕಾವ್ಯಗಳಂತೆ ಪಂಚಕಲ್ಯಾಣಗಳನ್ನು ಕಾಲಕಾಲಕ್ಕೆ ಇಂದ್ರನು ನೆರವೇರಿಸುತ್ತಾನೆ. ಕೊನೆಗೆ ಒಮ್ಮೆ ಧರ್ಮನಾಥನ ಸಭೆಯಲ್ಲಿದ್ದಾಗ ಪ್ರಳಯಕಾಲದ ಮಂದಾಗ್ನಿಯೇ ಎಂಬಂತೆ ಒಂದು

ಉಲ್ಕಾಪಾತವಾಯಿತು. ಇದನ್ನು ಕಂಡು ವೈರಾಗ್ಯಪರನಾದನು. ಇದು ಬಾಹುಬಲಿಯು ರಚಿಸಿದ ಸಂಕ್ಷಿಪ್ತ ಕಥಾ ಸಾರಾಂಶ.

ಮಧುರ ಕವಿಯು ಧರ್ಮನಾಥ ಪುರಾಣವನ್ನು ವಸ್ತು ನಿರೂಪಣೆಯಲ್ಲಿ ಬಾಹುಬಲಿಯ ಕೃತಿಯಂತೆ ನಿರೂಪಿಸಿದ್ದಾನೆ. ಇಲ್ಲಿ ಯಾವುದೇ ವ್ಯತ್ಯಾಸಗಳಿಲ್ಲ. ಆದರೆ ವರ್ಣನೆ ಸಂದರ್ಭದಲ್ಲಿ ಬೇರೆಬೇರೆ ಸಂದರ್ಭಗಳನ್ನು ತೆಗೆದುಕೊಂಡಿರುವುದು ಕಂಡುಬರುತ್ತದೆ. ಇಲ್ಲಿ ರಾಜ ಮಹಾಸೇನ ದಂಪತಿಗಳಿಗೆ ಮಕ್ಕಳಾಗಿರುವುದಿಲ್ಲ. ಒಂದು ದಿನ ಸುವ್ರತೆ ತನ್ನ ಗಾಳಿಪಟದಲ್ಲಿರುವ ಚಿತ್ರಗಳಲ್ಲಿ ಹೆಣ್ಣಾನೆಯು ತನ್ನ ಮರಿಗಳೊಂದಿಗೆ ಇರುವ ಚಿತ್ರವನ್ನು ನೋಡಿ ದುಃಖಿತಳಾದಳು. ಕೊನೆಗೆ ಇವರ ರಾಜ್ಯಕ್ಕೆ ಪ್ರಚೇತ ಎಂಬ ಮುನಿ ಬರುವರು. ಅವರ ದರ್ಶನದಿಂದ ಮುಂದಿನ ಭವಾವಳಿಗಳ ಕಥೆಯನ್ನು ಕೇಳಿ ಸಂತೋಷ ಪಡುತ್ತಾರೆ. ಹೀಗೆ ಬಾಹುಬಲಿಯ ಕೃತಿಯಂತೆ ೩ ಭವಗಳನ್ನು ತಾಳುತ್ತಾನೆ. ಹಾಗೆಯೇ ಚಾವುಂಡರಾಯನ 'ತ್ರಿಷಷ್ಠಿಶಲಾಕ ಪುರುಷರು' ಎಂಬ ಕೃತಿಯಲ್ಲಿ ಧರ್ಮನಾಥನ ಚರಿತ್ರೆಯು ಬರುತ್ತದೆ. ಹೀಗೆ ಒಬ್ಬ ತೀರ್ಥಂಕರರನ್ನು ಕುರಿತು ಹಲವಾರು ಕವಿಗಳು ಅವರ ಚರಿತ್ರೆಯನ್ನು ರಚಿಸಿರುವುದನ್ನು ನೋಡಬಹುದು. ಹಾಗೆಯೇ ಜೈನ ಹಾಡುಗಳಲ್ಲಿಯೂ ಸಹ ಧರ್ಮನಾಥನ ಚರಿತ್ರೆಯನ್ನು ಚಿತ್ರಿಸಿದ್ದಾನೆ. ಈತನನ್ನು ಕುರಿತು ಅಲ್ಲಲ್ಲಿ ಬಿಡಿಯಾದ ಪದ್ಯಗಳು ಮಾತ್ರ ಸಿಗುತ್ತವೆ. ಸುಮಾರು ೭, ೮ ಪದ್ಯಗಳಲ್ಲಿ ಮಾತ್ರ ಇವನ ಕುರಿತು ಮಾಹಿತಿ ಕಂಡು ಬರುತ್ತವೆ. ಅದರಲ್ಲಿ ಒಂದು ಹಾಡು ಹೀಗಿದೆ.

"ಕರ್ಮಾಂತಕ ಶ್ರೀದಶರಥ ಚರಗೆ
ನಿರ್ಮಲ ಭಾವರೋಜೋದ್ಭವಗೆ
ಧರ್ಮಾಮೃತವನು ಕರೆದ ಮಹಾತ್ಮಗೆ
ಸಮೋಕ್ಷ ಪತಿಧರ್ಮನಾಥನಿಗೆ"[೧೬]

ಈ ಹಾಡಿನಲ್ಲಿ ಧರ್ಮನಾಥನ ಮೊದಲ ಭವಾವಳಿಯಾದ ದಶರಥನನ್ನು ಉಲ್ಲೇಖಿಸುವುದರ ಜೊತೆಗೆ ತಾನು ಹಲವು ಜನ್ಮಗಳ ಮೂಲಕ ಬಂದು ಮೋಕ್ಷವನ್ನು ಪಡೆದ ಧರ್ಮನಾಥನನ್ನು ಹಾಡುಗಾರ ಭಕ್ತಿಯಿಂದ ಆರಾಧಿಸುತ್ತಾನೆ.

### ೫.೨.೬. ಮಲ್ಲಿನಾಥ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಮಹತ್ವದ ಸ್ಥಾನವನ್ನು ನಾಗಚಂದ್ರ ಕವಿ ಗುರುತಿಸಿಕೊಂಡಿದ್ದಾನೆ. ಕವಿ ತನ್ನ ಎರಡು ಕೃತಿಗಳಾದ 'ಮಲ್ಲಿನಾಥಪುರಾಣ' ಹಾಗೂ 'ರಾಮಚಂದ್ರ ಚರಿತ ಪುರಾಣ' ಬರೆಯುವುದರ ಮೂಲಕ ತನ್ನ ವಿಶಿಷ್ಟತೆಯನ್ನು ಕಂಡುಕೊಂಡ ಕವಿ. ಮಲ್ಲಿನಾಥ ಪುರಾಣವು ಚಂಪೂಕೃತಿಯಾಗಿದ್ದು ೧೯ನೇ ತೀರ್ಥಂಕರನ ಕಥೆಯನ್ನು ಆಧರಿಸಿದ ಜೀವನಚರಿತ್ರೆಯಾಗಿದೆ. ಈ ಕೃತಿಯು ೧೪ ಆಶ್ವಾಸಗಳಲ್ಲಿ ಹರಡಿಕೊಂಡಿದೆ.

| | |
|---|---|
| ೧೯ನೇ ತೀರ್ಥಂಕರ | ಮಲ್ಲಿನಾಥ |
| ತಂದೆ | ಕುಂಭರಾಜ |
| ತಾಯಿ | ಸುಪ್ರಭಾದೇವಿ |

| | |
|---|---|
| ಜನ್ಮಸ್ಥಳ | ಮಿಥಿಲಾ ನಗರ |
| ನಿರ್ವಾಣ ಸ್ಥಳ | ಸಮ್ಮೇರ ಶಿಖರ |
| ಯಕ್ಷ | ಕುಬೇರ |
| ಯಕ್ಷಿ | ಅಪರಾಜಿತಾ |
| ಲಾಂಛನ | ಕುಂಭ |
| ಮೈಬಣ್ಣ | ಹೊಂಬಣ್ಣ |
| ಭವಾವಳಿ | ಮೂರು ಭವಗಳು |
| ವಂಶ | ಇಕ್ಷ್ವಾಕು |

ಈ ಕೃತಿಯ ಮೊದಲನೇ ಆಶ್ವಾಸದಲ್ಲಿ ಎಲ್ಲ ಕೃತಿಗಳಂತೆ ತೀರ್ಥಂಕರನ ಸ್ತುತಿ, ಮುನಿಸ್ತುತಿ, ಗುರುಸ್ತುತಿ ಮತ್ತು ಕಾವ್ಯ ಲಕ್ಷಣಗಳನ್ನು ಹೇಳುತ್ತಾನೆ. ಎರಡನೇ ಆಶ್ವಾಸದಿಂದ ಮಲ್ಲಿನಾಥನ ಕಥೆಯು ಜನ್ಮಸ್ಥಳದ ವರ್ಣನೆಯೊಂದಿಗೆ ಕಥೆಯನ್ನು ಆರಂಭ ಮಾಡುತ್ತಾನೆ.

ಜಂಬೂದ್ವೀಪದ ನಟ್ಟನಡುವೆ ಮಂದರ ಪರ್ವತ. ವಿದೇಹ ದೇಶ. ಅದರಲ್ಲಿ ೩೨ ನಾಡುಗಳು. ಅವುಗಳಲ್ಲಿ ಕಚ್ಚಾಕಾವತಿ ಅದರ ರಾಜಧಾನಿ ಪೀತಶೋಕಪುರ. ಇಲ್ಲಿ ವೈಶ್ರವಣನೆಂಬುವವನು ಈ ದೇಶದ ದೊರೆ. ಇವನ ಹೆಂಡತಿ ಧನಶ್ರೀ. ಇವರಿಗೆ ಮಕ್ಕಳಿರಲಿಲ್ಲವೆಂಬ ಚಿಂತೆಯಲ್ಲಿ ಇರುವಾಗ, ಒಂದು ದಿನ ಧನಶ್ರೀಯು ಉಪ್ಪರಿಗೆಯ ಮೇಲೆ ಸಖಿಯರೊಂದಿಗೆ ಸುಖ ಸಲ್ಲಾಪದಲ್ಲಿದ್ದಾಗ ತಾವರೆಕೊಳದಲ್ಲಿದ್ದ ಹೆಣ್ಣು ಮರಾಳ ಪಕ್ಷಿ ಅದರ ಮರಿಗಳೊಂದಿಗೆ ಆಡುತ್ತಿದ್ದುದನ್ನು ಕಂಡು ಪುತ್ರವ್ಯಾಮೋಹಕ್ಕೆ ಒಳಗಾಗುತ್ತಾಳೆ. ಹೀಗೆ ಇರುವಾಗ ಒಂದು ದಿನ ಕೆಳದಿಯೊಬ್ಬಳಿಂದ ರಾಜನಿಗೆ ನಿಮಗೆ ಮಕ್ಕಳು ಪ್ರಾಪ್ತಿಯಾಗುತ್ತದೆ ಎಂದು ತಿಳಿಯುತ್ತದೆ. ಇದರಿಂದ ಸಂತೋಷಗೊಂಡ ರಾಜದಂಪತಿಗಳು ಕೆಲ ದಿನಗಳು ಸಂದ ನಂತರ ಕನಸನ್ನು ಕಾಣುತ್ತಾಳೆ. ಆಗ ಶ್ರೀಧರನೆಂಬ ಮಗುವಿಗೆ ಜನ್ಮ ನೀಡುತ್ತಾಳೆ. ಅನಂತರ ೫ನೇ ಆಶ್ವಾಸದಿಂದ ೯ನೇ ಆಶ್ವಾಸದವರೆಗೆ ಬಾಲಲೀಲೆ, ವನವಿಹಾರ ವರ್ಣನೆ ಜಲಕೇಳಿಯ ವರ್ಣನೆ, ಸಂಧ್ಯಾಕಾಲ ವರ್ಣನೆ, ವೇಶ್ಯಾವಾಟಿಕೆ, ಸೂರ್ಯೋದಯ ಮೊದಲಾದ ವರ್ಣನೆಗಳು ಬರುತ್ತವೆ. ೯ನೇ ಆಶ್ವಾಸದಲ್ಲಿ ವೈಶ್ರವಣ ಬಲಾಟ ಲೋಕವನ್ನು ಮುಗಿಸಿ ಬರುವಾಗ ಭಯಂಕರ ಗುಡುಗು ಮಳೆಗೆ ಬಿರುಗಾಳಿಗೆ ವಿಶಾಲವಾಗಿ ಹರಡಿದ್ದ ಆಲದ ಮರ ಬುಡಮೇಲಾಗಿ ಬಿದ್ದಿರುವುದನ್ನು ನೋಡಿ, ಜೀವದ ಕ್ಷಣಿಕತೆಯ ಬಗ್ಗೆ ಜಿಜ್ಞಾಸೆ ಮೂಡುತ್ತದೆ. ನಂತರ ವೈರಾಗ್ಯವನ್ನು ಹೊಂದಿ, ಉಗ್ರ ತಪಸ್ಸಿನಿಂದಾಗಿ ವೈಶ್ರವಣನು ಅಪರಾಜಿತ ವಿಮಾನದಲ್ಲಿ ಅಹಮೀಂದ್ರನಾಗಿ ಹುಟ್ಟುತ್ತಾನೆ. ಈ ಅವಧಿಯಲ್ಲಿ ಸುಖದಿಂದ ಪರಮಾಯುಷ್ಯವನ್ನು ಕಳೆಯುತ್ತಾನೆ. ನಂತರ ಆಹಮೀಂದ್ರನು ತೀರ್ಥಂಕರನಾಗಿ ಜನಿಸುತ್ತಾನೆ ಎಂಬುದನ್ನು ತಿಳಿದು ಭವಾಲೋಕದಲ್ಲಿ ಗರ್ಭಕಲ್ಯಾಣ ಪೂರ್ವಸಿದ್ಧತೆಗೆ ಇಂದ್ರನು ತೊಡಗುತ್ತಾನೆ. ಕೆಲವು ದಿನಗಳಲ್ಲಿ ಮಿಥಿಲಾಪುರದ ರಾಜನಾದ ಕುಂಭರಾಜ ಮತ್ತು ಅವನ ಪತ್ನಿ ಪ್ರಭಾವತಿಯ ಗರ್ಭದಲ್ಲಿ ಜಿನ ಶಿಶುವಾಗಿ ಜನ್ಮ ತಾಳುತ್ತಾನೆ. ಮುಂದೆ ಯಥವತ್ತಾಗಿ ಎಲ್ಲ ತೀರ್ಥಂಕರ ಕಾವ್ಯಗಳಂತೆಯೇ ಪಂಚಕಲ್ಯಾಣಗಳು ಇಂದ್ರನು ಸಹ ದೇವತೆಗಳೊಂದಿಗೆ ನೆರವೇರಿಸುತ್ತಾನೆ.

ಕೊನೆಗೆ ಮಲ್ಲಿನಾಥನ ವಿವಾಹಮಂಟಪ ಸಿದ್ಧವಾಯಿತು. ಆ ವಿವಾಹಮಂಟಪವು ತನ್ನ ಪೂರ್ವಜನ್ಮದ ಅಪರಾಜಿತ ವಿಮಾನದ ಹಾಗೆ ಕಂಡುಬಂದಿತು.

ಪೂರ್ವಭವ ಸ್ಮರಣೆಯಿಂದ ಅವನಲ್ಲಿ ವೈರಾಗ್ಯ ಮೂಡಿ ಸನ್ಯಾಸವನ್ನು ಸ್ವೀಕರಿಸುತ್ತಾನೆ. ನಂತರ ಜಿನನ ಪರಿನಿಷ್ಕ್ರಮಣ ಕಲ್ಯಾಣವನ್ನು ಪೂರೈಸಿದ ನಂತರ ಮಲ್ಲಿನಾಥ ಧರ್ಮೋಪದೇಶವನ್ನು ಮಾಡಿ ಮಲ್ಲಿನಾಥನು ಮೋಕ್ಷವನ್ನು ಕೈಗೊಳ್ಳುತ್ತಾನೆ. ನಾಗಚಂದ್ರನ ಈ ಪುರಾಣವು ತನ್ನ ಕವಿ ಪ್ರತಿಭೆಯ ಚಮತ್ಕಾರವನ್ನು ತೋರಿಸಿದ್ದಾನೆ. ಇಲ್ಲಿ ನಾಗಚಂದ್ರ ಎಲ್ಲ ಜೈನಕವಿಗಳಂತೆ ತೀರ್ಥಂಕರರ ಚರಿತ್ರೆಯನ್ನು ಧರ್ಮಕ್ಕೆ ನಿಷ್ಠವಾಗಿ ಧಾರ್ಮಿಕ ಕಾವ್ಯವನ್ನು ರಚಿಸಿದಂತೆ ಈತನು ಕೂಡ ಮಲ್ಲಿನಾಥ ಪುರಾಣವನ್ನು ಬರೆಯುವುದರ ಮೂಲಕ ಧಾರ್ಮಿಕ ನಿಷ್ಠೆಯನ್ನು ತೋರಿಸಿದ್ದಾನೆ. ಇಂತಹ ಮಲ್ಲಿನಾಥನ ಕಥೆಯನ್ನು ಒಬ್ಬ ಹಾಡುಗಾರ ಓದಿ ಗ್ರಹಿಸಿಕೊಂಡು ಅವನ್ನು ಹಾಡುಗಳ ಮುಖಾಂತರ ಅಭಿವ್ಯಕ್ತಿಸಿರುವುದು ಕಂಡು ಬರುತ್ತದೆ. ಮಲ್ಲಿನಾಥ ಚರಿತ್ರೆಯನ್ನು ಜೈನಹಾಡುಗಳಲ್ಲಿ ಅಲ್ಲಲ್ಲಿ ಪ್ರಸ್ತಾಪಿಸಿರುವುದು ನೋಡಬಹುದು. ಮಲ್ಲಿನಾಥ ಪುರಾಣದ ೧೪ನೇ ಆಶ್ವಾಸದಲ್ಲಿ ಮಲ್ಲಿನಾಥನ ತಪೋಭಂಗ ಮಾಡಲು ಕಾಮನು ಪ್ರಯತ್ನಿಸಿ ಸೋತುಹೋದ ಸಂದರ್ಭವನ್ನು ಹಾಡುಗಾರ ಕಟ್ಟಿಕೊಟ್ಟಿರುವುದನ್ನು ಕಾಣಬಹುದು.

"ಪುಲ್ಲಬಾಣನ ಸರಳೆಲ್ಲವು ಮುರಿದಿಕ್ಕಿ
ನಿಲ್ಲದೆ ಮುತ್ತಿನಲ್ಲಳ ನೆರೆದು
ಉಲ್ಲಾಸದೊಳು ಕೊಲ್ಲದ ಧರ್ಮವ ಪೇಳವ
ಮಲ್ಲಿಜಿನೇಶಗಾರತಿಯೆತ್ತಿರೇ"||[೧೪]

ಮಲ್ಲಿನಾಥ ಪುರಾಣದ ಕೊನೆಯ ಆಶ್ವಾಸದಲ್ಲಿ ಕಾಮನು, ಮಲ್ಲಿನಾಥನ ತಪಸ್ಸನ್ನು ಭಂಗ ಮಾಡಲು ಹೋಗಿ ಕೊನೆಗೆ ಪ್ರಯೋಜನವಿಲ್ಲದೆ ಬಂದ ಸಂದರ್ಭವನ್ನು ಹಾಡಿನಲ್ಲಿ ನೋಡಬಹುದಾಗಿದೆ. ಪುಲ್ಲಬಾಣನ ಸರಳೆಲ್ಲವು ಮುರಿದಿಕ್ಕಿ ಎಂಬ ಮಾತುಗಳು ವಿಶೇಷವಾದ ಅರ್ಥವನ್ನು ಕಲ್ಪಿಸಿದ್ದಾನೆ. ಇದರಲ್ಲಿ ಜೈನಧರ್ಮ ಅಹಿಂಸ ತತ್ವದ ಪ್ರತಿಪಾದನೆಯನ್ನು ಮಾಡುತ್ತಿರುವುದು ಕಾಣಬಹುದು. ಇನ್ನೊಂದು ಹಾಡಿನಲ್ಲಿ ಮಲ್ಲಿನಾಥ ತೀರ್ಥಂಕರನ ಚರಿತ್ರೆಯ ಕೆಲವೊಂದು ಲಕ್ಷಣಗಳನ್ನು ಹೇಳಿರುವುದನ್ನು ನೋಡಬಹುದಾಗಿದೆ.

"ಪುಲ್ಲಲೋಚನೆ ಪ್ರಭಾವತಿ ಗರ್ಭಾದಗೆ
ಪುಲ್ಲಶರಾಂತಕ ಭವಹರಗೆ
ಚೆಲ್ವ ಅಪರಾಜಿತೆ ಯಕ್ಷೆ ಸುಸೇವೆಗೆ
ಮಲ್ಲಿಜಿನೇಶ ಶ್ರೀ ವಲ್ಲಭಗೆ"||[೧೫]

ಈ ಹಾಡಿನಲ್ಲಿ ಮಲ್ಲಿನಾಥನ ತಾಯಿಯಾದ ಸುಪ್ರಭಾದೇವಿಯ ಹೊಟ್ಟೆಯಲ್ಲಿ ಜನಿಸಿದ ಮತ್ತು ತಾನು ತಪಸ್ಸಿನಲ್ಲಿ ನಿರತನಾದಾಗ ಕಾಮನು ತಪೋಭಂಗ ಮಾಡಲು ಬಂದು ಪ್ರಯೋಜನವಿಲ್ಲದೆ ಸೋತು ಹೋದ ಪ್ರಸಂಗವನ್ನು ಉಲ್ಲೇಖಿಸುತ್ತಾನೆ. ಜೊತೆಗೆ ಮಲ್ಲಿನಾಥನ ಯಕ್ಷಿಯಾದ ಅಪರಾಜಿತೆಯನ್ನು

ಹಾಡುಗಾರ ಭಕ್ತಿಯಿಂದ ಆರಾಧಿಸುತ್ತಿದ್ದಾನೆ. ಮಲ್ಲಿನಾಥ ಚರಿತ್ರೆಯ ಹಾಡುಗಳಲ್ಲಿ ಕೆಲವೊಂದು ಸಂದರ್ಭಗಳು ೬-೭ ಪದ್ಯಗಳಲ್ಲಿ ಮಾತ್ರ ಕಂಡುಬರುತ್ತವೆ. ಹಾಗೆಯೇ ಮಲ್ಲಿನಾಥನ ವಿಶೇಷ ಗುಣಲಕ್ಷಣಗಳನ್ನು ಕೊಂಡಾಡಿರುವುದು ಕೆಲವೊಂದು ಹಾಡುಗಳಲ್ಲಿ ಕಂಡುಬರುತ್ತವೆ.

### ೫.೨.೭. ಅನಂತನಾಥ

ಅನಂತನಾಥ ಪುರಾಣವು ಹದಿನಾಲ್ಕನೆಯ ತೀರ್ಥಂಕರನಾದ ಅನಂತನಾಥನ ಕಥೆಯಾಗಿದೆ. ಈ ಕೃತಿಯ ಹದಿನಾಲ್ಕು ಆಶ್ವಾಸಗಳು ಪ್ರೌಢ ಚಂಪೂಕಾವ್ಯ ಸಂಪ್ರದಾಯದಂತೆ ಬಲದೇವ ವಾಸುದೇವರ ಕಥೆಯನ್ನು ಸೇರಿಕೊಂಡಿದೆ. ಗುಣಭದ್ರಾಚಾರ್ಯರ ಉತ್ತರಪುರಾಣ ಮತ್ತು ಚಾವುಂಡರಾಯನ ತ್ರಿಷಷ್ಠಿಶಲಾಕಾ ಪುರುಷ ಪುರಾಣ ಕೃತಿಗಳು ಜನ್ನನ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದು.

| | |
|---|---|
| ೧೪ನೇ ತೀರ್ಥಂಕರ | ಅನಂತನಾಥ |
| ತಂದೆ | ಸಿಂಹಸೇನ |
| ತಾಯಿ | ಜಯಶ್ಯಾಮೆ |
| ಜನ್ಮಸ್ಥಳ | ಅಯೋಧ್ಯೆ |
| ನಿರ್ವಾಣ ಸ್ಥಳ | ಸಮ್ಮೇರ ಶಿಖರ |
| ಲಾಂಛನ | ವರಾಹ |
| ಯಕ್ಷ | ಪಾತಾಲ |
| ಯಕ್ಷಿ | ವೈರೋಚಿ |
| ಮೈಬಣ್ಣ | ಹೊಂಬಣ್ಣ |
| ವಂಶ | ಇಕ್ಷ್ವಾಕುವಂಶ |
| ಭವಾವಳಿ | ಎರಡು ಭವಾವಳಿ |

ಇವು ಅನಂತನಾಥನ ವಿಶಿಷ್ಟ ಲಕ್ಷಣಗಳು.

ಜನ್ನ ಜೈನಕವಿಗಳಲ್ಲಿ ವಿಶಿಷ್ಟವಾಗಿ ಗುರುತಿಸಿಕೊಂಡ ಕವಿ. ತನ್ನ ಕೃತಿಯಾದ 'ಯಶೋಧರ ಚರಿತೆ' ಮತ್ತು 'ಅನಂತನಾಥ ಪುರಾಣ'ವನ್ನು ಬರೆಯುವ ಮೂಲಕ ಶ್ರೇಷ್ಠತೆಯನ್ನು ಮೆರೆದ ಕವಿ. ಈ ಅನಂತನಾಥ ಪುರಾಣದಲ್ಲಿ ಚಂಡಶಾಸನ ಕಥೆ ಬರುತ್ತದೆ. ಜನ್ನ ಈ ಕಥೆಯನ್ನು ಸೇರಿಸುವುದರ ಮೂಲಕ ಮತ್ತಷ್ಟು ಈ ಕೃತಿಗೆ ಮಹತ್ವವನ್ನು ತಂದಿದ್ದಾನೆ. ಅನಂತನಾಥ ಪುರಾಣವು ಹೀಗೆ ಆರಂಭಗೊಳ್ಳುತ್ತದೆ.

ಕೌಸಲದೇಶದ ಅಯೋಧ್ಯಪುರಿಯನ್ನು ಸಿಂಹಸೇನ ದೊರೆ ಆಳುತ್ತಿದ್ದನು. ಇವನ ಪತ್ನಿ ಜಯ ಶ್ಯಾಮೆ. ಒಮ್ಮೆ ಅರಸ ತನ್ನ ಒಡ್ಡೋಲಗದಲ್ಲಿ ಕುಳಿತಿರುವಾಗ ಇಷ್ಟಶರ್ಮನೆಂದು ಒಬ್ಬ ಬ್ರಾಹ್ಮಣ ತನ್ನ ಶಿಷ್ಯನೊಡನೆ ಆಗಮಿಸಿದ. ಅವನ ಹಿಂದೆ ಸರ್ಮ ಚಕ್ರೇಶನ ರಾಜಲಕ್ಷ್ಮಿಯೆನಿಸುವ ಮದನಮಂಜರಿ ಇದ್ದಳು. ಇವಳು ಭುಜಂಗಸೇನ ನೃಪನ ಮಗಳು. ಜಯಶ್ಯಾಮೆ ಸಿಂಹಸೇನನಿಗೆ ಈಕೆ ನನ್ನ ಸೋದರಿ, ಬಾಲ್ಯದಲ್ಲಿ ಈಕೆಯನ್ನು ಉತ್ಪಲ ಚೂಡನೆಂಬ ವಿದ್ಯಾಧರ ಎತ್ತಿಕೊಂಡು ಹೋಗಿದ್ದ. ಅನಂತರ ಇವರಿಬ್ಬರಿಗೆ ಮದುವೆ ಮಾಡಿಸಿದ.

ಇದನ್ನು ತಿಳಿದ ಸಿಂಹಸೇನ ಎಲ್ಲರೂ ಕ್ಷೇಮವೆಂದು ಮದನಮಂಜರಿಯನ್ನು ಕೇಳಿದ. ಆಗ ಮದನ ಮಂಜರಿ ಎಲ್ಲರೂ ಕ್ಷೇಮ. ನಂದೀಶ್ವರಾಷ್ಟಮಿಯಲ್ಲಿ ರಾಜಶೇಖರ ಭಾವನೊಡನೆ ಕುರುವಿಂದವೆಂಬ ಗಿರಿಗೆ ಹೋಗಿ ಜಯಶ್ಯಾಮೆಗೆ ಪುತ್ರ ಸಂತಾನವಾಗಲೆಂದು ಮುನಿಗಳನ್ನು ಕೇಳಿದ. ಆಗ ಮುನಿ ತಿಳಿಸಿದ್ದನ್ನು ಬ್ರಾಹ್ಮಣ ಇಷ್ಟಶರ್ಮ ಕಥೆಯ ರೀತಿಯಲ್ಲಿ ನಿರೂಪಿಸುತ್ತಾನೆ.

ಕೋಸಲ ದೇಶದ ಅರಿಷ್ಟನಗರಕ್ಕೆ ಪದ್ಮರಥ ರಾಜನಾಗಿದ್ದ. ಅವನ ರಾಣಿ ಲಕ್ಷ್ಮೀಮತಿ. ಮಗ ಮೇಘರಥ. ಒಮ್ಮೆ ದೊರೆ ಓಲಗದಲ್ಲಿರುವಾಗ ಒಬ್ಬ ಯೋಗಿ ಬಂದು ವಸಂತ ಸುಭಾಗವೆಂಬ ತನ್ನ ತಪೋವನವನ್ನು ಕುರಿತು ಹೇಳಿದ. ಅಲ್ಲಿಗೆ ಹೋದ ರಾಜ ಅಲ್ಲಿರುವ ಮುನಿಗಳಿಗೆ, ಭಟ್ಟಾರಕರಿಗೆ ಜಿನನನ್ನು ಪೂಜಿಸಿ ಜೈನಧರ್ಮವನ್ನು ಬೋಧಿಸಿ ಪುನಃ ರಾಜ್ಯಕ್ಕೆ ಮರಳಿದ. ಆ ದಿನ ಉಲ್ಕಾಪಾತವನ್ನು ಕಂಡು ನಿರ್ವೇಗಪರನಾದ ತನ್ನ ರಾಜ್ಯಭಾರವನ್ನು ತನ್ನ ಮಗನಿಗೆ ವಹಿಸಿ ಉಗ್ರತಪಸ್ಸನ್ನು ಆಚರಿಸಿ ಪ್ರತಿಮಾಯೋಗ ವನ್ನು ಕೈಗೊಂಡು ಮಡಿದು ಅಚ್ಯುತಕಲ್ಪವನ್ನು ಸೇರಿದ. ಅಲ್ಲಿ ಇಂದ್ರನಾದ ಅವನೇ ಅನಂತನಾಥ ಹದಿನಾಲ್ಕನೆಯ ತೀರ್ಥಂಕರ ನಿಮಗೆ ಮಗನಾಗಿ ಹುಟ್ಟುತ್ತಾನೆಂದು ಇಷ್ಟಶರ್ಮ ಕಥೆ ಹೇಳುತ್ತಾನೆ. ನಂತರ ಜಯಶ್ಯಾಮೆಗೆ ಇಂದ್ರ ನಾರಿಯರು ಸ್ನಾನ ಮಾಡಿಸಿದರು. ಆಕೆ ಹಲವು ಶುಭಸ್ವಪ್ನಗಳನ್ನು ಕಂಡಳು. ನಂತರ ಇಂದ್ರನಿಂದ ಗರ್ಭಾವತರಣ ಕಲ್ಯಾಣ ಜನ್ಮಾಭಿಷೇಕ ಕಲ್ಯಾಣವಾಯಿತು. ನಂತರ ಅನಂತನಾಥನಿಗೆ ರತ್ನಮಾಲೆ ಯೊಡನೆ ಮದುವೆಯಾಯಿತು. ಇವನಿಗೆ ವಿಜಯನೆಂಬ ಕುಮಾರ ಜನಿಸಿದ. ಅನಂತರ ಅನಂತನಾಥನಿಗೆ ಒಂದು ದಿವಸ ಮಿಂಚನ್ನು ಕಂಡು ವೈರಾಗ್ಯಪರನಾದ ನರಕವನ್ನು ವರ್ಣಿಸಿ ಧರ್ಮಬೋಧೆ ಮಾಡಿದ. ಆಮೇಲೆ ಪರಿನಿಷ್ಕ್ರಮಣ ಕಲ್ಯಾಣ ಜರುಗಿತು. ನಂತರ ಉಗ್ರತಪಸ್ಸನ್ನು ಕೈಗೊಂಡು ಕೇವಲ ಜ್ಞಾನೋದಯ ವಾಯಿತು. ಬಳಿಕ ಸಮಸವರಣದಲ್ಲಿ ಧರ್ಮಪ್ರವಚನ ನಡೆಯುತ್ತಿದ್ದವು. ಇತ್ತ ವಿಜಯಕುಮಾರ ವಿರಹ ತಾಳಲಾರದೆ ತಂದೆಯನ್ನು ಕಾಣಲು ಬಂದು ಅವನೊಂದು ಆ ಶ್ರದ್ಧ ವೃಕ್ಷದಡಿಯಲ್ಲಿ ಕುಳಿತಿರುವಾಗ ಶಾಂತಿಶುಭಾಚಾರ್ಯರು ಬಂದು ಇದೇ ಮರದ ಕೆಳಗೆ ನಿನ್ನ ತಂದೆಗೆ ಕೇವಲಜ್ಞಾನ ಲಭಿಸಿತೆಂದು ತಿಳಿಸಿದರು. ನಂತರ ಅನಂತವ್ರತವನ್ನು ಉಪದೇಶಿಸಿ ಈ ನಡುವೆ, ಉರಗಪಾತಕೆಯೆಂಬ ಖಚರಾಂಗನೆ ಜಿನನಿಗೆರಗಿ ಹಿಂದಿರುಗುತ್ತಿರುವಾಗ ಚಿತ್ರಲತೆಯೆಂಬ ಗೆಳತಿಯನ್ನು ಕಂಡು ಸಮಸವರಣ ಮಂಟಪದಲ್ಲಿ ತಾನು ಕೇಳಿದ ಕಥೆಯೊಂದನ್ನು ಹೇಳಿದಳು. ಸುಪ್ರಭಾನೆಂಬ ನಾಲ್ಕನೆಯ ಬಲದೇವ ಜಯನಾಥ ಬಂದು ತನ್ನ ಪೂರ್ವಜನ್ಮದ ವೃತ್ತಾಂತವನ್ನು ಹದಿನಾಲ್ಕನೆಯ ವಾಸುದೇವನಾದ ತನ್ನ ತಮ್ಮನ ವೃತ್ತಾಂತವನ್ನು ಕೇಳಿದಾಗ, ಅವರು 'ಚಂಡಶಾಸನ' ಕಥೆಯನ್ನು ತಿಳಿಸಿದರಂತೆ. ಇವಿಷ್ಟು ಅನಂತನಾಥನ ಪುರಾಣದಲ್ಲಿ ಬರುವಂತಹ ಕಥೆಯ ಸಾರಾಂಶ. ಇಂತಹ ಚರಿತ್ರೆಯು ಹಾಡುಗಳಲ್ಲಿ ಅನಂತನಾಥ ಕಥೆಯ ಹಂದರವನ್ನು ಅಲ್ಲಲ್ಲಿ ಪ್ರಸ್ತಾಪಿಸಿರುವುದು ಕಂಡುಬರುತ್ತದೆ. ಒಟ್ಟು ೩೮ ಹಾಡುಗಳಲ್ಲಿ ಅನಂತನಾಥನ ಪಂಚಕಲ್ಯಾಣಗಳನ್ನು ಹೇಳುವ ಹಾಡು ಸುದೀರ್ಘವಾಗಿದೆ. ಆ ಹಾಡು ಹೀಗಿದೆ.

"ವಸುಧೆಗಧಿಕವಾದ ದೇವಕಾಣಮ್ಮ

ಕುಸುಮಬಾಣನ ಮರ್ಧಿಸಿದ ಕಾಣಮ್ಮ ||ಪಲ್ಲ||

ಮೇರುಗಿರಿಗೆ ದಕ್ಷಿಣ ಭಾಗವಮ್ಮ
ಭರತಕ್ಷೇತ್ರದ ಆರ್ಯಖಂಡವಮ್ಮ
ಸುದಚಿರ ಕೌಶಲ್ಯ ದೇಶದೊಳಮ್ಮ
ಸಿರಿವೆತ್ತ ಅಯ್ಯೋಧ್ಯನಗರಿ ಕಾಣಮ್ಮ||

ಸುರಪತಿ ನಿರ್ಮಿತ ಪಟ್ಟಣವಮ್ಮ
ದೊರೆ ಸಿಂಹಸೇನ ಮಹಾರಾಜನಮ್ಮ
ಅರಸಿ ಜಯಾ ಪತಿದೇವಿ ಕಾಣಮ್ಮ
ಸ್ಥಿರ ಸಾಮ್ರಾಜ್ಯದೊಳಿರುತಿರ್ದರಮ್ಮ||

ಇನ್ನಾರುದಿಂಗಳಿಗುದಯಿ ಪಾನಮ್ಮ
ಮುನ್ನ ದೇವೇಂದ್ರ ತಾನರಿದ ಕಾಣಮ್ಮ
ರನ್ನದಾ ಮಳೆಯ ನೀ ಕರೆದು ಬಾರೆಂದು
ಚೆನ್ನ ಕುಬೇರಗೆ ಕಳುಹಿದನಮ್ಮ||

ಶ್ರೀ ಮದನಂತ ಜಿನೇಶ್ವರನೆಂದು
ಸ್ವಾಮಿಗೆ ಅಮರಪತಿ ಪೆಸರಿಟ್ಟನಮ್ಮ
ಅರ್ಹ ಅನಂತ ಜಿನೇಶ್ವರನೆಂದು
ಸುರಪತಿ ಪಟ್ಟವ ಕಟ್ಟಿದರಮ್ಮ
ಹದಿನಾಲ್ಕು ನದಿಯ ತೀರ್ಥವ ತಂದರಮ್ಮ
ಮದನವಿಜಯಗೆ ಸ್ನಪನ ಮಾಡಿದರಮ್ಮ
ಸದಮಲ ದೀಕ್ಷೆಯನ್ನು ಧರಿಸಿದರಮ್ಮ
ಮುದದಿಂದ ಇಂದ್ರನೆರಗಿ ಹೋದನಮ್ಮ||

ದೇವಗೆ ಇಕ್ಷ್ವಾಕು ವಂಶ ಕಾಣಮ್ಮ
ಮೂವತ್ತು ಲಕ್ಷದಾಯುಷ್ಯ ಕಾಣಮ್ಮ
ಐವತ್ತು ಧನುವಿನುತ್ಸೈದೆ ಕಾಣಮ್ಮ
ಮೂವತ್ನಾಲ್ಕು ಅತಿಶಯವುಳ್ಳವರಮ್ಮ||

ಧರ್ಮೋಪದೇಶ ಮಾಡಿದರಮ್ಮ
ಸಮ್ಮೇದಗಿರಿಗೆ ತೆರಳಿದರಮ್ಮ
ನಿರ್ಮಲ ಧ್ಯಾನದೊಳಿರುತಿರ್ದರಮ್ಮ
ಘಮ್ಮನೆ ಮುಕ್ತಿ ವಲ್ಲಭರಾದರಮ್ಮ"||[೨೦]

ಈ ಮೇಲಿನ ಹಾಡು ಅನಂತನಾಥನ ಚರಿತ್ರೆಯನ್ನು ಶಿಷ್ಟಕಾವ್ಯದಲ್ಲಿರುವಂತೆ ಸರಳವಾಗಿ ಲಯಬದ್ಧವಾಗಿ ನಿರೂಪಿತವಾಗಿದೆ. ಇಲ್ಲಿ ಶಿಷ್ಟಕಾವ್ಯ ಪರಂಪರೆಯಂತೆ ಒಬ್ಬ ಹಾಡುಗಾರ ಧಾರ್ಮಿಕ ನಿಷ್ಠವಾಗಿ ಜೈನ

ಸಾಹಿತ್ಯದ ನಿರಂತರತೆಯನ್ನು ವಿಶಿಷ್ಟವಾಗಿ ನಿರೂಪಿಸಿರುವುದು ಗಮನೀಯವಾದುದು. ಹಾಗೆಯೇ ಅನಂತನಾಥ ಪುರಾಣದಲ್ಲಿ ಬರುವ ಚಂಡಪ್ರಭನ ಕಥೆಯನ್ನು ಸಹ ಹಾಡುಗಳಲ್ಲಿ ಉಲ್ಲೇಖಿಸಿರುವುದನ್ನು ನೋಡಬಹುದು.

"ದುಷ್ಟ ಚಂಡಪ್ರಭನಾ ಪಿಡಿದು ವಿದ್ಯಾಧರನಾ
ಕಟ್ಟಿಯಸುರರನು ಕೆಡಹಿಂದ ಕಾರ||"
ದುಷ್ಟಮೂರುತಿ ಬಳಲಿದುವೆ ಕಂದಯ್ಯ||"[೫೯]

ಹೀಗೆ ಜೈನ ಧಾರ್ಮಿಕ ಪುಣ್ಯಪುರುಷರನ್ನು ಹಾಡುಗಳಲ್ಲಿ ಹಾಡುಗಾರ ಉಲ್ಲೇಖಿಸಿದ್ದಾನೆ.

### ೫.೨.೮. ಪಾರ್ಶ್ವನಾಥ

ಪಾರ್ಶ್ವನಾಥ ಜೈನರಲ್ಲಿ ಹೆಚ್ಚು ಆರಾಧಿಸುವ ಪ್ರಮುಖ ತೀರ್ಥಂಕರ. ಇವನು ಜೈನರಲ್ಲಿ ೨೩ನೇ ತೀರ್ಥಂಕರನಾಗಿ ಕಂಡುಬರುತ್ತಾನೆ. ಈತನ ಚರಿತ್ರೆಯನ್ನು ಆಧರಿಸಿ ಪಾರ್ಶ್ವಪಂಡಿತನು ಪಾರ್ಶ್ವನಾಥ ಪುರಾಣವನ್ನು ಬರೆಯುತ್ತಾನೆ.

| | |
|---|---|
| ೨೩ನೇ ತೀರ್ಥಂಕರ | ಪಾರ್ಶ್ವನಾಥ |
| ತಂದೆ | ಅಶ್ವಸೇನ |
| ತಾಯಿ | ವಾಮೆ |
| ಜನ್ಮಸ್ಥಳ | ಕಾಶಿ |
| ನಿರ್ವಾಣಸ್ಥಳ | ಸಮ್ಮೇದ್ ಶಿಖರ |
| ಲಾಂಛನ | ಸರ್ಪ |
| ಯಕ್ಷ | ಧರಣೇಂದ್ರ |
| ಯಕ್ಷಿ | ಪದ್ಮವತಿ |
| ಭವಾವಳಿ | ಒಂಬತ್ತು ಭವಾವಳಿ |
| ಮೈಬಣ್ಣ | ಹಸಿರು |

ಇವು ಪಾರ್ಶ್ವನಾಥ ತೀರ್ಥಂಕರನ ಗುಣಲಕ್ಷಣಗಳು.

ಇವನ ಕುರಿತು ಜೈನರಲ್ಲಿ ಹಲವಾರು ಕೃತಿಗಳು ರಚಿತಗೊಂಡಿವೆ. ಸಂಸ್ಕೃತ, ಪ್ರಾಕೃತ ಕನ್ನಡ ಮೊದಲಾದ ಭಾಷೆಗಳಲ್ಲಿ ಸ್ವತಂತ್ರವಾಗಿ ಕಾಣಿಸಿಕೊಂಡಿದೆ. "ಸಂಸ್ಕೃತದಲ್ಲಿ ಜಿನಸೇನಗುಣ ಭದ್ರಾಚಾರ್ಯರ, ಮಹಾಪುರಾಣ, ಜಿನಸೇನಾಚಾರ್ಯರ ಪಾರ್ಶ್ವಾಭ್ಯುದಯ, ವಾದಿರಾಜ ಸೂರಿಯ ಪಾರ್ಶ್ವನಾಥ ಚರಿತ್ರೆ, ಮಾಸಿಕ ಚಂದ್ರಸೂರಿಯ, ಪಾರ್ಶ್ವನಾಥ ಚರಿತ, ಭವದೇವಸೂರಿಯ ಪಾಶ್ವನಾಥ ಚರಿತ ಮುಂತಾದ ಗ್ರಂಥಗಳನ್ನು ಪಾರ್ಶ್ವಕವಿ ಪೂರ್ವದಲ್ಲಿ ರಚಿತವಾದ ಕೃತಿಗಳು. ಪ್ರಾಕೃತದಲ್ಲಿ ನಾಗದೇವನ ಪಾರ್ಶ್ವನಾಥ ಪುರಾಣ, ಜಿನಪ್ರಭಾ ಸೂರಿಯ ಪಾರ್ಶ್ವನಾಥ ಜನ್ಮಾಭಿಷೇಕ, ಶೀಲಾಂಕನ 'ಚಉನ್ನ ಮಹಾಪುರಿಸಚರಿ' ಪದ್ಮಕೀರ್ತಿಯ ವಾಗಣಾಂಕ ಚರಿಉ, ಶ್ರೀಧರನ ಪಾಸನಾಹ ಚರಿಉ, ಇತ್ಯಾದಿ ಕನ್ನಡದಲ್ಲಿ ಈ ವಸ್ತು ಚಾವುಂಡರಾಯ ಪುರಾಣದಲ್ಲಿ ಪಾರ್ಶ್ವಿಕವಾಗಿ ಕಾಣಿಸಿಕೊಂಡಿದೆ. ಪಾರ್ಶ್ವಪಂಡಿತನಲ್ಲಿ ಸಮಗ್ರವಾಗಿ ಪಾರ್ಶ್ವನಾಥ ಚರಿತ್ರೆ ಮೂಡಿ ಬಂದಿದೆ"[೬೦]

ಪಾರ್ಶ್ವನಾಥ ತೀರ್ಥಂಕರನನ್ನು ಕುರಿತು ರಚಿತವಾದ ಕೃತಿಗಳು ವಿಪುಲವಾಗಿ ಸಿಗುತ್ತವೆ. ಆದರೆ ಕನ್ನಡದಲ್ಲಿ ಪಾರ್ಶ್ವನಾಥ ಪುರಾಣವನ್ನು ಪಾರ್ಶ್ವಪಂಡಿತ ಕವಿಯು ವಿಶೇಷ ಪ್ರತಿಭೆಯಿಂದ ರಚಿಸಿರುವುದು ಕಂಡುಬರುತ್ತದೆ.

ಪಾರ್ಶ್ವಪಂಡಿತನ ಕೃತಿಯ ಕಥೆಯು ಹೀಗೆ ಆರಂಭವಾಗುತ್ತದೆ. ಜಂಬೂದ್ವೀಪದ ಸುರಮ್ಯ ದೇಶದ ಪೌದವಪುರ. ಅಲ್ಲಿ ಅರವಿಂದನೆಂಬ ರಾಜ ಆಳುತ್ತಿದ್ದನು. ಅವನಿಗೆ ವಿಶ್ವಭೂತಿ ಎಂಬ ಮಂತ್ರಿ. ಈತನ ಪತ್ನಿ ಅನುಂಧರೆ, ಈ ದಂಪತಿಗಳಿಗೆ ಕಮಠ ಮತ್ತು ಮಧುಭೂತಿ ಇಬ್ಬರು ಮಕ್ಕಳು. ಕಮಠನಿಗೆ ವಾರುಣಿ ಹೆಂಡತಿ. ಮದುಭೂತಿಯ ಹೆಂಡತಿ ವಸುಂಧರೆ. ಕಮಠ ದುರಾಚಾರಿಯಾದರೆ ಮಧುಭೂತಿ ಸುಗುಣಿ. ಒಂದು ದಿನ ವಿಶ್ವಭೂತಿಯು ತನ್ನ ತಲೆಯಲ್ಲಿ ನೆರೆಕೂದಲನ್ನು ಕಂಡು ವೈರಾಗ್ಯ ಹೊಂದಿದನು. ಅದರಿಂದ ಮಧುಭೂತಿಗೆ ಮಂತ್ರಿ ಪದವಿಯನ್ನು ಒಪ್ಪಿಸಿದನು. ಒಂದು ದಿನ ಮದುಭೂತಿಯ ಸಾಮಂತರಾಜನ ಮೇಲೆ ದಂಡೆತ್ತಿ ಹೋದಾಗ ಇಲ್ಲಿ ಕಮಠ ತನ್ನ ಸಹೋದರನಾದ ಮಧುಭೂತಿಯ ಹೆಂಡತಿಯಾದ ವಸುಂಧರೆಯನ್ನು ಓಲೈಸಿಕೊಂಡು ಅನುರಕ್ತನಾಗಿದ್ದನು. ಈ ಸುದ್ದಿಯನ್ನು ಮಧುಭೂತಿಗೆ ಗೂಢಚಾರರು ತಿಳಿಸಿದರು. ಇದರಿಂದ ಮಧುಭೂತಿಗೆ ಕಮಠನ ಬಗ್ಗೆ ಬೇಸರಗೊಳ್ಳದೆ ಹೆಂಡತಿಯ ಬಗ್ಗೆ ಕೀಳಾಗಿ ಭಾವಿಸಿದನು. ಈ ವಿಷಯ ರಾಜನಿಗೆ ತಿಳಿದು ಮಧುಭೂತಿ ಅಣ್ಣನಾದ ಕಮಠನ ಕಾಲಿಗೆ ನಮಸ್ಕರಿಸುವಾಗ ಮೋಸದಿಂದ ಮಧುಭೂತಿಯ ತಲೆಯ ಮೇಲೆ ಕಲ್ಲನ್ನು ಎತ್ತಿಹಾಕಿ ಕೊಂದನು. ನಂತರ ಸಲ್ಲದೇವನದಲ್ಲಿ ವಜ್ರಘೋಷವೆಂಬ ಆನೆಯಾಗಿ ಹುಟ್ಟಿದನು. ನಂತರ ಕಮಠನು ಸರ್ಪರೂಪದಲ್ಲಿ ಬಂದು ಆನೆಯನ್ನು ಕಚ್ಚಿ ಸಾಯಿಸಿದನು. ನಂತರ ಸಹಸ್ರಾರ ಕಲ್ಪದಲ್ಲಿ ಶಶಿಪ್ರಭ ಎಂಬ ದೇವತಾದಿ ಜನಿಸಿ ಸುಖವನ್ನು ಅನುಭವಿಸಿ. ನಂತರ ಜಿನೇಶ್ವರನ ಮನಸ್ಸಿನಲ್ಲಿ ಸ್ಥಿರವಾಗಿ ಭಾವಿಸಲಾಗಿ ಸಮಾಧಿ ಮರಣ ಉಂಟಾಯಿತು. ಶಶಿಪ್ರಭನು ಮರುಜನ್ಮದಲ್ಲಿ ಜಂಬೂದ್ವೀಪದ ತ್ರಿಲೋಕೋತ್ತಮ ನಗರ ವಿದ್ಯುತ್ರಭರಾಜನ ಪತ್ನಿ ವಿದ್ಯುನ್ಮತಿಯ ಗರ್ಭದಲ್ಲಿ ರಶ್ಮಿ ವೇಗವಾಗಿ ಹುಟ್ಟಿದನು. ಆಗ ಕಮಠನು ಹೆಬ್ಬಾವಾಗಿ ಹುಟ್ಟಿ ರಶ್ಮಿ ವೇಗ ಮುನಿಯನ್ನು ನುಂಗಿದನು.

ಐದನೆಯ ಜನ್ಮದಲ್ಲಿ ಅಚ್ಯುತೇಂದ್ರನಾಗಿ ಹುಟ್ಟಿ ಇಪ್ಪತ್ತೆರಡು ಸಾಗರೋಪಮ ಕಾಲ ಬರುತಿದ್ದು, ಆರನೆಯ ಜನ್ಮದಲ್ಲಿ ವಜ್ರವೀರ್ಯ ಅರಸನ ಪತ್ನಿ ವಿಜಯಾಂಗನೆಗೆ ವಜ್ರನಾಭಿ ಎಂಬ ಮಗನಾದನು. ಈ ಸುಖ ಸಾಮ್ರಾಜ್ಯವನ್ನು ಅನುಭವಿಸಿ, ವೈರಾಗ್ಯ ಹೊಂದಿ ಪ್ರತಿಯೋಗದಲ್ಲಿದ್ದಾಗ ಕಮಠನು ಕುರಂಗಕನೆಂಬ ಬೇಡನಾಗಿ ಹುಟ್ಟಿಬಂದು ಹಲವು ತೊಂದರೆಗಳನ್ನು ನೀಡಿದನು. ನಂತರ ಏಳನೆಯ ಜನ್ಮದಲ್ಲಿ ಸುಭದ್ರವಿಮಾನದಲ್ಲಿ ಅಹಮೀಂದ್ರದೇವನಾಗಿ ಜನಿಸಿದನು. ನಂತರ ಜಂಬೂದ್ವೀಪದ ಸಾಕೇತನಗರದಲ್ಲಿ ವಜ್ರಬಾಹು ಅರಸನ ಪತ್ನಿ ಪ್ರಭಂಕರೀ ದೇವಿಗೆ ಆನಂದನೆಂಬ ಮಗನಾಗಿ ಹುಟ್ಟಿದನು. ಎಂಟನೆಯ ಜನ್ಮದಲ್ಲಿ ಆನಂದನು ಮಹಾಮಂಡಲೇಶ್ವರನಾಗಿ ರಾಜ್ಯಭಾರ ಮಾಡಿದನು. ನಂತರ ನೆರೆಕೂದಲನ್ನು ಕಂಡು ನಿರ್ವೇಗಪರನಾಗಿ ತಪಸ್ಸಿನಲ್ಲಿರುವಾಗ ಕಮಠನು ಸಿಂಹರೂಪದಲ್ಲಿ ಜನಿಸಿ ಬಂದು ಅವನನ್ನು ಕೊಂದನು. ಅನಂತರ ಒಂಬತ್ತನೆಯ ಜನ್ಮದಲ್ಲಿ ಅನಂತಕಲ್ಪದಲ್ಲಿ ಜಂಬೂದ್ವೀಪದ ವಾರಣಾಸಿ ನಗರದ ಅಶ್ವಸೇನ ಈತನ ಪತ್ನಿ ಬ್ರಹ್ಮದತ್ತೇ ಈ ದಂಪತಿಗಳಿಗೆ ನವಲ್ಲದ ಮಗನಾಗಿ ಹುಟ್ಟುತ್ತಾನೆ. ಆಗ ಇದನ್ನು ತಿಳಿದ ಇಂದ್ರನು ಗರ್ಭಕಲ್ಯಾಣವನ್ನು ಮಾಡುತ್ತಾನೆ. ಹೀಗೆ ಇಂದ್ರನು ಕಾಲಕಾಲಕ್ಕೆ ಪಂಚಕಲ್ಯಾಣಗಳನ್ನು

ನೆರವೇರಿಸುತ್ತಾನೆ. ಒಂದು ದಿನ ಸಾಕೇತಪುರದ ಜಯಸೇನ ರಾಜನು ಪಾರ್ಶ್ವನಿಗೆ ಒಂದು ಕುದುರೆಯನ್ನು ಮಹತ್ತರನ ಮೂಲಕ ಕಳುಹಿಸಿಕೊಟ್ಟನು. ಪಾರ್ಶ್ವನು ಆತನಲ್ಲಿ ನಿಮ್ಮ ರಾಜನ ಪಟ್ಟಣವು ವೃಷಭನಾಥನ ಜನರಿಂದ ಹೇಗೆ ಪವಿತ್ರವಾಯಿತೆಂದು ಕೇಳುತ್ತ ಭವಸ್ಮರಣೆ ಉಂಟಾಗಿ ವೈರಾಗ್ಯಪರನಾದನು. ಇದನ್ನರಿತ ಇಂದ್ರನು ದೇವತೆಗಳೊಂದಿಗೆ ಪರಿನಿಷ್ಕ್ರಮಣ ಕಲ್ಯಾಣವನ್ನು ನೆರವೇರಿಸಿದನು. ಅನಂತರ ಪಾರ್ಶ್ವನು ದಿಗಂಬರನಾಗಿ ತಪಸ್ಸಿಗೆ ತೊಡಗಿ ಪ್ರತಿಮಾಯೋಗದಲ್ಲಿ ಏಳು ದಿನಗಳವರೆಗೆ ನಿಂತನು. ಈ ಸಂದರ್ಭದಲ್ಲಿ ಪಂಚಾಗ್ನಿ ಮಧ್ಯದಲ್ಲಿ ತಪಸ್ಸು ಮಾಡುತ್ತಿದ್ದ ಆ ಮುನಿ ಕೋಪವನ್ನಿಟ್ಟುಕೊಂಡು ಸುತ್ತ ಭೂತಾನಂದನೆಂಬ ಅಸುರನಾಗಿ ಜನಿಸಿ ಆಕಾಶಮಾರ್ಗದಲ್ಲಿ ಬರುತ್ತಿದ್ದನು. ಆಗ ಪಾರ್ಶ್ವನಾಥನನ್ನು ಕಂಡು ಅಸುರನ ವಿಮಾನ ನಿಂತುಕೊಂಡಿತು.

ಪೂರ್ವಜನ್ಮದ ದ್ವೇಷದಿಂದ ಅಸುರನು ನಾನಾ ರೀತಿಯ ಉಪಸರ್ಗಗಳನ್ನು ನೀಡಿದರೂ ಪಾರ್ಶ್ವಕನು ನಿಶ್ಚಲನಾಗಿದ್ದನು. ಆಗ ಪಾತಾಳಲೋಕದಲ್ಲಿದ್ದ ನಾಗರಾಜನಿಗೆ ಆಸನಕಂಪನವಾಗಿ ಪದ್ಮಾವತಿಯೊಂದಿಗೆ ಬಂದು ತನ್ನ ಹೆಡೆಗಳನ್ನು ಪಾರ್ಶ್ವನಾಥನ ತಲೆಯ ಮೇಲೆ ಎತ್ತಿ ಹಿಡಿದನು. ಪದ್ಮಾವತೀ ವಜ್ರದ ಛತ್ರಿಯನ್ನು ಹಿಡಿದಳು. ಪಾರ್ಶ್ವನು ಕರ್ಮಗಳನ್ನು ಗೆದ್ದು ಕೇವಲ ಜ್ಞಾನ ಪಡೆದನು. ಕೊನೆಗೆ ಸಮ್ಮೇದ ಪರ್ವತದಲ್ಲಿ ಪರಿನಿರ್ವಾಣ ಕಲ್ಯಾಣ ಹೊಂದಿದನು. ಇಂತಹ ಸುಂದರವಾದ ಕಥೆಯನ್ನು ಹೆಣೆದಿರುವ ಪಾರ್ಶ್ವಪಂಡಿತ ನಿಜಕ್ಕೂ ಪ್ರತಿಭಾವಂತ ಕವಿ. ತನ್ನ ಪೂರ್ವ ಕವಿಗಳ ಕಥನ ಪರಂಪರೆಯನ್ನು ಸ್ವಲ್ಪ ಭಿನ್ನವಾಗಿ ನಿರೂಪಿಸಿದ್ದಾನೆ. ಈ ಕೃತಿಯಲ್ಲಿ ಯಕ್ಷ ಯಕ್ಷಿಯರಾದ ಪದ್ಮಾವತೀ-ಧರಣೇಂದ್ರ ಇವರ ಕಥೆಯನ್ನು ತರುವುದರ ಮೂಲಕ ಈ ಕೃತಿಗೆ ಮತ್ತಷ್ಟು ಮಹತ್ವ ಬಂದಿದೆ. ಕನ್ನಡ ಜೈನಹಾಡುಗಳಲ್ಲಿ ಪಾರ್ಶ್ವನಾಥ ತೀರ್ಥಂಕರ ಯಕ್ಷ ಯಕ್ಷಿಯರಾದ ಪದ್ಮಾವತೀ ಧರಣೇಂದ್ರ ಕುರಿತು ಸಾಕಷ್ಟು ಹಾಡುಗಳು ರಚಿತಗೊಂಡಿವೆ. ಇದರಲ್ಲಿ ಸುಮಾರು ೬೮ ಹಾಡುಗಳಲ್ಲಿ ಪಾರ್ಶ್ವನಾಥನ ಚರಿತ್ರೆಯ ಬಗ್ಗೆ ಮಾಹಿತಿ ಇದೆ.

"ವಾರಣಾಸಿಯ ಪುರವರಕಧಿ ದೇವಗೆ  
ಸುರನರೋರಗ ವಂದ್ಯಸುಜ್ಞಾನಧರೆಗೆ  
ಉರಗಲೋಕದ ಪತಿಧರಣೇಂದ್ರನೊಡೆಯಗೆ  
ವರ ಪದ್ಮಾವತಿಯಿಂದ ಸೇವೆಕೊಂಬುವಗೆ||  
ಪಚ್ಚವರ್ಣದ ರೂಪ ಫಣಿಯ ಲಾಂಛನನಿಗೆ  
ಪಂಚಬಾಣನ ಹಮ್ಮ ಮುರಿದವಗೆ  
ಚಂಚಲವಿಲ್ಲದೆ ಕಮಠನ ಜಯಿಸಿ ತಾ  
ಪಂಚಪಾತಕಗಳ ಗೆಲಿದವಗೆ"||[೨೨]

ಈ ಹಾಡಿನಲ್ಲಿ ಶಿಷ್ಟಕಾವ್ಯದಲ್ಲಿ ಬರುವಂತಹ ಚರಿತ್ರೆಯನ್ನು ಹಾಡುಗಾರ ಸಂಕ್ಷಿಪ್ತವಾಗಿ ಪಾರ್ಶ್ವನಾಥನ ಗುಣಗಳನ್ನು ಭಕ್ತಿಯಿಂದ ಆರಾಧಿಸುತ್ತಾನೆ. ಹಾಗೆಯೇ ಹಲವಾರು ಹಾಡುಗಳಲ್ಲಿ ಪಾರ್ಶ್ವನಾಥನ ಪಂಚಕಲ್ಯಾಣಗಳ ತುಣುಕುಗಳನ್ನು ಹೇಳಿರುವುದರ ಜೊತೆಗೆ ಅವನ ಯಕ್ಷ ಯಕ್ಷಿಯರಾದ ಧರಣೇಂದ್ರ ಮತ್ತು ಪದ್ಮಾವತೀ ಕಥೆಗಳನ್ನು ಹೇಳಲಾಗಿದೆ. ಪಾರ್ಶ್ವನಾಥ ಪುರಾಣದಲ್ಲಿ ಪಾರ್ಶ್ವನಾಥನಿಗೆ ಕಮಠನು

ನೀಡುವ ಉಪಸರ್ಗದ ಸಂದರ್ಭಗಳು ಮತ್ತು ಪದ್ಮಾವತೀ ಧರಣೆಂದ್ರ ಉಪಸರ್ಗಗಳನ್ನು ತಡೆದ ಪ್ರಸಂಗಗಳನ್ನು ಹಾಡುಗಾರ ಬಹಳ ಸುಂದರವಾಗಿ ಕಟ್ಟಿಕೊಟ್ಟಿದ್ದಾನೆ. ಅಂತಹ ಹಾಡನ್ನು ಇಲ್ಲಿ ಗಮನಿಸಬಹುದು.

"ಕಮಠೊಪ ಸ್ವರ್ಗವ ಜಯಿಸಿದ ದೇವನೆ
ಕಮಲನಾಭನ ಹಮ್ಮು ಮುರಿದವ ನೀನೆ
ಕಮಲ ಪದ್ಮಾಸನಕೆ ರತ್ನಖಚಿತ ನೀನೆ
ಕಮನಿಯ ಶ್ರೀ ಮುಕ್ತಿ ಲಕ್ಷ್ಮೀಯರಸನೇ||
ಉರಗಲೋಕಕ್ಕೆ ಕತೃ ಧರಣೇಂದ್ರನೊಡೆಯನೆ
ಅರಸಿ ಪದ್ಮಾವತಿ ದೇವಿ ಸೇವಾಲಂಕೃತನೇ
ಸುರನರವಂದಿತ ಚರಣ ಸಂಪದನೆ
ಸ್ಥಿರದಿಂದ ಭವ್ಯದ ಸಲಹೋ ಜಿನಪನೆ||"[೨೪]

ಇಲ್ಲಿ ಧರಣೇಂದ್ರ ಪದ್ಮಾವತಿಯು ಪಾರ್ಶ್ವನಾಥನು ತಪಸ್ಸಿಗೆ ನಿಂತಾಗ ಕಮಠನು ಉಪಸರ್ಗಗಳನ್ನು ನೀಡುತ್ತಾನೆ. ಆಗ ಧರಣೇಂದ್ರ ತನ್ನ ಹೆಡೆಯನ್ನು ಬಿಚ್ಚಿ ಪಾರ್ಶ್ವನಾಥನಿಗೆ ರಕ್ಷಣೆ ನೀಡುತ್ತಾನೆ. ಹಾಗೆಯೇ ಪದ್ಮಾವತೀ ತನ್ನ ವಜ್ರದ ಛತ್ರಿಯಿಂದ ರಕ್ಷಣೆ ಮಾಡುತ್ತಾಳೆ. ಇಂತಹ ಶಿಷ್ಟಕಾವ್ಯದ ಕಥೆಯ ಹಂದರವನ್ನು ಹಾಡುಗಾರ ಕೆಲವೇ ಹಾಡುಗಳಲ್ಲಿ ನಿರೂಪಿಸಿದ್ದಾನೆ. ಹಾಗೆಯೇ ಜನಪದ ಗೀತೆಗಳಲ್ಲಿಯೂ ಸಹ ಪಾರ್ಶ್ವನಾಥ ಈತನ ಯಕ್ಷ ಯಕ್ಷಿಯರ ಕುರಿತು ಸಾಕಷ್ಟು ಹಾಡುಗಳು ರಚಿತಗೊಂಡಿವೆ.

**೫.೨.೯. ಪುಷ್ಪದಂತ**

ಪುಷ್ಪದಂತ ಪುರಾಣವು ಗುಣವರ್ಮನಿಂದ ರಚಿತವಾದ ಧಾರ್ಮಿಕ ಕಾವ್ಯ. ಜೈನರ ಒಂಬತ್ತನೆಯ ತೀರ್ಥಂಕರನ ಜೀವನಚರಿತ್ರೆಯನ್ನು ಆಧರಿಸಿದ ಕಥೆಯೇ ಈ ಪುಷ್ಪದಂತ ಪುರಾಣ. ಈ ಪುಷ್ಪದಂತನಿಗೆ ಸುವಿಧಾಜಿನ 'ಸುವಿಧಿಕುಮಾರ' ಎಂಬ ಹೆಸರುಗಳಿವೆ.

| | |
|---|---|
| ೯ನೇ ತೀರ್ಥಂಕರ | ಪುಷ್ಪದಂತ |
| ತಂದೆ | ಸುಗ್ರೀವ |
| ತಾಯಿ | ಜಯದಾಮೆ |
| ಜನ್ಮಸ್ಥಳ | ಕೌಕರದಿ |
| ನಿರ್ವಾಣ ಸ್ಥಳ | ಸಮ್ಮೇದ ಶಿಖರ |
| ಲಾಂಛನ | ಮಕರ |
| ಯಕ್ಷ | ಅಜಿತ |
| ಯಕ್ಷಿ | ಮಹಾಕಾಳಿ |
| ಭವಾವಳಿ | ಎರಡು ಭವ |
| ಮೈಬಣ್ಣ | ಹೊಂಬಣ್ಣ |
| ವಂಶ | ಇಕ್ಷ್ವಾಕು ವಂಶ. |

ಈ ಮೇಲಿನ ವಿಶಿಷ್ಟ ಲಕ್ಷಣಗಳು.

೯ನೇ ತೀರ್ಥಂಕರನಾದ ಪುಷ್ಪದಂತ ಪುರಾಣದಲ್ಲಿ ಗುಣವರ್ಮ ತನ್ನ ಕಥೆಯನ್ನು ಕೆಳಗಿನಂತೆ ಪ್ರಾರಂಭ ಮಾಡುತ್ತಾನೆ.

ಮೇರುವಿನ ಪೂರ್ವಕ್ಕೆ-ಪಶ್ಚಿಮ ಪ್ರದೇಶದಲ್ಲಿ ೩೨ ನಾಡುಗಳಿಂದ ಕೂಡಿದ ವಿದೇಹದೇಶ. ಪೂರ್ವ ವಿದೇಹದ ಮಧ್ಯದಲ್ಲಿ ಸೀತಾನದಿ. ಇದರ ಎರಡು ತಟಗಳಲ್ಲಿ ಎಂಟೆಂಟು ಷಟ್ಖಂಡ ಮಂಡಳ. ಎಂಟನೆಯ ತಾಣದಲ್ಲಿ ಪುಷ್ಕಳಾವತಿ ನಗರ. ಇದರ ರಾಜಧಾನಿ ಪುಂಡರೀಕಿಣೆಪುರ. ಇಲ್ಲಿ ರಾಜ ಪದ್ಮನು ವನಮಾಲಾದೇವಿ ರಾಜ್ಯಭಾರವನ್ನು ಮಾಡುತ್ತಿದ್ದರು. ಇಲ್ಲಿ ರಾಣಿಗೆ ಪುತ್ರ ಸಂತಾನವಿಲ್ಲದ ಚಿಂತೆಯಲ್ಲಿ ಕೊರಗುತ್ತಿರುತ್ತಾಳೆ. ಹೀಗೆ ಒಂದು ಸಲ ಜಿಂಕೆಯ ಮರಿಯನ್ನು ನೋಡಿ ತನಗೆ ಸಂತಾನವಿಲ್ಲವೆಂದು ಚಿಂತಿಸುತ್ತಾಳೆ. ಆಗ ರಾಜ ತನ್ನ ರಾಣಿಯನ್ನು ಸಂತೈಸಿ ಹೇಳುತ್ತಾನೆ. ನಾನು ಅಷ್ಟಮಿಯಂದು ಚೈತ್ಯಾಲಯಕ್ಕೆ ಹೋಗಿದ್ದಾಗ ದೇವತ ಪಾದದ ಹತ್ತಿರವಿದ್ದ 'ಮಾರಳದ' ಹಣ್ಣು ಜಾರಿ ನನ್ನ ಹತ್ತಿರ ಬಂದಿತು. ಇದು ಪುತ್ರಸೂಚಕ ಎಂದು ಹೇಳುತ್ತಾನೆ. ಮುಂದೆ ರಾಣಿಯು ಶುಭಸ್ವಪ್ನವನ್ನು ಕಂಡು ಗರ್ಭವತಿಯಾಗುತ್ತಾಳೆ. ನಂತರ ಗಂಡು ಮಗುವಿಗೆ ಜನ್ಮವಿತ್ತು ಆ ಮಗುವಿಗೆ 'ಮಹಾಪದ್ಮ' ಎಂದು ಹೆಸರಿಡುತ್ತಾರೆ. ಇವನು ಯುವರಾಜನಾಗಿ ದಿಗ್ವಿಜಯ ಕೈಗೊಂಡು ಹೆಸರುವಾಸಿಯಾಗಿ ಕೊನೆಗೆ ತನ್ನ ಸೋದರ ಅತ್ತೆಯ ಗಂಡ ಜಯವರ್ಮನ, ಮಗಳಾದ ಭಾನುಮತಿಯನ್ನು ಮದುವೆಯಾಗುತ್ತಾನೆ. ಇವರಿಗೆ 'ಧನದೇವ' ಎಂಬ ಪುತ್ರ ಜನಿಸುತ್ತಾನೆ. ನಂತರ ಮಹಾಪದ್ಮ ಸುಖದಿಂದಿರುವಲ್ಲಿ ಒಂದು ದಿನ ವೇಶ್ಯಾವಾಟಿಕೆಯನ್ನು ನೋಡಿ ಚಂದ್ರಿಕಾ ವಿಹಾರಣ ಮುಗಿಸಿ ಉದ್ಯಾನವನಕ್ಕೆ ಬರುತ್ತಿದ್ದಾಗ ಮುನಿಗಳ ಕಂಡು ನಮಸ್ಕರಿಸಿದನು. ಅವರು ಈತನಿಗೆ ಜಿನತತ್ವವನ್ನು ಬೋಧಿಸಿದರು. ನಂತರ ಮಹಾಪದ್ಮ ಸಾವಿರಾರು ರಾಜಕುಮಾರರೊಂದಿಗೆ ಜಿನದೀಕ್ಷೆ ಕೈಗೊಂಡನು. ಕೊನೆಗೆ ದೇಹವನ್ನು ತ್ಯಜಿಸಿ ಪ್ರಾಣತ ಕಲ್ಪವೆಂಬ ಸ್ವರ್ಗದಲ್ಲಿ ಜನಿಸಿದನು. ಅನಂತರ ಜಂಬೂದ್ವೀಪದ ಕಾಶೀ ವಿಷಯದ ರಾಜಧಾನಿ ಕಾಕಂದಿಪುರ ಇದನ್ನು ಸುಗ್ರೀವ ಜಯರಾಮೆ ಎಂಬ ರಾಜದಂಪತಿಗಳು ಆಳುತ್ತಿದ್ದರು. ಇವರಿಗೆ ತೀರ್ಥಂಕರನಾದ ಪುಷ್ಪದಂತನು ಜನಿಸುತ್ತಾನೆ. ಆಗ ಇಂದ್ರನು ಕುಬೇರನಿಗೆ ರತ್ನದ ಮಳೆ ಸುರಿಸುವಂತೆ ಅಪ್ಪಣೆ ಮಾಡುತ್ತಾನೆ. ನಂತರ ಗರ್ಭಶೋಧ ನಡೆದು ನವಮಾಸದೊಂದು ಮಾರ್ಗಶಿರ ಬಹಳ ದಶಮಿಯಂದು ತೀರ್ಥಂಕರ ಜನಿಸುತ್ತಾನೆ. ಇವನಿಗೆ ಪುಷ್ಪದಂತ ಎಂದು ನಾಮಕರಣ ಮಾಡುತ್ತಾರೆ. ನಂತರ ಸುಗ್ರೀವ ತನ್ನ ಮಗ ಯೌವನಕ್ಕೆ ಬಂದನೆಂದು ತಿಳಿದು, ಸಾವಿರ ಮಂದಿ ಕ್ಷತ್ರಿಯ ಕನ್ಯೆಯರನ್ನು ತಂದು ಮದುವೆ ಮಾಡಿಸುತ್ತಾನೆ. ಈತನಿಗೆ ಚಂದ್ರಳಪುರದ ರಾಜನ ಮಗಳಾದ ಚಂದ್ರಿಕಾದೇವಿ ಪಟ್ಟದ ರಾಣಿಯಾಗಿದ್ದಳು. ಈಕೆಯ ಗರ್ಭದಲ್ಲಿ ಕೀರ್ತಿಧರ ಜನಿಸುತ್ತಾನೆ. ಕೊನೆಗೆ ಪುಷ್ಪದಂತನಿಗೆ ನಿದಾಘಕಾಲ ಪ್ರಾಪ್ತವಾಯಿತು. ಒಂದು ದಿನ ಈತ ಆಕಾಶದಿಂದ ಬಿದ್ದ ಉಲ್ಕೆಯನ್ನು ಕಂಡು ನಿರ್ವೇಗಪರನಾದನು. ಕೊನೆಗೆ ಎಲ್ಲ ದೇವರುಗಳು ಬಂದು ರಾಜ್ಯಭೋಗವನ್ನು ತ್ಯಜಿಸಿ ಜಿನದೀಕ್ಷೆಯನ್ನು ನೀಡಿದರು.

ಇಲ್ಲಿ ಪರಿನಿಷ್ಕ್ರಮಣ ಕಲ್ಯಾಣ ನೆರವೇರಿಸಿ ಕೊನೆಗೆ ತಪಸ್ಸಿನಲ್ಲಿ ನಿರತನಾಗಿ ಕರ್ಮಗಳನ್ನು ಘಾತಿಸಿ ಪ್ರತಿಯೋಗದಲ್ಲಿ ನಿಂತನು. ಇದಕ್ಕೆ ಕೇವಲಜ್ಞಾನ ಕಲ್ಯಾಣವನ್ನು ನೆರವೇರಿಸಿದರು. ಕೊನೆಗೆ ಪರಿನಿರ್ವಾಣ ಕಲ್ಯಾಣವನ್ನು ಹಿಂದಿನ ಕವಿಗಳ ದಾರಿಯಲ್ಲಿಯೇ ನಿರೂಪಿಸಿರುವುದು ಕಂಡುಬರುತ್ತದೆ. ಇಂತಹ ಪುಷ್ಪದಂತನ

ಚರಿತ್ರೆಯ ಕಥೆಯ ಹಂದರವನ್ನು ಜೈನಹಾಡುಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ಆದರೆ ಈ ತೀರ್ಥಂಕರನ ಕುರಿತು ಹಾಡುಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಇಲ್ಲಿ ಪುಷ್ಪದಂತನನ್ನು ಹಾಡುಗಾರ ಭಕ್ತಿಯಿಂದ ಪ್ರಾರ್ಥಿಸುವ ಹಾಡುಗಳು ಸಿಗುತ್ತವೆ. ಅಂತಹ ಹಾಡುಗಳಲ್ಲಿ ಈ ಕೆಳಗಿನ ಹಾಡನ್ನು ಗಮನಿಸಬಹುದು.

"ಪುಷ್ಪದಂತ ಜಿನರಾಜನೇ ಜಗಮು
ತೃಪ್ಪನಾಗಿ ಶ್ರುತಿಹವೇ
ದುಷ್ಟ ಭವಾಂಬುಂಧಿ ಪಡಿಗೈಸಲದಯ
ವಿಟ್ಟು ಪಾಲಿಸುರುಹನೇ||

ಒಪ್ಪುವ ಮಹಾಂಕಾಳಿ ಸೇವಿತಗೆ
ಪುಷ್ಪಸ್ಮರಾರಿ ತ್ರಿಣೇತ್ರನಿಗೆ
ಕರ್ಪೂರಲೋಚಗೆ ಕಮನಿಯ ರೂಪಗೆ
ಪುಷ್ಪದಂತೇಶ ನಿಷ್ಪನ್ನನಿಗೆ"||[೨೫]

ಈ ಹಾಡಿನಲ್ಲಿ ಪುಷ್ಪದಂತ ತೀರ್ಥಂಕರನನ್ನು ಹಾಡುಗಾರ ಭಕ್ತಿಯಿಂದ ಭಜಿಸುತ್ತಾನೆ. ಇಲ್ಲಿ ಶಿಷ್ಟಕಾವ್ಯಗಳ ಕಥೆಯು ಈ ಪುಷ್ಪದಂತನ ಕುರಿತಾದ ಹಾಡುಗಳಲ್ಲಿ ಕಂಡುಬರುವುದು ವಿರಳವಾಗಿದೆ.

### ೫.೨.೧೦. ಚಂದ್ರಪ್ರಭ

ಚಾವುಂಡರಾಯನು ತನ್ನ 'ತ್ರಿಷಷ್ಠಿಶಲಾಕ ಪುರುಷರ ಚರಿತ್ರೆ' ಎಂಬ ಕಾವ್ಯದಲ್ಲಿ ಈ ಚಂದ್ರಪ್ರಭ ಪುರಾಣವನ್ನು ಕುರಿತು ಪ್ರಸ್ತಾಪಿಸಿದ್ದಾನೆ. ಈ ಚಂದ್ರಪ್ರಭ ತೀರ್ಥಂಕರ ಜೈನರಲ್ಲಿ ೮ನೇ ತೀರ್ಥಂಕರನಾಗಿದ್ದಾನೆ. ಕನ್ನಡದಲ್ಲಿ ಇವನನ್ನು ಕುರಿತು ಪ್ರತ್ಯೇಕವಾದ ಚಂದ್ರಪ್ರಭ ಪುರಾಣವನ್ನು ಅಗ್ಗಳಕವಿ ರಚಿಸಿದ್ದಾನೆ. ನಾನು ಇಲ್ಲಿ ಚಾವುಂಡರಾಯ ಪುರಾಣ ಬರೆದಿರುವಂತಹ ಕೃತಿಯನ್ನು ಆಧರಿಸಿ ಈ ಚಂದ್ರಪ್ರಭ ಪುರಾಣದ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಹೇಳಿದ್ದಾನೆ.

| | |
|---|---|
| ೮ನೇ ತೀರ್ಥಂಕರ | ಚಂದ್ರಪ್ರಭ |
| ತಂದೆ | ಮಹಾಸೇನ |
| ತಾಯಿ | ಲಕ್ಷ್ಮಣೆ |
| ಜನ್ಮನಗರ | ಚಂದ್ರಪುರಿ |
| ನಿರ್ವಾಣ ಸ್ಥಳ | ಸಮ್ಮೇದ ಶಿಖರ |
| ಲಾಂಛನ | ಸ್ವಸ್ತಿಕ |
| ಯಕ್ಷ | ನಂದಿ |
| ಯಕ್ಷಿ | ಕಾಲಿ |

ಈ ಕಥೆಯು ಹೀಗೆ ಪ್ರಾರಂಭವಾಗುತ್ತದೆ. ಪುಷ್ಕರವರದ್ವೀಪದ ಪೂರ್ವಮಂದರದ ಪಶ್ಚಿಮ ವಿದೇಹದ ಸೀತಾನದಿಯ ಉತ್ತರ ತಟದ ಗಂಧಿಲ ದೇಶದಲ್ಲಿ ಶ್ರೀಸೇಣನು ರಾಜನಾಗಿದ್ದನು. ಇವನ ರಾಣಿ ಶ್ರೀಕಾಂತೆ

ಮಕ್ಕಳಿಲ್ಲವೆಂಬ ಸಂಕಟದಿಂದ ಈ ದಂಪತಿಗಳು ಮಕ್ಕಳನ್ನು ಪಡೆಯಲು ಅಷ್ಟಾಹ್ನಿಕ ಮಹಾಪೂಜೆಯನ್ನು ಮಾಡಿದರು. ಕೊನೆಗೆ ಕೆಲವು ದಿನ ಕಳೆದ ಮೇಲೆ ಶ್ರೀಕಾಂತೆಯು ಶುಭಸ್ವಪ್ನವನ್ನು ಕಂಡಳು. ಇವರಿಗೆ ಶ್ರೀವರ್ಮ ಎಂಬ ಮಗನು ಜನಿಸಿದನು. ಇವರು ಆ ಪುರದ ಶಿವಂಕರೋದ್ಯಾನದಲ್ಲಿ ಶ್ರೀ ಪ್ರಭಜಿನರ ಸಮಸವರಣ ಆಗಮಿಸಿತು. ಇದನ್ನು ವನಪಾಲಕ ಶ್ರೀಷೇಣನಿಗೆ ಹೇಳಿದನು. ಹೋಗಿ ಧರ್ಮಶ್ರವಣ ಮಾಡಿ ಕೊನೆಗೆ ತನ್ನ ರಾಜ್ಯವನ್ನು ಶ್ರೀವರ್ಮನಿಗೆ ವಹಿಸಿ ಸನ್ಯಾಸವನ್ನು ಸ್ವೀಕರಿಸಿದನು. ನಂತರ ಶ್ರೀವರ್ಮ ಆಷಾಢಮಾಸದ ನಂದೀಶ್ವರ ಹುಣ್ಣಿಮೆಯಂದು ಉಪವಾಸ ಮಾಡಿ ಮಹಡಿಯ ಮೇಲೆ ನಿಂತಾಗ ಉಲ್ಕಾಪಾತವನ್ನು ಕಂಡು ಇವನು ಶ್ರೀಕಾಂತನೆಂಬ ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು ಶ್ರೀ ಪ್ರಭಜಿನರ ಬಳಿ ದೀಕ್ಷೆ ಕೈಗೊಂಡನು. ನಂತರ ಶ್ರೀಪ್ರಭಗಿರಿಯಲ್ಲಿ ಸಂನ್ಯಾಸವನ್ನು ಆಚರಿಸಿ ಕಾಲವಾಗಿ ಶ್ರೀ ಪ್ರಭವಿಮಾನದಲ್ಲಿ ಶ್ರೀಧರ ದೇವನಾದನು. ನಂತರ ಶ್ರೀಧರದೇವನು ಅಜಿತಸೇನನ ಮಗನಾಗಿ ಜನಿಸಿ ಕೊನೆಗೆ ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು ತಪಸ್ವಿಯಾದನು.

ಕೊನೆಗೆ ಅಜಿತಸೇನನು ವಿರಕ್ತಿ ಹೊಂದಿದನು. ನಂತರ ಧಾತಕೀಖಂಡದ ಪೂರ್ವ ವಿದೇಹದ ಸೀತಾನದಿಯ ದಕ್ಷಿಣತಟದ ಮಂಗಳಾರತಿ ದೇಶದ ರತ್ನ ಸಂಚಯಪುರದಲ್ಲಿ ಕನಕಪ್ರಭನು ರಾಜನಾಗಿದ್ದನು. ಇವನ ರಾಣಿ ಕನಕಪ್ರಭೆ. ಈ ದಂಪತಿಗಳಿಗೆ ಅಚ್ಯುತೇಂದ್ರನು ಮಗನಾಗಿ ಪದ್ಮನಾಭನೆನಿಸಿದನು. ಕನಕಪ್ರಭನು ಒಂದು ದಿನ ಮನೋಹರೋದ್ಯಾನದಲ್ಲಿ ಶ್ರೀಧರ ಬಳಿ ಧರ್ಮಶ್ರವಣ ಕೇಳಿ ಭೋಗ ವಿರಕ್ತನಾದನು. ಪದ್ಮನಾಭನಿಗೆ ರಾಜ್ಯ ಕೊಟ್ಟು ದೀಕ್ಷೆ ಪಡೆದನು. ನಂತರ ಪದ್ಮಪ್ರಭನು ಶ್ರಾವಕ ವ್ರತ ಆಚರಿಸಿ ಕೊನೆಗೆ ಶ್ರೀಧರ ಜಿನನ ಬಳಿ ಹಲವು ಮಂದಿ ಅರಸುಗಳೊಡನೆ ತಪಸ್ವಿಯಾದನು. ನಂತರ ಮರಣ ಹೊಂದಿ ವೈಜಯಂತ ವಿಮಾನದಲ್ಲಿ ಮೂವತ್ತು ಮೂರು ಸಾಗರ ಆಯಸ್ಸುಳ್ಳ ಅಹವೀಂದ್ರನಾದನು. ಅವನೇ ಚಂದ್ರಪ್ರಭ.

ಇವನು ಜಂಬೂದ್ವೀಪದ ಭರತಕ್ಷೇತ್ರದ ಚಂದ್ರಪುರದಲ್ಲಿ ಇಕ್ಷ್ವಾಕುವಂಶದ ಕೌಶ್ಯಪ ಗೋತ್ರದ ಮಹಾಸೇನ ರಾಜನಾಗಿದ್ದನು. ಇವನ ರಾಣಿ ಲಕ್ಷ್ಮಣಾದೇವಿಯು ಚೈತ್ರ ಬಹುಳ ಪಂಚಮಿ ಬೆಳಗಿನ ಜಾವದಲ್ಲಿ ಹದಿನಾರು ಸ್ವಪ್ನಗಳನ್ನು ಕಂಡಳು. ನಂತರ ಇಂದ್ರನು ಇದನ್ನರಿತು ಗರ್ಭಾವತರಣ ಕಲ್ಯಾಣ ನೆರವೇರಿಸಿದನು. ನಂತರ ಜನ್ಮಾಭಿಷೇಕ ಕಲ್ಯಾಣವನ್ನು ಮಾಡಿ ಬೆಳದಿಂಗಳಂತೆ ಹೊಳೆಯುತ್ತಿದ್ದ ಜಿನಚಂದ್ರಪ್ರಭವೆಂದು ಹೆಸರಿಟ್ಟರು. ನಂತರ ಒಂದು ದಿನ ಅಲಂಕಾರ ಭವನದಲ್ಲಿ ರನ್ನಗನ್ನಡಿಯಲ್ಲಿ ತನ್ನ ನೆರಳನ್ನು ಕಂಡು ವಿರಕ್ತನಾದನು. ಇವನು ತನ್ನ ಮಗನಾದ ವರಚಂದ್ರನಿಗೆ ರಾಜ್ಯವನ್ನು ಕೊಟ್ಟು ದೇವೇಂದ್ರನು ರಚಿಸಿದ್ದ ಪರಿನಿಷ್ಕ್ರಮಣ ಕಲ್ಯಾಣವನ್ನು ಆಚರಿಸಿದನು. ನಂತರ ಕೇವಲಜ್ಞಾನ ಉಂಟಾಗಿ ಇವರಿಗೆ ಸಾವಿರಾರು ಹೆಸರುಗಳು ಬಂದವು. ಇವನ ಸಮವಸವರಣದಲ್ಲಿ ಗಣಧರರೂ, ಪೂರ್ವಧರರೂ, ಶಿಕ್ಷಕರು, ಅವಧಿಜ್ಞಾನಿಗಳು, ಜಿನೇಂದ್ರರೂ, ವಿಕ್ರಿಯಾಧಿಕ ಪ್ರಾಪ್ತಿಯೂ ಮನಃ ಪರಮಜ್ಞಾನಿ, ವಾದಿಗಳು ಆರ್ಯಿಕೆಯರು, ಶ್ರಾವಕರು, ಶ್ರಾವಕೆಯರು, ಅಸಂಖ್ಯಾತ ದೇವ ದೇವಿಯರು ಸಾಕ್ಷಿಯಾಗಿದ್ದರು. ಹೀಗೆ ಚಂದ್ರಪ್ರಭ ಶಾಮಲ ಯಕ್ಷ ಹಾಗೂ ಜ್ವಾಲಾಮಾಲಿನಿ ಸಮ್ಮೇದ್ ಶಿಖರದಲ್ಲಿ ಮೋಕ್ಷವನ್ನು ಹೊಂದಿದರು. ಇಷ್ಟು ಚಂದ್ರಪ್ರಭ ಪುರಾಣದ ಕಥೆಯಾಗಿದೆ.

ಇಂತಹ ಚರಿತ್ರೆಯನ್ನು ಕುರಿತು ೭ ಹಾಡುಗಳು ರಚನೆಯಾಗಿವೆ.

"ಕೇಳಿ ಮನವೊಲಿದು ಚಂದ್ರಪ್ರಭುಸ್ವಾಮಿಯ ಪದವಿಯನು

ಚಂದ್ರನಾಥನ ಪಂಚ ಕಲ್ಯಾಣವನು ಪೇಳ್ವೆ
ಚಂದದಿಂದೇಳು ಭವಗಳ ಸಹಿತವಾಗಿ||

ವರಪುಷ್ಕರದ್ವೀಪದ ಪೂರ್ವದ ಮಂದರ
ದುರುತರಪರವಿದೇಹ ಮಧ್ಯದೊಳಿಹ||

ಅ ಪುರಧಿಪತಿ ಶ್ರೀಷೇಣನೆಂಬಗೆ
ಚಾಪಲನೇತ್ರ ಶ್ರೀಕಾಂತೆ ವಲ್ಲಭೆಯಾಗಿ||

ಪುತ್ರನ ಪಡೆಯಬೇಕೆಂದು ದಂಪತಿಗಳು
ಚಿತ್ತಶುದ್ಧದಲಿ ಜಿನೇಂದ್ರನ ಪೂಜಿಸೆ||

ಶ್ರೀ ವರ್ಮನೆಂಬ ಕುವರನುದಯಿಸಿದನು
ಸಾರ್ವಭೌಮಗೆ ಸಮವೆನಿಸಿ ಸುಖದೊಳಿರೆ||

ಶ್ರೀ ಕಾಂತನೆಂಬ ಕುವರಗೆ ರಾಜ್ಯವ ಕೊಟ್ಟು
ಸ್ವೀಕರಿಸಿದನು ದೀಕ್ಷೆಯ ತೀರ್ಥಂಕರರಲ್ಲಿ||

ಚಂದ್ರನ ಕಾಂತಿಯಿಂದಧಿಕವಾಗಲು ದೇಹ
ಚಂದ್ರಪ್ರಭನೆಂಬ ನಾಮವನಿಟ್ಟನು||

ರನ್ನಗನ್ನಡಿಯ ನೆಳಲು ನೋಡಿ ಜಿನಪತಿ
ತನ್ನ ಮನದೊಳು ವೈರಾಗ್ಯವ ತಾಳಿದ||

ಪರಮೋತ್ಸವದಿಂದ ಪರಮಜಿನೇಂದ್ರಗೆ
ಪರಿನಿಷ್ಕ್ರಮಣ ಕಲ್ಯಾಣಪೂಜೆಯ ಮಾಡಿ||

ಪಾವನಫಾಲ್ಗುಣಶುದ್ಧ ಸಪ್ತಮಿಯೊಳು
ಕೇವಲಜ್ಞಾನವಾಯಿತು ಜಿನಚಂದ್ರಗೆ||

ಸಮ್ಮೇದಗಿರಿಯೊಳು ಸಿದ್ಧಶಿಲೆಯ ಮೇಲೆ
ನಿರ್ಮಲಶುಕ್ಲಧ್ಯಾನವನು ಧ್ಯಾನಿಸುತಲಿ||

ಫಾಲ್ಗುಣಶುದ್ಧಸಪ್ತಮಿಯಪರಾಹ್ನದಿ
ಪಾಲ್ಗಡಲನು ಮಿಂದ ಸ್ವಾಮಿ ಮುಕ್ತಿಗೆ ಸಂದ||"[೨೩]

ಈ ಹಾಡು ಸುದೀರ್ಘವಾದ ಹಾಡಾಗಿದ್ದು ಚಂದ್ರಪ್ರಭನ ಸಂಪೂರ್ಣವಾದ ಕಥೆಯನ್ನು ಹಾಡುಗಾರ ಎಲ್ಲಿಯು ಕೊಂಕಾಗದೆ ಚಿತ್ರಿಸಿದ್ದಾನೆ. ಈ ಹಾಡಿನಲ್ಲಿ ಚಂದ್ರಪ್ರಭನು ಕಂಡಂತಹ ೭ ಭವಗಳನ್ನು ಹೇಳುವ ಮೂಲಕ ಪಂಚಕಲ್ಯಾಣಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವುದು ವಿಶೇಷವಾಗಿದೆ. ಈ ಹಾಡು

ಚಾವುಂಡರಾಯನ ತ್ರಿಷಷ್ಟಿಶಲಾಕಪುರುಷರ ಚರಿತ್ರೆಯಲ್ಲಿ ಬರುವಂತಹ ಚಂದ್ರಪ್ರಭ ಪುರಾಣದ ಯಥಾರೂಪವಾಗಿದೆ.

"ಚಂದ್ರಸಾಗರವರ್ಣಿ ಪೇಳಿದನೀ ಪದ

ಚಂದ್ರಸೂರ್ಯದ ಕಾಲಪರ್ಯಂತಿರತೆಂದು||"[೨೨]

ಚಂದ್ರಸಾಗರವರ್ಣಿ ಎಂಬ ಕವಿ ಈ ಹಾಡನ್ನು ಹೇಳಿದ್ದಾನೆ.

## ೫.೩. ಸ್ಥಳಪುರಾಣ ಮಹಾತ್ಮೆಗಳು

ಒಂದು ನಾಡಿನ ಚರಿತ್ರೆ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಬಿಂಬಿಸುವಲ್ಲಿ ಸಾಹಿತ್ಯವು ಬಹಳ ಪ್ರಮುಖವಾದ ಆಕರವಾಗುತ್ತದೆ. ಸಾಹಿತ್ಯ ಕೇವಲ ಮನೋರಂಜನೆಯಾಗದೇ, ಆ ನಾಡಿನ ಚರಿತ್ರೆ, ಚಾರಿತ್ರ್ಯ, ಸಂಸ್ಕೃತಿ ಹಾಗೂ ಆ ನಾಡಿನ ಜನರ ಬದುಕನ್ನು ವಿವರಿಸುವ ಆಕರವಾಗುತ್ತದೆ. ಇದಕ್ಕೆ ಕನ್ನಡ ಸಾಹಿತ್ಯವು ಹೊರತೇನಲ್ಲ. ಪ್ರಾಚೀನ ಕಾಲದಿಂದಲು ಕನ್ನಡ ಸಾಹಿತ್ಯವು ಕಾಲಕ್ಕೆ ಅನುಗುಣವಾಗಿ ಹಲವಾರು ರೂಪ, ಪ್ರಕಾರಗಳನ್ನೊಳಗೊಂಡು ಅಂದಿನ ಸಂದರ್ಭದ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಸಹಾಯಕವಾಗಿದೆ. ಈ ದೃಷ್ಟಿಯಿಂದ ನೋಡಿದಾಗ ಸ್ಥಳಪುರಾಣಗಳು ಒಂದು ನಾಡಿನ ಪ್ರಾಚೀನ ಸಂಸ್ಕೃತಿ, ಆಚಾರ-ವಿಚಾರ, ಸಂಪ್ರದಾಯಗಳ ಮೇಲೆ ಬೆಳಕು ಚೆಲ್ಲುತ್ತವೆ. ಹಾಗೂ ಅಷ್ಟೇ ಪರಿಪೂರ್ಣವಾದ ಚರಿತ್ರೆಯನ್ನು ಕಟ್ಟಿಕೊಡುತ್ತವೆ ಎಂಬುದು ಸಂದೇಹಾಸ್ಪದವಾದುದು. ಅಲ್ಲಿ ಸಿಕ್ಕಿರುವ ಮಾಹಿತಿಯ ಆಕರದ ಮೂಲವನ್ನು ಇಟ್ಟುಕೊಂಡು ಬಾಕಿ ಉಳಿದಿರುವ ಸತ್ಯಾನ್ವೇಷಣೆಯಲ್ಲಿ ತೊಡಗಿಕೊಳ್ಳಲು ಸಹಾಯಕವಾಗುತ್ತದೆ. ಇಂತಹ ಸ್ಥಳಪುರಾಣಗಳ ಮಹಾತ್ಮೆ ಕನ್ನಡ ಸಾಹಿತ್ಯದಲ್ಲಿ ವಿರಳವಾಗಿ ಕಂಡುಬಂದರೂ ೧೭ನೇ ಶತಮಾನ ಸ್ಥಳಪುರಾಣ ಮಹಾತ್ಮೆಗಳ ದೃಷ್ಟಿಯಿಂದ ಮಹತ್ವದ ಕಾಲವೆಂದೇ ಹೇಳಬಹುದು.

'ಮಹಾತ್ಮೆ' ಎಂದರೆ ಹಿರಿಮೆ, ಮಹಿಮೆ, ಕೀರ್ತಿ ಎಂದರ್ಥ. ಈ ಸ್ಥಳ ಪುರಾಣ ಮಹಾತ್ಮೆಗಳು ಒಂದು ಸ್ಥಳದ ಅಥವಾ ಅಲ್ಲಿರುವ ಐತಿಹಾಸಿಕ ವ್ಯಕ್ತಿ ಹಾಗೂ ತತ್ವ ವಿಚಾರಗಳ ಮಹತ್ವವನ್ನು ಕೀರ್ತಿಸುವ ಉದ್ದೇಶದಿಂದ ಹುಟ್ಟಿಕೊಂಡವೆಂದೇ ಹೇಳಬೇಕು. "ಸ್ಥಳಪುರಾಣ ಮಹಾತ್ಮೆಗಳನ್ನು ಚರಿತ್ರೆಯಿಂದ ಭಿನ್ನವಾಗಿ ನೋಡುವ ಪರಿಪಾಟವಿದೆ. ಸಾಂಪ್ರದಾಯಿಕ ಪ್ರಧಾನವಾದ ಕಥೆಗಳು ಪ್ರಕಾರಗಳನ್ನಾಧರಿಸಿ, ಸ್ಥಳ, ವ್ಯಕ್ತಿ, ತತ್ವವಿಚಾರಗಳ ಮಹತ್ವವನ್ನು ಕೀರ್ತಿಸುವ ಉದ್ದೇಶದಿಂದ ಮಹಾತ್ಮೆಗಳು ಹುಟ್ಟಿಕೊಂಡವು."[೨೮]

ಇಂತಹ ಸ್ಥಳಪುರಾಣ ಮಹಾತ್ಮೆಗಳು ಎಲ್ಲ ಮತಧರ್ಮಗಳಲ್ಲಿ ಕಂಡುಬರುತ್ತವೆ. ಒಂದು ಸ್ಥಳದ ಮಹಿಮೆಯನ್ನು ಅಥವಾ ಆ ಸ್ಥಳದ ಐತಿಹಾಸಿಕ ವ್ಯಕ್ತಿಗಳ ಮಹತ್ವವನ್ನು ಮತ್ತು ಕೆಲವೊಂದು ಆಚಾರ-ವಿಚಾರಗಳನ್ನು ಲೋಕಮಾನ್ಯಗೊಳಿಸಲು ತನ್ನದೇ ಆದಂತಹ ಕಥೆಗಳನ್ನಾಧರಿಸಿ ಕಲ್ಪನಾತೀತವಾಗಿ ಕಟ್ಟಿಕೊಡುವುದಾಗಿದೆ. ಇಂತಹ ಸ್ಥಳಪುರಾಣ ಮಹಾತ್ಮೆಗಳು ಎಲ್ಲ ಮತಧರ್ಮಗಳಲ್ಲಿರುವುದು ಕಂಡುಬರುತ್ತದೆ. ಹಾಗೆಯೇ ಜೈನಧರ್ಮವು ಸಹ ತನ್ನ ಧರ್ಮದ ಚರಿತ್ರೆಯ ಐತಿಹಾಸಿಕ ವ್ಯಕ್ತಿಗಳು ಮತ್ತು ತನ್ನ ಧರ್ಮದ ತತ್ವವಿಚಾರಗಳನ್ನು ಕೀರ್ತಿಗೊಳಿಸುವ ಅಥವಾ ಜೈನಧರ್ಮದಲ್ಲಿರುವಂತಹ ಅಂಶಗಳನ್ನು ಜನತೆಗೆ ತಿಳಿಸುವ ಸಲುವಾಗಿ ಜೈನರ ಹಲವಾರು ಸ್ಥಳಪುರಾಣ ಮಹಾತ್ಮೆಗಳು ಹುಟ್ಟಿಕೊಂಡಿರುವುದನ್ನು ನೋಡಬಹುದು. ಇಂತಹ

ಸ್ಥಳಪುರಾಣ ಮಹಾತ್ಮೆಗಳನ್ನು ಬಿಂಬಿಸುವ ಹಲವಾರು ಸಾಹಿತ್ಯ ಕೃತಿಗಳು ಕಂಡುಬರುತ್ತವೆ. ಇಲ್ಲಿ ಮುಖ್ಯವಾಗಿ ಕನ್ನಡ ಜೈನಹಾಡುಗಳಲ್ಲಿ ಪ್ರಸ್ತಾಪಿಸಿರುವ ಸ್ಥಳಗಳು ಹಾಗೂ ಐತಿಹಾಸಿಕ ವ್ಯಕ್ತಿಗಳನ್ನೊಳಗೊಂಡ ಎಷ್ಟು ಸ್ಥಳಪುರಾಣ ಮಹಾತ್ಮೆಗಳುಳ್ಳ ಸಂಗತಿಗಳು ನಮಗೆ ಲಭ್ಯವಾಗುತ್ತವೆ ಎಂಬುದನ್ನು ಪರಿಶೀಲಿಸಲಾಗುವುದು.

ಕನ್ನಡ ಜೈನಹಾಡುಗಳು ಜೈನಧರ್ಮದ ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಡುವಲ್ಲಿ ಮಹತ್ವದ ಪಾತ್ರ ವಹಿಸಿವೆ. ಈ ಹಾಡುಗಳು ಜೈನಧರ್ಮದ ತತ್ವವಿಚಾರಗಳು, ಧಾರ್ಮಿಕ ಆಚರಣೆಗಳು, ಐತಿಹಾಸಿಕ ವ್ಯಕ್ತಿಗಳ ಉಲ್ಲೇಖ ಮತ್ತು ಜೈನಕ್ಷೇತ್ರಗಳ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ಅದ್ದರಿಂದಾಗಿ ಈ ಹಾಡುಗಳನ್ನು ಸ್ಥಳಪುರಾಣ ಮಹಾತ್ಮೆ ದೃಷ್ಟಿಯಿಂದ ನೋಡಿದಾಗ ಆ ಸ್ಥಳದ ವೈಶಿಷ್ಟ್ಯ, ಮೂಲ ಹಾಗೂ ಚಾರಿತ್ರಿಕ ಪ್ರಾಮುಖ್ಯತೆಯನ್ನು ಒಳಗೊಂಡ ಹಲವಾರು ಅಂಶಗಳನ್ನು ಅನಾವರಣಗೊಳಿಸುತ್ತವೆ. ಇಂತಹ ಸ್ಥಳಪುರಾಣಗಳು ಕೇವಲ ಕಥೆ ಪುರಾಣಗಳಾಗದೇ ಆ ಧರ್ಮದ ಚಾರಿತ್ರಿಕ ಅಂಶಗಳ ಸುಳಿವುಗಳನ್ನು ನೀಡು ವಂತಹವುಗಳಾಗಿವೆ.

ಕರ್ನಾಟಕ ಜೈನರಲ್ಲಿ ಇತರೆ ಧರ್ಮಗಳಲ್ಲಿರುವಂತೆಯೇ, ಹಲವಾರು ಸ್ಥಳಪುರಾಣ ಮಹಾತ್ಮೆಗಳು, ಪವಾಡಗಳು, ಐತಿಹ್ಯಗಳು ಕಂಡುಬರುತ್ತವೆ. ಸ್ಥಳಪುರಾಣಗಳಲ್ಲಿ ದೇವಾಲಯ, ಪುಣ್ಯಕ್ಷೇತ್ರವಾಗಿ ಪ್ರಚಲಿತವಾದ ಅಂಶದ ಹಿನ್ನೆಲೆಯಲ್ಲಿ ಹಲವಾರು ಪವಾಡಗಳನ್ನು ಕಾಣಬಹುದು. ಆ ಮೂಲಕ ಜನಸಮೂಹದ ಮನಸ್ಸಿನ ಮೇಲೆ ಆ ಸ್ಥಳದ ಮಹತ್ವವನ್ನು ಹೇಳುವುದರ ಮೂಲಕ ಜನರಲ್ಲಿ ಜೈನಧರ್ಮದ ಕೀರ್ತಿ ಶ್ರದ್ಧೆ, ಭಕ್ತಿ, ನಂಬಿಕೆಗಳು ಉಂಟಾಗುವಂತೆ ಪ್ರೇರೇಪಿಸಿರುವುದು ಕಂಡುಬರುತ್ತವೆ. ಅಂತಹ ವೈಶಿಷ್ಟ್ಯಪೂರ್ಣವಾದ ಸ್ಥಳಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

### ೫.೩.೧. ಹೊಂಬುಜ

ಹೊಂಬುಜ ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನಲ್ಲಿದೆ. ಇದು ಹಚ್ಚ ಹಸಿರಿನ ಮಲೆನಾಡಿನ ಮಡಿಲಿನಲ್ಲಿರುವ ಒಂದು ಭವ್ಯವಾದ ಚಾರಿತ್ರಿಕ ಪ್ರದೇಶವಾಗಿದೆ. ಹಾಗೆಯೇ ಇದೊಂದು ಅತಿಶಯ ಕ್ಷೇತ್ರವಾಗಿದೆ. ಹೊಂಬುಜವು ತುಂಬ ಪ್ರಾಚೀನ ಇತಿಹಾಸವನ್ನು ತನ್ನ ಒಡಲೊಳಗೆ ಬಚ್ಚಿಟ್ಟುಕೊಂಡಿದೆ. ಹಲವಾರು ರಾಜಮನೆತನಗಳು ಈ ಕ್ಷೇತ್ರದಲ್ಲಿ ಆಳ್ವಿಕೆ ನಡೆಸಿದ ಕುರುಹುಗಳಾಗಿ ಹಲವಾರು ದೇವಾಲಯ, ಬಸದಿಗಳನ್ನು ಕಾಣಬಹುದು.

ಪ್ರಾಚೀನ ಕಾಲದಲ್ಲಿ ಹೊಂಬುಜವನ್ನು ಪೊಂಬಚ್ಚಿ, ಪೊಂಬರ್ಚ್, ಹೊಂಬುಚ್ಚಿ, ಹೊಂಬುರ್ಚ್, ಹೊಂಬುಚ್ಚ, ಹೊಂಬುಚ, ಹೊಂಬುಜ, ಪುಂಚ ಹೀಗೆ ಹಲವು ಹೆಸರುಗಳಿಂದ ಕರೆಯುತ್ತಿದ್ದರು ಎನ್ನುವುದನ್ನು ಅನೇಕ ಚಾರಿತ್ರಿಕ ದಾಖಲೆಗಳು ಉಲ್ಲೇಖಿಸುತ್ತವೆ. ಈ ಕ್ಷೇತ್ರವು ಕನ್ನಡ ನಾಡಿನ ಜೈನರ ಅಂದಿನ ಪ್ರಸಿದ್ಧ ಧಾರ್ಮಿಕ ಕೇಂದ್ರವೂ ಆಗಿತ್ತು.

ಇಲ್ಲಿರುವ ಅನೇಕ ಸ್ಮಾರಕಗಳು, ಬಸದಿಗಳು, ದೇವಾಲಯಗಳು, ಮಠಗಳು ಮುಂತಾದವು ಈ ಕ್ಷೇತ್ರದ ಸಾಂಸ್ಕೃತಿಕ ಅನನ್ಯತೆಯನ್ನು ಸಾರುತ್ತವೆ. ಇಂತಹ ಅತಿಶಯ ಹಾಗೂ ಜೈನರ ಧಾರ್ಮಿಕ ಕ್ಷೇತ್ರವಾದ ಹೊಂಬುಜವು ಕನ್ನಡ ಸಾಹಿತ್ಯದಲ್ಲಿ ಉಲ್ಲೇಖಗೊಂಡಿರುವುದು ವಿಶೇಷ. ಅದರಲ್ಲೂ ಕನ್ನಡ ಜೈನಹಾಡುಗಳಲ್ಲಿ

ಈ ಕ್ಷೇತ್ರವು ಅತಿಹೆಚ್ಚು ಪ್ರಸ್ತಾಪಗೊಂಡು ಅಲ್ಲಿಯ ಯಕ್ಷಿಣಿಯಾದ ಪದ್ಮಾವತಿಯಮ್ಮನವರನ್ನು ಆರಾಧಿಸುವ, ಭಜಿಸುವ, ಭಕ್ತಿಯ ಪರಾಕಾಷ್ಠತೆಯನ್ನು ಈ ಹಾಡುಗಳಲ್ಲಿ ಕಾಣಬಹುದು.

"ವರಹೊಂಬುಜ ಪುರದೊಳು ನೆಲೆಸಿದ
ವರ ನಿರ್ಗುಡಿಯ ಚರಣವ
ನೆರೆ ಸ್ಮರಿಸುವ ಜನರಿಗೆ
ವರಮುತ್ತು ಜಗದಿ ಸುಖದೇವ ಪದ್ಮಾಂಬೆ
ಸುರಗಿಯ ಹೂವ ಮುಡಿಬಾರೇ||

ಹೊಂಬುಜ ಪುರದೊಳ್ ನೆಲೆಸಿದ
ರಂಬೆ ಪದ್ಮಾವತಿಯಮ್ಮಗೆ ಸುವರ್ಣದ
ಪ್ರತುಮೆಯಸೆಯಲು ಪದ್ಮಾಂಬೆ
ದುಂಡು ಮಲ್ಲಿಗೆಯ ಮುಡಿಬಾರೇ"||[೨೮]

ಹೊಂಬುಜಪುರ ಕ್ಷೇತ್ರವು ಜೈನರ ಕುಲದೇವಿಯಾದ ಪದ್ಮಾವತಿ ಅಮ್ಮನವರು ನೆಲೆಸಿರುವ ಸ್ಥಳವಾಗಿದೆ. ಪದ್ಮಾವತಿಯು ೨೩ನೇ ತೀರ್ಥಂಕರ ಪಾರ್ಶ್ವನಾಥನ ಯಕ್ಷಿಣಿ, ಭಗವಾನ್ ಪಾರ್ಶ್ವನಾಥನಿಗೆ ದುಷ್ಟಕಮಠನು ಎಸಗಿದ ಘೋರ ಉಪಸರ್ಗದಿಂದ ತನ್ನ ಪತಿಯಾದ ಯಕ್ಷ-ಧರಣೇಂದ್ರನೊಂದಿಗೆ ಸಹಕರಿಸಿ ಸ್ವಾಮಿಯ ನಿಷ್ಠೆಗೆ ಕುಂದು ಬಾರದಂತೆ ಕಾಪಾಡಿದ ಮಹಾಯಕ್ಷಿ. ಜೈನರಲ್ಲಿ ಅತ್ಯಂತ ಪ್ರಸಿದ್ಧಿ ಪಡೆದ ಮತ್ತು ಆರಾಧಿಸುವ ಯಕ್ಷಿಣಿ ಈ ಪದ್ಮಾವತಿಯಮ್ಮವರಾಗಿದ್ದಾರೆ. ಹೆಣ್ಣುಮಕ್ಕಳ ಆರಾಧ್ಯದೇವತೆಯಾದ ಈ ಅಮ್ಮನವರಲ್ಲಿ ಹರಕೆ, ಪ್ರಾರ್ಥನೆ, ವರಪ್ರಸಾದಗಳನ್ನು ಕೇಳಿ ಪಡೆಯುವ ವಾಡಿಕೆ ಇಂದಿಗೂ ಇದೆ. ಈ ಕ್ಷೇತ್ರದಲ್ಲಿ ಈಕೆಯ ಮಹಾತ್ಮೆಯ ಕುರಿತು ಜನರು ಹಾಡಿ ಹೊಗಳಿದ್ದಾರೆ. ಇಲ್ಲಿನ ಜನ ಪದ್ಮಾವತಿಯಮ್ಮನವರನ್ನು ಕುರಿತ ಮಹಾತ್ಮೆಯನ್ನು ಈ ರೀತಿ ಹೇಳುತ್ತಾರೆ.

ಪದ್ಮಾವತಿ ಯಕ್ಷಿಣಿ ಉತ್ತರ ಮಧುರೆಯವಳು. ರಾಜನಾದ ಜಿನದತ್ತರಾಯ ತನ್ನ ಜೋಳಿಗೆಯಲ್ಲಿ ಪದ್ಮಾವತಿ ಯಕ್ಷಿಣಿಯ ಮೂರ್ತಿಯನ್ನು ತೆಗೆದುಕೊಂಡು ದಕ್ಷಿಣದ ಕಡೆಗೆ ಕುದುರೆಯನೇರಿಕೊಂಡು ಬರುತ್ತಾನೆ. ಈ ಜಿನದತ್ತರಾಯನನ್ನು ಬೆನ್ನಟ್ಟಿ ಇತ್ತ ಭಗದತ್ತ ರಾಜನು ಬರುತ್ತಾನೆ. ಆಗ ಭಗದತ್ತ ರಾಜನು ಜಿನದತ್ತನ ಹತ್ತಿರ ಸಮೀಪಿಸುತ್ತಿದ್ದಂತೆ, ತಕ್ಷಣದಲ್ಲಿ ಮುನಿಗಳ ಆದೇಶದಂತೆ ತಾನು ಹೊತ್ತು ತಂದ ಪದ್ಮಾವತಿಯ ದೇವಿಯ ಮೂರ್ತಿಯನ್ನು ಹಿಂಬಾಲಿಸುವ ಸೈನ್ಯಕ್ಕೆ ಮುಖ ಮಾಡಿ ತೋರಿಸು ಎಂದು ಹೇಳಿರುತ್ತಾನೆ. ಆಗ ಜಿನದತ್ತರಾಯ ಹಾಗೆಯೇ ಮಾಡುತ್ತಾನೆ. ತಕ್ಷಣ ಭಗದತ್ತನ ಸೈನ್ಯ ನೂರು ಗಾವುದ ಹಿಂದಕ್ಕೆ ಸರಿಯುತ್ತದೆ. ಹೀಗೆ ಪುನಃ ಪುನಃ ಮಾಡಿ ಕೊನೆಗೆ ಭಗದತ್ತ ಸೋತು ಶರಣಾಗುತ್ತಾನೆ. ಆಗ ಜಿನದತ್ತರಾಯ ಪದ್ಮಾವತಿಯನ್ನು ಸ್ಮರಿಸುತ್ತಾನೆ. ಆಗ ಅಲ್ಲಿಯೇ ನೀರು ಹರಿಯುತ್ತಿದ್ದ ಒಂದು ತಂಪಾದ ಪ್ರದೇಶ ಸಿಕ್ಕಿತು. ಆ ಜಾಗದಲ್ಲಿಯೇ ಒಂದು ಲಕ್ಕಿಯ ಗಿಡ ಗೋಚರಿಸಿತು. ತಕ್ಷಣ ಜಿನದತ್ತರಾಯ ತಾನು ಹೊತ್ತು ತಂದಿದ್ದ ಜೋಳಿಗೆಯನ್ನು ಆ ಲಕ್ಕಿಯ ಗಿಡಕ್ಕೆ ನೇತುಹಾಕಿ ಲಕ್ಕಿಯ ಬುಡದ ಕೆಳಗೆ ಮಲಗುತ್ತಾನೆ.

ಆಗ ಅವನಿಗೆ ಆಶ್ಚರ್ಯವಾಗುತ್ತದೆ. "ನಾನು ಇಲ್ಲಿಂದ ಮುಂದೆ ಬರಲಾರೆ" ಎಂಬ ದಿವ್ಯವಾಣಿಯು ಈತನಿಗೆ ನಿದ್ರಾಭಂಗ ಮಾಡಿತು. ಥಕ್ಕನೆ ಎಚ್ಚೆತ್ತು ನೋಡುತ್ತಾನೆ. ತನ್ನ ಜೋಳಿಗೆಯಿಂದ ಪದ್ಮಾವತಿ ದೇವಿಯ ಮೂರ್ತಿಯನ್ನು ತೆಗೆಯಲು ಪ್ರಯತ್ನ ಪಡುತ್ತಾನೆ. ಎಳ್ಳಷ್ಟು ಚಲಿಸಲಾರದೇ ಅಯ್ಯೋ ದುರ್ವಿಧಿಯೇ? ಪದ್ಮಾವತಿದೇವಿಯೇ! ಈ ಘೋರ ಕಾನನದಲ್ಲಿ ನನ್ನ ಕೈ ಬಿಟ್ಟೆಯಾ ಎಂದು ಗೋಳಿಡುತ್ತಾ, ನಾನು ಅನ್ನ ಆಹಾರವನ್ನು ತ್ಯಾಗ ಮಾಡಿ ಇಲ್ಲೇ ಪ್ರಾಣ ಬಿಡುತ್ತೇನೆ ಎನ್ನುತ್ತಿದ್ದಂತೆಯೇ ಆಗ ಪದ್ಮಾವತಿ ದೇವಿಯು, ಮಗನೇ ದುಃಖಿಸಬೇಡ ನಾನು ನೆಲೆನಿಂತ ಈ ಕಾಡು ಮುಂದೆ ಸುಂದರವಾದ ಬಂಗಾರದ ಬೀಡಾಗುತ್ತದೆ ಎಂದು ಹೇಳುತ್ತಾಳೆ. ನನ್ನ ಮೂರ್ತಿಗೆ ಕಬ್ಬಿಣ ಸೋಂಕಿದಾಗ ತಕ್ಷಣ ಬಂಗಾರವಾಗಿ ಮಾರ್ಪಡುತ್ತದೆ. ಪೊನ್ನುಬಿಕಸು ಅಂದರೆ ಬಂಗಾರ ಹೊರಹೊಮ್ಮಿತು ಎಂದರ್ಥ. ಅಂದಿನಿಂದ ಈ ಸ್ಥಳವು ಹೊಂಬುಜವೆಂಬ ನಾಮಾಂಕಿತದಿಂದ ಪ್ರಸಿದ್ಧಿಗೆ ಬಂದಿತು. ಹಾಗೆಯೇ ಈ ಕ್ಷೇತ್ರದಲ್ಲಿ ಭದ್ರಬಾಹು, ಸುಮಂತಭದ್ರ ಮುಂತಾದ ಜೈನ ಆಚಾರ್ಯರು ಇಲ್ಲಿ ಇದ್ದರೆಂಬ ಸಂಗತಿಯನ್ನು ಇಲ್ಲಿರುವ ಶಿಲಾಶಾಸನಗಳು ಉಲ್ಲೇಖಿಸುತ್ತವೆ. ಇಲ್ಲಿರುವಂತಹ ದೇವಾಲಯಗಳು, ಬಸದಿಗಳು, ಸ್ಮಾರಕಗಳು ಹೀಗೆ ಕಂಡುಬರುತ್ತವೆ. ಪಂಚಬಸದಿ, ಚಂದ್ರನಾಥಬಸದಿ, ಪಾರ್ಶ್ವನಾಥ ಬಸದಿ ಪದ್ಮಾವತಿಯಮ್ಮನವರ ಗುಡಿ, ಮಠದ ಬಸದಿ, ಗುಡ್ಡದ ಬಸದಿ, ಸೂಳೆ ಬಸದಿ ಇವೆಲ್ಲವು ಹೊಂಬುಜ ಕ್ಷೇತ್ರ ಪ್ರಾಧಾನ್ಯತೆಯನ್ನು ಹಾಗೂ ಜೈನ ಸಂಸ್ಕೃತಿಯನ್ನು ಬಿಂಬಿಸುವ ಸಾಕ್ಷ್ಯಾಧಾರಗಳಾಗಿವೆ.

### ೫.೩.೨. ಕಾರ್ಕಳ

ಕಾರ್ಕಳವು ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರವಾಗಿದೆ. ಈ ಪ್ರದೇಶವು ಕರಿಕಲ್ಲಿನಿಂದ ಕೂಡಿರುವುದರಿಂದ ಇದಕ್ಕೆ ಕಾರ್ಕಲ್ಲು>ಕಾರ್ಕಳ ಎಂದು ಹೆಸರು ಬಂದಿದೆ ಎಂದು ಹೇಳುತ್ತಾರೆ. ಈ ಪಟ್ಟಣದ ಸುಂದರವಾದ ಪ್ರಕೃತಿಯ ಮಡಿಲಿನಲ್ಲಿ ೩೦೦ ಅಡಿ ಎತ್ತರದ ಬೆಟ್ಟದ ಮೇಲೆ ಭದ್ರವಾದ ಗೊಮ್ಮಟಮೂರ್ತಿಯನ್ನು ಭೈರ ಅರಸ ರಾಜಮನೆತನದ ಪಾಂಡ್ಯ ರಾಜನು ೪೧½ಅಡಿ ಎತ್ತರದ ಭವ್ಯಮೂರ್ತಿಯನ್ನು ಕ್ರಿ.ಶ. ೧೪೩೨ರಲ್ಲಿ ನಿರ್ಮಿಸಿದನು. ಇದಕ್ಕೆ ಪೂರಕವಾಗಿ ಕನ್ನಡ ಸಾಹಿತ್ಯದಲ್ಲಿ ಅನೇಕ ಶಾಸನಗಳಲ್ಲಿ ಉಲ್ಲೇಖಿತವಾಗಿರುವುದನ್ನು ಕಾಣಬಹುದು. ಹಾಗೆಯೇ ಕನ್ನಡ ಜೈನಹಾಡುಗಳಲ್ಲಿ ಇಲ್ಲಿಯ ಗೊಮ್ಮಟಮೂರ್ತಿಯಾದ ಬಾಹುಬಲಿ ಮತ್ತು ಮಠಾಧಿಪತಿಗಳ ಬಗ್ಗೆ ಉಲ್ಲೇಖಿತಗೊಂಡಿರುವ ಹಾಡು.

"ಧರೆಗಧಿಕವಾದ ಶ್ರೀ ಕಾರ್ಕಳ ಪುರಾಗ್ರದೊಳು
ಸ್ಥಿರವಾಗಿ ನೆಲೆಸಿರ್ದು ನಿಶ್ಚಿಂತೆಯೊಳ್
ಗುರುಲಲಿತಕೀರ್ತಿ ಮುನಿಪತಿಯ ವಾ ರಕ್ಷಿಸುವ
ದುರಿತಹರ ಬಾಹುಬಲಿ ಜಿನರಾಜಗೆ"[೩೦]

ಇಲ್ಲಿ ಕಾರ್ಕಳದ ಬಾಹುಬಲಿ ಮೂರ್ತಿಯನ್ನು ಮತ್ತು ಜೈನಮಠಾಧಿಪತಿಗಳನ್ನು ಕುರಿತು ಹಾಡಿರುವುದನ್ನು ನೋಡುತ್ತೇವೆ. ಹಾಗೆಯೇ ಇಲ್ಲಿ ಚತುರ್ಮುಖ ಬಸದಿ ದೊಡ್ಡ ಕರಿಗುಡ್ಡದ ಮೇಲೆ ಒಂದೇ ತೆರನಾದ ನಾಲ್ಕು ಬಾಗಿಲುಗಳುಳ್ಳ ಬಸದಿಯಾಗಿದ್ದು ಕ್ರಿ.ಶ. ೧೫೮೬ರಲ್ಲಿ ಈ ಬಸದಿಯು

ನಿರ್ಮಾಣವಾಗಿರುವ ದಾಖಲೆಗಳಿವೆ. ಈ ಬಸದಿಯಲ್ಲಿ ಮೂರು ಜನ ತೀರ್ಥಂಕರರ ದೊಡ್ಡ ಮೂರ್ತಿಗಳಿವೆ. ಹಾಗೆಯೇ ಅದರ ಜೊತೆಯಲ್ಲಿ ೨೪ ತೀರ್ಥಂಕರರ ಚಿಕ್ಕ ಬಿಂಬಗಳಿವೆ. ಜೊತೆಗೆ ಪದ್ಮಾವತಿ ಯಕ್ಷಿಣಿಯ ಮೂರ್ತಿಯಿದೆ. ಗೊಮ್ಮಟಬೆಟ್ಟದಿಂದ ೧ ಕಿ.ಮೀ. ದೂರದಲ್ಲಿರುವ ನೇಮಿನಾಥನ ಬಸದಿಯನ್ನು ಕ್ರಿ.ಶ. ೧೩೭೯ರಲ್ಲಿ ನಿರ್ಮಿಸಲಾಗಿದೆ. ಈ ಬಸದಿಯ ಮುಂಭಾಗದಲ್ಲಿ ೫೪ ಅಡಿ ಎತ್ತರದ ಬೆಣಚುಕಲ್ಲಿನ ಸುಂದರವಾದ ಮಾನಸ್ತಂಭವಿದೆ. ಜೊತೆಗೆ ಇಲ್ಲಿರುವಂತಹ ಹಲವಾರು ದಾನನೀತಿ ಭುಜಬಲ ಬ್ರಹ್ಮಾಚಾರ್ಯ ಶ್ರಮ ಮಠ, ಅನಂತಶಯನ ದೇವಾಲಯಗಳಿಂದ ಕೂಡಿದೆ. ಈ ಪ್ರದೇಶದಲ್ಲಿ ಅನೇಕ ಜೈನ ರಾಜಮನೆತನ ಗಳು ಆಳ್ವಿಕೆ ನಡೆಸಿವೆ. ಇದಕ್ಕೆ ಪ್ರತೀಕವೆನ್ನುವಂತೆ ಸ್ಮಾರಕ, ಬಸದಿ, ದೇವಾಲಯಗಳು, ಮಠಗಳು, ದಾನಶಾಲೆಗಳನ್ನು ನಿರ್ಮಿಸಿ ಸಾಂಸ್ಕೃತಿಕ ಅನನ್ಯತೆಗೆ ಕಾರಣವಾಗಿರುವುದನ್ನು ನೋಡಬಹುದು.

### ೫.೩.೩. ಮೂಡಬಿದಿರೆ

ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ ತಾಲೂಕಿನಲ್ಲಿರುವ ಮೂಡಬಿದಿರೆ ಇದೊಂದು ಜೈನ ಕಾಶಿಯೆಂದೇ ಪ್ರಸಿದ್ಧಿ ಪಡೆದಿದೆ. ಈ ಕ್ಷೇತ್ರದ ಇತಿಹಾಸವನ್ನು ತಿಳಿಯಲು ಶಾಸನಗಳು, ತಾಮ್ರಶಾಸನಗಳು, ಸಾಹಿತ್ಯ ಕೃತಿಗಳು, ಜೈನಬಸದಿಗಳು, ದೇವಾಲಯಗಳು ವಿಪುಲವಾಗಿ ಸಿಗುವುದರಿಂದ ಸ್ಪಷ್ಟವಾದ ದಾಖಲೆಗಳನ್ನು ಒದಗಿಸುತ್ತವೆ. ಮೂಡಬಿದಿರೆಯನ್ನು ಹಲವಾರು ಹೆಸರುಗಳಿಂದ ಕರೆದಿರುವುದನ್ನು ನೋಡುತ್ತೇವೆ. ಮೂಡಬಿದಿರೆಯೆಂದರೆ ಪೂರ್ವದಲ್ಲಿ ಬಿದಿರು ಬೆಳೆಯುವ ಕ್ಷೇತ್ರವಾಗಿರುವ ಕಾರಣಕ್ಕಾಗಿ ಈ ಹೆಸರಿನಲ್ಲಿ ಮೂಡಬಿದಿರೆ ಎಂದು ಗುರುತಿಸಿಕೊಂಡಿದೆ. ಇದರಲ್ಲಿ ಮೂಡ+ಬಿದಿರೆ ಎಂಬ ಎರಡು ಪದಗಳಿವೆ. ಬಿದಿರು ಬೆಳೆಯುವಂತಹ ಈ ಸ್ಥಳವು ಮೂಡಬಿದಿರೆಯಾಯಿತು ಮತ್ತು ಇನ್ನೊಂದು ಕಡೆ ಪಶ್ಚಿಮಕ್ಕೆ ಬಿದಿರು ಬೆಳೆಯುತ್ತಿದ್ದುದರಿಂದ ಪಡುಬಿದಿರೆ ಎಂದು ಕರೆಯುತ್ತಾರೆ. ಹಾಗೆಯೇ ಮೂಡಬಿದಿರೆ ಎಂದು ಕರೆಯಲು ಮತ್ತೊಂದು ವೈಶಿಷ್ಟ್ಯವೆಂದರೆ ಜೈನರ ಮೂರು ಷಟ್ಖಾಂಡಗಳಾದ ೧. ಧವಳ ೨. ಜಯಧವಳ ೩. ಮಹಾಧವಳ ಎಂಬ ಗ್ರಂಥಗಳ ಮೂಲ ಕೃತಿಗಳು ಇಲ್ಲೇ ಇರುವುದರಿಂದ ಮತ್ತು ಸಾವಿರಾರು ವರ್ಷಗಳಿಂದ ಓಲೆಗರಿಯಲ್ಲಿ ಭದ್ರವಾಗಿ ಇರುವುದರಿಂದ ಹಾಗೂ ಪ್ರಾಚೀನ ಶಿಲಾಶಾಸನಗಳಲ್ಲಿ ಇದನ್ನು 'ಬಿದರೆ' ಎಂದು ಸಂಬೋಧಿಸಲಾಗಿದೆ.

ಮೂಡಬಿದರೆಯನ್ನು ಮೂಲಭದ್ರಿ-ಸಿಂಹವೇಣಿಪುರ ಎಂದು ಕರೆಯುತ್ತಾರೆ. ಇದನ್ನು ಸಂಸ್ಕೃತದಲ್ಲಿ 'ವಂಶಪುರ', 'ವೇಣುಪುರ' ಕ್ಷೇಮವೇಣುಪುರ ಮತ್ತು ಪ್ರಾಗ್ವೇಣುಪುರ ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು ಎಂಬುದು ತಿಳಿದುಬರುತ್ತದೆ. ಸಂಸ್ಕೃತದಲ್ಲಿ ವಂಶ, ವೇಣು ಎಂದರೆ ಬಿದಿರು ಎಂದರ್ಥ. ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಇದರ ಇತಿಹಾಸವೂ ಕ್ರಿ.ಶ.೮ನೇ ಶತಮಾನದ ಹಿಂದಕ್ಕೆ ಹೋಗುತ್ತದೆ. ಕ್ರಿ.ಶ. ೧೦-೧೧ನೇ ಶತಮಾನದ ಹೊತ್ತಿಗೆ ಮೂಡಬಿದಿರೆಯು ಬೃಹತ್ ಜೈನ ಕೇಂದ್ರವಾಗಿ ರೂಪುಗೊಂಡಿತ್ತು. ಈ ಕ್ಷೇತ್ರದಲ್ಲಿ ಹಲವಾರು ಜೈನ ಗುರುಗಳು ಮತ್ತು ಕವಿಗಳು ಜನಿಸಿದ್ದರು. ಭಾರತದೇಶದ ಎಲ್ಲಾ ಭಾಗಗಳಿಂದ ಬಂದ ಜೈನಧರ್ಮೀಯರು ಇಲ್ಲಿರುವ ೧೮ ತೀರ್ಥಂಕರರ ಹೆಸರುಗಳಲ್ಲಿ ಬಸದಿಗಳನ್ನು ನಿರ್ಮಿಸಿದ್ದಾರೆ. ಪ್ರತಿಯೊಂದು ಬಸದಿಯೂ ಹಿನ್ನೆಲೆ ಮತ್ತು ಪ್ರೇರಣೆಯನ್ನು ಒಳಗೊಂಡಿದೆ. ಬಹುತೇಕ ಇಲ್ಲಿಯ ಬಸದಿಗಳನ್ನು ಹಲವಾರು ವ್ಯಾಪಾರಿಗಳ ಮತ್ತು ಜೈನ ಗುರುಗಳ ಆದೇಶದ ಮೇರೆಗೆ ಕಟ್ಟಿಸಿರುವುದು

ಕಂಡುಬರುತ್ತದೆ. ಇಲ್ಲಿನ ಪ್ರತಿಯೊಂದು ಬಸದಿಯನ್ನು ಕಟ್ಟಿಸಿದ ವ್ಯಾಪಾರಿಯ ಹೆಸರಿನಿಂದಲೇ ಕರೆಯುತ್ತಾರೆ. ಹಾಗೆ ನೋಡಿದಾಗ ಇದೊಂದು ದೊಡ್ಡ ವ್ಯಾಪಾರ ಕ್ಷೇತ್ರವೂ ಆಗಿದ್ದಿತು. ಇಲ್ಲಿ ಬರುವ ಪ್ರಮುಖ ಬಸದಿ "ಗುರು ಬಸದಿ." ಈ ಬಸದಿಯು ಸ್ಥಳಪುರಾಣ ಮಹಾತ್ಮೆಯನ್ನು ಹೊಂದಿದೆ. ಅನೇಯ ಶತಮಾನದಲ್ಲಿ ಒಬ್ಬ ಜೈನಮುನಿಯು ಇಲ್ಲಿಗೆ ಬಂದಾಗ ಹುಲಿಯು ಆಕಳೊಡನೆ ಆಟವಾಡುವುದನ್ನು ಕಂಡು ಇದೊಂದು ಪುಣ್ಯಸ್ಥಳವೆಂದೇ ತಿಳಿದನು. ಆಗ ಜೈನಮುನಿಯು ಅಲ್ಲಿ ಕರಿಕಲ್ಲಿನಿಂದ ಕೆತ್ತಿಸಿದ ಪಾರ್ಶ್ವನಾಥ ತೀರ್ಥಂಕರರ ಮೂರ್ತಿಯಿಂದ ಈ ದಟ್ಟ ಅಡವಿಯಲ್ಲಿ ಗುರು ಬಸದಿ ಹೆಸರು ಬಂದಿತು. ಇದನ್ನು ಕ್ರಿ.ಶ. ೭೧೪ರಲ್ಲಿ ನಿರ್ಮಿಸಿದರು. ಆದ್ದರಿಂದ ಈ ಬಸದಿಗೆ 'ಗುರುಬಸದಿ' ಎಂದು ಇದಕ್ಕೆ ಪರ್ಯಾಯವಾಗಿ ಸಿದ್ಧಾಂತ ಬಸದಿ, ಹಳೆಯ ಬಸದಿ ಎಂಬ ಹೆಸರುಗಳಿವೆ. ಬಸದಿಗಳಲ್ಲಿ ಅತ್ಯಂತ ದೊಡ್ಡದಾದ ಬಸದಿ "ತ್ರಿಭುವನ ತಿಲಕ ಚೂಡಾಮಣಿ." ಇದು ಸಾವಿರ ಕಂಬಗಳ ಬಸದಿಯೆಂದೇ ಪ್ರಸಿದ್ಧಿಯಾಗಿದೆ. ಇದನ್ನು ಕ್ರಿ.ಶ. ೧೪೨೯-೩೦ರಲ್ಲಿ ಕಟ್ಟಿಸಲಾಯಿತು. ಜೈನಭಕ್ತರು ಆಗಿನ ಮಂಗಳೂರು ರಾಜ್ಯದ ಗವಾರನರ್ ಆಗಿದ್ದ ದೇವಾಚಾರ್ಯ ಒಡೆಯರ್ ಆದೇಶದ ಮೇರೆಗೆ ಸಾವಿರ ಕಂಬದ ಬಸದಿಯನ್ನು ಕಟ್ಟಿದ್ದಾರೆ. ಈ ಬಸದಿಯೊಳಗೆ ಚಂದ್ರನಾಥಸ್ವಾಮಿಯ ಮೂರ್ತಿಯು ೬$^1/_2$ ಅಡಿ ಎತ್ತರವುಳ್ಳದ್ದು. ೫ ಧಾಮಗಳಿಂದ ಕೆತ್ತಲ್ಪಟ್ಟಿದೆ. ಇಲ್ಲಿರುವ ಪ್ರತಿಯೊಂದು ಕಂಬವೂ ಆಕರ್ಷಕವಾಗಿ ವೈವಿಧ್ಯಮಯವಾಗಿದೆ. ಇದರ ಒಳಗಡೆ ಹಲವಾರು ಮಂಟಪಗಳು ಮಹಾದ್ವಾರಗಳು, ಗೋಪುರಗಳು, ಗರ್ಭಗೃಹ ಹೀಗೆ ಮೊದಲಾದ ಕೆತ್ತನೆಗಳು ತುಂಬಾ ಮನೋಹರವಾದ ರೀತಿಯಲ್ಲಿ ಕಂಡುಬರುತ್ತವೆ.

ಮೂಡಬಿದಿರೆಯಲ್ಲಿರುವ ಪ್ರಮುಖ ಬಸದಿಗಳೆಂದರೆ ೧. ಬಡಗ ಬಸದಿ, ೨. ಶೆಟ್ಟರ ಬಸದಿ, ೩. ಹೀರೆ ಬಸದಿ, ೪. ಗುರುಬಸದಿ, ೫. ತ್ರಿಭುವನ ತಿಲಕ ಚೂಡಾಮಣಿ ಬಸದಿ, ೬. ಬೆಟ್ಟರಿಬಸದಿ, ೭. ಕೋಟೆ ಬಸದಿ, ೮. ವಿಕ್ರಮಶೆಟ್ಟಿ ಬಸದಿ, ೯. ಕಲ್ಲುಬಸದಿ, ೧೦. ತಿಪ್ಪದ ಬಸದಿ, ೧೧. ದೇರಮ್ಮಶೆಟ್ಟಿ ಬಸದಿ, ೧೨. ಚೋಳಶೆಟ್ಟಿಬಸದಿ, ೧೩. ಮಾದಿಶೆಟ್ಟಿಬಸದಿ, ೧೪. ಬೈರ್ಕತಿಕಾದಿ ಬಸದಿ, ೧೫. ಬಸದಿ, ೧೬. ಪಡುಬಸದಿ, ೧೭. ಶ್ರೀಮಠದ ಬಸದಿ, ೧೮. ಜೈನಪಾಠಶಾಂತಿಯ ಬಸದಿ ಮುಂತಾದ ಬಸದಿಗಳು ಕಂಡು ಬರುತ್ತವೆ. ಇದೊಂದು ಪವಿತ್ರ ಧಾರ್ಮಿಕ ಕೇಂದ್ರವಾಗಿ ಜೈನರ ವ್ಯಾಪಾರ ಕೇಂದ್ರವೂ ಆಗಿದೆ ಎಂಬುದಕ್ಕೆ ಇಲ್ಲಿರುವಂತಹ ಹಲವಾರು ಬಸದಿಗಳು ಸಾಕ್ಷಿಯಾಗಿವೆ. ಇಂತಹ ಹಲವಾರು ಇತಿಹಾಸ ಪ್ರಸಿದ್ಧ ಸ್ಮಾರಕಗಳು ಮೂಡಬಿದಿರೆಯ ಪ್ರಾಚೀನತೆಯನ್ನು ಮತ್ತು ಜೈನರ ಸಾಂಸ್ಕೃತಿಕ ನಗರಿಯಾಗಿ ಕಂಗೊಳಿಸುತ್ತದೆ.

"ಪೊಡವಿಗಧಿಕ ಮೂಡಬಿದರೆಯ ಪುರದೊಳು ಒಡತಿ ಹಿರಿಯ ಬಸದಿ
ದೃಢದಿಂದ ಸ್ಥಿರವಾಗಿ ಇರುವ ಪದ್ಮಾವತಿ ಬಿಡದೆ ಭಕ್ತರ ಪಾಲಿಸಮ್ಮ"||[೧]

### ೫.೩.೪. ಶ್ರವಣಬೆಳಗೊಳ

ಭಾರತದ ಧಾರ್ಮಿಕ ಚರಿತ್ರೆಯಲ್ಲಿ ಜೈನರ ಧಾರ್ಮಿಕ, ಸಾಂಸ್ಕೃತಿಕ ಚರಿತ್ರೆಯಾಗಿರುವ ಶ್ರವಣಬೆಳಗೊಳ ಜೈನರ ಪ್ರಮುಖ ಧಾರ್ಮಿಕ ಕ್ಷೇತ್ರವಾಗಿದೆ. ಬಹಳ ಪ್ರಾಚೀನತೆಯನ್ನು ಒಳಗೊಂಡ ಈ ಸ್ಥಳ ತನ್ನ ಒಡಲೊಳಗೆ ಸಾವಿರಾರು ವರ್ಷಗಳ ಇತಿಹಾಸವನ್ನು ಗರ್ಭೀಕರಿಸಿಕೊಂಡಿದೆ. ಶ್ರವಣಬೆಳಗೊಳವೆಂದರೆ ಪ್ರತಿಯೊಬ್ಬರಿಗೂ ನೆನಪಾಗುವುದು ಭದ್ರವಾದ ಗೊಮ್ಮಟಮೂರ್ತಿ. ಇಂತಹ ಪವಿತ್ರವಾದ ಸ್ಥಳವನ್ನು ಈ

ಹಿಂದೆ ಹಲವಾರು ಹೆಸರುಗಳಿಂದ ಕರೆಯುತ್ತಿದ್ದರು. ಇದಕ್ಕೆ ಇಲ್ಲಿರುವಂತಹ ಹಲವಾರು ಶಾಸನಗಳು, ಸಾಹಿತ್ಯ ಕೃತಿಗಳೇ ಸಾಕ್ಷಿಯಾಗಿವೆ.

ಶ್ರವಣಬೆಳಗೊಳಕ್ಕೆ ಈ ಹಿಂದೆ ಇದ್ದ ಹೆಸರುಗಳು ಕಟವಪ್ರ, ಕಟಪ್ರ, ಕಟಿಪ್ರ, ಕಟ್ಟಪ್ರ, ಕಳ್ಬಪ್ಪು, ಬೆಳ್ಗೊಳ, ಬೆಳ್ಗೊಳ, ಬೆಳಗೊಳ, ಧವಳ, ರಸತೀರ್ಥ, ಶ್ವೇತಸರೋವರ ಎಂಬುವುಗಳಾಗಿವೆ. ಇಷ್ಟು ಪ್ರಾಚೀನತೆಯನ್ನು ಒಳಗೊಂಡ ಹೆಸರುಗಳು ಮುಂದೆ ರೂಪಾಂತರಗೊಂಡು ಕರೆಯಲ್ಪಟ್ಟಿವೆ. ಕಟವಪ್ರಗಿರಿ, ಕಟ್ಟಪ್ರಗಿರಿ, ಕಳ್ಬಪ್ಪು, ಕಳ್ಬಪ್ಪ ಈ ಹೆಸರುಗಳೇ ತುಂಬ ಪ್ರಾಚೀನತೆಯನ್ನು ಗುರುತಿಸುತ್ತವೆ. ಜೈನ ಹಾಡುಗಳೂ ಸಹ ಬೆಳ್ಗೊಳದ ಹುಟ್ಟನ್ನು ವಿವರಿಸುತ್ತದೆ.

"ಕೊಳದೊಳು ತಾವರೆ ಬಿಳಿಯಿರುತಿರಲು
ಬಿಳಿಕೊಳಯೆನ್ನುವ ಪೆಸರಾಯಿತು
ಇಳೆಯೊಳು ಮುಂದಕೆ ಒಳಕೆಗೆ ಬರುತ
ಬೆಳ್ಗೊಳವೆನ್ನುವ ಊರಾಯಿತು"||

"ಹಿಂದಗೆ ಕೆಲಮುನಿ ವೃಂದವು ನೆಲಸಿದ
ರಂದಿಗೆ ಪೆಸರು ಅದು ಬದಲು
ಮಂದಿಗಳೆಲ್ಲರೂ ಶ್ರವಣಬೆಳ್ಗೊಳ
ವೆಂದು ಪಾಡಿದರು ಆ ಮೊದಲು"||[೨]

ಶ್ರವಣಬೆಳ್ಗೊಳದ ಊರಿನ ಹುಟ್ಟಿನ ಇತಿಹಾಸವನ್ನು ಹಾಡುಗಾರರು ಕಟ್ಟಿಕೊಟ್ಟಿದ್ದಾರೆ. ಸಾಹಿತ್ಯ ಕೃತಿಗಳಲ್ಲಿಯೂ ಸಹ ಶ್ರವಣಬೆಳ್ಗೊಳದ ಹುಟ್ಟಿನ ಇತಿಹಾಸವನ್ನು ಕಾಣಬಹುದು. ಹಾಗೆಯೇ ಕೆಲವು ಸ್ಥಳ ಐತಿಹ್ಯಗಳನ್ನು ಕಾಣಬಹುದು.

ಗೊಮ್ಮಟಮೂರ್ತಿಯ ನಿರ್ಗಮಿಸಿದ ನಂತರ ಚಾವುಂಡರಾಯನು ಅದರ ಮಹಾಮಸ್ತಕಾಭಿಷೇಕಕ್ಕೆ ಭಾರೀ ಏರ್ಪಾಟು ಮಾಡಿದನು. ಆದರೆ ಅವನೆಷ್ಟು ಹಾಲು ಸುರಿದರೂ ಅದು ಸ್ವಾಮಿಯ ತೊಡೆಯಿಂದ ಕೆಳಗಿಳಿಯಲಿಲ್ಲ. ಇದರಿಂದ ಖಿನ್ನನಾದ ಚಾವುಂಡರಾಯನು ಇದಕ್ಕೆ ಕಾರಣವನ್ನು ತಿಳಿಯಲಪೇಕ್ಷಿಸಿ ತನ್ನ ಗುರುವಿನ ಸಲಹೆಯನ್ನು ಕೇಳಿದನು. ಮುದುಕಿಯೊಬ್ಬಳ ಬಿಳಿಯಗುಳ್ಳದ ಕಾಯಿಯಲ್ಲಿ ತಂದಿದ್ದ ಕುಸುವೆ ಹಾಲನ್ನು ಅಭಿಷೇಕಕ್ಕೆ ಬಳಸುವಂತೆ ಸೂಚಿಸಿದರು. ಆಗ ಅರ್ಚಕರು ವಿಗ್ರಹದ ಮೇಲೆ ಆ ಹಾಲನ್ನು ಸುರಿಯಲು ಅದು ಇಡೀ ಮೂರ್ತಿಯನ್ನು ತೋಯಿಸಿ ಹರಿದು ಬೆಟ್ಟವನ್ನೆಲ್ಲಾ ವ್ಯಾಪಿಸಿತು. ಆದ್ದರಿಂದ ಆ ಸ್ಥಳವು ಅತಿಶಯ ಕ್ಷೇತ್ರವಾಯಿತು. ಅಭಿಷೇಕದ ನಂತರ ಚಾವುಂಡರಾಯನು ಬೆಟ್ಟದ ತಪ್ಪಲಲ್ಲಿ ಹಳ್ಳಿಯೊಂದನ್ನು ನೆಲೆಗೊಳಿಸಿ ೯೬೦೦೦ ವರಹಗಳ ರಾಜಾದಾಯ ಬರುವ ೯೮ ಗ್ರಾಮಗಳನ್ನು ದೇವರಿಗೆ ದತ್ತಿಯಾಗಿ ಬಿಟ್ಟನು. ಹೊಸದಾಗಿ ಕಟ್ಟಿಸಿದ ಹಳ್ಳಿಗೆ ಯಾವ ಹೆಸರಿಡಬೇಕೆಂದು ಚಾವುಂಡರಾಯನು ತನ್ನ ಗುರುವಿನಲ್ಲಿ ಸಲಹೆಯನ್ನು ಕೇಳಲು ಮುದುಕಿಯ ಬಿಳಿಯಗುಳ್ಳದ ಹಾಲು ತಂದು ದೇವರನ್ನು ಅಭಿಷೇಕ ಮಾಡಿ ಪ್ರಖ್ಯಾತಳಾದ್ದರಿಂದ ಹಳ್ಳಿಗೆ 'ಬೆಳ್ಗೊಳ' ಎಂದು ಹೆಸರಿಡಬೇಕೆಂದು ಅವರು ಸಲಹೆ ಮಾಡಿದರು.

ಅದೇ ಪ್ರಕಾರ ಚಾವುಂಡರಾಯನು ಬೆಳ್ಗೊಳವೆಂದು ನಾಮಕರಣ ಮಾಡಿದನು. ಒಟ್ಟಿನಲ್ಲಿ ಶ್ರಮಣ ಎಂದರೆ ಜೈನಸನ್ಯಾಸಿ. ಈ ಊರಿನ ಮಧ್ಯೆ ಇದ್ದುದು ಬೆಳಿಕೊಳ. ಈ ಎರಡು ಪದಗಳು ಸೇರಿ ಶ್ರವಣಬೆಳ್ಗೊಳ ಎಂದು ಕರೆದಿರಬಹುದು.

ಕೇವಲ ಇದೊಂದು ಧಾರ್ಮಿಕ ಕ್ಷೇತ್ರವಾಗಿರದೇ ಸಾಂಸ್ಕೃತಿಕ ಕೇಂದ್ರವೂ ಆಗಿವೆ. ಇಲ್ಲಿರುವ ಅನೇಕ ಬಸದಿಗಳು, ಮಂಟಪಗಳು, ದೇವಾಲಯಗಳು, ಮಠಗಳು ಮುಂತಾದವು ಕೇವಲ ಧಾರ್ಮಿಕ ಆಚರಣೆಗೆ ಮೀಸಲಾಗದೆ ಶೈಕ್ಷಣಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಗುರುತಿಸಿಕೊಂಡಂತಹ ಐತಿಹಾಸಿಕ ಪ್ರವಾಸಿ ಕ್ಷೇತ್ರವಾಗಿದೆ. ಈ ಪ್ರದೇಶದಲ್ಲಿ ಎರಡು ಬೆಟ್ಟಗಳು ಪ್ರಮುಖವಾದವು. ವಿಂದ್ಯಾಗಿರಿ, ಚಂದ್ರಗಿರಿ ಇವುಗಳನ್ನು ದೊಡ್ಡಬೆಟ್ಟ ಮತ್ತು ಚಿಕ್ಕ ಬೆಟ್ಟಗಳೆಂದು ಕರೆಯುತ್ತಾರೆ. ಈ ಎರಡು ಬೆಟ್ಟಗಳಲ್ಲಿ ಸುಮಾರು ೩೫ ಬಸದಿಗಳು, ಮಂಟಪಗಳು, ಮೂರ್ತಿಗಳು ಕಂಡುಬರುತ್ತವೆ. ಈ ಒಂದೊಂದು ಬಸದಿಯೂ ತನ್ನದೇ ಆದಂತಹ ಹಿನ್ನೆಲೆ ಹಾಗೂ ಚರಿತ್ರೆಗಳನ್ನೊಳಗೊಂಡಿದೆ. ಅವುಗಳೆಂದರೆ, ೧. ಪಾರ್ಶ್ವನಾಥಸ್ವಾಮಿ ಬಸದಿ, ೨. ಕತ್ತಲೆ ಬಸದಿ, ೩. ಚಂದ್ರಗುಪ್ತ ಬಸದಿ, ೪. ಶಾಂತಿನಾಥಸ್ವಾಮಿ ಬಸದಿ, ೫. ಸುಪಾರ್ಶ್ವನಾಥ ಬಸದಿ, ೬. ಚಂದ್ರಪ್ರಭುಸ್ವಾಮಿ ಬಸದಿ, ೭. ಚಾವುಂಡರಾಯ ಬಸದಿ, ೮. ಶಾಸನ ಬಸದಿ, ೯. ಎರಡು ಕಟ್ಟಿ ಬಸದಿ, ೧೧. ಸವತಿಗಂಧವಾರಣ ಬಸದಿ, ೧೧. ತೇರಿನಬಾಹು ಬಲಿ ಅಥವಾ ಗೊಮ್ಮಟೇಶ್ವರಸ್ವಾಮಿ ಬಸದಿ, ಮುಂತಾದವು. ವಿಂದ್ಯಗಿರಿಯ ಬೆಟ್ಟದಲ್ಲಿ ಕಂಡುಬರುವ ಪ್ರಮುಖ ಬಸದಿಗಳು ೧. ಸಿದ್ಧರ ಬಸದಿ, ಅಖಂಡಬಾಗಿಲು, ೨. ಸಿದ್ಧರಗೂಡು, ೩. ಗ್ಯಾಗ್ರದ ಬ್ರಹ್ಮದೇವರ ಕಂಬ, ೪. ಚೆನ್ನಣ್ಣನ ಬಸದಿ, ೫. ಬಡೆಗಲ್ಲು ಬಸದಿ, ೬. ಚಟ್ಟೇಪ ತೀರ್ಥಂಕರ ಬಸದಿ, ೭. ಬ್ರಹ್ಮದೇವರ ಗುಡಿ, ೮. ಗುಳಕಾಯಿಜ್ಜಿಯ ಮೂರ್ತಿ, ಗೊಮ್ಮಟ ಬ್ರಹ್ಮನಮೂರ್ತಿಗಳು ಕಂಡುಬರುತ್ತವೆ. ಅದೇ ರೀತಿ ಶ್ರವಣಬೆಳಗೊಳದ ಊರಿನಲ್ಲಿರುವ ಬಸದಿಗಳು

| | | |
|---|---|---|
| ಭಂಡಾರಿ ಬಸದಿ | ನಗರ ಜಿನಾಲಯ | ಚೆನಾಣ್ಣನ ಕೊಳ |
| ಅಕ್ಕನ ಬಸದಿ | ಮಂಗಾಯಿ ಬಸದಿ | |
| ಸಿದ್ಧಾಂತ ಬಸದಿ | ಜನ ಮಠ | |
| ದಾನಶಾಂತಿಯ ಬಸದಿ | ಜಕ್ಕಿಕಟ್ಟೆ | |

ಮುಂತಾದವು ಇಷ್ಟೊಂದು ಶ್ರೀಮಂತಿಕೆಯಿಂದ ಕೂಡಿದ ಶ್ರವಣಬೆಳ್ಗೊಳ ಜೈನರ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿರುವುದಕ್ಕೆ ಸಾಕ್ಷಿಯಾಗಿ ನಿಂತಿವೆ.

ಕ್ರಿ.ಪೂ. ೩ನೇ ಶತಮಾನದಿಂದಲೇ ಇದರ ಇತಿಹಾಸವನ್ನು ನಾವು ಎಲ್ಲಾ ಚರಿತ್ರೆಯ ಪುಟಗಳಲ್ಲಿ ನೋಡಬಹುದು. ಚಂದ್ರಗುಪ್ತ ಈ ಸ್ಥಳಕ್ಕೆ ಒಂದು ಸಲ್ಲೇಖನ ವ್ರತವನ್ನು ಕೈಗೊಂಡು ಮರಣವನ್ನು ಹೊಂದಿದನು ಎಂಬ ಉಲ್ಲೇಖ ಹಲವಾರು ಶಾಸನ, ಸಾಹಿತ್ಯ ಕೃತಿಗಳಲ್ಲಿ ನಮಗೆ ಲಬಿಸುತ್ತದೆ. ಈ ಕ್ಷೇತ್ರದ ರಾಜಕೀಯ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಇತಿಹಾಸವನ್ನು ಕನ್ನಡ ಸಾಹಿತ್ಯದ ಉದ್ದಕ್ಕೂ ಪ್ರಸ್ತಾಪಿಸುತ್ತ ಬಂದಿರುವುದನ್ನು ಕಾಣಬಹುದು. ಇಂತಹ ಅದ್ಭುತವಾದ ಸಾಂಸ್ಕೃತಿಕ ಪರಂಪರೆಯನ್ನು

ವಿವರಿಸುವ ಸ್ಥಳ ಮತ್ತೊಂದಿಲ್ಲವೆಂದು ಹೇಳಬಹುದು. ಈ ಸ್ಥಳ ಕುರಿತಂತೆ ಜೈನ ಹಾಡುಗಳಲ್ಲಿ ಉಲ್ಲೇಖಗಳಿರುವುದನ್ನು ಕಾಣಬಹುದು.

### ೫.೩.೫. ವೇಣೂರು

ವೇಣೂರು ಇತಿಹಾಸ ಪ್ರಸಿದ್ಧ ಜೈನಕ್ಷೇತ್ರ. ಇದು ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನಲ್ಲಿದೆ. ಧರ್ಮಸ್ಥಳ ಮತ್ತು ಮೂಡಬಿದಿರೆಯ ಎರಡು ಸ್ಥಳಗಳ ಮಧ್ಯೆ ಬರುವಂತಹ ಕ್ಷೇತ್ರವೇ ವೇಣೂರು. ವೇಣೂರಿಗೆ ಈ ಹಿಂದೆ "ಏನೂರು" ಎಂದು ಕರೆಯುವ ವಾಡಿಕೆಯಿತ್ತು. ಏಳು ಊರುಗಳು ಕರಗಿ "ಏನೂರು" ಆಯಿತು ಎನ್ನುವುದು ಜನಪದರ ಕಲ್ಪನೆಯಾಗಿದೆ. ಈ ಕ್ಷೇತ್ರವನ್ನು ತುಳುನಾಡಿನ ಅರಸ 'ಅಜಿಲ' ಬಹಳ ಪ್ರಮುಖನಾದವನು. ವೇಣೂರು ಇವರ ರಾಜಧಾನಿಯಾಗಿತ್ತು. ಈ ಕಾರಣದಿಂದ ಇದೊಂದು ಬಹುದೊಡ್ಡ ವ್ಯಾಪಾರ ಕೇಂದ್ರವೂ ಆಗಿದ್ದಿತು. ಏಕೆಂದರೆ ಇಲ್ಲಿ ಸೆಟ್ಟಿಕಾರರು, ಯಳಮೆಗಳು, ಈ ಹೆಸರಿನ ವ್ಯಾಪಾರಿ ಸಂಘಗಳು ಅಸ್ತಿತ್ವದಲ್ಲಿದ್ದವು ಎಂಬುದಕ್ಕೆ ಹಲವಾರು ಆಧಾರಗಳಿವೆ. ಈ ಊರಿನಲ್ಲಿ ಪ್ರಮುಖವಾಗಿ ಶ್ರೀಪಾರ್ಶ್ವನಾಥ ಬಸದಿ, ಕಲ್ಲುಬಸದಿ, ಬಿನಾಣಿ ಬಸದಿ, ಅಕ್ಕಂಗಳ ಬಸದಿ ಮತ್ತು ಭದ್ರವಾದ ಬಾಹುಬಲಿಮೂರ್ತಿ ಇರುವುದು ಮತ್ತೊಂದು ವಿಶೇಷ. ಈ ಬಾಹುಬಲಿ ಮೂರ್ತಿಯ ಕೆತ್ತನೆಯ ಹಿಂದೆ ಬಹಳ ದೊಡ್ಡ ಐತಿಹ್ಯವಿದೆ.

"ಕ್ರಿ.ಶ.೧೬೦೪ರಲ್ಲಿ ಸ್ಥಾಪನೆಯಾದ ೩೫ ಅಡಿ ಎತ್ತರದ ಬಾಹುಬಲಿ ಏಕಶಿಲಾ ವಿಗ್ರಹವಿದ್ದು ಬಹಳ ನಯನ ಮನೋಹರವಾಗಿದೆ. ಇದು ಕಾರ್ಕಳದ ಮೂರ್ತಿಯನ್ನು ಹೋಲುತ್ತದೆ. ಇದರ ಅಕ್ಕಪಕ್ಕದಲ್ಲಿ ಎರಡು ಶಿಲಾಶಾಸನಗಳು ಮೂರ್ತಿಯ ಕುರಿತಾದ ವಿವರಗಳನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಈ ಬಾಹುಬಲಿಯ ಮೂರ್ತಿಯನ್ನು ಪುಂಜಳಿಕೆಯ ಅರಸನಾದ ತಿಮ್ಮರಾಜನು ಶಾ.ಶ.೧೫೨೬ನೇ ಶೋಭ ಕೃತು ಸಂ/ದರ ಪಾಲ್ಗುಣ ಶುದ್ದಂ ೧೦ ಪುಷ್ಯ ನಕ್ಷತ್ರದ ಗುರುವಾರ ಅಂದರೆ ಕ್ರಿ.ಶ. ೧೬೦೪ರ ಮಾರ್ಚ್‌ನಲ್ಲಿ ಪ್ರತಿಷ್ಠಾಪಿಸಿದರು ಎಂದು ಈ ಶಾಸನ ತಿಳಿಸುತ್ತದೆ."[೩೩]

ಈ ಬಾಹುಬಲಿಯ ನಿರ್ಮಾಣದ ಬಗ್ಗೆ ಇಲ್ಲಿಯ ಜನರು, ಜನಪದರು ಕಥೆಯನ್ನು ಕಟ್ಟಿ ಹೇಳುತ್ತಾರೆ. ಈ ಗೊಮ್ಮಟವನ್ನು ವೇಣೂರಿನಿಂದ ಸುಮಾರು ೫ ಕಿ.ಮೀ. ದೂರದ ಕಲ್ಲಣಿ ಎಂಬಲ್ಲಿ ಬೃಹತ್ತಾದ ಶಿಲೆಯೊಂದರಿಂದ ಕೆತ್ತಲಾಗಿದೆ. ಈಗಲೂ ಅಲ್ಲಿ ಈ ಮೂರ್ತಿಯನ್ನು ಕಟೆದು ತೆಗೆದ ಕುರುಹುಗಳಿವೆ. ಶಿಲ್ಪಗಳು, ಊಟ-ತಿಂಡಿಗಳ, ಒಲೆಯ ಕುರುಹುಗಳಿವೆ. ಈ ಮೂರ್ತಿಯನ್ನು ದಟ್ಟವಾದ ಕಾಡಿನ ಮಧ್ಯೆ ಕಲ್ಲಣಿಯಿಂದ ವೇಣೂರಿಗೆ ಸಾಗಿಸಿದ್ದು ಒಂದು ತಂತ್ರಗಾರಿಕೆಯೇ ಆಗಿದೆ. ಬಾಹುಬಲಿಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಹಲವಾರು ದಂತಕಥೆಗಳಿವೆ. ಶ್ರವಣಬೆಳ್ಗೊಳದ ಬಾಹುಬಲಿ, ಕಾರ್ಕಳದ ಬಾಹುಬಲಿ, ವೇಣೂರಿನ ಬಾಹುಬಲಿಯ, ಶಂಭು ಕಲ್ಕುಡ ವಿಗ್ರಹಗಳನ್ನು ಈ ವಂಶಜರು ಕೆತ್ತಿದ್ದಾರೆ ಎನ್ನುವುದು ಕಂಡುಬರುತ್ತದೆ.

ಒಟ್ಟಿನಲ್ಲಿ ವೇಣೂರು ಒಂದು ಪ್ರಾಚೀನ ಜೈನರ ಧಾರ್ಮಿಕ ಕೇಂದ್ರವಾಗಿದೆ ಎಂಬುದಕ್ಕೆ ಇಲ್ಲಿರುವ ಹಲವಾರು ಸ್ಮಾರಕಗಳು, ಬಸದಿಗಳು, ಮೂರ್ತಿಗಳೇ ಸಾಕ್ಷಿಯಾಗಿವೆ. ಇಲ್ಲಿ ಜೈನಮತ ಇರುವುದರಿಂದ ಇದೊಂದು ಜೈನರ ಧಾರ್ಮಿಕ ಕ್ಷೇತ್ರವಾಗಿದೆ ಎಂಬುದನ್ನು ಗಮನಿಸಬಹುದು.

ಶ್ರವಣಬೆಳಗೊಳ ಮತ್ತು ಕಾರ್ಕಳಗಳಲ್ಲಿ ಗೊಮ್ಮಟ ಮೂರ್ತಿಗಳನ್ನು ಕಡೆದ ಕಲ್ಕುಡ ಮಹಾಪರಾಕ್ರಮ ಕಾರ್ಕಳದ ಅರಸ ತನ್ನ ಕೈಕಾಲನ್ನು ಕತ್ತರಿಸಿದ ಪ್ರತೀಕಾರವನ್ನು ತೀರಿಸಿಕೊಳ್ಳಲು ವೇಣೂರಿನಲ್ಲಿ ಅಜಿಲ ಅರಸನ ವಿನಂತಿಯಂತೆ ಮೂರ್ತಿ ಕೆತ್ತನೆಯಲ್ಲಿ ನಿರತನಾಗಿರುತ್ತಾನೆ. ಕಲ್ಕುಡನ ಉಳಿಯ ಶಬ್ದ ಕಾರ್ಕಳಕ್ಕೆ ಕೇಳುತ್ತದೆ. ಸದ್ದಿನ ಕಾರಣವನ್ನು ತಿಳಿದ ಅರಸ ದಂಡೆತ್ತಿ ಅಜಿಲರ ಗಡಿಯೊಳಗೆ ಬಂದು ದೇವಸ್ಥಾನ, ಬಸದಿ ಮೊದಲಾದವುಗಳನ್ನು ಸುಟ್ಟು ಊರನ್ನು ಸುಲಿಗೆ ಮಾಡಲಾರಂಭಿಸುತ್ತಾನೆ. ಆಗ ಕಲ್ಕುಡ ಗೊಮ್ಮಟ ಮೂರ್ತಿಯನ್ನು ತನ್ನ ಕಂಕುಳಲ್ಲಿರಿಸಿಕೊಂಡು ಬಂದು ನದಿಯ ದಡದ ಹೊಯಿಗೆಯಲ್ಲಿ ಅಡಗಿಸಿಟ್ಟು, ತಿಮ್ಮನಾಜಿಲನ ಸೇನಾಧಿಪತಿಯಾಗಿದ್ದ ಕಾಂತು ಸಾರ್ವಂಣಿ ಯುದ್ಧದಲ್ಲಿ ಭೈರವ ಅರಸನನ್ನು ಸೋಲಿಸಿ ಓಡಿಸಿದ ನಂತರ ಕಲ್ಕುಡ ಮತ್ತೆ ಮೂರ್ತಿಯನ್ನು ಹೋಯಿಗೆ ರಾಶಿಯಿಂದ ಹೊರತೆಗೆದು ಬೆಟ್ಟದ ಮೇಲೆ ರಾತ್ರಿ ಬೆಳಗಾಗುವುದರೊಳಗೆ ನಿಲ್ಲಿಸಿದರಂತೆ ಎಂಬ ಐತಿಹಾಸಿಕ ದಂತಕಥೆ ಇದೆ.

**೫.೩.೬. ಭಂಗವಾಡಿ**

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನಲ್ಲಿರುವ ಒಂದು ಚಿಕ್ಕ ಊರು. ಬೆಳ್ತಂಗಡಿಯಿಂದ ಸುಮಾರು ೧೨ ಕಿ.ಮೀ. ದೂರವಿರುವ ಈ ಸ್ಥಳ ನಿಸರ್ಗದ ಮಡಿಲಲ್ಲಿ ಕಂಗೊಳಿಸುವ ಜೈನರ ಪವಿತ್ರ ಕ್ಷೇತ್ರವಾಗಿದೆ. ಈ ಹಿಂದೆ 'ಭಂಗವಾಡಿ'ಯನ್ನು ಬಂಗ ಮನೆತನದ ಅರಸರು ಆಳುತ್ತಿದ್ದರು, ಆ ಕಾರಣದಿಂದ ಇದನ್ನು ಬಂಗ ಅರಸರ ಸೀಮೆ ಎಂತಲೂ ಕರೆಯುತ್ತಾರೆ. ಕಾಲಾನಂತರದಿಂದ 'ಭಂಗವಾಡಿ' 'ಬಂಗಾಡಿ' ಎಂದು ಕರೆಯುತ್ತಿದ್ದಾರೆ. ಭಂಗವಾಡಿ ಪ್ರಧಾನವಾದ ಜೈನಕೇಂದ್ರವಾಗಿತ್ತು ಹಾಗೂ ಜೈನರ ಮುಖ್ಯ ಆರಾಧನಾ ಕೇಂದ್ರವಾಗಿದೆ. ಇಲ್ಲಿ ಶ್ರೀಶಾಂತಿನಾಥ ಬಸದಿಯಿದ್ದು, ಇದರ ಅಕ್ಕ ಪಕ್ಕದಲ್ಲಿ ಚೌವೀಸ್ ತೀರ್ಥಂಕರರ ಬಸದಿ, ಮತ್ತೊಂದು ಕಡೆ ಶ್ರೀಪದ್ಮಪ್ರಭ ತೀರ್ಥಂಕರ ಬಸದಿ ಇದೆ. ಶ್ರೀಶಾಂತಿನಾಥ ಬಸದಿ ಹಿಂದೆ ಶ್ರವಣಗುಂಡದ ಬ್ರಹ್ಮದೇವರ ಮೂರ್ತಿಯೂ ಕಂಡುಬರುತ್ತದೆ. ಇಂತಹ ಪ್ರಾಚೀನವಾದ ಜೈನರ ಧಾರ್ಮಿಕ ಕೇಂದ್ರವನ್ನು ಕನ್ನಡ ಜೈನಹಾಡುಗಳಲ್ಲಿ ಈ ರೀತಿಯಲ್ಲಿ ಉಲ್ಲೇಖಿಸಲಾಗಿದೆ.

"ಭಂಗವಾಡಿಯ ಭವ್ಯ ಜನರ ರಕ್ಷಿಪನ
ತುರಗವನೇರಿ ವೈಯಾಳಿ ಬಿಡುವನ
ಮಂಗಲಮೂರ್ತಿ ಮನ್ಮಥಗೆಲಿದನ
ಶೃಂಗಾರವಡದಿರ್ದ್ದ ಬ್ರಹ್ಮರಾಯನ
ಕರತಾರೆ ಹಸೆಯ ಜಗುಲಿಗೆ"||[೭೪]

ಈ ಜೈನಹಾಡು ಭಂಗವಾಡಿಯು ಜೈನರ ಪ್ರಮುಖ ಧಾರ್ಮಿಕ ಕೇಂದ್ರವಾಗಿತ್ತು ಎಂಬುದನ್ನು ಸೂಚಿಸುವುದರ ಜೊತೆಗೆ ಅಲ್ಲಿಯ ಜನತೆಯು ಹೆಚ್ಚಾಗಿ ಪೂಜಿಸುವ ಶ್ರೀಬ್ರಹ್ಮರಾಯನನ್ನು ಕೊಂಡಾಡುವ ಹಾಡಾಗಿದೆ.

ಜೈನರಲ್ಲಿ ಬ್ರಹ್ಮದೇವರು ಎಂಬುವವನು ಯಕ್ಷನಾಗಿದ್ದು ಇವನನ್ನು ಆರಾಧಿಸುವ ಪದ್ಧತಿ ಎಲ್ಲ ಜೈನ ಧಾರ್ಮಿಕ ಕೇಂದ್ರಗಳಲ್ಲಿ ನೋಡಬಹುದು. ಅದರಲ್ಲೂ ಭಂಗವಾಡಿಯ ಹತ್ತಿರ ಇರುವ 'ಶ್ರವಣಗುಂಡ'

‘ಬ್ರಹ್ಮರಾಯನ’ ಅತಿಶಯಕ್ಷೇತ್ರವಾಗಿದೆ. ಇಂತಹ ಅತಿಶಯ ಕ್ಷೇತ್ರವನ್ನು ಕುರಿತು ಜೈನ ಹಾಡುಗಾರ ಈ ಕೆಳಗಿನಂತೆ ಉಲ್ಲೇಖಿಸಿರುವುದನ್ನು ನೋಡಬಹುದು.

“ಸ್ಥಿರವಾಗಿ ಶ್ರವಣಗುಂಡದಿ ನೆಲಸಿದವನ
ತುರಗವನೇರಿ ವೈಯಾಳಿಯ ಬಿಡುವವನ
ವರವಿತ್ತು ಅಪ್ಪಾಜಿಯ ಸಲುಹುವವನ
ಧರೆಯೊಳು ಭಂಗವಾಡಿ ಬ್ರಹ್ಮರಾಯನ
ಕರತಾರೆ ಹಸೆಯ ಜಗುಲಿಗೆ”||[೩೫]

ಶ್ರವಣಗುಂಡದಲ್ಲಿ ನೆಲೆಸಿರುವ ಶ್ರೀ ಬ್ರಹ್ಮರಾಯನನ್ನು ಈ ಪ್ರದೇಶದ ಜನ ಭಕ್ತಿಶ್ರದ್ಧೆಗಳಿಂದ ಪೂಜಿಸಿ ಆರಾಧಿಸುತ್ತಾರೆ. ಜೊತೆಗೆ ತಮ್ಮ ಇಷ್ಟಾರ್ಥಗಳನ್ನು ಈಡೇರಿಸುತ್ತಾನೆ ಎಂಬ ಅಚಲವಾದ ನಂಬಿಕೆ ಇಲ್ಲಿಯ ಜನರಿಗೆ ಇದೆ. ಆ ಕಾರಣದಿಂದ ಇಲ್ಲಿಗೆ ಬರುವ ಭಕ್ತಾದಿಗಳ ಸಂಖ್ಯೆ ಅಪಾರವಾಗಿದೆ. ಹಲವಾರು ಹರಕೆ ಪೂಜೆ ಪುನಸ್ಕಾರಗಳನ್ನು ಮಾಡಿಕೊಂಡು ಶ್ರೀಬ್ರಹ್ಮದೇವನ ದರ್ಶನ ಪಡೆಯುವ ಈ ಪದ್ಧತಿ ಇಂದಿಗೂ ನಡೆದುಕೊಂಡು ಬರುತ್ತಿರುವುದನ್ನು ಈ ಜೈನಹಾಡಿನಲ್ಲಿ ಉಲ್ಲೇಖಿಸಲಾಗಿದೆ.

“ಮಾನಿನಿಯರಿಗೆ ಮಕ್ಕಳ ಕೊಡುವವನ
ನಾನಾದೇಶಕ್ಕೆ ಕೀರ್ತಿಪಡೆದವನ
ಭಾನುಬಿಂಬದ ಪ್ರಕಾಶವುಳ್ಳವನ
ಆನಂದದಿಂದ ಬರುವ ಬ್ರಹ್ಮರಾಯನ
ಕರತಾರೆ ಹಸೆಯ ಜಗುಲಿಗೆ”||[೩೬]

ಎನ್ನುವ ಮೂಲಕ ಶ್ರೀಬ್ರಹ್ಮರಾಯನು ಈ ಭಾಗದ ಜನರ ಇಷ್ಟಾರ್ಥಗಳನ್ನು ಈಡೇರಿಸಿ ವರವನ್ನು ನೀಡುವ ದೈವವಾಗಿದ್ದಾನೆ. ಶ್ರವಣಗುಂಡದಲ್ಲಿ ಶೈವ-ಜೈನ ಧಾರ್ಮಿಕ ಆಚರಣೆಗಳು ಸಮ್ಮಿಳಿತಗೊಂಡು ಜೈನೇತರರೂ ಸಹ ಹೆಚ್ಚಾಗಿ ಈ ಕ್ಷೇತ್ರಕ್ಕೆ ಬರುವುದನ್ನು ಕಾಣಬಹುದು. ಇಲ್ಲಿಯ ಜನರು ಶ್ರವಣಗುಂಡದ ಮಹಾತ್ಮೆಯನ್ನು ಅತಿಶಯವಾಗಿ ಹೇಳುವುದನ್ನು ಕಾಣಬಹುದು.

ಪ್ರಾಚೀನ ಕಾಲದಲ್ಲಿ ಶ್ರವಣಗುಂಡ ನಿರ್ಜನ ಪ್ರದೇಶವಾಗಿತ್ತು. ಇಲ್ಲಿಗೆ ಜೈನ ಮುನಿಗಳಾದ ಶ್ರೀ ಚಾರಣಮುನಿಶ್ರೀಗಳು ತಪಸ್ಸಿಗೆ ಬಂದಾಗ ಇಲ್ಲಿ ಅತಿಶಯವಾದ ದಿವ್ಯವಾಣಿ ಕೇಳಿಬಂದಿತು. ಅಂದಿನಿಂದಲೇ ಅವರು ಈ ಪ್ರದೇಶದಲ್ಲಿಯೇ ನೆಲೆಸಿದ್ದರು. ಆದ್ದರಿಂದ ಅಲ್ಲಿಯೇ ಬ್ರಹ್ಮದೇವರನ್ನು ಪ್ರತಿಷ್ಠಾಪನೆ ಮಾಡಿದರು. ಹೀಗಾಗಿ ಬ್ರಹ್ಮದೇವರ ದೇವಸ್ಥಾನವಿದ್ದು, ಅದರ ವರಾಂಡದಲ್ಲಿ ಒಂದು ಬಾವಿ ಇದೆ. ಅದಕ್ಕೆ ಭಕ್ತಾದಿಗಳು ಕೆರೆಯಿಂದ ನೀರನ್ನು ತುಂಬಿಸಿ ಶಿಲೆಯ ಗುಂಡನ್ನು ದೇವರ ಮುಂದೆ ಇಟ್ಟು ಪೂಜಿಸಿ ಅದಕ್ಕೆ ಪ್ರಾಣ ಪ್ರತಿಷ್ಠಾಪನೆ ಮಾಡಿ, ಆ ಗುಂಡನ್ನು ಬೆಳ್ಳಿಯ ತಟ್ಟೆಯಲ್ಲಿಟ್ಟು ಶ್ರೀಚಾರಣಮುನಿಶ್ರೀಗಳು ತಪಸ್ಸಿಗೆ ನಿಂತ ಪೀಠದಲ್ಲಿ ತಂದು ಶ್ರೀಚಾರಣಮುನಿಶ್ರೀಗಳ ವಾಕ್ಯದಂತೆ ದರ್ಶನಪಾತ್ರೆಯವರು ಆ ಶಿಲೆಯ

ಗುಂಡನ್ನು ಆ ಬಾವಿಯಲ್ಲಿ 'ಮುಕ್ಕಾಲು ಮೂರು ಗಳಿಗೆ' ದರ್ಶನಕ್ಕಾಗಿ ತೇಲಿಸಿ ಬಿಡುತ್ತಿದ್ದರು. ಆ ಗುಂಡು ನೀರಿನಲ್ಲಿ ತೇಲುತ್ತಿದ್ದ ಕಾರಣ, ಅಲ್ಲಿಗೆ ಭಕ್ತಾದಿಗಳು ಸಾವಿರಾರು ಜನ ಆಗಮಿಸುತ್ತಿದ್ದರು. ಆ ಕಾರಣದಿಂದ ಇದೊಂದು ಅತಿಶಯ ಕ್ಷೇತ್ರವಾಗಿದೆ.

### ೫.೩.೭. ನಿಡುಗಲ್ಲು

ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕು ಕೇಂದ್ರದಿಂದ ಸುಮಾರು ೩೫ ಕಿ.ಮೀ. ದೂರದಲ್ಲಿ ರುದ್ರರಮಣೀಯ ಬೆಟ್ಟಗಳ ನಡುವೆ ಇರುವುದೇ ಈ ನಿಡುಗಲ್ಲು ಪ್ರದೇಶ. ಐತಿಹಾಸಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿ ಪ್ರಸಿದ್ಧಿ ಹೊಂದಿದ್ದು ತುಮಕೂರಿನ ಹಂಪಿ ಎಂದೇ ಕರೆಯಲ್ಪಡುತ್ತದೆ. ಈ ಹಿಂದೆ ನಿಡುಗಲ್ಲು ಪ್ರದೇಶವನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತಿತ್ತು. ಚೋರ ಕಥೆಯಲ್ಲಿ ಬರುವ 'ನೀಲಾವತಿ ಪಟ್ಟಣ' ಇದೇ ಎಂಬುದಕ್ಕೆ ಅನೇಕ ಉದಾಹರಣೆಗಳಿವೆ. ಹರಿವಂಶದ ಶ್ರಾದ್ಧಫಲವನ್ನು ಹೇಳುವ ಶ್ಲೋಕದಲ್ಲಿ 'ಕಾಲಾಂಜನಗಿರಿ' ಎನ್ನುವ ಉಲ್ಲೇಖವಿದೆ. ಅಲ್ಲದೆ ಶ್ರೀರಾಮಚಂದ್ರನು ಸೀತಾನ್ವೇಷಣೆಗಾಗಿ ಈ ಬೆಟ್ಟಕ್ಕೆ ಬಂದುದಾಗಿ ಹೇಳುವ ಇನ್ನೊಂದು ಕಥೆಯಿದೆ. ಮುಂದೆ ಅನೇಕ ಶಾಸನಗಳಲ್ಲಿ ಕಾಳಾಂಜನಗಿರಿ, ಕಾಳಾಂಜನಬೆಟ್ಟ, ಕಾಳಾಂಜನದುರ್ಗ, ಕಾಳಾಂಜನಾದ್ರಿ ಎನ್ನುವ ಪದದ ಉಲ್ಲೇಖವಿದೆ. ಪುರಾಣ ಮತ್ತು ಮಹಾಕಾವ್ಯಗಳ ಕಾಲದಿಂದಲೂ ಈ ಬೆಟ್ಟ ಮತ್ತು ಪಟ್ಟಣ ಹಂತ-ಹಂತವಾಗಿ ಕಾಲಕ್ರಮೇಣ ತನ್ನ ಹೆಸರನ್ನು ಬದಲಾಯಿಸುತ್ತಾ ತನ್ನದೇ ಆದ ಔಚಿತ್ಯವನ್ನು ಉಳಿಸಿಕೊಂಡು ಇಂದಿಗೂ ತನ್ನ ಮಹತ್ವ ಸಾರುತ್ತಿರುವುದು ಗಮನಾರ್ಹ.

ಈ ಪ್ರದೇಶವು ಗಂಗ, ನೊಳಂಬ, ನಿಡಗಲ್ಲು ಚೋಳ, ರಾಷ್ಟ್ರಕೂಟ, ಚೋಳ, ಹೊಯ್ಸಳ, ವಿಜಯನಗರ, ನಿಡುಗಲ್ಲು ನಾಯಕರು, ಹೈದರ್, ಟಿಪ್ಪು, ಮೈಸೂರು ಒಡೆಯರು ಮೊದಲಾದ ಅರಸು ಮನೆತನಗಳ ಅವಧಿಯ ಆಳ್ವಿಕೆಯ ಕುರುಹಾಗಿ, ಕೋಟೆ ಕೊತ್ತಲು, ಅರಮನೆ, ಮಂಟಪ, ಮಠ, ಕೋನೇರಿ, ಬಾವಿ, ಕೆರೆ, ಕಾಲುವೆ, ದೇವಾಲಯ ಮೊದಲಾದ ಸ್ಮಾರಕಗಳು ನಿರ್ಮಿತವಾಗಿವೆ. ಹೀಗೆ ಒಂದು ಉತ್ತಮ ಪಾಳೆಯಪಟ್ಟಾಗಿ ಬಹುಕಾಲದವರೆಗೆ ಮೆರೆದ ನಿಡುಗಲ್ಲು ದುರ್ಗವು, ಇಂದು ಹಾಳು ಹಂಪೆಯನ್ನು ನೆನೆಪಿಸುವಂತ್ತಿದೆ. ನಿಡುಗಲ್ಲು ಧಾರ್ಮಿಕವಾಗಿ ಒಂದು ಮಹತ್ವದ ಕ್ಷೇತ್ರವಾಗಿತ್ತು ಎಂಬುದಕ್ಕೆ ಇಲ್ಲಿನ ಜೈನ, ವೈಷ್ಣವ, ಶೈವ ಧರ್ಮದ ದೇವಾಲಯಗಳು ಹಾಗೂ ಮುಸ್ಲಿಂ ಸಂತರ ಸಮಾಧಿಗಳೇ ಸಾಕ್ಷಿ. ಹಾಗೆಯೇ ಇದೊಂದು ಪವಿತ್ರ ಜೈನ ಕ್ಷೇತ್ರವಾಗಿತ್ತು. ಈ ಹಿಂದೆ ಇಲ್ಲಿ ಹಲವು ಜೈನ ಕುಟುಂಬಗಳು ವಾಸಿಸುತ್ತಿದ್ದವು. ಇವು ಇಂದು ತಮ್ಮ ಜೀವನೋಪಾಯವನ್ನು ಅರಸುತ್ತಾ ಪಟ್ಟಣ ಪ್ರದೇಶಗಳಿಗೆ ವಲಸೆ ಹೋಗಿವೆ(ಪಿನಾಕಿನಿ ಸ್ಮರಣ ಸಂಚಿಕೆ ೧೦-೧೨).

ನಿಡುಗಲ್ಲು ಚೋಳರ ಇಮ್ಮಡಿ ಇರುಂಗೋಳನ ಕಾಲದಲ್ಲಿ ನಿಡುಗಲ್ಲು ಸೀಮೆಯಲ್ಲಿ ಜಿನ ನಿರ್ಗ್ರಂಥ ಮಠವು ಉನ್ನತ ಸ್ಥಿತಿಯಲ್ಲಿದ್ದಾಗ, ಗಂಗಯ್ಯ ಮಾರಯ್ಯ ಮತ್ತು ಬಚ್ಚಲದೇವಿಯವರು ತಮ್ಮ ಗುರುಗಳಾದ ನೇಮಿಪಂಡಿತರಿಂದ ಆಣತಿ ಪಡೆದು ಶ್ರೀಕಷ್ಟಹರಣ ಪಾರ್ಶ್ವನಾಥ ಬಸದಿಯನ್ನು ಕ್ರಿ.ಶ.೧೨೩೨ರಲ್ಲಿ ಕಟ್ಟಿಸಿದರು. ಜೊತೆಗೆ ಈ ದೇವಾಲಯದ ನಿರ್ವಹಣೆಗೆ ಬೆಳ್ಳಿಬಟ್ಟು, ಅಮರಾಪುರ ಗ್ರಾಮಗಳನ್ನು ದತ್ತಿಯಾಗಿ ನೀಡಿದರು.

ಈ ಪುರಾತನ ಬಸದಿಯು ರಾಜಾಶ್ರಯವಿದ್ದ ಕಾಲದಲ್ಲಿ ಬಹಳ ಪ್ರಖ್ಯಾತಿ ಹೊಂದಿದ್ದು, ರಾಜಾಶ್ರಯ ತಪ್ಪಿದ ಮೇಲೆ ಅವಸಾನದತ್ತ ಸಾಗಿತು. ಬಹಳ ಕಾಲ ಧರ್ಮವಿಸ್ತರಣಾ ಕೇಂದ್ರವಾಗಿದ್ದ ಬಸದಿ ನಾಲ್ಕನೇ ಮೈಸೂರು ಯುದ್ಧದ ನಂತರ ಜೈನಶ್ರಾವಕರು ಈ ಸ್ಥಳವನ್ನು ತ್ಯಜಿಸಿದ್ದು, ಈ ಬಸದಿಯ ಅವನತಿಗೆ ಕಾರಣವಾಯಿತು.

ಈ ಪಾರ್ಶ್ವನಾಥ ಬಸದಿಯ ವಿನ್ಯಾಸವು ೧೦ ಅಡಿ ಎತ್ತರದ ಪೀಠವನ್ನೊಂದಿದ್ದು ಬೆಟ್ಟದಿಂದ ಹೊರಬಂದಿರುವ ಹೆಬ್ಬಂಡೆಯ ಮೇಲೆ ನಿರ್ಮಾಣವಾಗಿದೆ. ಬಸದಿಯ ಸುತ್ತಲೂ ಪ್ರಾಕಾರಗೋಡೆಯಿದ್ದು ಬಸದಿ ೨ ಅಡಿ ಎತ್ತರದ ಪೀಠವನ್ನೊಂದಿದೆ. ಈ ಬಸದಿಯು ಮುಖಮಂಟಪ, ಮಹಾಮಂಟಪ, ಗರ್ಭಗುಡಿಯನ್ನು ಹೊಂದಿದ್ದು, ಮೂಲವಿಗ್ರಹವು ಕಪ್ಪು ಕಲ್ಲಿನಿಂದ ನಿರ್ಮಿಸಲ್ಪಟ್ಟಿದೆ. ಮುಖಮಂಟಪದ ಎರಡೂ ಕಡೆ ಹಜಾರವಿದ್ದು, ಇದರ ಎರಡೂ ಬದಿಯಲ್ಲಿ ಆನೆಗಳನ್ನು ಕೆತ್ತಲಾಗಿದೆ. ಬಸದಿಯ ಮುಂದೆ ಮಾನಸ್ತಂಭ, ಬಲಿಪೀಠವಿದೆ. ಇತ್ತೀಚೆಗೆ ಶ್ರೀಶ್ರೀ ೧೦೮ ಧರ್ಮಭೂಷಣ ಮುನಿರಾಜರು, ಪಾವಗಡ, ಅಮರಾಪುರ, ರಂಗಸಮುದ್ರ, ನ್ಯಾಯದಗುಂಟೆ ಶಯನೇವಾಡಿ ಗ್ರಾಮದ ಜೈನ ಸಮಾಜದವರು ಚೈತನ್ಯ ಮೂಡಿಸಿ, ಈ ಬಸದಿಯ ಜೀರ್ಣೋದ್ಧಾರ ಮಾಡಿಸಿ ನಿತ್ಯ ಪೂಜೆ, ಅಭಿಷೇಕ, ನೋಂಪಿ ಹೋಮಗಳನ್ನು ನಡೆಯುವಂತೆ ಮಾಡಿದ್ದಾರೆ.

**೫.೩.೮. ಮಧುಗಿರಿ**

ತುಮಕೂರು ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರಗಳಲ್ಲೊಂದಾದ ಮಧುಗಿರಿಯು ಏಷ್ಯಾದಲ್ಲಿಯೇ ಅತಿದೊಡ್ಡ ಏಕಶಿಲಾ ಬೆಟ್ಟವನ್ನು ಹೊಂದಿದ್ದು, ಆ ಮೂಲಕ ಪ್ರಖ್ಯಾತಿಯನ್ನು ಪಡೆದಿದೆ. ಮಧುಗಿರಿಯನ್ನು ಈ ಹಿಂದೆ ಮದ್ದಗಿರಿ, ಕೃಷ್ಣಗಿರಿ, ಮಾಧವಗಿರಿ, ಫತೇಹಬಾದ್ ಎಂದೆಲ್ಲಾ ಕರೆಯುತ್ತಿದ್ದರು. ಹಾಗೆಯೇ ಮಧುಗಿರಿಯನ್ನು ಮತ್ತೊಂದು ಅರ್ಥದಲ್ಲಿ ಮಧು ಅಂದರೆ 'ಜೇನು' ಎಂದು, 'ಗಿರಿ' ಎಂದರೆ ಬೆಟ್ಟ ಎಂದು ಅರ್ಥೈಸಲಾಗಿದ್ದು ಬೆಟ್ಟದ ಬುಡದಲ್ಲಿ ಬಂಡೆಗಲ್ಲುಗಳಿಗೆ, ಕೋಡುಗಲ್ಲುಗಳ ಅಡಿಯಲ್ಲಿ ಬೃಹತ್ ಹೆಜ್ಜೇನಿನ ಗೂಡುಗಳಿದ್ದರಿಂದ ಮಧುಗಿರಿ ಜೇನಿನ ಬೆಟ್ಟವೆಂಬ ಅನ್ವರ್ಥವನ್ನು ಪಡೆಯಿತು. ಹೀಗೆ ವಿವಿಧ ಕಾಲಘಟ್ಟಗಳಲ್ಲಿ ತನ್ನ ಹೆಸರನ್ನು ಬದಲಿಸುತ್ತಾ ಬೆಳೆದು ಬಂದಿದೆ. ಹಾಗೆಯೇ ಮಧುಗಿರಿ ಪಟ್ಟಣವನ್ನು ವಿವಿಧ ರಾಜಮನೆತನಗಳು ಮತ್ತು ಪಾಳೇಗಾರರು ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಶಾತವಾಹನರು, ಪಲ್ಲವರು, ಗಂಗರು, ರಾಷ್ಟ್ರಕೂಟರು, ನೊಳಂಬರು, ನಿಡುಗಲ್ಲು ಚೋಳರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರ, ಮಹಾನಾಡ ಪ್ರಭುಗಳು, ಹೈದರ್, ಟಿಪ್ಪು, ಮರಾಠರು, ಮೈಸೂರು ಒಡೆಯರ ಮತ್ತು ಪಾಳೆಯಗಾರರ ಆಡಳಿತಕ್ಕೆ ಒಳಪಟ್ಟಿತು. ಇದಕ್ಕೆ ಸಾಕ್ಷಿ ಪುರಾವೆಗಳಂತೆ ಅವರು ನಿರ್ಮಿಸಿದಂತಹ ಕೋಟೆ-ಕೊತ್ತಲು, ಕೆರೆ-ಕಾಲುವೆ, ದೇವಾಲಯ, ಮೊದಲಾದ ಸ್ಮಾರಕಗಳು ಚರಿತ್ರೆಯನ್ನು ನೆನಪಿಸುತ್ತವೆ.

ಹಾಗೆಯೇ ಪ್ರಮುಖವಾಗಿ ಮಧುಗಿರಿಯು ಪ್ರಮುಖ ಜೈನಕ್ಷೇತ್ರವಾಗಿದ್ದಿತು ಎಂಬುದಕ್ಕೆ ಅಲ್ಲಿರುವ ಮಲ್ಲಿನಾಥ ಸ್ವಾಮಿಯ ಬಸದಿಯಿದ್ದು ಬಸದಿಯ ಅಕ್ಕಪಕ್ಕದಲ್ಲಿ ಯಕ್ಷಿಯರಾದ ಜ್ವಾಲಾ-ಮಾಲಿನಿ-ಪದ್ಮಾವತಿ ಮತ್ತು ಶಾರದದೇವಿ ಮೂರ್ತಿಗಳು ಇವೆ ಹಾಗೂ ಜೈನರ ಪ್ರಮುಖವಾಗಿ ಆರಾಧಿಸುವ ಬ್ರಹ್ಮದೇವರ

ಮೂರ್ತಿ ಇದೆ. ಜೊತೆಗೆ ಅಲ್ಲಿಯ ಸ್ಥಳೀಯ ಜನರು ಹೇಳಿಕೆಯ ಪ್ರಕಾರ ಮಧುಗಿರಿಯಲ್ಲಿ ಸಿಂಹನಗದ್ದೆಯ ಲಕ್ಷ್ಮೀಸೇನಾ ಭಟ್ಟಾರಕರ ಮಠದ ಶಾಖೆಯಿತ್ತೆಂದು ಹೇಳಲಾಗುತ್ತದೆ. ಆದರೆ ಇಲ್ಲಿ 'ಮಠ' ಇತ್ತೆಂದು ಹೇಳುವುದಕ್ಕೆ ಯಾವುದೇ ಸಾಕ್ಷಿ ಪುರಾವೆಗಳು ಇಲ್ಲ. ಪ್ರಾಚೀನ ಇತಿಹಾಸವನ್ನು ಒಳಗೊಂಡ 'ಮಧುಗಿರಿ' ಪಟ್ಟಣವನ್ನು ಕನ್ನಡ ಜೈನ ಹಾಡುಗಳಲ್ಲಿ ಉಲ್ಲೇಖವಾಗಿರುವುದನ್ನು ನೋಡಬಹುದು.

"ಮುಕ್ತಿಗೊಡೆಯನ ಶಕ್ತಿಪ್ರಭಾವನ
ಭಕ್ತಿಯಿಂದಲಿ ನೀ ನೆನೆ ಮನವೇ
ಯುಕ್ತಿಯ ಬೋಧಿಪ ಮಧುಗಿರಿವಾಸನ
ಮಲ್ಲಿಜಿನೇಶನ ನೆನೆ ಮನವೇ"||[೨೭]

ಎಂದು ಮಧುಗಿರಿಯಲ್ಲಿರುವ ಮಲ್ಲಿನಾಥನನ್ನು ಸ್ಮರಿಸುವ ಹಾಡು ಇದಾಗಿದೆ.

### ೫.೩.೯. ಬಿದಿರೆ

ಬಿದರೆಯು ತುಮಕೂರು ಜಿಲ್ಲೆಯ ಗುಬ್ಬಿ ತಾಲೂಕು ಕೇಂದ್ರದಿಂದ ೧೦ ಕಿ.ಮೀ. ದೂರದಲ್ಲಿದ್ದು, ಈ ಹಿಂದೆ ಇದನ್ನು ವೇಣುಪುರ ಎಂದು ಕರೆಯುತ್ತಿದ್ದರು. ಈ ಪ್ರದೇಶವು ಶಾತವಾಹನರು, ಗಂಗರು, ಪಲ್ಲವರು, ನೊಳಂಬ, ಕಲ್ಯಾಣ ಚಾಳುಕ್ಯರು, ಹೊಯ್ಸಳ, ವಿಜಯನಗರ, ಹೈದರ್-ಟಿಪ್ಪು, ಮರಾಠರು, ಮೈಸೂರು ಒಡೆಯರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ.೧೦-೧೧ನೆಯ ಶತಮಾನದಲ್ಲಿ ಗಂಗರ ಅರಸ (ಸಾಮಂತ) ಗಂಗರಾಜ ಎಂಬುವವನು ಮಲ್ಲಿನಾಥ, ನೇಮಿನಾಥ ಮತ್ತು ಪಾರ್ಶ್ವನಾಥ ತೀರ್ಥಂಕರರ ಮೂರು ಬಸದಿಗಳನ್ನು ನಿರ್ಮಿಸಿದ್ದನೆಂದು, ಕೆರೆಯ ಕೋಡಿಯಲ್ಲಿರುವ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ೧೭-೧೮ನೇ ಶತಮಾನದಲ್ಲಿ ವಿಠಲನ ಭಕ್ತೆಯಾಗಿದ್ದ ಬಿದರೆಯ ರಾಣಿ ನೇಮಿನಾಥನ ಬಸದಿಯನ್ನು ವಿಠಲನ ದೇವಸ್ಥಾನವನ್ನಾಗಿ ಮಾರ್ಪಡಿಸಿದಳು. ಕಾಲಾನಂತರದಲ್ಲಿ ಮಲ್ಲಿನಾಥ ಬಸದಿಯು ಶೈವ ದೇವಾಲಯವಾಗಿ ಮಾರ್ಪಟ್ಟಿವೆ. ಇದಕ್ಕೆ ಸಾಕ್ಷಿಯಾಗಿ ಆ ಬಸದಿಗಳು ಶೈವ ದೇವಾಲಯಗಳಾಗಿ ಮಾರ್ಪಟ್ಟಿರುವುದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಹಿಂದೆ ಜೈನರು ಹೆಚ್ಚಾಗಿದ್ದ ಕಾರಣ ಇದೊಂದು ಪ್ರಮುಖ ವ್ಯಾಪಾರ ಕೇಂದ್ರವಾಗಿ ಪ್ರಖ್ಯಾತಿಗೊಂಡಿತು. ಆದರೆ ಕಾಲಾನಂತರದಲ್ಲಿ ಜೈನರು ಉದ್ಯೋಗವನ್ನು ಅರಸುತ್ತ ನಗರ-ಪಟ್ಟಣಗಳಿಗೆ, ವಲಸೆ ಹೋಗಿದ್ದರಿಂದ ಜೈನರ ಸಂಖ್ಯೆ ಕಡಿಮೆಯಾಗಿರುವುದು ಕಂಡುಬರುತ್ತದೆ. ಇಂದು ಬಿದರೆಯ ಗ್ರಾಮದಲ್ಲಿ ಜೈನ ಮತ್ತು ಹಿಂದೂ ಧರ್ಮೀಯರು ಹಬ್ಬ-ಹರಿದಿನಗಳಲ್ಲಿ, ಅರ್ಚನೆ ಪೂಜೆ-ಪುನಸ್ಕಾರಗಳಲ್ಲಿ ಭೇದ-ಭಾವವಿಲ್ಲದೆ ಎಲ್ಲರೂ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ನೆರವೇರಿಸುತ್ತಾರೆ.

### ೫.೩.೧೦. ನಿಟ್ಟೂರು

ತುಮಕೂರು ಜಿಲ್ಲೆಯ ಗುಬ್ಬಿ ತಾಲೂಕು ಕೇಂದ್ರದಿಂದ ೧೭ ಕಿ.ಮೀ. ದೂರದಲ್ಲಿ ಈ ಗ್ರಾಮವಿದೆ. ಹಿಂದೆ ಈ ಊರು ದಕ್ಷಿಣ ಐಹೊಳೆ, ತೆಂಕಣ ಐಹೊಳೆ ಎಂದೆಲ್ಲಾ ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದಿತ್ತು. ನಿಟ್ಟೂರು-ನಿಟ್ಟು=ನಿಟ್ಟು(ನಿಡಿದು)+ಊರು ದೊಡ್ಡ ಊರು ಅಥವಾ ಪುರಾತನ ಊರು ಎಂದರ್ಥ. ನಿಟ್ಟು-ಮನೆಯ ಚಾವಣಿ ಅಥವಾ ಬೆಟ್ಟದ ಇಳಿಜಾರು ತಪ್ಪಲು ಎಂದು ಅರ್ಥ ಬರುತ್ತದೆ. ಇದು ಸಂಸ್ಕೃತದ

ನಿಷ್ಠ ಎಂಬುದರ ತದ್ಭವ ಇದರ ಪ್ರಕಾರ ಇದ್ದದ್ದನ್ನು ಇದ್ದಂತೆ ಹೇಳುವವನಿರುವ ಮತ್ತು ಬೆಟ್ಟದ ತಪ್ಪಲಿನಲ್ಲಿರುವ (ಇಳಿಜಾರು) ಸ್ಥಳವಾಗಿದೆ. ಈ ಪ್ರದೇಶವು ಗಂಗರು, ಹೊಯ್ಸಳರು, ಮೈಸೂರು ಒಡೆಯರ ಕಾಲದಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಗಳಿಸಿತ್ತು. ಆ ಕಾಲದಲ್ಲಿ ಪ್ರಮುಖ ವ್ಯಾಪಾರಕೇಂದ್ರವಾಗಿ ಜೈನ ಪರಂಪರೆಯ ಉನ್ನತಿಯನ್ನು ಗಳಿಸಿತ್ತು. ಇಲ್ಲಿ ೧೬ನೆಯ ತೀರ್ಥಂಕರನಾದ ನೇಮಿನಾಥ ಸ್ವಾಮಿಯ ಬಸದಿಯಿದೆ. ಅಲ್ಲಿ ಯಕ್ಷಿಣಿಯಾದ ಜ್ವಾಲಾಮಾಲಿನಿ ದೇವಿಯ ವಿಗ್ರಹವಿದೆ. ಜ್ವಾಲಾಮಾಲಿನಿ ನಿಟ್ಟೂರಿನ ಶಕ್ತಿದೇವತೆಯಾಗಿ ನೆಲೆನಿಂತಿದ್ದಾಳೆ. ಈ ಪ್ರದೇಶದಲ್ಲಿ ಜ್ವಾಲಾಮಾಲಿನಿಗೆ ಹೆಚ್ಚು ಆರಾಧಿಸುವ ಪರಿಪಾಠವಿದೆ.

ಗೇರುಸೊಪ್ಪೆಯ ಜ್ವಾಲಾಮಾಲಿನಿ ಒಮ್ಮೆ ಚಿಕ್ಕ ಸಾಮಂತಭದ್ರಾಚಾರ್ಯ ಮುನಿಗಳ ಕನಸಿನಲ್ಲಿ ಬಂದು ನಿಟ್ಟೂರಿನಲ್ಲಿ ದಕ್ಷಿಣಾಭಿಮುಖವಾಗಿ ತೊಲೆಯ ಮೇಲೆ ಗೋಚರಿಸಿದಳು ಎಂಬ ಐತಿಹ್ಯವಿದೆ. ಅದರಿಂದ ಇಲ್ಲಿಯ ಜನರು ಆರಾಧಿಸುವ ಮತ್ತು ಅರಿಕೆಗಳನ್ನು ಈಡೇರಿಸುತ್ತಾಳೆ ಎಂಬ ನಂಬಿಕೆಯಿದೆ. ಈ ಬಸದಿಗೆ ಹೊಯ್ಸಳರ ಬಿಟ್ಟಿದೇವನ ರಾಣಿ ಶಾಂತಲೆ, ದಾನ ಚಿಂತಾಮಣಿ ಅತ್ತಿಮಬ್ಬೆ ಹಾಗೂ ಮೈಸೂರು ಒಡೆಯರ ಕಾಲದಲ್ಲಿ ಸಾಕಷ್ಟು ದಾನ, ದತ್ತಿ ಬಿಟ್ಟಿದ್ದನ್ನು ಶಾಸನಗಳು ಉಲ್ಲೇಖಿಸುತ್ತವೆ.

ಕಾಲಾನಂತರದಲ್ಲಿ ಜೈನರ ವಲಸೆಯು ಹೋಗಿದ್ದರಿಂದ ಜೈನ ಪರಂಪರೆ ಕುಂಠಿತವಾಗಲು ಕಾರಣವಾಯಿತು. ಇಂದು ನಿಟ್ಟೂರಿನಲ್ಲಿರುವ ಜೈನರು ತಮ್ಮ ಹಬ್ಬ-ಆಚರಣೆ ಮತ್ತು ಜೈನ ಪರಂಪರೆಯಲ್ಲಿ ಬಂದಿದ್ದ ಧಾರ್ಮಿಕ ಆಚರಣೆಗಳು ಸರಳಗೊಂಡಿವೆ. ಈ ಪ್ರದೇಶದಲ್ಲಿ ಪ್ರಮುಖವಾಗಿ ಜ್ವಾಲಾಮಾಲಿನಿ ಉತ್ಸವ, ಅಮ್ಮನವರ ವಾರ್ಷಿಕ ಪೂಜೆ, ವಿಶೇಷಪೂಜೆ, ತೀರ್ಥ ಆರಾಧನೆ, ಅಮ್ಮನವರ ಷೋಡಶ ಪೂಜೆ ಮತ್ತು ಅಮ್ಮನವರ ರಥೋತ್ಸವ ಮಹಾಭಿಷೇಕ ನಡೆಯುತ್ತವೆ.

**೫.೩.೧೧. ಕುಚ್ಚಂಗಿ**

ಇದು ತುಮಕೂರಿನಿಂದ ೮ ಕಿ.ಮೀ. ದೂರದಲ್ಲಿದೆ. ಇಲ್ಲಿ ಶ್ರೀಪಾರ್ಶ್ವನಾಥ ತೀರ್ಥಂಕರ ಹಾಗೂ ಯಕ್ಷಿಣಿ ಪದ್ಮಾವತಿ ದೇವಿಯನ್ನು ಆರಾಧಿಸುತ್ತಾರೆ. ಕುಚ್ಚಂಗಿಯಲ್ಲಿರುವ ಶ್ರೀಪಾರ್ಶ್ವನಾಥ ಬಸದಿಯನ್ನು ಕ್ರಿ.ಶ.೧೧೮೦ರಲ್ಲಿ ಬಮ್ಮಶೆಟ್ಟಿಯ ಕುಟುಂಬಸ್ಥರು ಕಟ್ಟಿಸಿದ್ದರು ಎಂಬುದಕ್ಕೆ ಶಾಸನಗಳಲ್ಲಿ ಉಲ್ಲೇಖವಿದೆ.

ಬಮ್ಮಶೆಟ್ಟಿಯು ತನ್ನ ಪುತ್ರ ಕೇಸರಿಶೆಟ್ಟಿಯೊಡನೆ ಕುಚ್ಚಂಗಿಗೆ ಬರುವ ಮೊದಲು ಹುಬ್ಬಳ್ಳಿಗೆ ೩೦. ಕಿ.ಮೀ. ದೂರದ 'ಅರಬ್‌ವಾಲಾ' ಎಂಬಲ್ಲಿ ವಾಸವಾಗಿದ್ದರು. ಚಾಲುಕ್ಯರ ರಾಜ್ಯಾಡಳಿತ ಕಾಲದಲ್ಲಿ ಪ್ರಸಿದ್ಧ ವರ್ತಕರೆನಿಸಿದ್ದರು. ಕನಕಚಂದ್ರ ಮುನಿಯವರ ಆದೇಶದಂತೆ ಅಲ್ಲಿ ಶ್ರೀ ಪಾರ್ಶ್ವನಾಥಸ್ವಾಮಿ ಜಿನಮಂದಿರವನ್ನು ಕಟ್ಟಿಸಿ ದತ್ತಿ-ದಾನ ನೀಡಿದ್ದರು. ಕ್ರಿ.ಶ. ೧೧೪೫ರ ಚಾಲುಕ್ಯರು ಇಮ್ಮಡಿ ಜಗದೇಕಮಲ್ಲನ ಆಳ್ವಿಕೆಯ ಕಾಲದಲ್ಲಿ ಧಾರವಾಡದ ಹರದ ಬಾಳೆಹಳ್ಳಿಯಲ್ಲಿ ಬಮ್ಮಶೆಟ್ಟಿಯು ಶ್ರೀಪಾರ್ಶ್ವನಾಥ ತೀರ್ಥಂಕರರ ಮಂದಿರ ನಿರ್ಮಿಸಿದನು. ಇದನ್ನು ಕುಂದ ಕುಂದಾನ್ವಯ ದೇಸಿಗಣ ಪ್ರಸ್ತರ ಗಚ್ಚರ ಮಲದಾರಿ ದೇವರಿಗೆ ವಹಿಸಿ ಸಂಪ್ರೋಕ್ಷಣೆ ಮಾಡಿಸಿ ಅಪಾರ ದಾನ-ದತ್ತಿ ನೀಡಿದ್ದನ್ನು, ಅದೇ ವರ್ಷದಲ್ಲಿ ಈ ಬಮ್ಮಶೆಟ್ಟಿಯು 'ಕರಗುದರಿ' ಗ್ರಾಮದಲ್ಲಿ ಭಗವಾನ್ ಶ್ರೀ ವಿಜಯಪಾರ್ಶ್ವನಾಥಸ್ವಾಮಿ ಜಿನ ಮಂದಿರವನ್ನು ಕಟ್ಟಿಸಿದನು. ಇದನ್ನು ನಾಗಚಂದ್ರ ಭಟ್ಟಾರಕ ಸ್ವಾಮಿಗಳವರ ಮೇಲ್ವಿಚಾರಣೆಗೆ ವಹಿಸಿ ದಾನ-ದತ್ತಿ ನೀಡಿದ್ದನ್ನು. ಅನಂತರ ಈ

ಬಮ್ಮಶೆಟ್ಟಿಯು ಅಂದು ದಕ್ಷಿಣದ ಪ್ರಸಿದ್ಧ ವ್ಯಾಪಾರ ಸ್ಥಳವಾದ ಕುಚ್ಚಂಗಿಗೆ ಬಂದು ನೆಲೆಸಿದನು. ಇಲ್ಲಿ ಕ್ರಿ.ಶ. ೧೧೮೦ರಲ್ಲಿ ಬಮ್ಮಶೆಟ್ಟಿಯ ಕುಟುಂಬಸ್ಥರು ಶ್ರೀಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದರು. ಮೂಲ ಸಂಘದ ದೇಸಿಗಣೆಯ ಹನಸೋಗೆ ಶಾಖೆಯ ನಯಕೀರ್ತಿ ಸಿದ್ಧಾಂತ ಚಕ್ರಿಯವರ ಶಿಷ್ಯರಾದ ಅಧ್ಯಾತ್ಮ ಬಾಲಚಂದ್ರದೇವರು ಉಪದೇಶದ ಪ್ರಭಾವದಿಂದ ಕಟ್ಟಿಸಿದ ಈ ಬಸದಿಗೆ ದತ್ತಿಹಳ್ಳಿಯನ್ನು ನೀಡಿದರು. ಅಂದು ಕುಚ್ಚಂಗಿಯು "ಧಾರ್ಮಿಕ ಕೇಂದ್ರವೆನಿಸಿ ವ್ಯಾಪಾರದಲ್ಲೂ ಉಚ್ಚಸ್ಥಾನಗಳಿದ್ದವು. ಇಲ್ಲಿನ ಬಸದಿಯಲ್ಲಿ ಅನಂತನೋಂಪಿ ಇತ್ಯಾದಿ ಮೂಲಕ ಧಾರ್ಮಿಕ ಚಟುವಟಿಕೆಗಳನ್ನು ಅತೀವ ಶ್ರದ್ಧಾಭಕ್ತಿಯಿಂದ ಅಪಾರ ಭಕ್ತಾದಿಗಳ ಸಮ್ಮಿಲನದಲ್ಲಿ ನಡೆಯುತ್ತಿದ್ದವು. ನೋಂಪಿಯ ಅಂತಿಮ ದಿನದ ವಸಂತದ ಓಕುಳಿ ಉತ್ಸವ ಹಾಗೂ 'ಪಾರು ಬೆಟ್ಟ'ದಲ್ಲಿರುವ ಪೂಜಾರಿಗಳು ಹರ್ಷೋಲ್ಲಾಸ ನೀಡುವವರಾಗಿದ್ದರು. ಈ ಸಂದರ್ಭದಲ್ಲಿ ಈ ಗ್ರಾಮಕ್ಕೆ ವಿಶೇಷತೆಯೆಂದರೆ ಅಂದು ಮಳೆ ಬರುತ್ತಿತ್ತು ಎಂಬ ಪ್ರತೀತಿ ಇದೆ.

ಈ ಬಮ್ಮಶೆಟ್ಟಿಯು ವಂಶಸ್ಥರು, ವ್ಯಾಪಾರದಲ್ಲಿ ಮೇಲುಗೈ ಸಾಧಿಸಿದ್ದರು. ಈಗಾಗಿ ಈ ಮನೆತನದವರಿಗೆ 'ಗೋಟಡಿಕೆ' ವಂಶಸ್ಥರೆಂದು ಹೆಸರಾಯಿತು. ವ್ಯಾಪಾರದ ವ್ಯತ್ಯಾಸದಿಂದಾಗಿ ಈ ವಂಶಸ್ಥರು ವಹಿವಾಟಿನ ಉದ್ದೇಶದಿಂದ ಅನತಿದೂರದ ಬೆಳ್ಳಾವಿಗೆ ಬಂದು ನೆಲೆಸಿ ಉನ್ನತ ಸ್ಥಾನಮಾನ ಗಳಿಸಿದರು. ಮತ್ತೆ ಕೆಲವರು ಬೆಳಗಾವಿ ಕಡೆಗೆ ಹೋಗಿ ನೆಲೆಸಿದರು. ಈಗಲೂ ಬೆಳಗಾವಿಯಲ್ಲಿ ಗೋಟಡಿಕೆ ವಂಶಸ್ಥರಿದ್ದಾರೆ. ಇಲ್ಲಿ ಉಳಿದ ಕುಟುಂಬಗಳು ಪರಿಸರದ ಒತ್ತಡದಿಂದ ಸಾಧರು ಆಗಿ ಹೋದರು. ಈ ಮನೆತನದವರು ಕುಚ್ಚಂಗಿ ಶ್ರೀ ಪಾರ್ಶ್ವನಾಥ ಸ್ವಾಮಿಯನ್ನು ಮನೆದೇವರನ್ನಾಗಿಸಿಕೊಂಡಿದ್ದಾರೆ.

### ೫.೩.೧೨. ಮಿಡಿಗೇಶಿ

ಮಿಡಿಗೇಶಿ ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನಲ್ಲಿದೆ. ಇದೊಂದು ಐತಿಹಾಸಿಕ ಪ್ರಸಿದ್ಧವಾದ ಕೇಂದ್ರವಾಗಿದೆ. ಇಲ್ಲಿ ಅನೇಕ ದೇವಾಲಯಗಳು, ಕೋಟೆಗಳಿವೆ. ಈ ಪ್ರದೇಶವನ್ನು ಈ ಹಿಂದೆ ಪಾಳೇಗಾರರ ಆಡಳಿತಕ್ಕೆ ಒಳಪಟ್ಟಿತ್ತು. ಅಷ್ಟೇ ಅಲ್ಲದೇ ಅನೇಕ ರಾಜಮನೆತನಗಳು ಆಳ್ವಿಕೆಗೆ ಒಳಪಟ್ಟಿತು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಗಂಗರು, ಪಲ್ಲವರು, ನೊಳಂಬರು, ಚೋಳರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರ, ಹೈದರ್, ಟಿಪ್ಪು, ಮರಾಠರು, ಮೈಸೂರು ಒಡೆಯರು ಹಾಗೂ ಪಾಳೆಯಗಾರರ ಕಾಲದ ಆಳ್ವಿಕೆಯ ಬಗ್ಗೆ ಉಲ್ಲೇಖವಿದ್ದು, ಮಹಾನಾಡ ಪ್ರಭುಗಳ ಕಾಲದಲ್ಲಿ ಕೋಟೆ-ಕೊತ್ತಲಗಳು, ದೇವಾಲಯ ಮೊದಲಾದ ಸ್ಮಾರಕಗಳು ನಿರ್ಮಾಣವಾಗಿವೆ. ಸ್ಥಳೀಯರ ಐತಿಹ್ಯಗಳ ಪ್ರಕಾರ ಈ ಪ್ರದೇಶದಲ್ಲಿ ಬೆಟ್ಟದ ಮೇಲೆ ಒಂದು ಗ್ರಾಮದೇವತೆ ನೆಲೆಸಿದ್ದಳು. ಆಕೆಗೆ ಮುಡಿಯಿಂದ ಪಾದದ ತನಕ ತನ್ನ ಕೇಶರಾಶಿಯಿದ್ದಿದ್ದರಿಂದ ಆ ಊರನ್ನು ಮುಡಿ+ಕೇಶಿ=ಮಿಡಿಕೇಶಿ ಎಂದು ಕರೆಯುತ್ತಿದ್ದರೆಂದು ಹೇಳಲಾಗುತ್ತದೆ. ಇದು ಕಾಲಾನಂತರದಲ್ಲಿ ಮಿಡಿಗೇಶಿಯಾಯಿತು ಎಂಬುದು ಇಲ್ಲಿನ ಜನರ ನಂಬಿಕೆಯಾಗಿದೆ.

ಇಲ್ಲಿ ಪ್ರಮುಖವಾಗಿ ಸುಪಾರ್ಶ್ವನಾಥ ತೀರ್ಥಂಕರ ಮತ್ತು ಬ್ರಹ್ಮದೇವರ ಆರಾಧನೆ ಹೆಚ್ಚು ನಡೆಯುತ್ತದೆ. ಈ ಊರಿನಲ್ಲಿ ಜೈನ ಕುಟುಂಬಗಳು ಇಲ್ಲದೇ ಇರುವುದರಿಂದ ಕೇವಲ ಅರ್ಚಕರ ಮನೆಯೊಂದೆಯಿರುವುದರಿಂದ ಇಲ್ಲಿಯ ಆಚರಣಾಕ್ರಮಗಳು ವಿಧಿ-ವಿಧಾನಗಳು ಹಿಂದುಗಳ ರೀತಿಯಲ್ಲಿಯೇ

ನಡೆಯುತ್ತವೆ. ಗೃಹಪ್ರವೇಶ, ಸಂದರ್ಭದಲ್ಲಿ ತೀರ್ಥಂಕರನ ಚಿಕ್ಕ ಮೂರ್ತಿಯನ್ನು ಅವರ ಮನೆಗೆ ತರುತ್ತಾರೆ. ನಾಮಕರಣ, ಮದುವೆ, ಹಿಂದೂ ಸಂಪ್ರದಾಯದಂತೆ ಮಾಡುತ್ತಾರೆ. ಹಾಗಾಗಿ ಈ ಭಾಗದಲ್ಲಿ ಜೈನ ಮತ್ತು ಹಿಂದೂ ಆಚರಣಾ ವಿಧಾನಗಳು ಜೊತೆಗೂಡಿ ನಡೆಯುತ್ತವೆ. ಉತ್ಸವ ಮೂರ್ತಿಗಳಾಗಿ ಯಕ್ಷಿಯರಾದ ಪದ್ಮಾವತಿ, ಜ್ವಾಲಾಮಾಲಿನಿ, ಜೈನರ ಶುಭಕಾರ್ಯಕ್ರಮಗಳಿಗೆ ಹೋಗುತ್ತವೆ ಹಾಗೂ ಸುಪಾರ್ಶ್ವನಾಥ ತೀರ್ಥಂಕರರನ್ನು ಪಾಂಡುಕ ಶಿಲೆಯಲ್ಲಿ ಸ್ವಾಮಿಯನ್ನು ಕೂರಿಸಿ ೧೦೮ ಕಳಶಗಳನ್ನಿಟ್ಟು ಅಭಿಷೇಕ ಮಾಡುತ್ತಾರೆ. ಗಂಧಾಭಿಷೇಕ, ಹಾಲಿನಾಭಿಷೇಕ, ಕಜ್ಜಾಯ, ಪಂಚಾಮೃತ ಅಭಿಷೇಕಗಳನ್ನು ಮಾಡುತ್ತಾರೆ ಮತ್ತು ೧೦೮ ಕಳಸಗಳನ್ನು ಹರಾಜು ಮಾಡುವ ಪ್ರಕ್ರಿಯೆ ಈ ಪ್ರದೇಶದಲ್ಲಿದೆ.

**೫.೩.೧೩. ರತ್ನಗಿರಿ**

ರತ್ನಗಿರಿಯು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಶಿರ ತಾಲೂಕಿನಲ್ಲಿದೆ. ರತ್ನಗಿರಿಯು ಕೋಟೆಗಳಿಂದ ಸುತ್ತುವರಿದ ಸುಂದರವಾದ ಪ್ರದೇಶವಾಗಿದೆ. ಇಲ್ಲಿ ಅನೇಕ ಪಾಳೇಗಾರರು ಹಾಗೂ ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟಿತು. ಅವುಗಳೆಂದರೆ ಗಂಗರು, ನೊಳಂಬರು, ಚೋಳರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರ, ಹೈದರ್, ಟಿಪ್ಪು, ಮರಾಠರು, ಮೈಸೂರು ಒಡೆಯರು ಇವರೆಲ್ಲರ ಆಳ್ವಿಕೆ ನಡೆಸಿದಂತಹ ಕುರುಹುಗಳಿವೆ. ಇದಕ್ಕೆ ಅನೇಕ ದೇವಾಲಯಗಳು, ಕೋಟೆ-ಕೊತ್ತಲುಗಳೇ ಸಾಕ್ಷಿಯಾಗಿವೆ. ರತ್ನಗಿರಿ ಪಾಳೆಯಗಾರರ ಕಾಲದಲ್ಲಂತೂ ವೈಭವಯುತವಾಗಿ ಮೆರೆದಂತಹ ರಾಜಧಾನಿ ಕೇಂದ್ರವಾಗಿತ್ತು. ಇಲ್ಲಿರುವ ರಕ್ಷಣಾಬದ್ಧ ಕೋಟೆ-ಕೊತ್ತಲ, ಕಂದಕ, ಅರಮನೆ, ದೇವಾಲಯ, ಕಲ್ಯಾಣಿ ಮೊದಲಾದ ಸ್ಮಾರಕಗಳು ಈ ಪ್ರದೇಶದ ಸಿರಿ ಸಂಪತ್ತನ್ನು ಎತ್ತಿ ತೋರಿಸುತ್ತವೆ.

ರತ್ನಗಿರಿಯಲ್ಲಿ ಚಂದ್ರಸೇನ ಮಹಾರಾಜ ಎಂಬುವವನು ಪಾರ್ಶ್ವನಾಥ ತೀರ್ಥಂಕರ ಬಸದಿಯನ್ನು ಕಟ್ಟಿಸಿದನೆಂದು ಹೇಳಲಾಗುತ್ತದೆ. ಹಿಂದೆ ಇದು ಪ್ರಮುಖ ಜೈನ ಕೇಂದ್ರವಾಗಿದ್ದು, ೪ ರಿಂದ ೫ ನೂರು ಜೈನ ಕುಟುಂಬಗಳು ನೆಲೆಸಿದ್ದವು. ಕಾರಣಾಂತರಗಳಿಂದ ಉದ್ಯೋಗ ಹರಸುತ್ತ ವಲಸೆ ಹೋಗಿದ್ದಾರೆ.

ಚಿಕ್ಕದೇವರಾಜ ಎಂಬ ಕೃತಿಯಲ್ಲಿ ಉಲ್ಲೇಖಿಸಿರುವಂತೆ ಚಂದ್ರಸೇನ ಮಹಾರಾಜ ಸ್ವತಃ ಜೈನನಾಗಿದ್ದು, ಗುರುಗಳ ಪ್ರೇರಣೆಯಿಂದ ಜಿನಮಂದಿರವನ್ನು ಸ್ಥಾಪನೆ ಮಾಡಲು ಕಾರಣವಾಯಿತು. ಈ ಚಂದ್ರಸೇನ ಮಹಾರಾಜ ಇಲ್ಲಿನ ಮಧುಗಿರಿ, ಮಿಡಿಗೇಶಿ, ಶಿರಾ ಮುಂತಾದವ ಪ್ರದೇಶಗಳನ್ನು ಒಳಪಡಿಸಿಕೊಂಡು ಆಳುತ್ತಿದ್ದನು. ಜೈನರಲ್ಲಿ ನಾಲ್ಕು ಮಹಾಪೀಠಗಳಾದ ದಿಲ್ಲಿ, ಕೊಲ್ಲಾಪುರ, ಜಿನಕಂಚಿ, ಪೆನುಗೊಂಡೆ ಈ ನಾಲ್ಕು ಜೈನರ ಮಹಾಪೀಠಗಳ ಪೀಠಾಧಿಪತಿಗಳ ಪ್ರೇರಣೆಯಿಂದ ಇತರೆ ಊರುಗಳಲ್ಲಿ ಅಂದರೆ ರತ್ನಗಿರಿ-ಮಿಡಿಗೇಶಿ-ಅಗಳಿ-ಮಧುಗಿರಿ-ಶಿರಾ ಮುಂತಾದ ಪ್ರದೇಶಗಳಲ್ಲಿ ಜೈನ ದೇವಾಲಯಗಳು ಸ್ಥಾಪನೆಯಾದವು. ರತ್ನಗಿರಿಯ ಜೈನ ದೇವಸ್ಥಾನ ರಕ್ಷಣೆ ದೃಷ್ಟಿಯಿಂದ ನೋಡಿದಾಗ ಈ ವಾಯವ್ಯದಿಂದ ಆಗ್ನೇಯದವರೆಗೂ ಮತ್ತು ಪಶ್ಚಿಮದಿಂದ ಉತ್ತರದ ಆಗ್ನೇಯದವರೆಗೂ ಕೋಟೆಯ ರಕ್ಷಣೆ ಇದೆ. ಸುಂದರವಾದ ಸ್ಥಳವಾಗಿದ್ದರಿಂದ ಇಲ್ಲಿ ಜಿನ ಮಂದಿರ ಸ್ಥಾಪನೆಯಾಗಲು ಕಾರಣವಾಯಿತು.

ಪ್ರಮುಖವಾಗಿ ಶ್ರೀ ಪಾರ್ಶ್ವನಾಥನ ಜನ್ಮದಿನವನ್ನು ಶ್ರಾವಣ ಮಾಸದ ಸಪ್ತಮಿಯಲ್ಲಿ ಮಾಡುತ್ತಾರೆ. ೧೦೮ ಕಳಶಗಳ ಮಹಾಮಸ್ತಕಾಭಿಷೇಕ ಮಾಡುತ್ತಾರೆ. ನಾಮಕರಣ, ಗೃಹಪ್ರವೇಶ, ಮದುವೆ ಸಂದರ್ಭದಲ್ಲಿ

ಪಾರ್ಶ್ವನಾಥನನ್ನು ಕೊಂಡೊಯ್ಯುತ್ತಾರೆ. ಪುನಃ ಗುಡಿಯಲ್ಲಿ ತಂದು ಮರುಪೂಜೆ ಮಾಡಿ ಪ್ರತಿಷ್ಠಾಪಿಸುತ್ತಾರೆ. ಒಟ್ಟಿನಲ್ಲಿ ರತ್ನಗಿರಿಯು ಬಹುಪ್ರಮುಖವಾದ ಜೈನ ಕೇಂದ್ರವಾಗಿತ್ತು ಎಂಬುದನ್ನು ಅಲ್ಲಗಳೆಯುವಂತಿಲ್ಲ.

**೫.೩.೧೪. ಪೆನುಗೊಂಡೆ**

ಇದು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಪ್ರಮುಖ ತಾಲೂಕು ಕೇಂದ್ರವಾಗಿದೆ. ಇದು ಪ್ರಾಚೀನ ಇತಿಹಾಸವನ್ನು ಹೊಂದಿರುವಂತಹ ಪ್ರಸಿದ್ಧ ಸ್ಥಳವಾಗಿದೆ. ಗಂಗರು, ಪಲ್ಲವರು, ಹೊಯ್ಸಳರು, ಕಾಕತೀಯರು, ಬಿಜಾಪುರ ಸುಲ್ತಾನರು, ವಿಜಯನಗರದ ಅರಸರು ತಮ್ಮ ಆಳ್ವಿಕೆಯನ್ನು ನಡೆಸಿದ್ದರೂ ಹಾಗೂ ವಿಜನಯಗರ ಸಾಮ್ರಾಜ್ಯಕ್ಕೆ ಎರಡನೇ ರಾಜಧಾನಿಯನ್ನಾಗಿ ಮಾಡಿಕೊಂಡಂತಹ ಪ್ರಮುಖ ಪ್ರದೇಶ. ಇಲ್ಲಿ ಅನೇಕ ದೇವಾಲಯಗಳು ಮಸೀದಿಗಳು, ಕೋಟೆಗಳು, ಸ್ಮಾರಕಗಳು, ಸಾಕಷ್ಟಿವೆ. ಚಾರಿತ್ರಿಕ ಸಾಕ್ಷ್ಯಾಧಾರಗಳಿಂದ ಪೆನುಗೊಂಡೆ ಒಂದು ಸಾಂಸ್ಕೃತಿಕ ಕೇಂದ್ರವಾಗಿದ್ದಿತು ಎಂದು ತಿಳಿದುಬರುತ್ತದೆ.

'ಪೆನುಗೊಂಡ' ಎಂದು ಹೆಸರು ಬರಲು ಕಾರಣ ಈ ಪ್ರದೇಶದಲ್ಲಿ ದುರ್ಗಮವಾದ ಬೆಟ್ಟ-ಗುಡ್ಡಗಳ ಅದರಲ್ಲಿ ಕೋಟೆಗಳನ್ನು ನಿರ್ಮಿಸಿರುವುದೇ ಆಗಿದೆ. ಪೆನುಗೊಂಡ ಮೊದಲ ಹೆಸರು 'ಘನಗಿರಿ' ಎಂದು ಕರೆಯುತ್ತಿದ್ದರು. ಘನಾದ್ರಿ-ಘನ-ದೊಡ್ಡ ಅದ್ರಿ-ಗೊಂಡ-ಬೆಟ್ಟ-ಘನಾದ್ರಿ ಎಂದು ಕರೆಯುತ್ತಾರೆ. ಪೆನುಗೊಂಡೆಯಲ್ಲಿ ೨೨ನೇ ತೀರ್ಥಂಕರನಾದ ನೇಮಿನಾಥನ ಜಿನಮಂದಿರವಿದೆ. ತುಂಬ ಪ್ರಾಚೀನವಾದ ಇತಿಹಾಸವನ್ನು ಹೊಂದಿರುವ ಈ ಜಿನಮಂದಿರವನ್ನು ೧೩ನೇ ಶತಮಾನದಲ್ಲಿ ೧ನೇ ಬುಕ್ಕರಾಯರು ಮತ್ತು ೨ನೇ ಬುಕ್ಕರಾಯರು ಕಟ್ಟಿಸಿದ್ದಾರೆ ಎಂದು ಹೇಳುತ್ತಾರೆ.

೧೨ನೇ ಶತಮಾನದಲ್ಲಿ ಬರುವ 'ಭಾಸ್ಕರ ಕವಿ' ತನ್ನ ಜೀವಂಧರ ಚರಿತ್ರೆಯಲ್ಲಿ ಉಲ್ಲೇಖಿಸಿದಂತೆ ಈ ಕೃತಿಯನ್ನು ಶಾಂತಿನಾಥ ಬಸದಿಯಲ್ಲಿ ಕಾದಂಬರಿ ಬರೆದು ಮುಗಿಸಿದೆ ಎಂದು ಹೇಳುತ್ತಾನೆ. ಪೆನುಗೊಂಡೆ ಇದೊಂದು ಪ್ರಮುಖ ಜೈನ ಕೇಂದ್ರವಾಗಿತ್ತು. ಏಕೆಂದರೆ ಇಲ್ಲಿರುವಂತಹ ಅನೇಕ ಜೈನ ಸ್ಮಾರಕಗಳೇ ಸಾಕ್ಷಿಯನ್ನು ಒದಗಿಸುತ್ತವೆ. ಈಗ ಅನೇಕ ಜೈನ ಸ್ಮಾರಕಗಳಲ್ಲಿ ಮುಸ್ಲಿಮರು ಮಸೀದಿಗಳನ್ನು ನಿರ್ಮಿಸಿದ್ದಾರೆ. ಜೈನ ಪರಂಪರೆಯಲ್ಲಿ ಬರುವ ಜೈನರ ಬಹುಮುಖ್ಯ ನಾಲ್ಕು ಪೀಠಗಳಲ್ಲಿ ಈ ಪೆನುಗೊಂಡೆ ಒಂದು.

**೫.೩.೧೫. ಅಕ್ಕಿರಾಂಪುರ**

ಇದು ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕು ಕೇಂದ್ರದಿಂದ ೧೦ ಕಿ.ಮೀ. ದೂರದಲ್ಲಿದೆ. ಈ ಪ್ರದೇಶವನ್ನು ಗಂಗರು, ಪಲ್ಲವರು, ನೊಳಂಬರು, ಚೋಳರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಹೈದರ್, ಟಿಪ್ಪು, ಮರಾಠರು, ಮೈಸೂರು ಒಡೆಯರ ಆಳ್ವಿಕೆಗೆ ಒಳಪಟ್ಟಿತ್ತು. ಇಲ್ಲಿ ಅನಂತನಾಥನ ಬಸದಿಯಿದೆ. ಅದರ ಕಂಭದ ಮೇಲೆ ಬ್ರಹ್ಮದೇವರ ಮೂರ್ತಿಯಿದೆ.

**೫.೩.೧೬. ವರಾಂಗ**

ಜೈನಧರ್ಮದ ಹಿರಿದಾದ ತೀರ್ಥಕ್ಷೇತ್ರ ಈ ವರಾಂಗ. ಇದು ಜೈನಧರ್ಮದ ದಿಗಂಬರ ಪಂಥಕ್ಕೆ ಸೇರಿದ ಪ್ರಾಚೀನ ಸ್ಥಳ. ಕ್ರಿ.ಶ. ೧೦ನೇ ಶತಮಾನದ ಕನ್ನಡ ನಾಡಿನಲ್ಲಿ ಜೈನಧರ್ಮದ "ಸುವರ್ಣಯುಗ"

ಎಂದು ಕರೆಯುತ್ತಾರೆ. ಆ ಕಾಲಘಟ್ಟದಲ್ಲಿ ವರಾಂಗವು ಕೂಡ ಜೈನಧರ್ಮದ ಒಂದು ಭದ್ರ ನೆಲೆವೀಡಾಗಿತ್ತು. ಇದಕ್ಕೆ ಸಂಬಂಧಪಟ್ಟಂತೆ ಅನೇಕ ಚಾರಿತ್ರಿಕ ಉಲ್ಲೇಖಗಳು ದೊರೆಯುತ್ತವೆ. ಕ್ರಿ.ಶ. ೧೪೨೪ರ ಒಂದು ಶಾಸನವು ವೀರ ಪ್ರತಾಪದೇವರು ಶ್ರೀಮದ್ರಾಯರಾಜಗುರು ಮಂಡಲಾಚಾರ್ಯ ಮಹಾವಾದ ವಾದೀಶ್ವರ ವಾದಿಪಿತಾಮಹ ಸಕಲ ವಿದ್ವಜ್ಜನ ಚಕ್ರವರ್ತಿ ಶ್ರೀವರ್ಧಮಾನ ಭಟ್ಟಾರಕರಿಗೆ, ವರಾಂಗ ತೀರ್ಥನ ನೇಮೀಶ್ವರ ಸ್ವಾಮಿ(ಅಮೃತ ಪಡಿಗೆ ಹಿಂದೆ ಬಿಟ್ಟ ಸ್ಥಳಗಳನ್ನು ಪೂರ್ವ ಮರ್ಯಾದೆಯಲ್ಲಿ ನಡೆಯುವಂತೆ) ಧಾರಾಪೂರಕ ವಾಗಿ ದಾನಬಿಟ್ಟ ವಿಚಾರವನ್ನು ತಿಳಿಸುತ್ತದೆ. ಹೀಗೆ ಅನೇಕ ಶಾಸನಗಳು ವರಾಂಗದ ಮಹತ್ವವನ್ನು ಮತ್ತು ಆ ತೀರ್ಥಕ್ಷೇತ್ರ ಕುರಿತಂತೆ ಮಾಹಿತಿಯನ್ನು ನೀಡುತ್ತವೆ.

ಶಾಸನಗಳು ಹೇಳುವಂತೆ, ಈ ಪ್ರದೇಶದಲ್ಲಿ ವರಾಂಗ ಎಂಬ ಒಬ್ಬ ಮಹಾಪುರುಷನೊಬ್ಬನಿದ್ದನು. ಈತನು ಸುಗುಣಸಂಪನ್ನನು, ಮಹಾದಾನಿಯೂ, ತ್ಯಾಗಮಯಿಯಾಗಿದ್ದನೆಂದು ಶಾಸನಗಳು ಉಲ್ಲೇಖಿಸುತ್ತವೆ. ಇಂದಿಗೂ ಇಲ್ಲಿನ ಪುರೋಹಿತರು ಈ ವರಾಂಗ ರಾಯನನ್ನು ತಮ್ಮ ಪ್ರಶಸ್ತಿ ವಾಚನದಲ್ಲಿ ಸ್ಮರಿಸಿಕೊಳ್ಳುತ್ತಾರೆ. ಇದರಿಂದ ಈ ವರಾಂಗರಾಯನ ಹೆಸರೆ ಈ ತೀರ್ಥಕ್ಷೇತ್ರಕ್ಕೆ ಕರೆಯುವುದು ಇಂದಿನ ವಾಡಿಕೆಯಾಗಿದೆ.

ಇಲ್ಲಿನ ನೇಮೀಶ್ವರ ಸ್ವಾಮಿ ಬಸದಿಯ ರಸ್ತೆಗೆ ಹೊಂದಿಕೊಂಡಂತೆ ಬಲಭಾಗದಲ್ಲಿ ಅನೇಕ ಸಮಾಧಿ ಜೈನ ಗೃಹಗಳಿವೆ. ಇವುಗಳನ್ನು ನಿಸಿಧಿಗಳೆಂದು ಕರೆಯುತ್ತಾರೆ. ಅಲ್ಲದೆ ಇಲ್ಲಿ ಮುನಿಗಳು ಸಲ್ಲೇಖನ ವ್ರತವನ್ನು ಕೈಗೊಂಡು ಮಹಾಪರಿನಿರ್ವಾಣ ಹೊಂದಿದ ಸಮಾಧಿ ಮಂಟಪಗಳು ಈ ವರಾಂಗದಲ್ಲಿ ಈಗಲೂ ಕಾಣಬಹುದಾಗಿದೆ. ಇಲ್ಲಿ ತಾಟಕದ ಗುಡ್ಡದ ಮೇಲ್ಭಾಗದ ತುದಿಯಲ್ಲಿ ಗಣಧರನ ಪಾದವಿದೆ. ಗಣಧರ ಎಂದರೆ, ತೀರ್ಥಂಕರ ಉಪದೇಶದ ವಿವರಣೆಯನ್ನು ಮಾಡುವವರು ಎಂದರ್ಥ. ಈ ಸಕಲ ಜೀವಿಗಳಿಗೆ ಜೈನ ಉಪದೇಶಗಳನ್ನು ತಲುಪಿಸುವ ಕೆಲಸವನ್ನು ಮಾಡುತ್ತಿದ್ದರು ಎಂಬ ಪ್ರತೀತಿ ಇದೆ.

ವರಾಂಗ ತೀರ್ಥ ಕ್ಷೇತ್ರದಲ್ಲಿ ಅನೇಕ ಜೈನ ಮುನಿಗಳ ಬಸದಿಗಳಿವೆ. ಅವರಲ್ಲಿ ಮುಖ್ಯರೆಂದರೆ ನೇಮೀಶ್ವರ, ಚಂದ್ರನಾಥ ಮತ್ತು ಚತುರ್ಮುಖ ಎಂಬ ಮೂವರು ಹೆಸರಿನ ಯತಿಗಳ ಬಸದಿಗಳು. ಈ ಬಸದಿಗಳಲ್ಲಿರುವ ಮೂಲಬಿಂಬಗಳು ಚಾಲುಕ್ಯ, ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದವೆಂದು ಹೇಳಲಾಗುತ್ತಿದೆ. ವಾಸ್ತುಶಿಲ್ಪವು ಧಾರ್ಮಿಕ ಚೇತನದ ಪ್ರತೀಕವಾಗಿದ್ದಂತೆ ಸಮಕಾಲೀನ ಸಾಮಾಜಿಕ ಪರಂಪರೆಯ ಪ್ರತಿಬಿಂಬವೂ ಆಗಿದ್ದಿತು. ಕಲೆ, ವಾಸ್ತುಶಿಲ್ಪಗಳು ಅಂದಿನ ಸಾಮಾಜಿಕ, ಧಾರ್ಮಿಕ ಜೀವನದ ಪ್ರತೀಕವಾಗಿರುತ್ತವೆ. ಅದರಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೮೦ಕ್ಕೂ ಹೆಚ್ಚಿನ ಬಸದಿಗಳು ವಿವಿಧ ಕಾಲಘಟ್ಟದಲ್ಲಿ ನಿರ್ಮಾಣಗೊಂಡವು. ವಿಶೇಷವಾಗಿ ವರಾಂಗದಲ್ಲಿ ಸೋಮೇಶ್ವರ, ಚತುರ್ಮುಖ ಬಸದಿಗಳು ತೀರ ಪ್ರಾಚೀನವಾದವು. ಈ ಜಿಲ್ಲೆಯ ವಾಸ್ತುಶಿಲ್ಪವನ್ನು ವಿಶೇಷವಾಗಿ ಹಿಂದೂ ಮತ್ತು ಜೈನ ಪರಂಪರೆಗೆ ಸಂಬಂಧಿಸಿದವು ಎಂದು ಪ್ರತ್ಯೇಕವಾಗಿ ವಿಂಗಡಿಸಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಗೆ ಜೈನಧರ್ಮವು ಯಾವಾಗ ಬಂದಿತು ಎನ್ನುವುದರ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಡಾ. ಸಾಲೆತ್ತೊರೆ, ಡಾ.ರಮೇಶ ಮೊದಲಾದ ವಿದ್ವಾಂಸರು ಈ ಕುರಿತು ಸಾಕಷ್ಟು ಬೆಳಕನ್ನು ಚೆಲ್ಲುತ್ತಾರೆ. ಕ್ರಿ.ಶ.೨ನೇ ಶತಮಾನದಲ್ಲಿ ಈ ಜೈನಧರ್ಮ ಉತ್ತರ ಭಾರತದಿಂದ ಶ್ರವಣಬೆಳಗೊಳಕ್ಕೆ

ಬಂದು ನೆಲೆಯೂರಿತು ಮತ್ತು ಕ್ರಿ.ಶ.೩ನೇ ಶತಮಾನಕ್ಕೆ ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರವೇಶ ಮಾಡಿರಬಹುದೆಂದು ಹೇಳಲಾಗುತ್ತಿದೆ.

**೫.೩.೧೭. ಧರ್ಮಸ್ಥಳ**

ಈ ಕ್ಷೇತ್ರಕ್ಕೆ ಸುಮಾರು ೮೦೦ವರ್ಷಗಳ ಪ್ರಾಚೀನ ಚರಿತ್ರೆಯಿದೆ. ಇಲ್ಲಿಯ ಸ್ಥಳಪುರಾಣ ಮತ್ತು ಐತಿಹ್ಯಗಳಿಗೆ ಸಂಬಂಧಿಸಿದಂತೆ ಕಥೆ, ದಂತಕಥೆಗಳೂ ಇವೆ.

'ಧರ್ಮಸ್ಥಳ' ಹೆಸರೇ ಹೇಳುವಂತೆ 'ಧರ್ಮದ ನೆಲೆವೀಡು' ಎಂದರ್ಥ. ಹೀಗಾಗಿ ಈ ಸ್ಥಳಕ್ಕೆ ಪುರಾಣೈತಿಹಾಸಕ್ಕೆ ಸಂಬಂಧಿಸಿದ ಮಹತ್ವದ ಉಲ್ಲೇಖಗಳು ದೊರೆಯುತ್ತವೆ. ಜನರ ನಂಬಿಕೆಗೆ ಇಂಬು ಕೊಡುತ್ತಾ, ಅವರ ದುಃಖ ದುಮ್ಮಾನಗಳನ್ನು ದೂರಗೊಳಿಸಿ, ಅವರ ಬದುಕಿಗೆ ಸಾಂತ್ವನದ ಭರವಸೆಯನ್ನು ತುಂಬುತ್ತಾ ನೂರಾರು ವರುಷಗಳಿಂದ ಬಾಳಿಬಂದಿರುವ ಪವಿತ್ರ ಕ್ಷೇತ್ರ ಈ ಧರ್ಮಸ್ಥಳ. ಇಲ್ಲಿ ಸಾಕ್ಷಾತ್ ಶಿವನೇ "ಮಂಜುನಾಥನಾಗಿ ಈ ಕ್ಷೇತ್ರದಲ್ಲಿ ನೆಲೆಗೊಂಡಿದ್ದಾನೆ. ಈಗ ಈ ಕ್ಷೇತ್ರದ ಉಸ್ತುವಾರಿಯನ್ನು ಧರ್ಮಾಧಿಕಾರಿ ಡಾ.ವೀರೇಂದ್ರ ಹೆಗಡೆಯವರೆ ನೋಡಿಕೊಳ್ಳುತ್ತಿದ್ದಾರೆ.

ಈ ಬೀಡಿನಲ್ಲಿ ಜೈನ ಪರಂಪರೆಯ ಬರ್ಮಣ್ಣ ಹೆಗ್ಗಡೆ ದಂಪತಿಗಳು ವಾಸವಾಗಿದ್ದರು. ಆರಂಭದಲ್ಲಿ ಇಲ್ಲಿ ಶ್ರೀ ಚಂದ್ರನಾಥ ಸ್ವಾಮಿ ಬಸದಿ ಅದರ ಕೆಳಭಾಗದಲ್ಲಿ ಕುಡುಮದ ನೆಲ್ಯಾಡಿ ಬೀಡು ಇವೆರಡೇ ಇಲ್ಲಿನ ಪ್ರಮುಖ ಸ್ಥಳಗಳಾಗಿದ್ದವು. ಈ ಸ್ಥಳದಲ್ಲಿ ಬರ್ಮಣ್ಣ ದಂಪತಿಗಳು ತಮ್ಮ ಧರ್ಮ, ತತ್ವ ಸಿದ್ಧಾಂತಗಳಲ್ಲಿ ವಿಶ್ವಾಸವಿರಿಸಿಕೊಂಡು ಬಸದಿಯ ಚಂದ್ರನಾಥಸ್ವಾಮಿಯನ್ನು ಶ್ರದ್ಧಾಭಕ್ತಿಯಿಂದ ಆರಾಧಿಸುತ್ತಿದ್ದರು. ಕುಡುಮ ಎಂದರೆ 'ದಾನ ನೀಡು' ಎಂದರ್ಥ. ಜೊತೆಗೆ ಸಾಹಿತಿ ಪುತ್ತಿಗೆಯವರು 'ದೊಡ್ಡಮನೆತನ' ಎಂಬ ಅರ್ಥವನ್ನು ನೀಡಿದ್ದಾರೆ. ಇಂತಹ ಮನೆತನಕ್ಕೆ ಸೇರಿದ ಬರ್ಮಣ್ಣ ಹೆಗ್ಗಡೆಯವರು ಸತ್ಯ, ಅಹಿಂಸೆ, ಅಪರಿಗ್ರಹ ಮುಂತಾದ ವ್ರತಗಳನ್ನು ನಿಷ್ಠೆಯಿಂದ ಪಾಲಿಸುತ್ತಾ, ದಾನ, ಪೂಜೆ, ಶೀಲೋಪಾಸಗಳಲ್ಲಿ ತಮ್ಮ ಹೆಚ್ಚಿನ ಸಮಯವನ್ನು ಕಳೆಯುತ್ತಿದ್ದರು. ಇಷ್ಟೇ ಅಲ್ಲದೆ ತಮ್ಮ ಮನೆಗೆ ಬಂದ ಎಲ್ಲ ಅತಿಥಿಗನ್ನು ಗೌರವಾದರಗಳಿಂದ ಸತ್ಕರಿಸಿದ್ದರು. ಈ ದಂಪತಿಗಳ ಸಾತ್ವಿಕ ಬದುಕನ್ನು ಕಂಡ ಧರ್ಮ ದೇವತೆಗಳೇ ಪ್ರಭಾವಿತರಾಗಿರಬೇಕು. ಒಂದು ದಿನ ಈ ದೇವತೆಗಳು ಲೋಕ ಸಂಚಾರ ಕೈಗೊಂಡು ಸಾತ್ವಿಕ ಕುಟುಂಬದೊಡನೆ ನೆಲೆಸಿ, ಸತ್ಯ, ಧರ್ಮವನ್ನು ಎತ್ತಿ ಹಿಡಿಯಬೇಕೆಂಬ ಸದುದ್ದೇಶದಿಂದ ಅಂತಹ ಪುಣ್ಯಕ್ಷೇತ್ರವನ್ನು ಹುಡುಕುತ್ತಾ ಹೊರಟಾಗ ಈ ಐತಿಹಾಸಿಕ ನೆಲ್ಯಾಡಿ ಬೀಡು ಆ ಧರ್ಮದೇವತೆಗಳ ಗಮನ ಸೆಳೆಯಿತು.

ಈ ಕುಡುಮವು ದಟ್ಟವಾದ ಕಾಡುಗಳಿಂದ ಸುತ್ತುವರಿಯಲ್ಪಟ್ಟ ಹಳ್ಳಿಯಾಗಿತ್ತು. ಮನುಷ್ಯರಿಗಿಂತ ಕಾಡುಪ್ರಾಣಿಗಳು, ಮನೆಗಳಿಗಿಂತ ಹೆಚ್ಚು ಮರಗಳು ಇದ್ದವು. ಬಾಹ್ಯಪ್ರಪಂಚದಿಂದ ಅಜ್ಞಾತವಾಗಿದ್ದ ಪರಿಸರ ದೇವತೆಗಳು ಇಲ್ಲಿಗೆ ಬಂದಾಗ ಅವರಿಗೆ ಸಾತ್ವಿಕ ಅನುಭವಗಳಾದವು. ಕ್ರೂರ ಮತ್ತು ಸಾತ್ವಿಕ ಪ್ರಾಣಿಗಳು ಸ್ನೇಹಪೂರ್ವಕ ಮತ್ತು ಸಂಯಮದಿಂದ ವರ್ತಿಸುತ್ತಿದ್ದವು. ಇಲ್ಲಿ ಸುಖ, ಶಾಂತಿ, ಸುಭಿಕ್ಷೆ ತುಂಬಿತ್ತು. ಮಾನವರೂಪ ಧರಿಸಿದ ನೆಲ್ಯಾಡಿ ಬೀಡಿಗೆ ಬಂದಾಗ ಈ ಹೆಗಡೆ ದಂಪತಿಗಳು ಆತಿಥ್ಯಾದರಗಳಿಂದ ಸತ್ಕರಿಸಿ ಅವರನ್ನು ತ್ರಿಕರ್ಣಪೂರ್ವಕವಾಗಿ ಶ್ರದ್ಧೆ ಭಕ್ತಿಯಿಂದ ಹಣ್ಣುಹಂಪಲುಗಳನ್ನು ನೀಡಿ ಆರಾಧಿಸಿದರು. ಇದರಿಂದ ಸಂತುಷ್ಟರಾದ ಧರ್ಮದೇವತೆಗಳು ತಾವು ಇಲ್ಲಿಯೇ ನೆಲಸುವುದಾಗಿ ನಿರ್ಧರಿಸಿ ತಿಳಿಸಿದರು. ದೇವತೆಗಳ

ವಾಸಕ್ಕೆ ಸ್ವಂತ ಮನೆಯನ್ನು ಧಾರೆಯೆರೆದುಕೊಟ್ಟು ಈ ದಂಪತಿಗಳು ಸತ್ವಪರೀಕ್ಷೆಯಲ್ಲಿ ಮೊದಲ ಗೆಲುವು ಸಾಧಿಸಿ ಯಶಸ್ವಿಯಾದ್ದರಿಂದ ನೆಲ್ಯಾಡಿ ಬೀಡು ದೈವಗಳ ಸ್ಥಾನವಾಯಿತು. ಈ ದೇವತೆಗಳನ್ನೇ ದೀಪ, ಧೂಪಗಳಿಂದ ಆರಾಧಿಸುತ್ತ ಈ ದಂಪತಿಗಳು ಜೀವನ ನೂಕಿದರು.

ಒಂದು ದಿನ ಇದ್ದಕ್ಕಿದ್ದಂತೆ ಈ ದೇವತೆಗಳು, ಈ ಹೆಗ್ಗಡೆ ದಂಪತಿಗಳಿಗೆ ಕನಸಿನಲ್ಲಿ ಕಂಡು, ತಾವು ನಾಲ್ವರು ಶಕ್ತಿಶಾಲಿಗಳಾದ ಕಾಳರಾಹು, ಕಾಳರ್ಕಾಯಿ, ಕುಮಾರಸ್ವಾಮಿ, ಕನ್ಯಾಕುಮಾರಿಯರೆಂಬ ದೈವಗಳೆಂದೂ, ತಮಗೆ ಪ್ರತ್ಯೇಕ ದೇವಸ್ಥಾನಗಳನ್ನು ಕಟ್ಟಿಸಿ ಪೂಜಿಸಬೇಕೆಂದು, ಕಾಲಕಾಲಕ್ಕೆ ಪರ್ವ, ನಡಾವಳಿಗಳನ್ನು ನಡೆಸಿಕೊಂಡು ಬರಬೇಕೆಂದು ಸೂಚಿಸಿದರು. ಅದರಂತೆ ಪ್ರತ್ಯೇಕ ದೇವಾಲಯಗಳನ್ನು ನಿರ್ಮಿಸಿ ಧರ್ಮಕ್ಕೆ ಲೋಪವಿಲ್ಲದಂತೆ ಕಾಲಕಾಲಕ್ಕೆ ಉತ್ಸವಗಳನ್ನು ನಡೆಸುತ್ತಾ ಬಂದರು. ಮುಂದೆ ಇದರ ವ್ಯವಸ್ಥೆಗಾಗಿ ಬ್ರಾಹ್ಮಣರನ್ನು ಕರೆಯಿಸಿ ಕೇಳಲು, ದೈವಗಳನ್ನು ಆರಾಧಿಸುವ ಈ ಸ್ಥಳದಲ್ಲಿ ದೇವಮೂರ್ತಿಯೊಂದನ್ನು ಸ್ಥಾಪಿಸಬೇಕೆಂದು ಸಲಹೆ ನೀಡಿದರು. ಈ ವಿಚಾರವಾಗಿ ಬರ್ಮಣ್ಣ ದಂಪತಿಗಳು ಚಿಂತಿಸುತ್ತಿರುವಾಗ, ಅಣ್ಣಪ್ಪನನ್ನು ಮಂಗಳೂರಿನ ಕದಿರೆಯೆಂಬಲ್ಲಿಗೆ ಕಳುಹಿಸಿ ಅಲ್ಲಿ ಕಾಶಿಯಿಂದ ತಂದಿದ್ದ ಶಿವಲಿಂಗವನ್ನು ತೆಗೆದುಕೊಂಡು ಬರುವಂತೆ ಆಜ್ಞಾಪಿಸಿದರು. ಅಣ್ಣಪ್ಪ ಸ್ವಾಮಿಯು ಕದಿರೆಯಿಂದ 'ಮಂಜುನಾಥ'ನ ಲಿಂಗವನ್ನು ತಂದು ಈಗ ದೇವಾಲಯವಿರುವ ಸ್ಥಳದಲ್ಲಿ ಪ್ರತಿಷ್ಠಾಪಿಸಿದರು. ಅಲ್ಲಿಯೇ ಆ ಮೂರ್ತಿಗೆ ತಕ್ಕುದಾದ ದೇವಾಲಯವನ್ನು ನಿರ್ಮಿಸಿದರು. ಇದರ ಪಕ್ಕದಲ್ಲಿ ಕನ್ಯಾಕುಮಾರಿಯಾದಿಯಾಗಿ ಇತರೆ ದೇವಾಲಯಗಳನ್ನು ಕಟ್ಟಿಸಿ ಪ್ರತಿದಿನವೂ ಪೂಜಾವಿಧಾನಗಳನ್ನು ನೆರವೇರಿಸುತ್ತಾ ಬಂದರು. ಹೀಗೆ ಚಂದ್ರನಾಥ ಸ್ವಾಮಿಯ ಆರಾಧಕರಾದ ಬರ್ಮಣ್ಣ ಹೆಗ್ಗಡೆ ದಂಪತಿಗಳು ನೆಲ್ಯಾಡಿ ಬೀಡಿಗೆ, ಧರ್ಮ ದೇವತೆಗಳು, ಮಂಜುನಾಥಸ್ವಾಮಿ ಬಂದು ನೆಲೆಸುವಂತಾಯಿತು. ಇದೆಲ್ಲವು ನಡೆದದ್ದು ಶ್ರೀಚಂದ್ರನಾಥ ಸ್ವಾಮಿಯ ಅನುಗ್ರಹದಿಂದಲೇ ಎಂಬುದು ಇಲ್ಲಿನ ಜನರ ನಂಬಿಕೆಯಾಗಿದೆ. ಹೀಗೆ ನೆಲ್ಯಾಡಿ ಬೀಡು ಶ್ರೀಮಂಜುನಾಥನ ಧರ್ಮಸ್ಥಳವಾಗಿ ಹೆಸರನ್ನು ಪಡೆದುಕೊಂಡಿತು.

### ೫.೩.೧೮. ಅಗಳಿ

ಅಗಳಿಯು ಇಂದಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಶಿರಾ ತಾಲೂಕಿನಲ್ಲಿದೆ. ಇಲ್ಲಿ ಗಂಗರು, ನೊಳಂಬರು ನಿಡುಗಲ್ಲು, ಚೋಳ, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳ, ವಿಜಯನಗರ ಅರಸರು, ಹೈದರಾಲಿ, ಟಿಪ್ಪು, ಮರಾಠರು, ಮೈಸೂರು ಒಡೆಯರು ಮೊದಲಾದ ಪಾಳೇಪಟ್ಟುಗಳ ಆಳ್ವಿಕೆಯ ಕುರುಹಾಗಿ ದೇವಾಲಯ, ಕೋಟೆ ಕೊತ್ತಲ, ಕೆರೆ ಕಾಲುವೆ ಮೊದಲಾದ ಸ್ಮಾರಕಗಳಿವೆ. ನಿಡುಗಲ್ಲು ಚೋಳರ ಕಾಲದಲ್ಲಿ ಕ್ರಿ.ಶ. ೧೨೬೦ರ ಶಕ ವರುಷದಲ್ಲಿ ಸುಬ್ಬಯ್ಯಶೆಟ್ಟಿ ಎಂಬುವವರು ಆದಿನಾಥ ತೀರ್ಥಂಕರರ ಬಸದಿಯ ಮುಂದಿರುವ ಮಾನಸ್ತಂಭ ನಿರ್ಮಿಸಿದ್ದರು ಈಗ ಬಿದ್ದು ಹೋಗಿ ಬಲಿಪೀಠ ಮಾತ್ರ ಇದೆ. ಬಸದಿಯ ಬಲ ಬದಿಯಲ್ಲಿ ಮೂರು ನಿಸಿಧಿ ಕಲ್ಲುಗಳಿದ್ದು ಇವು ಈ ಪ್ರದೇಶದಲ್ಲಿ ಮಹಿಳೆಯರೂ ಸಹ ಜೈನಧರ್ಮದಲ್ಲಿ ನಿಷ್ಠೆಯನ್ನೊಂದಿ ಸಲ್ಲೇಖನ ವ್ರತ ಕೈಗೊಂಡು ಆತ್ಮಬಲಿದಾನ ಕೈಗೊಂಡಿರುವುದನ್ನು ಉಲ್ಲೇಖಿಸುತ್ತವೆ. ಆದರೆ ಇಂದು ಕೇವಲ ಮೂರು ಜೈನ ಕುಟುಂಬಗಳು ಮಾತ್ರ

ಇದ್ದು ಅವರ ಆಚರಣೆಗಳಲ್ಲಿರುವ ಕಠಿಣತೆಯನ್ನು ಸಡಿಲಗೊಳಿಸಿ ಹಿಂದೂ ಆಚರಣೆಗಳೊಂದಿಗೆ ಸಮ್ಮಿಳಿತವಾಗಿವೆ. ಪ್ರಮುಖವಾಗಿ ಇವರು ಗೌರಿಹಬ್ಬ, ಹಿರಿಯರ ಹಬ್ಬ, ಯುಗಾದಿ, ಜಿನರಾತ್ರಿ(ಶಿವರಾತ್ರಿ) ನಾಗರ ಪಂಚಮಿ ಮೊದಲಾದ ಆಚರಣೆಗಳನ್ನು ಕೈಗೊಳ್ಳುತ್ತಾರೆ. ವಿಶೇಷವಾಗಿ ಕ್ಷೇತ್ರಪಾಲಿನಿಗೆ ಪೂಜೆ ಸಲ್ಲಿಸಿದ ನಂತರವೇ ಇವರು ಇತರ ದೇವರ(ಜಿನ ತೀರ್ಥಂಕರರ)ನ್ನು ಆರಾಧಿಸುತ್ತಾರೆ.

### ೫.೩.೧೯. ತೋವಿನ ಕೆರೆ

ತೋವಿನಕೆರೆಯು ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕು ಕೇಂದ್ರದಿಂದ ಸುಮಾರು ೧೮ ಕಿ.ಮೀ. ದೂರದಲ್ಲಿದೆ. ಸಿದ್ಧರ ಬೆಟ್ಟಗಳು ಪಶ್ಚಿಮ ದಿಕ್ಕಿನಲ್ಲಿವೆ. ಇದು ನೈಸರ್ಗಿಕ ಸೊಬಗಿನಿಂದ ಕೂಡಿದ ಸುಂದರ ಪ್ರದೇಶವಾಗಿದೆ. ಆದ್ದರಿಂದ ತೋವಿನಕೆರೆ ಎಂಬ ಹೆಸರು ಬಂತು.

ಇಲ್ಲಿ ಚಂದ್ರನಾಥ ತೀರ್ಥಂಕರರ ಬಸದಿಯಿದ್ದು ಜ್ವಾಲಾಮಾಲಿನಿ ಯಕ್ಷಿಣಿಯಾಗಿದ್ದಾಳೆ. ಹಿಂದೆ ಬಹಳ ಸಂಖ್ಯೆಯಲ್ಲಿದ್ದ ಜೈನ ಕುಟುಂಬಗಳು ಇಂದು ಉದ್ಯೋಗ ಅರಸುತ್ತಾ ಪಟ್ಟಣವನ್ನು ಸೇರಿದ್ದಾರೆ. ಇತ್ತೀಚೆಗೆ (೧೯೮೧-೮೨) ಬಸದಿಯನ್ನು ಜೀರ್ಣೋದ್ಧಾರ ಮಾಡಲಾಗಿದೆ.

### ೫.೪. ಧಾರ್ಮಿಕ ಆಚರಣೆಗಳು

ಆಚರಣೆಗಳು ಮಾನವನ ಜೀವನದ ಅವಿಭಾಜ್ಯ ಅಂಗಗಳಾಗಿ ಅವೇ ಬೆಳೆದು ಸಂಪ್ರದಾಯವಾಗಿ ಅಸ್ತಿತ್ವಕ್ಕೆ ಬರುತ್ತವೆ. ವೈಯಕ್ತಿಕವಾಗಿ ರೂಪುಗೊಳ್ಳುವ ಆಚರಣೆ ಸಾಮೂಹಿಕವಾದ ಮಹತ್ವಗಳೆನಿಸಿಕೊಳ್ಳುತ್ತವೆ. ಮನುಷ್ಯನ ನಂಬಿಕೆಗಳಿಗನುಗುಣವಾಗಿ ಪ್ರಕೃತಿಯೊಂದಿಗೆ ತನ್ನ ಸಮುದಾಯದೊಂದಿಗೆ ಬೆರೆತು ತನ್ನ ಸುಖ, ಸಂತೋಷ, ಸಂಭ್ರಮಗಳನ್ನು ಅಭಿವ್ಯಕ್ತಿಪಡಿಸುವ ಸಲುವಾಗಿ ಧಾರ್ಮಿಕ ವಿಧಿಕ್ರಿಯೆಗಳನ್ನು ರೂಢಿಸಿಕೊಂಡಿದ್ದರಿಂದ ಆಚರಣೆಗಳು ರೂಢಿಗತವಾಗಿ ಬೆಳೆದುಬಂದಿವೆ. "ತಲೆ ತಲಾಂತರದಿಂದ ಸಮುದಾಯದ ಅಂಗೀಕಾರವನ್ನು ಪಡೆದು ಬಳಕೆಯಲ್ಲಿರುವ ಧಾರ್ಮಿಕ ವಿಧಿಗಳೇ ಆಚರಣೆಗಳು."[೩೮] ಹೀಗೆ ಒಂದು ಮತಧರ್ಮದ ಆಚರಣೆಗಳು ತತ್ವಸಿದ್ಧಾಂತಗಳನ್ನು ಪರಂಪರಾಗತವಾಗಿ ತಮ್ಮ ಸಮುದಾಯಗಳಲ್ಲಿ ಬಿತ್ತುವ ಮತ್ತು ಅಳವಡಿಸಿಕೊಳ್ಳುತ್ತ ಬಂದಿರುವುದು ಕಾಣಬಹುದು. ಹೀಗೆ ಭಾರತದಲ್ಲಿ ಎಲ್ಲ ಮತ ಧರ್ಮಗಳು ಕೂಡ ತಮ್ಮ ತಮ್ಮ ಧರ್ಮದ ತತ್ವ ಮತ್ತು ಧಾರ್ಮಿಕ ವಿಧಿ ಕ್ರಿಯೆಗಳನ್ನು ತಮ್ಮ ಸಮುದಾಯಗಳ ಮೇಲೆ ಏರುತ್ತ ಬಂದಿದೆ. ಇಂತಹ ಅಂಶಗಳನ್ನು ಜೈನಧರ್ಮವು ತತ್ತ್ವವಿಚಾರಗಳು, ಧಾರ್ಮಿಕ ಆಚರಣೆಗಳನ್ನು ನಿರಂತರವಾಗಿ ನಡೆಸಿಕೊಂಡು ಬಂದಿದೆ.

ಜೈನಧರ್ಮದ ಬಹಳಷ್ಟು ಆಚರಣೆಗಳು ವೇದನಾಮೂಲಗಳಾಗಿವೆ. ವ್ರತಾಚರಣೆಗಳು, ಉಗ್ರ ಉಪಸರ್ಗಗಳನ್ನು ನಡೆಸುವ ದೃಢ ಮನಸ್ಸನ್ನು ಜೈನಧರ್ಮ ಅಪೇಕ್ಷಿಸುತ್ತದೆ. ಆದ್ದರಿಂದ ಜೈನರು ಧರ್ಮಾಚರಣೆಗೆ ಪ್ರಾಮುಖ್ಯತೆ ನೀಡಿದ್ದರು. ಅವರ ಜೀವನದಲ್ಲಿ ಸಂಸ್ಕಾರಗಳಿಗೆ ಹೆಚ್ಚಿನ ಆದ್ಯತೆಯಿತ್ತು. ಇಲ್ಲಿ ಸಂಸ್ಕಾರಗಳೆಂದರೆ ದೇಹ ಮತ್ತು ಮನಸ್ಸುಗಳ ಶುದ್ಧೀಕರಣ. ಮನುಷ್ಯ ತನ್ನ ಸ್ವಭಾವ ಸಹಜ ಗುಣದಿಂದಾಗಿ ಇಹದ ಆಮಿಷಗಳಿಗೆ ಬಲಿಯಾಗುತ್ತಾನೆ. ಭೋಗಾಕಾಂಕ್ಷಿಯಾದ ಅವನ ಮನಸ್ಸಿಗೆ ಸಂಸ್ಕಾರ

ನೀತಿಯೋಗದ ಮೂಲಕ ಅವನ ವ್ಯಕ್ತಿತ್ವವನ್ನು ಪರಿಪೂರ್ಣಗೊಳಿಸುವ ಶಕ್ತಿ ಧರ್ಮಕ್ಕುಂಟು ಎಂಬ ಭಾವನೆಯಿತ್ತು. ಮಾಂಸ ತಿಂದುದರಿಂದ ಜನಿಸಿ, ಮಲಿನವಾಗಿಯೇ ಬದುಕುವ ಮನುಷ್ಯನನ್ನು ಶುದ್ಧೀಕರಿಸಲು ಧಾರ್ಮಿಕ ಕ್ರಿಯೆಗಳು ಅಗತ್ಯವೆಂಬ ನಂಬಿಕೆ ಅವರಲ್ಲಿತ್ತು. ಅಂತಃಕರಣ ಚತುಷ್ಟಕಗಳಾದ ಮನಸ್ಸು, ಬುದ್ಧಿ, ಅಹಂಕಾರ, ಚಕ್ರಗಳ ಪರಿಷ್ಕರಣದಿಂದ ಆತ್ಮದ ಬಗ್ಗೆ ಅರಿವನ್ನುಂಟುಮಾಡಬಹುದು ಎಂದು ಭಾವಿಸಿದ್ದರು.

ಜೈನಹಾಡುಗಳಲ್ಲಿ ತಮ್ಮ ಧರ್ಮದ ಬಗ್ಗೆ ಒಂದು ನಿರ್ದಿಷ್ಟವಾದ ನಿಲುವನ್ನು ತಾಳಿರುವುದು ಕಂಡುಬರುತ್ತದೆ. ಧಾರ್ಮಿಕ ಅಂಶಗಳ ಬಗ್ಗೆ ಸ್ಪಷ್ಟವಾದ ಕಲ್ಪನೆಯನ್ನು ಅವರು ಹೊಂದಿದ್ದರು. ಮನುಷ್ಯನಾಗಿ ಜನಿಸಿದ ಎಲ್ಲರೂ ಧಾರ್ಮಿಕ ಆಚರಣೆಗಳಿಂದ ಪಾವನರಾಗಬಹುದೆಂಬ ಬಲವಾದ ನಂಬಿಕೆ ಅವರದು. ಪ್ರತಿಯೊಬ್ಬನೂ ಜೈನಧರ್ಮದ ಪರಿಮಿತಿ ಒಳಗೆ ಧರ್ಮಾಚರಣೆ ಮಾಡಬೇಕೆಂಬುದರ ಬಗ್ಗೆ ಅವರ ಗಮನವಿತ್ತೇ ಹೊರತು ಧರ್ಮಬಾಹಿರನನ್ನಾಗಿ ಮಾಡಬೇಕೆಂಬುದರ ಕಡೆಗಲ್ಲ. ಅದರಿಂದಲೇ ಪ್ರಾಚೀನ ಕಾಲದಿಂದಲೂ ಧಾರ್ಮಿಕ ವಿಧಿ-ವಿಧಾನಗಳನ್ನು ಕುರಿತು ಹಲವಾರು ಗ್ರಂಥಗಳು ರಚಿಸಿರುವುದು ಕಂಡುಬರುತ್ತದೆ. ಉದಾರಹಣೆಗೆ ರತ್ನಾಕರ ಶ್ರಾವಣಚಾರ ಅನೇಕ ನೋಂಪಿಯ ಕಥೆಗಳು, ವಡ್ಡಾರಾಧನೆಯ ಕಥೆಗಳು ಮತ್ತು ಕಾವ್ಯಗಳು ಜೈನಧರ್ಮದ ಧಾರ್ಮಿಕ ವಿಧಿ-ವಿಧಾನಗಳನ್ನು ಪ್ರಸ್ತಾಪಿಸುತ್ತ ಬಂದಿವೆ. 'ಜೈನದರ್ಶನದ ಪ್ರಕಾರ' ಜೀವ ಮನುಷ್ಯ, ದೇವ, ನಾರಕಿ ಮತ್ತು ತಿರ್ಯಕ್ ಎಂಬ ನಾಲ್ಕು ಗತಿಗಳಲ್ಲಿ ಸುತ್ತುತ್ತವೆ. ತನ್ನ ಕರ್ಮಕ್ಕೆ ತಕ್ಕಂತೆ ಈ ಗತಿಗಳು ಲಭಿಸುತ್ತವೆ. ಆತ್ಮವನ್ನು ಧರಿಸಿದ ಜೀವ ತನ್ನ ಕ್ರಿಯೆಯಿಂದ ಕರ್ಮವನ್ನು ಮಾಡುತ್ತದೆ. ಜೀವ ಮಾಡುವ ಕರ್ಮ ಆತ್ಮವನ್ನು ಸುತ್ತುತ್ತದೆ. ಯಾವುದೇ ಒಂದು ಹುಟ್ಟಿನಲ್ಲಿ ಮನುಷ್ಯ ಜನ್ಮ ತಾಳುವ ಜೀವ ಹುಟ್ಟಿನಲ್ಲಿ ಪುಣ್ಯ ಸಂಪಾದನೆ ಮಾಡಬೇಕು. ಪಾಪ ಕರ್ಮವನ್ನು ಕ್ಷಮಿಸಬೇಕು. ಈ ಕ್ರಿಯೆಗಳಿಂದ ಜೀವ ಹುಟ್ಟು-ಸಾವುಗಳಿಂದ ಮುಕ್ತವಾಗುತ್ತದೆ. ಬಂಧನದಿಂದ ಮುಕ್ತಿ ಪಡೆಯುವುದೇ ಮನುಷ್ಯ ಜೀವನದ ಗುರಿಯಾಗಬೇಕು. ಇಂತಹ ಮಹತ್ವವಾದ ಅಂಶಗಳನ್ನು ಎಲ್ಲ ಜೈನಧರ್ಮೀಯರು ನಿಯಮಗಳನ್ನು ಪಾಲಿಸಿ ಜೀವನ ಪಾವನ ಮಾಡಿಕೊಳ್ಳಬೇಕೆಂಬುದು ಅವರ ಉದ್ದೇಶವಾಗಿದೆ. ಇಂತಹ ಅಂಶಗಳು ಜೈನ ಮಾರ್ಗಕಾವ್ಯಗಳಲ್ಲಿ ಮತ್ತು ಕೆಲವು ಜೈನಹಾಡುಗಳಲ್ಲಿ ವ್ಯಕ್ತವಾಗಿರುವುದನ್ನು ನೋಡಬಹುದು.

"ಅಣುವ್ರತಗಳೈದು ಶಿಕ್ಷಾವ್ರತಗಳು ನಾಲ್ಕು
ಗುಣವ್ರತಗಳು ಮೂರು ಈ ಹನ್ನೆರಡರ
ಗುಣ ಸ್ವರೂಪವನಾಂತು ಅತಿಚಾರಗಳ ಕಳೆದು
ಗಣಿತದಲಿ ಎರಡನೆ ಜೈನನೆಂದು ತಿಳಿದು"||[೩೯]

ಈ ಮೇಲಿನ ಹಾಡು ಜೈನಧರ್ಮದಲ್ಲಿ ಪಂಚಾಣುವ್ರತಗಳ ಮಹತ್ವವನ್ನು ಹೇಳುತ್ತದೆ. ಪ್ರತಿಯೊಬ್ಬ ಜೈನಧರ್ಮೀಯರು ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯೆ, ಅಸಂಗ್ರಹ ಎಂಬ ಪಂಚಾಣುವ್ರತಗಳನ್ನು ಅನುಸರಿಸಿ ಜೀವನವನ್ನು ಶ್ರೇಷ್ಠಗೊಳಿಸಿಕೊಳ್ಳಬೇಕು ಎಂಬುದನ್ನು ಹೇಳುತ್ತದೆ.

ಪುಣ್ಯ ಪಡೆಯುವುದಕ್ಕೆ 'ಹೃಣವಿ ನೋಂಪಿ' ಬೆಳಗಬೇಕು, ಸಿದ್ಧಶಾಸ್ತ್ರ ಓದಬೇಕು, ಅಹಿಂಸೆಯಿಂದ ಸಾಗಬೇಕು, ಸತ್ಯಾಸತ್ಯತೆಯನ್ನು ತಿಳಿದು ನುಡಿಯಬೇಕು ಎಂದು ಪಂಚಾಣುವ್ರತಗಳ ಪಾಲನೆಯ

ಅನಿವಾರ್ಯತೆಯನ್ನು ಸಾರಲಾಗಿದೆ. ಜೈನ ಸಾಹಿತ್ಯದಲ್ಲಿ ಯಾರು ವ್ರತಗಳನ್ನು ಆಚರಿಸುತ್ತಾರೋ ಅವರು ಶೀಲವಂತರಾಗುತ್ತಾರೆ. ಆದ್ದರಿಂದಲೇ 'ಮಹಾಪುರಾಣದಲ್ಲಿ' "ವ್ರತಾನುಚಾಲನಂ ಶೀಲಂ" ಎಂಬ ಮಾತನ್ನು ಒತ್ತಿ ಹೇಳಲಾಗಿದೆ. ವ್ರತದ ಲಾಭವೆ ಲಾಭ. 'ಲಾಭ ಜಪವೆತಪ' ಪಂಚವ್ರತವನು ಕೈಕೊಂಡು ಸುರನಾಥನರು ವ್ರತದ ಮಹಿಮೆಯೆಂದು ಮುಂಡ ವ್ರತ ಭೂಮಂಡಲದೊಳತಿ ಮಾನ್ಯ ಉದ್ದಿಪ್ಪ ಜೈನನೆಂದೂ ತಿಳಿದು ಮೊದಲಾಗಿ ಈ ವ್ರತಗಳನ್ನು ಜೈನನಾದವನು ಪಾಲಿಸಬೇಕೆಂದು ಸೂಚಿಸಲಾಗಿದೆ. ದಿನಗಳು ಬದಲಾದಂತೆ ಆಚರಣೆಗಳು ದೂರ ಸರಿಯುತ್ತಿವೆ. ನಿಯಮಗಳು ಸಡಿಲಗೊಳ್ಳುತ್ತಿವೆ. ಆ ಕಾರಣದಿಂದ ಜೈನಹಾಡುಗಳು ಆಚರಣೆಗಳನ್ನು ಪಾಲಿಸಲು ಪ್ರೇರಿಸುತ್ತಿವೆ. ಜೈನನಾದವನು ಪಾಲಿಸಬೇಕಾದ ಧಾರ್ಮಿಕ ವಿಧಾನಗಳನ್ನು ಈ ಹಾಡಿನಲ್ಲಿ ಕಾಣಬಹುದು.

"ಜೈನರಾಗಿ ಹುಟ್ಟಿ ಬಂದ ಣಮೋಕಾರ ಮಂತ್ರ ಒಂದ
ಅನಬೇಕ ಬಸ್ತಿಗೆ ಬಂದ ಮನಾ ತೊಳದ ಮಾಡಬೇಕ ಜಳಕ
ಸಂದೇಹವಿಲ್ಲದ ದೊರಕುವುದು ಮೋಕ್ಷ||

ಪುಣ್ಯ ಪಡಿಯುವುದಕ್ಕಾ ಹುಣವಿ ನೋಂಪಿ ಬೆಳಗಬೇಕ
ಸಿದ್ಧಶಾಸ್ತ್ರ ಓದಬೇಕ ಅಹಿಂಸಾದಿಂದ ಸಾಗಬೇಕ
ಸತ್ಯಾಸತ್ಯೆ ತಿಳಿದು ನಡಿಯಬೇಕ||

ತೀರ್ಥ ಕ್ಷೇತ್ರ ನೋಡಬೇಕ ದಾನ-ಧರ್ಮ ಮಾಡಬೇಕ
ಪುಣ್ಯೇದ ಗಂಟ ಕಟ್ಟಬೇಕ ಮಾಡಿ ಇಟ್ಟಾಂಗ ಸ್ವಾಕ
ದೊರಕೇತ ಮುಂದೀನ ಜನ್ಮಕ||"[೮೦]

ಈ ಮೇಲಿನ ಹಾಡು ಜೈನರಲ್ಲಿ ಪ್ರಧಾನ ಪವಿತ್ರ ಮಂತ್ರವಾಗಿದೆ. 'ಣಮೋಕಾರರು' ಅಂದರೆ ಅರಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು. ಲೋಕದಲ್ಲಿರುವ ಎಲ್ಲ ಸಾಧುಗಳು ಜೈನಧರ್ಮ ದಲ್ಲಿ ಆತ್ಮೋನ್ನತಿಯಲ್ಲಿ ಗಮನಾರ್ಹವಾದ ಐದು ಹಂತಗಳಿಗೆ ಬಂದು ಎಲ್ಲರೂ ವಂದಿಸಬೇಕು. ಆ ಮೂಲಕ ಮನುಸ್ಸನ್ನು ಸ್ವಚ್ಛ ಮಾಡಿಕೊಂಡು ಧನ್ಯರಾಗಬೇಕೆಂದಿದೆ. ಅದ್ದರಿಂದ ಪುಣ್ಯವನ್ನು ಸಂಪಾದಿಸಲಿಕ್ಕೆ ಬೇಕಾದ ಅಂಶಗಳನ್ನು ಈ ಮೇಲಿನ ಹಾಡುಗಳಲ್ಲಿ ಸೂಚಿಸಲಾಗಿದೆ. ನೋಂಪಿಯ ವ್ರತಗಳನ್ನು ಆಚರಿಸಬೇಕು. ಇಂತಹ ನೋಂಪಿ ಆಚರಣೆಗಳನ್ನು ಪ್ರಾಚೀನ ಕಾಲದಿಂದಲೂ ಜೈನರು ಪ್ರಸ್ತಾಪಿಸುತ್ತ ಮತ್ತು ಆಚರಿಸುತ್ತ ಬಂದಿರುವುದಕ್ಕೆ ಹಲವಾರು ಕಾವ್ಯ, ಕಥೆಗಳಲ್ಲಿ ಉಲ್ಲೇಖಗಳಿರುವುದು ಕಂಡುಬರುತ್ತದೆ. ಅದನ್ನೇ ಜೈನಹಾಡು ಗಳಲ್ಲಿ ನೋಂಪಿಗಳ ಮಹತ್ವದ ಬಗ್ಗೆ ಪ್ರಸ್ತಾಪಿಸುತ್ತಾರೆ. ಇದರ ಜೊತೆಗೆ ಸಿದ್ಧಶಾಸ್ತ್ರ ಓದಬೇಕೆಂಬ ನಿಯಮವಿದೆ. ಜೈನನಾದವನು ಅಹಿಂಸೆಯನ್ನು ತನ್ನ ಧ್ಯೇಯವನ್ನಾಗಿ ಮಾಡಿಕೊಂಡು ಸತ್ಯವಂತನಾಗಿ ಬಾಳಬೇಕೆಂಬುದನ್ನು ಹೇಳುತ್ತದೆ. ಒಮ್ಮೆಯಾದರೂ ಜೀವನದಲ್ಲಿ ತೀರ್ಥಯಾತ್ರೆಯನ್ನು ಮಾಡಬೇಕು ಎಂಬ ನಿಯಮವಿದೆ. ಹಾಗೆಯೇ ದಾನಧರ್ಮವನ್ನು ಮಾಡಿ ಜೀವನವನ್ನು ಪಾವನಗೊಳಿಸಿಕೊಳ್ಳಬೇಕೆಂಬ ತತ್ವ ಈ ಹಾಡಿನಲ್ಲಿರುವುದು ಕಂಡು ಬರುತ್ತದೆ.

ಜೈನರ ಪ್ರಕಾರ ಮನುಷ್ಯ ಜೀವನದಲ್ಲಿ ಎರಡು ಘಟ್ಟಗಳಿರುತ್ತವೆ. ಸಾಂಸಾರಿಕ ಬಂಧನಕ್ಕೊಳಗಾಗಿ ಸಾಮಾಜಿಕ ಜೀವನದಲ್ಲಿ ತೊಡಗುವುದು ಮೊದಲ ಘಟ್ಟ. ಇವನನ್ನು ಶ್ರಾವಕನೆಂದು ಕರೆಯಲಾಗುತ್ತದೆ. ಶ್ರಾವಕನಾದವನು ಪಂಚಾಣುವ್ರತಗಳನ್ನು ತಪ್ಪದೇ ಆಚರಿಸಬೇಕು. ಈ ಬಗೆಯ ಆಚರಣೆಯಿಂದ ಪಕ್ವಗೊಂಡ ಮೇಲೆ ಸಾಮಾಜಿಕ ಜೀವನವನ್ನು ತ್ಯಜಿಸಿ ತಪಸ್ಸನ್ನು ಆಚರಿಸಬೇಕು. ಇವರನ್ನು ಮುನಿಯೆಂದು(ಯತಿ) ಕರೆಯಲಾಗುತ್ತದೆ. ಆತ್ಮಕಲ್ಯಾಣ ಸಾಧಿಸಿ ಪರಿನಿಷ್ಕ್ರಮಣ ಹೊಂದಿ ಅನುಭವಿಯಾದ ಮೇಲೆ ವ್ಯಕ್ತಿ ಪರಿಪೂರ್ಣನಾಗುತ್ತಾನೆ. ಆತ್ಮಶುದ್ಧಿಗಾಗಿ ಪಂಚಾಣುವ್ರತಗಳನ್ನು ಹೇಳಲಾಗಿದ್ದು, ಅಹಿಂಸೆಗೆ ಹೆಚ್ಚು ಪ್ರಾಧಾನ್ಯತೆ ನೀಡಲಾಗಿದೆ. ಉಳಿದ ವ್ರತಗಳು ಅಹಿಂಸೆಗೆ ಪೂರಕವಾಗಿ ಬರುತ್ತವೆ.

### ೫.೪.೧. ಪಂಚಾಣು ವ್ರತಗಳು

#### ೧. ಅಹಿಂಸಾ ವ್ರತ

ಅಹಿಂಸೆ ಜೈನಧರ್ಮದ ಪ್ರಾಣ. ಆದ್ದರಿಂದಲೇ "ಅಹಿಂಸಾಪರಮೋಧರ್ಮಃ" ಎಂಬುದು ಜೈನಧರ್ಮದ ಧ್ಯೇಯ ವಾಕ್ಯವಾಗಿದೆ. ಇಲ್ಲಿ ಅಹಿಂಸೆಯೆಂದರೆ ಕೇವಲ ಜೀವವಧೆಯಲ್ಲ. ಜೈನ ದರ್ಶನದಲ್ಲಿ ಅಹಿಂಸೆಯ ವ್ಯಾಪ್ತಿ ಬಹಳ ವಿಸ್ತಾರವಾದದು. ಸಾಮಾಜಿಕ ಜೀವನದಲ್ಲಿರುವ ರಾಗ, ದ್ವೇಷ, ಅಸೂಯೆ, ಮೊದಲಾದ ಭಾವನೆಗಳು ಹುಟ್ಟಿ ಹಿಂಸೆಗೆ ಮೂಲವಾಗುತ್ತಾನೆ. ಅವನ ನಿರ್ಮಲವಾದ ಮನಸ್ಸು ಕೆಟ್ಟು ಹಿಂಸಾಕ್ರಿಯೆಗೆ ಪ್ರಚೋದನೆ ದೊರೆಯುತ್ತದೆ. ಈ ಮನೋಭಾವವೇ ಅವನನ್ನು ನಾಶದತ್ತ ಕೊಂಡೊಯ್ಯುತ್ತದೆ. ಆದರಿಂದ ಜೈನಧರ್ಮೀಯರು ಅಹಿಂಸೆಯನ್ನು ಒಂದು ವ್ರತದ ರೂಪದಲ್ಲಿ ಆಚರಿಸುತ್ತಾರೆ. ಆ ಕಾರಣದಿಂದಲೇ ಜೈನಧರ್ಮ ಹಿಂಸೆಯ ಸ್ವರೂಪವನ್ನು ಅತ್ಯಂತ ಸೂಕ್ಷ್ಮವಾಗಿ ವಿಶ್ಲೇಷಣೆಗೆ ಒಳಪಡಿಸಿದೆ. ಜನ್ನ ತನ್ನ ಯಶೋಧರ ಚರಿತ್ರೆಯಲ್ಲಿ ಅಹಿಂಸಾವಾದವನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಹಿಂಸೆಯನ್ನು ಸ್ಥೂಲವಾಗಿ ಆರಂಭ ಹಿಂಸೆ, ಉದ್ಯೋಗ ಹಿಂಸೆ, ವಿರೋಧಿ ಹಿಂಸೆ, ಸಂಕಲ್ಪ ಹಿಂಸೆ ಎಂದು ನಾಲ್ಕು ವಿಧಗಳಾಗಿ ವಿಂಗಡಿಸಲಾಗಿದೆ.

**ಆರಂಭ ಹಿಂಸೆ:** ಸಾಮಾಜಿಕ ಜೀವನದಲ್ಲಿ ತೊಡಗಿರುವ ಮನುಷ್ಯ ತಪಕಾಲ ಯಾವುದಾದರೊಂದು ಕ್ರಿಯೆಯಲ್ಲಿ ತೊಡಗಿರುತ್ತಾನೆ. ದೈನಂದಿನ ಕೆಲಸಗಳಲ್ಲಿ ನಿರತನಾಗಿರುವಾಗ ತನ್ನ ಗಮನಕ್ಕೆ ಬಾರದೆ ಕೆಲವು ಹಿಂಸೆಗಳು ಘಟಿಸುತ್ತವೆ. ನಡೆಯುವಾಗ, ಊಟ ಮಾಡುವಾಗ, ಆಹಾರಕ್ಕಾಗಿ ಹಂಬಲಿಸುವಾಗ ಉಂಟಾಗುವ ಹಿಂಸೆಯನ್ನು ಆರಂಭ ಹಿಂಸೆ ಎನ್ನುತ್ತಾರೆ.

**ಉದ್ಯೋಗ ಹಿಂಸೆ :** ಜೀವನ ನಿರ್ವಹಣೆಗಾಗಿ ಉದ್ಯೋಗ ಮಾಡುವಾಗ, ಅನಿವಾರ್ಯವಾಗಿ ಕೆಲವು ಸಂದರ್ಭದಲ್ಲಿ ಹಿಂಸೆ ಸಂಭವಿಸುತ್ತದೆ. ವ್ಯವಸಾಯಗಾರರು, ಚಾಲಕರು, ಕಾರ್ಮಿಕರು ಮೊದಲಾದ ಶ್ರಮ ಜೀವಿಗಳು ತಮ್ಮ ಕೆಲಸಗಳಲ್ಲಿ ನಿರತವಾಗಿದ್ದಾಗ ಹಲವಾರು ಅಹಿತಕರ ಘಟನೆಗಳಿಂದಾಗಿ ಸಂಭವಿಸುವ ಹಿಂಸೆ ಉದ್ಯೋಗ ಹಿಂಸೆ.

**ವಿರೋಧಿ ಹಿಂಸೆ :** ಜನರು ತಮ್ಮ ಹಾಗೂ ದೇಶದ ಹಿತಾಸಕ್ತಿಗೋಸ್ಕರ ವಿರೋಧಿಗಳೊಂದಿಗೆ ಸೆಣಸಾಡ ಬೇಕಾಗುತ್ತದೆ. ರೈತ ತನ್ನ ಹೊಲ, ಮನೆ, ದವಸ, ಧಾನ್ಯಗಳ ರಕ್ಷಣೆಯನ್ನು, ರಾಜ ಪರಿವಾರದವರು

ದೇಶದ ರಕ್ಷಣೆಯನ್ನು, ವ್ಯಕ್ತಿ ತನ್ನ ಸಂಬಂಧಗಳ ರಕ್ಷಣೆಯನ್ನು ಮಾಡಬೇಕಾಗುತ್ತದೆ. ಈ ಸಂದರ್ಭದಲ್ಲಿ ಹಿಂಸೆ ಸಂಭವಿಸುತ್ತದೆ. ಇದನ್ನು ವಿರೋಧಿ ಹಿಂಸೆ ಎಂದು ಕರೆಯುತ್ತಾರೆ.

**ಸಂಕಲ್ಪ ಹಿಂಸೆ :** ಮೇಲಿನ ಮೂರು ಹಿಂಸೆಗಳು ಮಾಡಬೇಕೆಂಬ ಉದ್ದೇಶದಿಂದ ಕೂಡಿರುವುದಿಲ್ಲ. ಅವು ಆಕಸ್ಮಿಕವಾಗಿ ಸಂಭವಿಸುವಂತಹ ಹಿಂಸೆಗಳಾಗಿವೆ. ಆದರೆ ಸಂಕಲ್ಪ ಹಿಂಸೆಯನ್ನು ಉದ್ದೇಶ ಪೂರ್ವಕವಾಗಿಯೇ, ನಿಯೋಜಿತವಾಗಿ ಮಾಡಲಾಗುತ್ತದೆ. ಇಲ್ಲಿ ಹಿಂಸೆಯನ್ನು ಮಾಡಲೇಬೇಕೆಂಬ ತೀರ್ಮಾನ ವಿರುತ್ತದೆ. ಒತ್ತಾಯಪೂರ್ವಕವಾಗಿ ಘಟಿಸುವಂತಹದ್ದು. ಆದ್ದರಿಂದ ಇದು ಘೋರವಾದುದು. ಶ್ರಾವಕ ನಾದವನು ತನ್ನ ಜೀವನ ನಿರ್ವಹಣೆಗಾಗಿ ಉಳಿದ ಮೂರು ಹಿಂಸೆಗಳಲ್ಲದಿದ್ದರೂ. ಸಂಕಲ್ಪ ಹಿಂಸೆಯಿಂದ ಮಾತ್ರ ದೂರವಿರಬೇಕು. ಯತಿಯಾದವನು ಈ ನಾಲ್ಕು ಹಿಂಸೆಯನ್ನು ಮಾಡಬಾರದು. ಇಂತಹ ಅಹಿಂಸೆಯ ಮಹತ್ವವನ್ನು ಜೈನಹಾಡುಗಳಲ್ಲಿ ಒತ್ತಿ ಹೇಳಲಾಗಿದೆ.

"ಎಲ್ಲ ಶ್ರಾವಕೆಯಲ್ಲಾ ಮುನಿಜನ
ವೆಲ್ಲ ಭವ್ಯ ಸಮ್ಮೋಹಗಳೂ
ಕೊಲ್ಲದ ಜೀವದಯಾಪರ ಸಮೆಯಾದ
ಯೆಲ್ಲರು ತಮ್ಮರೆನಿಸಿತಾ ಹೊ||"[೮೧]

ಅಹಿಂಸೆಯನ್ನು ಎಲ್ಲ ಶ್ರಾವಕ-ಶ್ರಾವಕಿಯರು, ಮುನಿಗಳು ಪಾಲಿಸಬೇಕು. ಹಿಂಸೆಯನ್ನು ಮಾಡದೇ ಜೀವ ದಯಾಪರವಾದ ಗುಣವನ್ನು ಒಳಗೊಂಡಿರಬೇಕು. ಆಗ ಎಲ್ಲರೂ ತಮ್ಮವರು ಎನಿಸುತ್ತಾರೆ ಎಂಬ ಭಾವನೆ ಅಡಗಿರುತ್ತದೆ. ಮುಂದೆ ಹಿಂಸೆಯನ್ನು ಮಾಡಿದರೆ ಆಗುವ ಮಾನಸಿಕ ಯಾತನೆಯನ್ನು ಕುರಿತು ಈ ಹಾಡಿನಲ್ಲಿ ಕಟ್ಟಿಕೊಡಲಾಗಿದೆ.

"ಕೊಲೆ ಕರ್ಮರಾಜನೆಂದೆಂಬ ಲುಬ್ಧಕನ ಬಲೆ
ಕೊಲೆ ಘೋರ ದುರಿತ ದುಷ್ಟ ಮೃಗಗಳಿಪ್ಪ ಮಲೆ
ಕೊಲೆ ನೀಗೋದತ್ಯಂತ ಬಹುಘೋರ ನರಕ ನೆಲೆ
ಕೊಲೆಯನದಿರಿಂದ ನುಳಿಯೈ ಆತ್ಮಾ||"[೮೨]

ಈ ಹಾಡಿನಲ್ಲಿ ಕೊಲೆ ಎಂಬ ಹಿಂಸೆಯಿಂದಾಗುವ ತೊಳಲಾಟವನ್ನು ವ್ಯಕ್ತಪಡಿಸುತ್ತದೆ. ಹಿಂಸೆ ಮಾಡಿದವನು ಜೀವನಪೂರ್ತಿಯಾಗಿ ಹಿಂಸೆ ಎಂಬ ಬಲೆಯಲ್ಲಿ ಬಿದ್ದು ನರಳಬೇಕಾಗುತ್ತದೆ. ಹಿಂಸೆ ಮೃಗಗಳು ಇರುವ ಹಾಗೆ ನರಕವಿದ್ದಂತೆ. ಆದ್ದರಿಂದ ಹಿಂಸೆಯನ್ನು ತೊರೆದು ಅಹಿಂಸಾವಾದಿಯಾಗಿ ಜೀವಿಸು ಎಂಬ ಧ್ವನಿಯನ್ನು ಜೈನಧರ್ಮ ಒತ್ತಿ ಹೇಳುತ್ತದೆ.

**೨. ಸತ್ಯ**

ಪಂಚಾಣುವ್ರತಗಳಲ್ಲಿ ಅಹಿಂಸೆಯ ನಂತರದ ಸ್ಥಾನವನ್ನು ಸತ್ಯಕ್ಕೆ ನೀಡಲಾಗಿದೆ. ಎಂತಹ ಸಂದರ್ಭ ಬಂದರೂ ಸಹ ಸುಳ್ಳನ್ನು ಹೇಳದಿರುವುದು, ಸುಳ್ಳು ಹೇಳಲು ಬೇರೆಯವರನ್ನು ಪ್ರೇರೇಪಿಸದಿರುವುದು 'ಸತ್ಯಾನುವ್ರತ.' ತಾನು ಸತ್ಯವನ್ನು ನುಡಿದಾಗ ಬೇರೆಯವರಿಗೆ ತೊಂದರೆಯಾಗುತ್ತಿದ್ದಲ್ಲಿ ಮೌನ ವಹಿಸಬೇಕು.

ಇಲ್ಲದಿರುವುದನ್ನು ಇದ್ದಂತೆ ಸೃಷ್ಟಿಸಿ ಮಾತನಾಡಬಾರದು. ಪರರನ್ನು ನಿಂದಿಸುವುದು, ಗುಟ್ಟನ್ನು ರಟ್ಟು ಮಾಡುವುದು, ಪಿಶುಣದ ನುಡಿಗಳನ್ನಾಡುವುದು, ಕೆಟ್ಟದಾದ ಬರಹ ತನ್ನಲ್ಲಿಟ್ಟು ವಸ್ತುಗಳನ್ನು ಅಪಹರಿಸುವಂತಹ ಮಾತನ್ನಾಡುವುದು ಅಪ್ರಶಸ್ತವಾದ ಅಸತ್ಯಗಳಾಗಿವೆ. ಅಸತ್ಯ ತರುವ ಕೇಡನ್ನು ಊಹಿಸಲಾಗದು. ಆದ್ದರಿಂದ ಜೈನಧರ್ಮದಲ್ಲಿ ಸತ್ಯಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುತ್ತ ಬಂದಿರುವುದನ್ನು ಕಾಣಬಹುದು. ಅದ್ದರಿಂದ ಸತ್ಯವನ್ನು ಅನೇಕಾಂತವಾದ ದೃಷ್ಟಿಯಲ್ಲಿ ನೋಡುವುದು ಜೈನಧರ್ಮದ ಮತ್ತೊಂದು ವಿಶಿಷ್ಟತೆಯಾಗಿದೆ. ಸತ್ಯಕ್ಕೆ ಏಕಮುಖವಿಲ್ಲ. ಹಲವಾರು ಮುಖಗಳಿವೆ. ಆದ್ದರಿಂದ ಜೈನಧರ್ಮವು ಎಲ್ಲ ವಿಚಾರಗಳನ್ನು ಅನೇಕಾಂತವಾದದ ನೆಲೆಯಲ್ಲಿ ನೋಡುವುದು ವಿಶೇಷ. ಜೈನಹಾಡುಗಳಲ್ಲಿ ಸತ್ಯಾನುವ್ರತದ ಬಗ್ಗೆ ಪ್ರಸ್ತಾಪಿಸಿರುವುದನ್ನು ನೋಡಬಹುದು.

"ಸತ್ಯವೆಂಬ ತಾಯಿ ಮಾತ ಮೀರದಿರಯ್ಯ ಜಿನ
ಸ್ತುತ್ಯವೆಂಬ ತಂದೆಯೊಡನೆ ಕೂಡಿ ಬಾಳಯ್ಯ
ನಿತ್ಯ ಶಾಂತಿಯೆಂಬ ಸುದತಿಯೊಡನೆ ಸರಸವಾಡಯ್ಯ ಪ್ರೌಢ
ಪ್ರತ್ಯಕ್ಷ ಸುತನ ಪಡೆದು ಸುಖದಿ ನಿತ್ಯ ಬಾಳಯ್ಯ||"[೪೩]

ಈ ಹಾಡಿನಲ್ಲಿ ಸತ್ಯವನ್ನು ತಾಯಿಗೆ, ಜಿನಸ್ತುತಿಯನ್ನು ತಂದೆಗೆ, ಶಾಂತಿಯನ್ನು ಪತಿಗೆ, ಪ್ರೌಢತೆಯನ್ನು ಮಗನಿಗೆ ಹೋಲಿಸಲಾಗಿದೆ. ಸತ್ಯವೆಂಬ ತಾಯಿಯನ್ನು ಮೀರದೆ ನಡೆದರೆ ನಿತ್ಯ ಬದುಕಿನಲ್ಲಿ ಸುಖ, ಶಾಂತಿ, ನೆಮ್ಮದಿ ಪ್ರಾಪ್ತವಾಗುತ್ತದೆ.

ಸತ್ಯಗುಣವಿರಬೇಕು ಶ್ರಾವಕರಿಗೆ ಪಾಪಮಯ ಕಡಂಬಳದ ಜೈನನಲ್ಲ! ಎಂದು ಕೋಪತಾಪ ನೀಗಿ ಸತ್ಯವ್ರತ ಪಾಲನೆ ಮಾಡಿದಲ್ಲಿ ಭುವನದಲ್ಲಿ ಮಹಾವ್ರತನಾಗಬಹುದೆಂದು ಹೇಳಲಾಗಿದೆ. ಹಾಗೆಯೇ ಅಸತ್ಯ ನುಡಿಯುವುದರಿಂದ ಆಗುವ ತೊಂದರೆಯನ್ನು ಈ ಹಾಡಿನಲ್ಲಿ ವರ್ಣಿಸಲಾಗಿದೆ.

"ಪುಸಿ ತನ್ನ ಮುರಿದು ನುಂಗುವ ಮೃತ್ಯುದೇವಿಯಸಿ
ನಿಜೈಶ್ವರ್ಯ ಲಕ್ಷ್ಮೀ ಮುಖಾಂಬುಜಕೆ ಶಶಿ
ಪುಸಿಯು ಸುಜ್ಞಾನರಮನೆಗೆಡರಾದ ರಕ್ಕಸನೆ ಪುಸಿ
ಪುಸಿ ಪುಣ್ಯ ಮಾರ್ಗದಲಿ ನೆಟ್ಟ ಕಬ್ಬಿಣದರಸಿ
ಪುಸಿಯಲಾಗದದು ನಂಬಿಸಿ||"[೪೪]

ಸುಳ್ಳು ಎಂಬುದು ವ್ಯಕ್ತಿಯನ್ನು ಅಪಕೀರ್ತಿಗೆ ತಳ್ಳುವುದು. ಆದ್ದರಿಂದ ಸುಳ್ಳನ್ನು ಹೇಳುವುದರಿಂದ ಗಳಿಸಿದಂತಹ ಕೀರ್ತಿ ಗೌರವ ಎಲ್ಲವೂ ಹಾಳಾಗುತ್ತದೆ ಎಂಬುದನ್ನು ವರ್ಣನೆ ಮಾಡಿರುವುದನ್ನು ನಾವು ಇಲ್ಲಿ ನೋಡಬಹುದು.

**೩. ಅಸ್ತೇಯ**

ಜೈನಧರ್ಮದಲ್ಲಿ ಪಂಚಾಣುವ್ರತಗಳಲ್ಲಿ ಮುಖ್ಯವಾದದು. ರತ್ನಕರಂಡಕ ಶ್ರಾವಕಾಚಾರ ಎಂಬ ಕೃತಿಯಲ್ಲಿ ಆಚಾರ್ಯಾಣುವ್ರತದ ಲಕ್ಷಣವನ್ನು ಈ ರೀತಿ ವಿವರಿಸಿದೆ.

"ನಿಹಿತಂ ಪತಿತಂ ವಾ ಸುವಿಸ್ಮಲತಂ ವಾ ಪರಸ್ವಂ ಅವಿಸೃಷ್ಟಂ
ನ ಹರತಿಯನ್ನು ಚ ದತ್ತೇತದೃಶಚಾರ್ಯತ್ ಉಪಾದಮಣಂ"[೪೫]

ಇತರರು ಇಟ್ಟಂತಹ ಮಾರ್ಗದಲ್ಲಿ ಬಿದ್ದಂತಹ, ಯಾರಾದರೂ ಮರೆತು ಬಿಟ್ಟಂತಹ, ಅಥವಾ ಯಾರೂ ನಮಗೆ ಕೊಡದೇ ಇರುವಂತಹ ಪದ ವಸ್ತುಗಳನ್ನು ತಾನು ಅಪಹರಿಸದೇ ಇರುವುದು ಹಾಗೂ ಇನ್ನೊಬ್ಬರಿಗೆ ಕೊಡದೆ ಇರುವುದು ಸ್ಥೂಲಚಾರ್ಯದಿಂದ ವಿರಕ್ತನಾದಂತೆ ಇದೇ ಆಚಾರ್ಯಣುವ್ರತವಾಗಿದೆ. ಅಂದರೆ ಅನ್ಯರ ವಸ್ತುವಿನ ಮೇಲೆ ಆಸೆ ಪಡುವುದು, ಒತ್ತಾಯ ಪೂರ್ವಕವಾಗಿ ಪಡೆಯುವುದು, ಇಲ್ಲದೇ ಅಪಹರಿಸುವುದು, ಅನ್ಯರವಸ್ತುಗಳ ಮೇಲೆ ವ್ಯಾಮೋಹವನ್ನು ಬೆಳೆಸಿಕೊಳ್ಳದೇ ಆಸ್ತೇಯ ವ್ರತವನ್ನು ಪಾಲಿಸ ಬೇಕೆಂಬುದು ಜೈನಧರ್ಮದ ಧ್ಯೇಯವಾಗಿದೆ. ಇಂತಹ ಅಂಶಗಳನ್ನು ಜೈನಹಾಡುಗಳಲ್ಲಿ ಬಹಳ ದೀರ್ಘವಾಗಿ ಪ್ರಸ್ತಾಪಿಸಲಾಗಿದೆ.

"ಕಳವು ಕಡುದುಃಖದಾವಾಗ್ನಿಗೊಡ್ಡಿದ ವನವು
ಕಳವು ಸಂಸಾರ ಘೋರಾಂಬುರಾಶಿಯ ಸೆಳವು
ಖಳ ಕಳವು ಕಡುಪೊಲ್ಲಮೆಂದಾತ್ಮ ತತ್ವಗಳಿವು
ಕಳವನರಿಂದನುಳಿಯೈ ಆತ್ಮಾ||"[೪೬]

ಎಂದು ಹಾಡುಗಳಲ್ಲಿ ನಿದರ್ಶನದೊಂದಿಗೆ ಕಳವಿನಿಂದಾಗುವ ಹಾನಿಯನ್ನು ವರ್ಣಿಸಲಾಗಿದೆ. ಶ್ರಾವಕನಿಗೆ ನೀಡುವ ಗುಣವಿರಬೇಕೆ ಹೊರತು ಬೇಡುವ ಗುಣವಿರಬಾರದು. ಯಾವುದೇ ಕಾರಣದಿಂದ ಅಸ್ತೇಯ ವ್ರತಕ್ಕೆ ಭಂಗ ಭಾರದಂತೆ ನಡೆದುಕೊಳ್ಳಬಾರದು. ಇದೊಂದು ಸುವ್ಯವಸ್ಥಿತವಾದ ಸಮಾಜವನ್ನು ಕಟ್ಟಲು ಇಂತಹ ಆಚರಣೆಗಳು ಎಲ್ಲ ಮತಧರ್ಮಗಳಿಗೂ ತೀರ ಅವಶ್ಯವೆನಿಸುತ್ತದೆ.

### ೪. ಬ್ರಹ್ಮಚರ್ಯೆ

ಸಾಮಾನ್ಯವಾಗಿ ಸ್ತ್ರೀ ಭೋಗಾಪೇಕ್ಷೆಯಿಲ್ಲದೆ, ಕಾಮವಾಂಛೆ ವಿರೋಧಿತನ ತನ್ನ ಬ್ರಹ್ಮಚರ್ಯವೆಂದು ಕರೆಯಲಾಗುತ್ತದೆ. ಅಧ್ಯಾತ್ಮನಿಗೆ ಬ್ರಹ್ಮಚರ್ಯೆ ಕಟ್ಟುನಿಟ್ಟಿನ ಪಾಲನೆಯನ್ನು ಬೌದ್ಧರು ಪಾಲಿಸುತ್ತಾರೆ. ಹಾಗೆಯೇ ಹಿಂದೂಗಳು ನಾಲ್ಕು ಆಶ್ರಮಗಳಲ್ಲಿ ಬ್ರಹ್ಮಚರ್ಯಕ್ಕೆ ಮೊದಲಸ್ಥಾನವನ್ನು ನೀಡಿದ್ದಾರೆ. ಜೈನರಲ್ಲೂ ಇದೇ ಕಲ್ಪನೆಯಿದ್ದರೂ ಸ್ತ್ರೀ ಭೋಗವನ್ನು ನಿರಾಕರಿಸುವುದಿಲ್ಲ. ಅದು ಸತಿ ಪತಿಯರು ಆಗುವುದರ ಮೂಲಕ ಏಕಪತ್ನಿ ವ್ರತಸ್ಥನಾಗಬೇಕು. ಸ್ವಪತ್ನಿಯನ್ನು ಭೋಗಿಸುವುದು ಬ್ರಹ್ಮಚರ್ಯಾಣು ವ್ರತವಾಗುತ್ತದೆ. ಪತ್ನಿಯನ್ನು ಬಿಟ್ಟು ಅನ್ಯಸ್ತ್ರೀಯನ್ನಾಗಲಿ, ವೇಶ್ಯೆಯನ್ನಾಗಲಿ ಅಪೇಕ್ಷಿಸಬಾರದು. ಇದು ಅತ್ಯಂತ ಹೀನಾಯ ವಾದದು.

"ಪರದಾರದೊಳು ಸ್ನೇಹ ಪರಮ ಪಾಪದ ಗೇಹ
ಪರನಾರಿಯರ ಸಂಗ ಪರಮಾಯುಷ್ಯಕ್ಕೆ ಭಂಗ
ಪರಮಾತ್ಮವಿದನರಿತು ಪರವೆಳ್ಗಂಳಂ ತೊರೆದು
ಪರಿಶುದ್ಧವಾಗಿ ಬಾಳೈ ಆತ್ಮಾ||"[೪೭]

ಎನ್ನುವ ಮೂಲಕ ಪರಸತಿಯರ ಸಂಗ ಒಳ್ಳೆಯದಲ್ಲ. ಅದು ಪಾಪದ ಕೂಪ. ಆದ್ದರಿಂದ ಸರಿದಾರಿಯಲ್ಲಿ ನಡೆಯುವ ಮಾರ್ಗವನ್ನು ಈ ಹಾಡು ಸೂಚಿಸುತ್ತದೆ.

ಬ್ರಹ್ಮಚರ್ಯೆ ಪಾಲಿಸುವವನು ತನ್ನ ಸ್ತ್ರೀ ಸಂಗವನ್ನು ಮಾಡಬಹುದು ಎಂದಾಕ್ಷಣ ಅದೇ ದುರ್ವಿಚಾರ ದಲ್ಲಿ ತೊಡಗಬಾರದು. "ಬಳಸಿ ಬ್ರಹ್ಮಚಾರಿಯಾಗಬೇಕು, ಸಂಗದಲ್ಲಿದ್ದು ನಿಸ್ಸಂಗಿಯಾಗಿರಬೇಕು" ಎಂಬ ಜೈನಧರ್ಮದಲ್ಲಿ ಶ್ರಾವಕರಿಗೆ ನೀಡಿದ ಹೇಳಿಕೆಯಾಗಿದೆ.

"ಹೆಣ್ಣಿನೊಂದಿಗೆ ದೇಹ ಬೆರೆತರೂ ಮನುಷ್ಯ ಬ್ರಹ್ಮಧ್ಯಾನ್ಯದಲ್ಲಿ ತೊಡಗಬೇಕು. ಬ್ರಹ್ಮವೆಂದರೆ ತನ್ನಾತ್ಮನ ಹೆಸರು. ಬ್ರಹ್ಮದೊಳಗೆ ಮನ ಬೆರೆಸಿದರೆ ಬ್ರಹ್ಮಚರಿಯಂತ ಬ್ರಹ್ಮವ್ರತವದು ಎಂದು ಬ್ರಹ್ಮಚಾರಿಯು ಆತ್ಮಾನುಸಂಧಾನದಲ್ಲಿ ನಿರತನಾಗಲು ಹೇಳಿದೆ"೪೮

ಸ್ತ್ರೀಯಾಗಲಿ, ಪುರುಷರಾಗಲಿ ಅಶ್ಲೀಲತೆಯಿಂದ ನಡೆದುಕೊಳ್ಳಬಾರದೆಂದು ಹಿತವಚನ ಹೇಳಲಾಗಿದೆ. ಮುಂದೆ ಸಂನ್ಯಾಸವನ್ನು ಸ್ವೀಕರಿಸಿದ ಮೇಲೆ ಬ್ರಹ್ಮಚರ್ಯೆಯಲ್ಲಿ ಅತ್ಯಂತ ಕಠಿಣ ನಿಯಮಗಳಿವೆ. ಪರಸ್ತ್ರೀ ಜೊತೆಗಲ್ಲದೇ ಸಹಚರಿಗಳಾದ ಕಂತಿಯರೊಡನೆ ಮಾತನಾಡುವಂತಿಲ್ಲ.

**೫. ಅಪರಿಗ್ರಹ**

ಸ್ತ್ರೀ, ಧನ, ದ್ರವ್ಯ, ಆಸ್ತಿ, ಮೊದಲಾದ ಭೋಗ್ಯವಸ್ತುಗಳ ಮೇಲೆ ಅತಿಯಾದ ಮಮಕಾರವನ್ನು ಹೊಂದುವುದು ಪರಿಗ್ರಹ. ತನ್ನ ಇತಿಮಿತಿಯನ್ನು ಮೀರಿ ವಸ್ತುಗಳನ್ನು ಸಂಪಾದಿಸುವ ಆಸೆ ಆತನನ್ನು ಪರಿಗ್ರಹವುಳ್ಳವನನ್ನಾಗಿ ಮಾಡುತ್ತದೆ. ಅಗತ್ಯಕ್ಕನುಗುಣವಾಗಿ ವಸ್ತುಗಳನ್ನು ಮಿತಿಯಲ್ಲಿ ಬಯಸುವುದು, ಅತಿಯಾದ ಆಕಾಂಕ್ಷೆ ಇಲ್ಲದಿರುವುದೇ ಅಪರಿಗ್ರಹ. ಇದನ್ನೇ ಜೈನಧರ್ಮ ತನ್ನ ಧಾರ್ಮಿಕ ಆಚರಣೆಗಳಲ್ಲಿ ಒಂದು ವಿಧಿಯಂತೆ ಪಾಲಿಸುತ್ತ ಬಂದಿರುವುದನ್ನು ಕಾಣಬಹುದು. ಯಾವ ಮನುಷ್ಯನಾಗಲಿ ಅತಿಯಾದ ಆಸೆಯನ್ನು ಹೊಂದಿದರೆ ಅದು ಅವನ ದುಃಖಕ್ಕೆ ಮೂಲವಾಗುತ್ತದೆ. ಆದ್ದರಿಂದ ಪ್ರತಿಯೊಬ್ಬ ಮನುಷ್ಯ ಸಮಾಜಕ್ಕೆ ಸಹಕಾರಿಯಾಗಿ ಬದುಕಬೇಕೆಂಬ ಉನ್ನತವಾದ ಆದರ್ಶವನ್ನು ಹೇಳುತ್ತದೆ.

ಬೌದ್ಧಧರ್ಮವು "ಅತಿ ಆಸೆ ದುಃಖಕ್ಕೆ ಮೂಲ" ಎನ್ನುವ ಮೂಲಕ ಮನುಷ್ಯನನ್ನು ಎಚ್ಚರಿಸುತ್ತದೆ. ಆದರೆ ಜೈನಧರ್ಮವು ಮಾನವನ ಸಾರ್ವತ್ರಿಕ ಕಲ್ಯಾಣವನ್ನು ಬಯಸುತ್ತ ಬಂದಿರುವುದಕ್ಕೆ ಜೈನಧರ್ಮದ ತತ್ವ, ವಿಚಾರ, ಆಚರಣೆಗಳೇ ಸಾಕ್ಷಿಯಾಗಿವೆ.

"ಅತಿಕಾಂಕ್ಷೆ ಯಾವಂಗೆ ಅತಿ ಕ್ಲೇಶ ಆತಂಗೆ
ಅತಿಕಾಂಕ್ಷೆ ಯಾವಂಗೆ ಅತಿದುಃಖ ಆತಂಗೆ
ಅತಿಕಾಂಕ್ಷೆಯಾಗದೆಂದು ಕ್ಷಿತಿಯೊಳಗೆ ಬಹಳ ಸನ್ನತಿಯುತರು ಮೆಚ್ಚುವಂ
ತಲೆ ಕಾಂಕ್ಷೆಯಂ ಬಿಟ್ಟು ಮತಿ ಬುದ್ಧಿಗಳ ಒಟ್ಟು
ಪ್ರತಿಯಾಗಿ ಪಡೆದಾದಿ ಹಂಸನಂ ಭಜಿಸಿ ಸ
ದ್ಗತಿ ಪಡೆದು ಮುಕ್ತಿವಾಗ್ಯೆ ಆತ್ಮಾ||"

"ಹೊನ್ನು ಹೆಣ್ಣು ಮಣ್ಣು ನಿನ್ನೆ ವಂಚಿಸಿ ಹೋಗುವುದೆಚ್ಚರಿಕೆ

ಚೆನ್ನಾಗಿ ಗಳಿಸಿ ನಾ ಬದುಕಿದೆನೆಂದೆಂಬ ಚೇಷ್ಟೆ ಬೇಡೆಚ್ಚರಿಕೆ||"[೬೯]

ಹೆಣ್ಣು, ಹೊನ್ನು, ಮಣ್ಣು ಇವು ಶಾಶ್ವತವಲ್ಲ. ಕ್ಷಣಿಕವಾದುವು. ಆದ್ದರಿಂದ ಶಾಶ್ವತವಾದ ಸುಖಕ್ಕೆ ಹಂಬಲಿಸು ಎನ್ನುವ ಧ್ವನಿ ಈ ಹಾಡಿನಲ್ಲಿದೆ. ಪರಿಗ್ರಹಕ್ಕೆ ಪ್ರಾಪಂಚಿಕ ವಸ್ತುಗಳು ಕಾರಣವಾಗಿರದೆ ಅವುಗಳನ್ನು ಬಯಸುವ ಮನುಸ್ಸು ಕಾರಣವಾಗುತ್ತದೆ. ಅದರ ಮೇಲೆ ನಿಯಂತ್ರಣ ಹೊಂದುವುದು ಅವಶ್ಯವಾಗಿದೆ. ಶರಣರೂ ಕೂಡ "ಮನದ ಮುಂದಣ ಆಸೆಯೇ ಮಾಯೆ"ಯೆಂದು ಹೇಳಿದ್ದಾರೆ. ತನ್ನ ಸೌಲಭ್ಯಕ್ಕೆ ಅಗತ್ಯವಾದ ವಸ್ತುಗಳನ್ನು ಇಟ್ಟುಕೊಳ್ಳುವುದು ತಪ್ಪಲ್ಲ. ಆದರೆ ಅನಗತ್ಯವಾಗಿ ಸಂಗ್ರಹಿಸುವುದು ಅನಪೇಕ್ಷಣೀಯವಾದುದು. ಆದ್ದರಿಂದ "ಪರಸತಿ, ಪರಧನ, ಪರನಿಂದೆಗಳಾವರುಸುದ ಮನುಜಗೆ ನರಕವು ತಿಳಿಯೈ" ಎಂದು ಕಾಮ, ಕ್ರೋಧ, ಮದ, ಮೋಹಗಳನ್ನು ತೊರೆಯಲು ಹಾಡುಗಳಲ್ಲಿ ಹೇಳಲಾಗಿದೆ.

ಸಾಧಕನ ಪಂಚಾಣುವ್ರತಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾ ಸಂಸಾರದಲ್ಲಿ ನಿರ್ವೇಗ ಹೊಂದಬೇಕು. ಸರಳವಾದ ಜೀವನ ಪಾಲಿಸಬೇಕು. ಹೀಗಾಗಬೇಕಾದರೆ ಶ್ರಾವಕನಲ್ಲಿ ಸಂಯಮ ಸ್ವಭಾವವು ಅತ್ಯವಶ್ಯಕವಾಗಿರ ಬೇಕು. ಸಂಯಮಿಯಾದ ಶ್ರಾವಕನೇ ಸಾಧುವಾಗಬಲ್ಲನು. ಮುಂದೆ ಸಂನ್ಯಾಸವನ್ನು ಸ್ವೀಕರಿಸಿ, ದಿಗಂಬರನಾಗಿ ತಪಸ್ಸನ್ನಾಚರಿಸಬೇಕು. ಅಂತಂಕಬಾಹು ಪರಿಗ್ರಹಗಳನ್ನು ನಿವಾರಿಸಿಕೊಂಡು ಭವ ಬಂಧನದಿಂದ ಮುಕ್ತನಾಗ ಬೇಕು. ಇದೇ ಮಾನವ ಜೀವನದ ಅಂತಿಮ ಗುರಿಯಾಗಬೇಕು.

### ೫.೪.೨. ಸಪ್ತವ್ಯಸನಗಳು

ಕಾವ್ಯ ರಸಾಸ್ವಾದನೆಗೆ ಸಪ್ತವಿಘ್ನಗಳು ಅಡ್ಡಿಯಾದಂತೆ ಜೈನದರ್ಶನದ ಪ್ರಕಾರ ಮುಕ್ತಿ ಸಾಧನೆಗೆ ಸಪ್ತವ್ಯಸನಗಳು ತೊಡಕನ್ನು ಉಂಟುಮಾಡುತ್ತವೆ. ಮುಕ್ತಿ ಸುಲಭ ಸಾಧ್ಯವಾಗಬೇಕಾದರೆ ಅವುಗಳನ್ನು ನಿವಾರಿಸಿಕೊಂಡು ಧರ್ಮಾಚರಣೆಯಲ್ಲಿ ತೊಡಗಬೇಕು. ಅದಕ್ಕೆ ಈ ಕೆಳಗಿನ ಹಾಡಿನಲ್ಲಿ-

"ಸಪ್ತವ್ಯಸನದಲಿ ನಡೆದಾಡಿ ಲಲಿತಾಂಗ ವಾ

ತಪದಲ್ಲಿ ಮುಕ್ತವಾಯಿತಲ್ಲ||"[೭೦]

ಎಂದು ಸಪ್ತವ್ಯಸನಿಗೆ ಮುಕ್ತಿ ಸಂಪಾದಿಸಲು ತೊಂದರೆಯಾಗುವುದಾಗಿ ತಿಳಿಸಲಾಗಿದೆ. ವ್ಯಸನ ಮುಕ್ತನಾಗಿ ತಪದಲ್ಲಿ ತೊಡಗಿದಾಗ ಮಾತ್ರ ಮೋಕ್ಷ ಸಾಧ್ಯ. ಈ ವ್ಯಸನಗಳಲ್ಲಿ ಯಾವುದಾದರೊಂದಕ್ಕೆ ಬಲಿಯಾದಲ್ಲಿ ಆತ್ಮಸ್ವರೂಪವನ್ನು ಅರಿಯಲು ಸಾಧ್ಯವಾಗುವುದಿಲ್ಲ. "ಯಾವುದು ಆತ್ಮ ಸ್ವರೂಪದಿಂದ ದೂರ ಮಾಡುವುದೋ ಹಾಗೂ ಆತ್ಮಕಲ್ಯಾಣವನ್ನು ಮಾಡುವುದಿಲ್ಲವೋ ಅದಕ್ಕೆ ವ್ಯಸನ ಎನ್ನುವರು."[೭೧] ಇಂತಹ ಏಳು ವ್ಯಸನಗಳಿವೆಯೆಂದು 'ಜೈನ ನೀತಿಶಾಸ್ತ್ರ' ಹೇಳುತ್ತದೆ.

ಸಪ್ತವ್ಯಸನಗಳೆಂದರೆ ಜೂಜು, ವೇಶ್ಯಾಗಮನ, ಪರಸತಿಸಂಗ, ಬೇಟೆ, ಕಳ್ಳತನ, ಹಿಂಸೆ ಹಾಗೂ ಮದ್ಯಸೇವನೆ. ಈ ವ್ಯಸನಗಳಿಂದ ದೂರವಾದರೆ ಮನುಷ್ಯನ ಪರಮಗುರಿಯಾದ ಮುಕ್ತಿಯನ್ನು ಹೊಂದಲು ಸುಲಭವಾಗುತ್ತದೆಯೆಂದು ಹಾಡುಗಳಲ್ಲಿ ಹೇಳಲಾಗಿದೆ. 'ಕೊಲೆ ಹುಸಿ, ಕಳವು ಅತಿಕಾಂಕ್ಷೆಗಳ ಸತಿ ವಿಸರ್ಜಿಸಿ

ಸಮುದ್ರಾದಿ ಪರಮೇಶ್ವರನ ನಲಿವಿನಲ್ಲಿ ಧ್ಯಾನಿಸಲು ಸ್ವರ್ಗಾದಿ ಮೋಕ್ಷಗಳ ಸುಲಭದಲಿ ಪಡೆಯಬಹುದು' ಸಪ್ತವ್ಯಸನಗಳು ಮನುಷ್ಯನನ್ನು ನಿಧಾನವಾಗಿ ನಾಶ ಮಾಡಿದರೆ. ಪಂಚಾಣುವ್ರತಗಳು ಅವನನ್ನು ಉದ್ಧರಿಸುತ್ತವೆ. ಆದ್ದರಿಂದ ಫಲವಿಲ್ಲದ ಸಪ್ತವ್ಯಸನಗಳಿಗೆ ಸಿಲುಕಿ ತೊಂದರೆ ಪಡದಿರಲು ಹಾಡುಗಳಲ್ಲಿ ಎಚ್ಚರಿಕೆಯನ್ನು ನೀಡಲಾಗಿದೆ.

೧. ಜೂಜು

ಜೂಜು ಮನುಷ್ಯನನ್ನು ಹಾಳು ಮಾಡುವ ಕೆಟ್ಟ ವ್ಯಸನವೆಂಬುದನ್ನು ಎಲ್ಲ ಧರ್ಮಗಳು ಹೇಳಿವೆ. ಜೂಜುಕೋರನಿಗೆ ಸಮಾಜದಲ್ಲಿ ಗೌರವ ಲಭಿಸುವುದಿಲ್ಲ. ಧನಹಾನಿ, ಮಾನಹಾನಿಗಳಿಗೊಳಗಾಗಿ ಸರ್ವ ರಿಂದಲೂ ತಿರಸ್ಕಾರಕ್ಕೆ ಒಳಗಾಗುತ್ತಾನೆ. ಅವನಿಗೆ ಹಣ ಕಳೆದುಕೊಂಡದ್ದನ್ನು ಗಳಿಸುವ ಬಗ್ಗೆಯೇ ಚಿಂತೆ. ಈ ವ್ಯವಕಲನ-ಸಂಕಲನಗಳ ಲೆಕ್ಕಾಚಾರದಲ್ಲಿ ಕರ್ಮ-ಧರ್ಮಗಳ ವ್ಯವಕಲನ ಸಂಕಲನ ಮರೆತುಬಿಡುತ್ತಾನೆ. ಸಹಜವಾಗಿ ಜೀವನದಲ್ಲಿ ಅವನತಿ ಹೊಂದುತ್ತಾನೆ. ಧರ್ಮಕಾರ್ಯಕ್ಕೆ ಮುನಿ ಸೇವೆ, ಜನಸೇವೆಗೆ ಬಳಸಬೇಕಾದ ಸಂಪತ್ತನ್ನು ಜೂಜಿಗಾಗಿ ಬಳಸಿ ಕಳೆದುಕೊಳ್ಳುತ್ತಾನೆ. ಹೀಗೆ ಕಳೆದುಕೊಳ್ಳುವುದನ್ನೇ ಗಳಿಸುವ ಗೀಳನ್ನು ಹಚ್ಚಿಕೊಂಡು ವ್ಯಸನಕ್ಕೊಳಗಾಗುತ್ತಾನೆ. ಇಂತಹ ಜೂಜಿನ ಜಂಜಾಟವನ್ನು ಬಿಟ್ಟು ಜಿನಧ್ಯಾನದಲ್ಲಿ ತೊಡಗಲು ಈ ಹಾಡುಗಳಲ್ಲಿ ಹೇಳಲಾಗಿದೆ.

"ಶ್ರೀ ಜಿನ ಶಾಸನಾಜ್ಞೆಯ ಮೀರಿಯೆ
ಜೂಜಿಂ ಪಾಂಡವದೊಲಿದಾಡಿ
ರಾಜಾರ್ಥವನಳಿದಡವಿಯ ಹೊಕ್ಕರು
ಜೂಜಿನ ದೆಸೆಯನು ಬಿಡು ಜೀವ ||"[೫೨]

ಇಲ್ಲಿ ಜೂಜಿನಿಂದಾಗುವ ಅನರ್ಥವನ್ನು ತಿಳಿದೂ ಪಾಂಡವರು ಜೂಜನ್ನಾಡಿ ರಾಜ್ಯ ಕಳೆದುಕೊಂಡು ಕಷ್ಟಕ್ಕೊಳಗಾದ ನಿದರ್ಶನವನ್ನು ಹೇಳುತ್ತಾನೆ. ಇಂತಹ ಅಮೂಲ್ಯವಾದ ಜೀವನಪರವಾದ ನಿಲುವುಗಳು ಈ ಹಾಡುಗಳಲ್ಲಿ ಕಂಡುಬರುತ್ತವೆ.

೨. ವೇಶ್ಯಾಗಮನ

ಎಲ್ಲ ಧರ್ಮಗಳಂತೆ ಜೈನಧರ್ಮದಲ್ಲಿಯೂ ಕಾಮಚೇಷ್ಟೆಗಳನ್ನು ತಿರಸ್ಕರಿಸಲಾಗಿದೆ. ಅದು ಮನುಷ್ಯನನ್ನು ಹಾಳುಮಾಡಿ ಪಾಪಕೂಪಕ್ಕೆ ತಳ್ಳುವ ಅತಿರೇಕದ ಅಂಶವೆಂದು ಭಾವಿಸಲಾಗಿದೆ. ವೇಶ್ಯಾವ್ಯಸನಿಗೆ, ಅಧ್ಯಾತ್ಮದ ಕಡೆಗೆ ಮನಸ್ಸು ಹೊರಳುವುದಿಲ್ಲ. ಮನೋಭಿಲಾಷೆಯಂತೆ ನಡೆದುಕೊಂಡರೆ ಹಿತವೆನಿಸಿದರೂ ಅಧ್ಯಾತ್ಮ ಸಾಧನೆಗೆ ಅಹಿತವಾದದು. 'ವಲ್ಲಭೆಯರೊಳೊಡನಾಟ ಅದು ಬೆಲ್ಲಗೂಡಿದ ಕಾಳಕೂಟವಾದರೂ, ಸಿಹಿಯೆಂದು ಭಾವಿಸಿದರೂ ಪರಿಣಾಮ ಘೋರವಾದದು. ಬಲ್ಲವರಾ ವೇಶ್ಯಾ ಸಹವಾಸವನ್ನು ಹುಚ್ಚತನವೆಂದು' ತಿರಸ್ಕಾರಿ ಸುತ್ತಾರೆ. ಒಂದು ವೇಳೆ ತಪ್ಪಿ ಅದೇ ಪಾಶಕ್ಕೆ ಸಿಲುಕಿದರೆ ಅವನು ಲೋಕನಿಂದನೆಗೆ ಗುರಿಯಾಗುತ್ತಾನೆ.

"ವೇಶ್ಯಕುಲೋತ್ತಮ ಚಾರುದತ್ತಾಖ್ಯನ
ವೇಶ್ಯಗಿದ್ದುದನೆಲ್ಲವನಿತ್ತು

ಹಾಸಕ್ಕೆ ಭಾಜನವಾದನು ಜಗದೊಳು

ವೇಶ್ಯೆಯ ವ್ಯಸನವ ಬಿಡು ಜೀವ"||[೫೩]

ಹೀಗೆ ಪೂರ್ವ ನಿದರ್ಶನದೊಂದಿಗೆ ವೇಶ್ಯಾವ್ಯಸನಿಯನ್ನು ಎಚ್ಚರಿಸಿ ಸರಿದಾರಿಗೆ ತರಲು ಪ್ರಯತ್ನಿಸಲಾಗಿದೆ. ಜೈನಧರ್ಮದಲ್ಲಿ ಮೊದಲು ಕಟ್ಟುನಿಟ್ಟಾದ ಆಚರಣೆಗಳಿದ್ದರೂ ಹದಿನಾರನೇ ಶತಮಾನದ ಹೊತ್ತಿಗೆ ಅವು ಸಡಿಲಗೊಂಡವು. ಜಡ್ಡುಗಟ್ಟಿದ ಕಟ್ಟುನಿಟ್ಟಾದ ನಿಯಮಗಳಿಂದ ನಲುಗಿದ್ದ ಜನತೆ ಒಳನುಸುಳಿದ ದೌರ್ಬಲ್ಯಗಳನ್ನು ಸ್ವೀಕರಿಸಿ ಅದರತ್ತಲೇ ಹೆಚ್ಚಾಗಿ ಆಕರ್ಷಿತರಾದರು. ಅಂತಹ ದೌರ್ಬಲ್ಯಗಳಲ್ಲಿ ದೇವದಾಸಿ ಪದ್ಧತಿಯು ಒಂದು. "ದೇವದಾಸಿ ಪದ್ಧತಿ ಹಿಂದೂ ದೇವಾಲಯದಲ್ಲಿ ಮೊದಲು ಕಾಣಿಸಿಕೊಂಡು ಕ್ರಮೇಣ ಜೈನರ ಬಸದಿಗಳನ್ನು ಪ್ರವೇಶಿಸಿದಂತೆ ಕಂಡುಬರುತ್ತದೆ."[೫೪] ಇದನ್ನು ಗೀಳಾಗಿ ಹಚ್ಚಿಕೊಂಡ ಲಂಪಟತನವನ್ನು ಹಾಡುಗಳಲ್ಲಿ ಎಚ್ಚರಿಸುವ ಮೂಲಕ ಸರಿದಾರಿಯಲ್ಲಿ ನಡೆಯುವಂತೆ ಎಚ್ಚರಿಸುವ ಆಶಯವಿದೆ. ವೇಶ್ಯೆಯ ನೆಚ್ಚಿ ನಾರಿಯ ಬಿಡುವಂಥ ಪುರುಷನೇಕೋ, ನಾರಿಯರ ಕೆಡುಗಣ್ಣು ಸೊಬಗು ಮಹೇಂದ್ರಜಾಲ, ದಾರಿಯ ನೆರವು ಸಂಜೆಯ ಕೆಂಪು ಸಿರಿಯು ಎಂದು ಕವಿ ವರ್ಣನಾತ್ಮಕವಾಗಿ ವಿವರಿಸುವುದರ ಮೂಲಕ ವಿಷಾದಿಸುತ್ತಾನೆ.

ವೇಶ್ಯೆಯ ಸಂಗ ಮಾನಭಂಗಕ್ಕೆ ಕಾರಣವಾಗುವುದಲ್ಲದೆ ಮೋಕ್ಷ ಸಾಧನೆಗೂ ಅಡ್ಡಿಯಾಗುತ್ತದೆ. ಹುಸಿಯ ನೋಟದಿಂದ ನೋಯಿಸುವ ಹೆಸರೇ ಗೊತ್ತಿಲ್ಲದ ಹೆಣ್ಣಿನಿಂದ ನಾಶವಾಗುವ ಬದಲು ಜಿನನನ್ನು ನೆನೆದು ಮುಕ್ತಿ ಹೊಂದಬೇಕೆಂಬ ಕಿವಿ ಮಾತು ಇಲ್ಲಿದೆ. ಮುಕ್ತ್ಯಾಂಗನೆಯನ್ನು ಕೂಡಬೇಕೆ ಹೊರತು ಇಂತಹ ಹೆಣ್ಣನ್ನಲ್ಲ. ಇದರಿಂದ ಪಾರು ಮಾಡಿದ ಜಿನನನ್ನು ಕಾಮಸಂಹಾರ ಮಾಡದೆ ಸ್ವಾಮಿಯ ಮುಕ್ತಿ ಕೋಮಲೆಯೊಡಗೂಡಿದ ಪ್ರೇಮದಿಂದಲಿ ಎಂದು ನೆನೆಯಲಾಗಿದೆ.

### ೩. ಹಿಂಸೆ

ಈ ಹಿಂದೆ ಅಹಿಂಸಾವ್ರತ ಪಾಲನೆಯಲ್ಲಿ ಹಿಂಸೆಯ ಬಗ್ಗೆ ಹಾಡುಗಳಲ್ಲಿ ವ್ಯಕ್ತವಾದ ಪರಿಕಲ್ಪನೆಯನ್ನು ನೋಡಲಾಗಿದೆ. ಜೈನದರ್ಶನದ ಪ್ರಕಾರ ಕಾಯಾ, ವಾಚಾ, ಮನಸಾ ಪೂರ್ವಕವಾಗಿ ಜೀವಿಗಳಿಗೆ ಕೊಡುವ ತೊಂದರೆ ಘೋರವಾದ ಹಿಂಸೆ. ಇದಕ್ಕೆ ಸಂಕಲ್ಪ ಹಿಂಸೆಯೆಂದು ಹೇಳಲಾಗಿದೆ. ಪರಜೀವಿಯ ಬದುಕನ್ನು ನಾಶ ಮಾಡುವುದನ್ನು ಜೈನಧರ್ಮ ಸಹಿಸುವುದಿಲ್ಲ. ದಯೆಯನ್ನು ಬೋಧಿಸದ ಧರ್ಮ ಪಾಲಿಸದ ಮನುಜನನ್ನು ವ್ಯರ್ಥವೆಂದು ನಿಂದಿಸಲಾಗಿದೆ. ಎಲ್ಲ ಧರ್ಮಗಳೂ ಸಹ ಹಿಂಸೆಯನ್ನು ವಿರೋಧಿಸುತ್ತವೆ. ಅದರಿಂದಲೇ ಬಸವಣ್ಣ "ದಯವೇ ಧರ್ಮದ ಮೂಲವಯ್ಯ" ಎಂದು ಹೇಳಿದ್ದಾನೆ. "ಸಕಲ ಪ್ರಾಣಿಗಳಿಗೂ ಲೇಸನ್ನು ಬಯಸುವವನೇ" ನಿಜವಾದ ಮನುಷ್ಯನೆಂದು ಗುರುತಿಸಲಾಗುತ್ತದೆ. "ಕರುಣವಿಲ್ಲದ ಧರ್ಮ, ಕರ್ಮ ಮನದಲ್ಲ ಮರುಕವಿಲ್ಲದ ನಂಟು ಬರಿಯ ಗಂಟು" ಕಡು ದಯೆಯಿಲ್ಲದ ನರ ಪಾಮರ ಎಂದು ಬರೆಯಲಾಗಿದೆ. ಒಟ್ಟಿನಲ್ಲಿ ನೀನು ಬದುಕು; ಬದುಕಲು ಬಿಡು ಎಂಬ ಜಿನತತ್ವ ಇಲ್ಲಿ ಪ್ರತಿಪಾದನೆಗೊಂಡಿದೆ.

ರತ್ನಾಕರವರ್ಣಿಯ ಹಾಡೊಂದರಲ್ಲಿ ಕೊಲೆಯ ಕಠೋರತೆಯನ್ನು ಹೀಗೆ ಹೇಳುತ್ತಾನೆ.

"ಕೊಲೆಯೆಂಬುದೀಗ ತನ್ನಯ ಕೊಲೆಗೆ ಕೊಟ್ಟ ಬೆಲೆ

ಕೊಲೆ ತನ್ನ ಕೊರಳೆದೆಯ ಬಿಡರೊತ್ತಿ ಕೊಲ್ಲುವ ಕೊಲೆ

ಕೊಲೆಯು ಹಿಂಸಾವೃತ್ತಿ ಚರಣಕ್ಕೆ ಹೊತ್ತಿ ಹೊಲೆ

ಕೊಲೆಯು ಅಂತಕನ ಸಂಕೋಲೆ"||[೫೫]

ಎಂದು ಹಿಂಸಕನಿಗೆ ತನ್ನ ನಾಶವೇ ಉತ್ತರವಾದೀತು ಎಂದು ಎಚ್ಚರಿಸಿದ್ದಾನೆ. "ಸಪ್ತ ವ್ಯಸನಗಳಲ್ಲಿ ಹಿಂಸೆಯು ಮಾನವನನ್ನು ಮೃಗವನ್ನಾಗಿ ಮಾಡುವ ದುಷ್ಟ ಕ್ರಿಯೆಯೆಂದೇ ಪ್ರತಿಪಾದಿಸಲಾಗಿದೆ. ಇದರಿಂದ ಮನುಷ್ಯನ ಸರ್ವನಾಶ ಖಂಡಿತ. ಕೊಲ್ಲದುದೆ ಧರ್ಮ ವಿದ್ಯೆಯನ್ನು ಈ ಸೊಲ್ಲನ್ನು ಕಂಡಿಪುದು ಶ್ರುತವೆನ್ನು" ಎಂಬ ಮಾತುಗಳಲ್ಲಿ ಜೈನಧರ್ಮ ಅಹಿಂಸೆಗೆ ಕೊಟ್ಟ ಮಹತ್ವವನ್ನು ಗಮನಿಸಬಹುದು. ಹಿಂಸೆಗೆ ಮನುಷ್ಯನನ್ನು ಪ್ರೇರೇಪಿಸುವುದು ಮಾಂಸ ಭಕ್ಷಣೆ, ಜೈನಧರ್ಮದಲ್ಲಿ ಮಾಂಸಾಹಾರ ತ್ಯಾಜ್ಯವಾದದ್ದು. ಅದು ಪಾಪಕ್ಕೆ ಮೆತ್ತಿಕೊಂಡು ನರಕದತ್ತ ಕೊಂಡೊಯ್ಯುತ್ತದೆ.

"ಮಾಂಸದ ದೆಸೆಯಿಂದ ಭಟನೆಂಬರಸನು

ಹಿಂಸೆಯೊಳಗೆಸಗಿದ ಪಾತಕದಿಂ

ಸಂಸಾರದೊಳತಿ ದುಃಖವನುಂಡನು

ಮಾಂಸದಾಕಾಂಕ್ಷೆಯ ಬಿಡು ಜೀವ"||[೫೬]

ಎಂದು ಪೂರ್ವ ನಿದರ್ಶನದೊಂದಿಗೆ ಕಷ್ಟ ಕೋಟಲೆ ತಂದೊಡ್ಡುವ ಮಾಂಸ ಸೇವನೆಯನ್ನು ಬಿಡುವಂತೆ ಒತ್ತಾಯಿಸಲಾಗಿದೆ. ಉಲ್ಲಾಸದೊಳು ಕೊಲ್ಲದ ಧರ್ಮ ಪೇಳುವ ಉತ್ತಮ ತತ್ತ್ವ ಈ ಧರ್ಮದಲ್ಲಿದೆಯೆಂದು ಹೇಳಲಾಗಿದೆ.

**೪. ಪರಸತಿಯಾಸೆ**

ಸಾಂಸಾರಿಕನಾದ ಶ್ರಾವಕನು ತನ್ನ ಪತ್ನಿಯೊಂದಿಗೆ ಸಂಬಂಧವನ್ನಿಟ್ಟುಕೊಳ್ಳುವುದನ್ನು ಜೈನಧರ್ಮ ಮಾನ್ಯ ಮಾಡಿದೆ. ಆದರೆ ಆ ಸಂಬಂಧದಲ್ಲಿಯೇ ಮುಳುಗಿ ಸಂಸಾರಸಂಬಂಧೀ ಚಟುವಟಿಕೆಗಳಲ್ಲಿ ತೊಡಗುವುದನ್ನು ಒಪ್ಪುವುದಿಲ್ಲ. ಸಂಸಾರಿಯಾಗಿದ್ದು ಧರ್ಮಾಚರಣೆಯಲ್ಲಿ ತೊಡಗಬೇಕು. ಧರ್ಮಪಾಲನೆಗೆ ಸಂಸಾರ ಅಡ್ಡಿಯಾಗ ಬಾರದೆಂಬ ನಿಬಂಧನೆಗಳನ್ನು ವಿಧಿಸುವ ಈ ಧರ್ಮ ಅನ್ಯಸ್ತ್ರೀ ಸಂಬಂಧವನ್ನು ಸಂಪೂರ್ಣ ನಿಷೇಧಿಸಿದೆ. ಛಲ ಬೇಕು ಶರಣಂಗೆ ಪರಸತಿಯನೊಲ್ಲೆನೆಂಬ" ಕಟ್ಟುನಿಟ್ಟಿನ ನಿಯಮ ಹೇಳುತ್ತದೆ; ಶರಣ ಸಾಹಿತ್ಯ ಸಂಸಾರದಲ್ಲಿದ್ದು ಮೋಕ್ಷ ಹೊಂದುವ ಮಾರ್ಗ ಲಿಂಗಾಯತರದಾದರೆ, ಜೈನರಲ್ಲಿ ಕೊನೆಗೆ ಸಂಸಾರ ತ್ಯಾಗ ಮಾಡಬೇಕಾಗುತ್ತದೆ.

ಸ್ತ್ರೀಸಂಗ ಮುಕ್ತಿ ಮಾರ್ಗಕ್ಕೆ ಅಡ್ಡಿಯೆಂಬ ಅಭಿಪ್ರಾಯ ಹಾಡುಗಳಲ್ಲಿ ವ್ಯಕ್ತವಾಗಿದೆ.

"ಪರದಾರರೊಳು ಸ್ನೇಹ ಪರಮ ಪಾಪದ ಹೇಹ

ಪರನಾರಿಯರ ಸಂಗ ಪರಮಾಯುಷ್ಯಕ್ಕೆ ಭಂಗ

ಪರವನಿತೆಯರ ಕೂಟ ಪರಗತಿಗೆ ತೆಗೆದೋಟ

"ಪರಸತಿಯರ ನಗುವೇ ಮಾನವನ ವೈರಿ. ಅದರ ಸ್ನೇಹ ಪಾಪದ ನೇಹ, ಪರವೇಳಿಗೆ ಸೋಲುವುದು ಎದೆಗೆ ಶೂಲವಿದ್ದಂತೆ ಘೋರವಿಷವಿದ್ದಂತೆ"[೫೭] ಎಂದು ಎಚ್ಚರಿಸಲಾಗಿದೆ. ಹೀಗೆ ಜೈನಧರ್ಮದಲ್ಲಿ ಪರಸತಿಯರ

ಸಹವಾಸವನ್ನು ಮಹಾಘೋರ ದೀಪವೆಂದು ಬೋಧಿಸುತ್ತದೆ. ಇದರಿಂದ ಆದರ್ಶ ಸಮಾಜ ಕಟ್ಟುವ ಹಂಬಲವಿದೆ.

> “ಪರಬಲ ಜಲಧಿಗೆ ಒಡಬನೆಂದೆನಿಸಿದ
> ಉರವಿ ಕ್ರಮಯುತ ರಾವಣನು
> ಪರಸತಿಗಳಳುಪಿಯೆ ನರಕಕ್ಕಿಳಿದನು
> ಪರಸತಿಯಾಸೆಯ ಬಿಡು ಜೀವ”[೫೮]

ಎಂದು ಹೇಳುವುದರ ಮೂಲಕ ಪರಹೆಣ್ಣಿನ ಸಹವಾಸದಿಂದಾಗುವ ಘೋರ ಪಾಪವನ್ನು ತಿಳಿಸಿ ಹೇಳಲಾಗಿದೆ.

**೫. ಬೇಟೆ**

ಆಹಾರಕ್ಕಾಗಿ ಇಲ್ಲವೇ ವಿನೋದಕ್ಕಾಗಿ ಪ್ರಾಣಿಗಳನ್ನು ಹಿಂಸಿಸಿ ಕೊಲ್ಲುವುದು ಬೇಟೆಯೆನಿಸುತ್ತದೆ. ಇತ್ತೀಚಿನ ಜಗತ್ತಿನ ಜೀವನವು ಇಂತಹ ಹಿಂಸೆಯಿಲ್ಲದೆ ಸಾಗುವುದಿಲ್ಲವೇನೋ ಎನ್ನುವಷ್ಟರ ಮಟ್ಟಿಗೆ ಬಂದು ನಿಂತಿದೆ. ಆಹಾರಕ್ಕಾಗಿ ಹಾಗೂ ಇತರೆ ಕಾರಣಗಳಿಗಾಗಿ ಅವ್ಯಾಹತವಾಗಿ ಪ್ರಾಣಿಬಲಿ ನಡೆಯುತ್ತಿದೆ. ಬೌದ್ಧ ಹಾಗೂ ಹಿಂದೂ ಧರ್ಮಗಳು ಮಾಂಸಭಕ್ಷಣೆಯನ್ನು ಕಟ್ಟುನಿಟ್ಟಾಗಿ ನಿಷೇಧಿಸಿದ್ದರೂ ಸಹಿತ ಅಲ್ಲಲ್ಲಿ ಪ್ರಾಣಿಬಲಿಗಳು ನಡೆಯುತ್ತಿರುವುದು ಕಂಡುಬರುತ್ತದೆ. ಲಿಂಗಾಯತ ಧರ್ಮವು ಮಾಂಸ ಭಕ್ಷಣೆಯನ್ನು ದೋಷಿಸಿದೆ. ಆದ್ದರಿಂದ ಶಿವಶರಣರು ಕಳಬೇಡ, ಕೊಲಬೇಡ ಎಂದು ಹೇಳಿದ್ದಾರೆ. ಜೈನಧರ್ಮವು ಕೂಡ ಮಾಂಸ ಸೇವನೆಯನ್ನು ಬಲವಾಗಿ ವಿರೋಧಿಸುತ್ತದೆ. ಅದು ಪ್ರಾಣಿಬೇಟೆಯನ್ನು ಒಪ್ಪುವುದಿಲ್ಲ. ಜೈನ ದರ್ಶನ ಪ್ರಕಾರ ಪ್ರಾಣಿಬೇಟೆಯು ಕರ್ಮ ಬಂಧನಕ್ಕೆ ಕಾರಣವಾಗುವುದು. ಹಾಗೆಯೇ ಜೈನ ಸಾಹಿತ್ಯದಲ್ಲಿ ಪ್ರಾಣಿಬೇಟೆಯನ್ನು ಒಪ್ಪದೆ ಜೈನಕವಿಗಳು ಮಾಯಾಮೃಗ, ಮೃಗಯಾ ವಿನೋದ ಪ್ರಸಂಗಗಳನ್ನು ಚಿತ್ರಿಸಿದ್ದಾರೆ. ಜೈನರು ಬೇಟೆಯನ್ನಷ್ಟೇ ಅಲ್ಲದೆ ಬೇಟೆಯಾಡುವ ಮನಸ್ಸನ್ನು ಒಪ್ಪುವುದಿಲ್ಲ. ಮೀನುಗಾರ ಮೀನನ್ನು ಹಿಡಿಯಲು ಬಲೆ ಬೀಸಿ ಇಲ್ಲವೇ ಗಾಳ ಹಾಕಿ ಕಾಯುವಾಗ ಮೀನು ಸಿಗದಿದ್ದರೂ, ಬೇಟೆಗಾರ ಪ್ರಾಣಿಗಾಗಿ ಕಾದು ಕುಳಿತು ಅವನಿಗೆ ಬೇಟೆ ದೊರೆಯದಿದ್ದರೂ ಅವರನ್ನು ಕರ್ಮ ಸುತ್ತಿಕೊಳ್ಳುತ್ತದೆ. ಏಕೆಂದರೆ ಅವರ ಮನಸ್ಸು ಜೀವ ಹಿಂಸೆಗಾಗಿ ಸಂಕಲ್ಪಸಿರುತ್ತದೆ. ಬೇಟೆಯಾಡಬೇಕೆನ್ನುವುದು ಬೇಟೆಯಾಡಿದಷ್ಟೇ ದೋಷಕ್ಕೆ ಕಾರಣವಾಗುತ್ತದೆ. ಹಿಂಸೆಯಿಂದ ಆಹಾರ ಸಂಪಾದಿಸುವುದು ಆತ್ಮವನ್ನು ಮಲಿನ ಮಾಡಿಕೊಂಡಂತಾಗುತ್ತದೆ.

> “ಬೇಂಟೆಯ ದೆಸೆಯಿಂ ಬ್ರಹ್ಮದತ್ತಾಖ್ಯನು
> ಕಂಟಕ ಬಹುದುರ್ಗತಿಯೊಳಗೆ
> ಟೆಂಟೆನಿಸಿಹೆ ಬಹುದುಃಖವನುಂಡನು
> ಬೇಂಟೆಯ ದೆಸೆಯಂ ಬಿಡು ಜೀವ”[೫೯] ಎಂದು ಹಾಡಿನಲ್ಲಿ ಬೇಟೆಯಿಂದೊದಗಬಹುದಾದ ಕರ್ಮ

ಪಾಶವನ್ನು ಪೂರ್ವ ನಿದರ್ಶನದೊಂದಿಗೆ ಎಚ್ಚರಿಸಲಾಗಿದೆ.

**೬. ಕಳ್ಳತನ**

ಸಾಮಾನ್ಯವಾಗಿ ಕಳ್ಳತನವನ್ನು ಎಲ್ಲ ಧರ್ಮಗಳು ತಿರಸ್ಕರಿಸಿವೆ. ದುಡಿದುಣ್ಣುವ ಪರೋಪಕಾರವನ್ನು ಬೋಧಿಸುವ ಧರ್ಮಗಳು ಈ ಕೃತ್ಯವನ್ನು ಸಹಿಸುವುದಿಲ್ಲ. ‘ಛಲ ಬೇಕು ಶರಣರಿಗೆ ಪರಧನವನೊಲ್ಲೆನೆಂಬ’

ಎನ್ನುವಲ್ಲಿ ಶ್ರಮಪಡದೆ ಬರುವ ಧನವನ್ನು ಸ್ವೀಕರಿಸಬಾರದೆಂದು ಹೇಳಲಾಗಿದೆ. ಇತರೆ ಧರ್ಮಗಳು ಇದೇ ತತ್ವವನ್ನು ಅನುಸರಿಸಿವೆ. ಜೈನಧರ್ಮವೂ ಕೂಡ ಅಪರಿಗ್ರಹವನ್ನು ಒಪ್ಪುವುದಿಲ್ಲ. ಇನ್ನು ಮನುಷ್ಯ ಕಳ್ಳತನ ಮಾಡಿ ಜೀವಿಸುವುದನ್ನು ಒಪ್ಪಲು ಸಾಧ್ಯವೇ ಇಲ್ಲ.

"ಕಳವಿನ ದೆಸೆಯಿಂ ಶಿವಭೂತಾಖ್ಯನು

ಪಳಿಯುಂ ಪಾಪಕ್ಕೆ ನೆಲೆಯಾಗಿ

ಇಳಿದು ದುರ್ಗತಿ ಏಳುದುಃಖವನುಂಡನು"||೬೦

ಎಂದು ಹೇಳುವ ಮೂಲಕ ಕಳವಿನ ಕಾರಣದಿಂದ ಶಿವಭೂತಾಖ್ಯನು ಪಾಪಕ್ಕೆ ಗುರಿಯಾಗಿ ಏಳು ದುಃಖಗಳನ್ನು ಅನುಭವಿಸಿದನು. ಕಳ್ಳತನ ಮಾಡುವುದರಿಂದ ದುಃಖವೆಂಬ ಬೆಂಕಿಯಲ್ಲಿ ಸುಡಬೇಕಾಗುತ್ತದೆ ಎಂಬ ಎಚ್ಚರಿಕೆಯನ್ನು ನೀಡುತ್ತದೆ.

**೭. ಮದ್ಯ**

ಸಪ್ತವ್ಯಸನಗಳಲ್ಲಿ ಇದೂ ಒಂದು. ಮನುಷ್ಯನು ಮಾಡುವ ವಿವಿಧ ಪಾಪಗಳ ಮೂಲ ಮದ್ಯವ್ಯಸನವೇ ಆಗಿದೆ. ಅವನಿಗೆ ಧರ್ಮಸೂಕ್ಷ್ಮ ಅರ್ಥವಾಗುವುದಿಲ್ಲ. ವಿದ್ಯೆ-ಬುದ್ಧಿಗಳು ದಾರಿ ತಪ್ಪುವದಲ್ಲದೇ ಇದರಿಂದ ಅವನು ಪಾಲಿಸಿಕೊಂಡು ಬಂದಂತಹ ಆಚಾರಗಳು ವ್ಯರ್ಥವಾಗುತ್ತವೆ. ಮದ್ಯ ಸೇವನೆಯ ಕಾರಣದಿಂದ ನಾಶವಾದ ಪುರಾಣ ಸಂಗತಿಯನ್ನು ಹಾಡುಗಳಲ್ಲಿ ಪ್ರಸ್ತಾಪಿಸಿ ಮದ್ಯದಿಂದ ದೂರವಿರಲು ಸೂಚಿಸುತ್ತವೆ.

**೫.೫.೩. ತಪಸ್ಸು-ದಾನ-ಧರ್ಮ**

ಜೈನದರ್ಶನದಲ್ಲಿ ತಪಸ್ಸೆಂಬುದು ಜೀವನದಲ್ಲಿ ಪ್ರಮುಖವಾದ ಧಾರ್ಮಿಕ ಆಚರಣೆ. ಜೈನ ಆಗಮಿಕ ಗ್ರಂಥಗಳಲ್ಲಿ ದ್ವಾದಶ ತಪಸ್ಸುಗಳ ವರ್ಣನೆ ಬರುತ್ತದೆ. ಅಂತಹ ತಪಸ್ಸುಗಳಿಂದ ದೊರಕುವ ಪುಣ್ಯ ವಿಶೇಷಗಳ ವಿವರಗಳು ಸಿಗುತ್ತವೆ. ಪ್ರತಿಯೊಬ್ಬ ವ್ಯಕ್ತಿಯ ಜೀವನ ತಪದಿಂದಲೇ ಮುಕ್ತಿ ಪಡೆದುದಾಗಿ ಹೇಳಲಾಗಿದೆ.

ಜೈನ ತೀರ್ಥಂಕರರ ಜೀವನವೇ ತಪಸ್ಸಿಗೆ ಒಂದು ಮೂರ್ತ ಸ್ವರೂಪವಾಗಿರುವುದಾಗಿದೆ. ಆಗಿದೆ. ಹಾಗೆಯೇ ಬಾಹುಬಲಿಯು ತನ್ನ ಸಕಲ ಸಂಪತ್ತು, ರಾಜ್ಯವನ್ನು ತ್ಯಜಿಸಿ ತಪಸ್ಸಿಗೆ ಬಂದಿದ್ದು ಜೈನಧರ್ಮದಲ್ಲಿ ತಪಸ್ಸಿಗೆ ನೀಡಿದಂತಹ ಮಹತ್ವವನ್ನು ಗಮನಿಸಬಹುದು. ಗೃಹಸ್ಥರೂ ಕೂಡ ತಮ್ಮ ಜೀವನದ ಅಂತ್ಯದಲ್ಲಿ ತಪಸ್ಸಿನ ಮೂಲಕವೇ ಮುಕ್ತಿ ಹೊಂದಬೇಕೆಂದು ನಿರ್ದೇಶಿಸಲಾಗಿದೆ.

"ಆಯುಷ್ಯದಂತ್ಯದೊಳು ಮುಪ್ಪು ತಬ್ಬುತ

ನೋಯಿಸುತ ನಿನ್ನ ಕೊಲ್ಲು ಮುನ್ನ

ಒಯ್ಯಾರದಿ ದಿನ ನೂಂಕದೆ ನಿಲುತಾರು ತಪದಲ್ಲಿ

ಕಾಯ ದಂಡನೆಗರಳೆಂಬ ಕರ್ಮವ ಗೆಲ್ಲುಮಲ್ಲ"೬೧

ಎಂದು ಸುಖ ಲೋಲುಪ್ತತೆಯಲ್ಲಿ ತೇಲಾಡುವ ದೇಹಕ್ಕೆ ದಂಡನೆ ನೀಡಿ ಭೋಗಾದಿಗಳಿಂದ ವಿರಕ್ತನಾಗಿ ಮುಕ್ತಿ ಹೊಂದಬೇಕು. ತಪಸ್ಸೆಂದರೆ ಕೇವಲ ದೇಹದಂಡನೆಯಾಗಿರದೆ ಆತ್ಮಶುದ್ಧೀಕರಿಸುವುದಾಗಿದೆ.

ಹಿಂದೂಧರ್ಮದಲ್ಲಿ ದೇಹದಮನಕ್ಕಾಗಿ ತಪಸ್ಸಿನ ಉಗ್ರ ಆಚರಣೆಗಳನ್ನು ಋಷಿಗಳು ಮಾಡುತ್ತಿದ್ದರು. ಬೌದ್ಧರು ದೇಹ ದಂಡನೆಗೆ ಹೆಚ್ಚು ಪ್ರಾಶಸ್ತ್ಯ ನೀಡದೆ ಅಧ್ಯಾತ್ಮ ಸಾಧನೆಗೆ ತಪಸ್ಸನ್ನು ಕೈಗೊಳ್ಳುತ್ತಿದ್ದರು. ಇವೆರಡಕ್ಕೂ ಭಿನ್ನವಾಗಿ ಜೈನರು ಆತ್ಮಶುದ್ಧಿಗಾಗಿ ಕಠಿಣ ತಪಸ್ಸಿಗೆ ಬಂದಿದ್ದರು. ಇಂತಹ ತಪಸ್ಸು ನೋಡುಗರಿಗೆ ಉಗ್ರವಾಗಿ ಕಂಡರೂ ಆಚರಣೆಗೆ ತೊಡಗಿದವರಿಗೆ ತಪ ಬೇಕೆಂದು ಹಾಡುಗಳಲ್ಲಿ ಹೇಳಲಾಗಿದೆ.

"ನೋಡಿದರಿಗು ತಪವಾಗಿ ಕಾಣಿಸಬೇಕು ತಾ
ಮಾಡುವ ತಪಸು ಲೀಲೆಯಾಗಿರಬೇಕು ತನಗೆ
ನೋಡಿದರಂಜಿದರು ಹಾವಾಡಿಗ ನಂಜದೆ ಹಾವ
ನಾಡಿಸಿದಂದದೊಳು ತಪಸ್ಸು ಮಾಡಬೇಕು"೨೨

ಹೀಗೆ ಹಾವನ್ನು ನೋಡಿದರೆ ಅಂಜಿಕೆಯಾದರೂ ಹಾವಾಡಿಗ ಅದರೊಂದಿಗೆ ಸರಸವನ್ನಾಡುವಂತೆ ತಪಸ್ವಿಯೂ ಇರಬೇಕು. ನೋಡುಗರಿಗೆ ಕಠಿಣವಾಗಿ ಕಂಡರೂ ತಪೋಮಯ ಜೀವಿಗೆ ಅದು ಸಾಹಸದ ಆನಂದದ ಕ್ರಿಯೆಯಾಗಬೇಕು. ತಮ್ಮ ಶಕ್ತಿಗೆ ಎಷ್ಟು ಸಾಧ್ಯವೋ ಅಷ್ಟು ವಿರಕ್ತಿಯಿಂದ ತಪಸ್ಸು ಮಾಡಬೇಕು. ನಾನು ವಿಧಿದೈವ ಪಾಪವೆಂಬ ಬೇನೆಗೆ ಜಪವೆಂಬ ಲೇಪದಿಂದ ಪಾಪ ವಿಮುಕ್ತಿ ಹೊಂದಬಹುದು. ತಪಸ್ಸಿನ ಫಲ ತನಗೆ ತಾನೇ ದೊರಕುವುದು.

ಜೈನ ಆಗಮದಲ್ಲಿ ಎರಡು ಬಗೆಯಾಗಿ ತಪಸ್ಸುಗಳನ್ನು ಕುರಿತು ಹೇಳಲಾಗಿದೆ. ಅವು ಅಭ್ಯಂತರ ತಪ ಹಾಗೂ ಬಾಹ್ಯತಪ. ಅಭ್ಯಂತರತಪವು ಆಂತರಿಕ ಶುದ್ಧಿಗೆ ಸಂಬಂಧಿಸಿದುದಾದರೆ, ಬಾಹ್ಯತಪವು ದೇಹ ದಂಡನೆಯಾಗಿರುತ್ತದೆ. ಸ್ವಸ್ಥಗೆಟ್ಟ ಬಾಹ್ಯ ತಪದೊಳು ಸಿಕ್ಕಿದ ಪರಮ ವಿರಕ್ತಿಯ ತಾನಿದು ಲೀಲೆಯೆಂದು ತಪೋಮಾರ್ಗವನ್ನು ವಿವರಿಸಲಾಗಿದೆ. ತಪಸ್ಸೆಂದು ದಂಡನೆ ಮಾಡಿದರೆ ಸಾಲದು. ಅದರಿಂದ ಜ್ಞಾನ ಸಂಚಯವಾಗಬೇಕು. ತನುಮನಗಳ ಶುದ್ಧಿಯಾಗಿ ಆತ್ಮದ ಅರಿವುಂಟಾಗಬೇಕು. ದ್ವಾದಶ ತಪಸ್ಸುಗಳ ಮೂಲ ಆಶಯವೇ ಬಾಹ್ಯ, ಆಂತರಿಕ ಶುದ್ಧಿಯಾಗಿದ್ದು ತನ್ಮೂಲಕ ಮುಕ್ತಿ ಹೊಂದುವುದಾಗಿದೆ. ಆಧುನಿಕ ಜೈನ ಸಂಪ್ರದಾಯಗಳು ಜ್ಞಾನ-ಧ್ಯಾನ-ಭಜನೆಗಳಿಗೆ ಆದ್ಯತೆಯನ್ನು ನೀಡುತ್ತವೆ.

ಜೈನನಾದವನು ದಾನವನ್ನು ಸ್ವೀಕರಿಸುವಂತಿಲ್ಲ. ಪರರ ವಸ್ತುವನ್ನು ದಾನ ರೂಪವಾಗಿ ಸ್ವೀಕರಿಸು ವುದರಿಂದ ಇಹದ ಮೇಲೆ ಮೋಹ ಉಂಟಾಗಬಹುದೆಂಬ ಅನಿಸಿಕೆ ಅವರದು. ಆ ಸೆಳೆತದಿಂದ ಬಿಡುಗಡೆ ಹೊಂದಬೇಕೆಂಬುದರ ಕಡೆಗೆ ಅವರ ಒಲವು ಜಾಸ್ತಿ. ದಾನ ಸ್ವೀಕರಿಸುವವರು ಸಂನ್ಯಾಸಿಯಾಗಿದ್ದು ಸರ್ವಸಂಗ ಪರಿತ್ಯಾಗಿಯಾಗಿರಬೇಕು. ಆದರೆ ದಾನವನ್ನು ಕಡ್ಡಾಯವಾಗಿ ಮಾಡಬೇಕೆಂಬ ನಿಯಮ ಜೈನಧರ್ಮದಲ್ಲಿದೆ. ದಾನ ಮಾಡುವುದರಿಂದ ಮುಕ್ತಿಯೊದಗಬಹುದೆಂಬ ನಂಬಿಕೆಯಿದ್ದುದರಿಂದ ದಾನ ಮಾಡಲು ಪ್ರೇರಣೆ ದೊರೆತಿರಬೇಕು. ಶರಣ ಹಾಗೂ ದಾಸ ಸಾಹಿತ್ಯದಲ್ಲಿ ಆರ್ಥಿಕತೆಯು ಸಮಾಜದಲ್ಲಿ ಸಮಾನ ಸಮೃದ್ಧ ಆಗಲು ಸಂಪತ್ತು ಪರಸ್ಪರ ಹಂಚಿಕೆಯಾಗಬೇಕೆಂದು ಭಾವಿಸಿರುವುದು ತಿಳಿಯುತ್ತದೆ. ಕಾಯಕ ಹಾಗೂ ದಾಸೋಹದ ಮೂಲಕ ಸಮಾಜ ಸುಧಾರಣೆಯ ಕಲ್ಪನೆಯನ್ನು ಅವರು ಕಂಡಿದ್ದರು. ಜೈನರು ದಾನದ ಮೂಲಕ ಧರ್ಮಾಚರಣೆ ಮಾಡಬಹುದೆಂಬ ಪರಿಕಲ್ಪನೆ ಹೊಂದಿದ್ದರು. ದಾನ ನೀಡುವವನು ಶ್ರೇಷ್ಠ;

ಸ್ವೀಕರಿಸುವವನು ಕನಿಷ್ಠ ಎಂದು ಭಾವಿಸದೆ ಈ ಎರಡು ಕ್ರಿಯೆಗಳು ಧರ್ಮ ಕಾರ್ಯಗಳೆಂದು ಸ್ವೀಕರಿಸಿದ್ದರು. ಇಂತಹ ದಾನ ಧರ್ಮದ ಬಗ್ಗೆ ಜೈನಹಾಡುಗಳಲ್ಲಿ ಅನೇಕ ಉಲ್ಲೇಖಗಳು ಸಿಗುತ್ತವೆ.

"ದಾನವಿಲ್ಲದ ಭವನ ವನ ಮನದೊಳು
ಜ್ಞಾನವಿಲ್ಲದ ಪಾಠ ಬರುಡು ಓಟ"[೬೩]

ಎಂದು ಹೇಳುವ ಮೂಲಕ ದಾನದ ಶ್ರೇಷ್ಠತೆ ಬಹಳ ಮುಖ್ಯವಾದುದು ಎಂಬ ಧ್ವನಿಯನ್ನು ಹೇಳುತ್ತದೆ. 'ಲೇಸಾಗಿ ದಾನ ಪೂಜೆಯ ಮಾಡೋ ದಾನ ತಪಸ್ಸಿಗಿಂತಲೂ ದೊಡ್ಡದು. ಅದು ಪೂಜೆಗೆ ಸಮಾನ. ಪ್ರಕಾರ ದಾನಿಯ ಸಂಪತ್ತು ಜಗದ ಪೀಡೆಗೆ ಮಿತ್ತು. ಆದ್ದರಿಂದ ಮಾಡು ದಾನ ಧರ್ಮಪರೋಪಕಾರವ ಮರೆಯದಿರೆಚ್ಚರಿಕೆ ಎಂದು ಎಚ್ಚರಿಸುತ್ತಾರೆ.

ಶುದ್ಧವಾಗಿ ಬದುಕಬೇಕೆಂದು ತಿಳಿಸುತ್ತಾನಲ್ಲದೆ, ಶಾಶ್ವತವಲ್ಲದ ಈ ದೇಹವನ್ನು ನಂಬಿ ದಾನ ಧರ್ಮವ ಮಾಡದೇ ಕೆಡಬಾರದು. ಒಂದು ವೇಳೆ ಕೆಟ್ಟರೆ ಹಲವು ಜನ್ಮಗಳಲ್ಲಿ ಬರುವ ಕಷ್ಟ ಹೊರಬೇಕಾಗುತ್ತದೆ. ಆದ್ದರಿಂದ ಹಾಡೊಂದರಲ್ಲಿ 'ಮೂಡುವುದು ದೇವತಾರ್ಚನೆಯ ಗುರುಪೂಜೆಯ ಮಾಡುವುದು ದಾನ ಧರ್ಮಗಳ ಅನುದಿನವು' ಎಂದು ಹೇಳಲಾಗಿದೆ.

"ದಾನಧರ್ಮವೆಂಬ ಕಟ್ಟಾಂಗರವನಿಟ್ಟು ಸುಜ್ಞಾನವೆಂಬ ವಜ್ರದಾ ಪಂಜರಾ ತೊಟ್ಟು
ಹೀನಾಮಾನವೆಂಬ ನೀಚಂಗನೆಯನು ಬಿಟ್ಟು ಆತ್ಮ
ಧ್ಯಾನಿಯಾಗಿ ದುಷ್ಟ ಕರ್ಮಾರಣ್ಯವ ಸುಟ್ಟು"[೬೪]

ಜೈನರ ಪ್ರಕಾರ ನಾಲ್ಕು ದಾನಗಳು ಶ್ರೇಷ್ಠವಾದವು. ಅವುಗಳನ್ನು ಹಾಡೊಂದರಲ್ಲಿ ಹೀಗೆ ಹೇಳಲಾಗಿದೆ.

"ದೇವ ಪೂಜೆಯ ಮಾಡು ನಾಲ್ಕು ದಾನಂಗಳ
ಸಾವದ್ಯವಿಲ್ಲದೆ ಕೊಡು ವ್ರತಿಗೆ
ಶ್ರೀ ವೀತರಾಗ ನೊರೆದ ಶಾಸ್ತ್ರವ ಸದ್ಭಕ್ತಿ
ಯಿಂ ಓದು ದಿನಂ ಪ್ರತಿಯೂ||"[೬೫]

ಜೈನರು ದಾನಗಳನ್ನು ನಾಲ್ಕು ವಿಧಗಳಾಗಿ ವಿಂಗಡಿಸುತ್ತಾರೆ. ಅವುಗಳೆಂದರೆ ಆಹಾರ, ಅಭಯ, ಔಷಧ ಹಾಗೂ ಶಾಸ್ತ್ರದಾನ. ಹಾಗೆಯೇ ಹಿಂದೂಗಳಲ್ಲಿ ಅನ್ನದಾನವೇ ಶ್ರೇಷ್ಠವೆಂದು ಅನೇಕ ಗ್ರಂಥಗಳಲ್ಲಿ ಉಲ್ಲೇಖಗೊಂಡಿದೆ. ಲಿಂಗಾಯತರಂತೂ ದಾಸೋಹ ಪರಿಕಲ್ಪನೆಯನ್ನು ಹೊಂದಿದ್ದರಲ್ಲದೆ, ಪ್ರಸಾದದ ಮಹತ್ವವನ್ನು ಒತ್ತಿ ಹೇಳಿದ್ದಾರೆ. ದಾಸರು ಕೂಡ ಅನ್ನದಾನಕ್ಕಿಂತ ಮಿಗಿಲಾದುದು ಇನ್ನೊಂದಿಲ್ಲವೆಂದೇ ಪ್ರತಿಪಾದಿಸಿದ್ದಾರೆ. ಜೈನರಲ್ಲಿಯೂ ಆಹಾರದಾನ ಪೂಜೆಯ ಸಮಾನ. ಪ್ರತಿಯೊಬ್ಬ ಜೈನನೂ ಅಭಯದಾನ, ಔಷಧದಾನ, ಶಾಸ್ತ್ರದಾನ, ಆಹಾರದಾನ ಮಾಡುವುದು ಪರಮ ಕರ್ತವ್ಯಗಳಾಗಬೇಕು ಎಂದು ಜೈನಧರ್ಮ ಹೇಳುವ ಮೂಲಕ ಅವುಗಳನ್ನು ಧಾರ್ಮಿಕ ಆಚರಣ ವಿಧಾನಗಳನ್ನಾಗಿಸಿತು.

"ಹೆದರಿದವರಿಗೆ ಅಭಯ ಕೊಡುವುದು, ಆ ಮೂಲಕ ಸತ್ಯದ ಪರವಾಗಿ ನಿಂತು ಅನ್ಯಾಯವನ್ನು ಎದುರಿಸುವುದು ಶ್ರೇಷ್ಠದಾನಗಳಲ್ಲಿ ಒಂದಾಗಿದೆ. ಜಿನ ಚೈತ್ಯಾಲಯಗಳ ಜೀರ್ಣೋದ್ಧಾರ, ಜಿನ ಪ್ರತಿಮೆ

ಮಾಡಿಸುವುದು, ಶಾಸ್ತ್ರಗ್ರಂಥ ಪ್ರಕಟಿಸುವುದು ಋಷಿ, ಅರ್ಜಿಕಾ, ಶ್ರಾವಕ, ಶ್ರವಕಾ ಎಂಬ ನಾಲ್ಕು ಸಂಘಗಳಿಗೆ ಆಹಾರ ದಾನ ಮಾಡುವುದು, ಈ ಏಳು ಕ್ಷೇತ್ರಗಳಲ್ಲಿ ಶ್ರಾವಕನು ತನ್ನ ನ್ಯಾಯಾರ್ಜಿತ ಸಂಪತ್ತನ್ನು ವ್ಯಯ ಮಾಡುತ್ತ ಆತ್ಮಕಲ್ಯಾಣಕ್ಕೆ ಹಾದಿಯನ್ನು ತೆರೆದುಕೊಳ್ಳಬೇಕೆಂದು ಜೈನಧರ್ಮ ಕಟ್ಟುನಿಟ್ಟಿನ ಶಾಸನವನ್ನು ವಿಧಿಸಿದೆ."[೬೬]

ಇಂತಹ ದಾನಧರ್ಮ ಕಾರ್ಯಗಳನ್ನು ಜೈನಧರ್ಮೀಯರು ಪ್ರಾಚೀನ ಕಾಲದಿಂದಲೂ ಮಾಡುತ್ತ ಬಂದಿರುವುದಕ್ಕೆ ನಮ್ಮಲ್ಲಿ ಹಲವಾರು ಪುರಾವೆಗಳು ಸಿಗುತ್ತವೆ. ಅತ್ತಿಮಬ್ಬೆ ಅನೇಕ ಜಿನ ಮಂದಿರಗಳ ಜೀರ್ಣೋದ್ಧಾರ ಮಾಡಿಸಿದ ಉಲ್ಲೇಖ ಶಾಸನಗಳಲ್ಲಿ ಲಭ್ಯವಿವೆ. ಪೊನ್ನ ಮಹಾಕವಿಯ ಶಾಂತಿನಾಥ ಪುರಾಣವನ್ನು ಪ್ರತಿ ಮಾಡಿಸಿ ದಾನ ಮಾಡಿದ ಮಾಹಿತಿ ಲಭ್ಯವಿದೆ. ಇದೊಂದು ಸಂಪ್ರದಾಯವಾಗಿ ಈಗಲೂ ರೂಢಿಯಲ್ಲಿರುವುದು ಕಂಡುಬರುತ್ತದೆ. ಹೀಗೆ ಜೈನಧರ್ಮವು ಧರ್ಮ ಪ್ರಭಾವನೆಗಾಗಿ ಜಿನಮಂದಿರ ಸ್ಥಾಪನೆ, ಮೂರ್ತಿ ಸ್ಥಾಪನೆ, ಧರ್ಮಶಾಸ್ತ್ರ ಪ್ರಚಾರಕ್ಕಾಗಿ ಪುಸ್ತಕ ಪ್ರಕಟಣೆ ಮುನಿಗಳಿಗೆ ಆಹಾರ ದಾನದ ಖರ್ಚು ಇತ್ಯಾದಿಗಳಿಗೆ ಮಾಡುವ ದಾನಗಳು ಆಗಿವೆ.

**೧. ಸಮಾಧಿಮರಣ-ಸಲ್ಲೇಖನ ವ್ರತ**

ಜೈನಧರ್ಮದ ವ್ರತಾಚಾರಗಳಲ್ಲಿ ಸಲ್ಲೇಖನಕ್ಕೆ ವ್ರತಕ್ಕೆ ಹೆಚ್ಚಿನ ಸ್ಥಾನವಿದೆ. ಜೈನಧರ್ಮದ ವೈಶಿಷ್ಟ್ಯಗಳಲ್ಲಿ ಧಾರ್ಮಿಕ ದೇಹತ್ಯಾಗವು ಒಂದು. ಜೈನಧರ್ಮೀಯರು ಇಂತಹ ದೇಹತ್ಯಾಗಗಳನ್ನು ಸಮಾಧಿ ಮರಣಗಳೆಂದು ಕರೆಯುತ್ತಾರೆ. ಸಲ್ಲೇಖನವನ್ನು 'ತನು ವಿಮೋಚನಾ' ಸಮಾಧಿ ಮರಣವೆಂದು ಕರೆದಿದೆ. ಈ ದೇಹ ನಶ್ವರವೆಂದು ಎಲ್ಲ ಧರ್ಮಗಳು ಹೇಳುತ್ತವೆ. ಆದರೆ ಅದನ್ನು ಒಂದು ಕ್ರಿಯೆಯನ್ನಾಗಿಸಿ ತನ್ನ ಸಾವನ್ನು ತಾನೇ ಸಮಚಿತ್ತದಿಂದ ಎದುರಿಸುವ ಈ ವ್ರತ ಶ್ರೇಷ್ಠ ಎಂದು ಜೈನದರ್ಶನದ ನಂಬಿಕೆಯಾಗಿದೆ. ಬದುಕು ಅಸಹನೀಯವಾದಾಗ, ಜೀವಿಸುವ ಬಗ್ಗೆ ಆಸಕ್ತಿ ಇಲ್ಲದಾಗ ಧಾರ್ಮಿಕ ವಿಧಿಗನುಗುಣವಾಗಿ ಧ್ಯಾನಾಸಕ್ತನಾಗಿ ಸಾಯುವುದು ಸಮಾಧಿ ಮರಣ. ಕೆಲವರು ಆರೋಗ್ಯದಿಂದಿದ್ದು ಸಕಲ ಸಂಪತ್ತುಗಳನ್ನು ಹೊಂದಿದ್ದರೂ ಈ ಜೀವನ ಕ್ಷಣಿಕವೆಂಬ ಅರಿವುಂಟಾಗಿ ಈ ವ್ರತವನ್ನು ಆಚರಿಸುವುದಾಗಿದೆ. ಇಂತಹ ಆಚರಣೆಯ ಲಕ್ಷಣಗಳನ್ನು ಜೈನಕಾವ್ಯಗಳಲ್ಲಿ ನೋಡಬಹುದು.

ವಡ್ಡಾರಾಧನೆಯ ಕಥೆಗಳು, ಪಂಪನ ಆದಿಪುರಾಣ, ಪೊನ್ನನ ಶಾಂತಿನಾಥ ಪುರಾಣ, ರನ್ನನ ಅಜಿತನಾಥ ಪುರಾಣ, ಬಹುತೇಕ ಎಲ್ಲ ಜೈನ ಕವಿಗಳು ತಮ್ಮ ಸಾಹಿತ್ಯ ಕೃತಿಗಳಲ್ಲಿ ಸಲ್ಲೇಖನದ ಮಹತ್ವವನ್ನು ವೈರಾಗ್ಯದ ರೂಪದಲ್ಲಿ ವಿವರಿಸಿರುವುದು ಕಂಡುಬರುತ್ತದೆ. ಜೀವನದ ಮೇಲೆ ಆಸೆ ತೊರೆದವರು, ದೇಹದ ಬಗ್ಗೆ ವೈರಾಗ್ಯ ಹೊಂದಿದವರು ಈ ವ್ರತಕ್ಕೆ ಮುಂದಾಗುತ್ತಾರೆ. "ಪ್ರಾಚೀನ ಕರ್ನಾಟಕದಲ್ಲಿ ಈ ಸಮಾಧಿ ಮರಣವು ಬಹು ಜನ ಜೈನರು ಆರಾಧಿಸುತ್ತಿದ್ದ ಆದರ್ಶ ಮರಣವಾಗಿತ್ತು"[೬೭] ಇಂತಹ ಸಮಾಧಿ ಮರಣವನ್ನು ಆಚರಿಸುವವನು ಆಹಾರವನ್ನು ತ್ಯಜಿಸಿ, ತನ್ನ ಕರ್ಮಕ್ಕಾಗಿ ಪಶ್ಚಾತ್ತಾಪ ಪಟ್ಟು, ಪಂಚಕರಮೇಷ್ಠಿಗಳ ಧ್ಯಾನದಲ್ಲಿ ಪ್ರಾಣತ್ಯಾಗ ಮಾಡಬೇಕು. ಈ ಸಂದರ್ಭದಲ್ಲಿ ಏನೇ ಕಷ್ಟ ಬಂದರೂ ಸಹಿಸಿಕೊಳ್ಳಬೇಕು. ಅಪರಿಗ್ರಹ ಪರೀಕ್ಷಗಳನ್ನು ನಿಗ್ರಹಿಸಬೇಕು. "ಆತ್ಮನು ಅಮರತ್ವವನ್ನು ಒಪ್ಪುವ ಸಾಧಕನು, ಮರಣಕ್ಕೆ ಹೆದರಲಾರನು, ಅದನ್ನು ಅವನು ಮರಣವೊಂದು ಮಹಾಯಾತ್ರೆ ಎಂದು ಭಾವಿಸುವನು."[೬೮]

ಸಮಾಧಿ ಮರಣವನ್ನು ಅಪ್ಪಿಕೊಂಡ ಸಾಧಕನಿಗೆ ಜೀವನದ ಬಗ್ಗೆ ಆಸೆ ಇರುವುದಿಲ್ಲ. ಆತ್ಮದ ಬಗ್ಗೆ ಒಲವು ಇರುತ್ತದೆ. ಆತ್ಮ ಸಾಕ್ಷಾತ್ಕಾರವೇ ಅವನ ಅಂತಿಮ ಗುರಿಯಾಗಿರುತ್ತದೆ. ಸಮಾಧಿ ಮರಣವನ್ನು ಕೆಲವರು ಆತ್ಮಹತ್ಯೆಯೆಂದು ಭಾವಿಸಬಹುದು. ಜೈನದರ್ಶನದ ಪ್ರಕಾರ ಇದು 'ಆತ್ಮವರ್ಧಕ.' ಇಲ್ಲಿ ಮನಸ್ಸಿನಿಂದ ಹಿಂಸಾಭಾವನೆ, ದ್ವೇಷಾದಿಗಳನ್ನು ತೊಡೆದು ಹಾಕಿ ಸದ್ಗುಣಗಳೊಂದಿಗೆ ಜಿನಧ್ಯಾನ ಮಾಡುತ್ತಾ ಸದ್ಗತಿಯನ್ನು ಕೋರುತ್ತಾನೆ. ಆತ್ಮಹತ್ಯೆ ಮಾಡಿಕೊಳ್ಳುವವನು ದುರ್ಬಲತೆಗಳ ಬದಲಾಗಿ ಆತ್ಮಕಲ್ಯಾಣಕ್ಕಾಗಿ ಶರೀರವನ್ನು ತ್ಯಾಗ ಮಾಡುವ ನಿರ್ವಿಕಾರ ಭಾವವಿರುತ್ತದೆ. "ಸಮಾಧಿ ಮರಣದಲ್ಲಿ ಮೂರು ವಿಧಗಳನ್ನು ಹೇಳಲಾಗಿದೆ.

**ಇಂಗಿತ ಮರಣ:** ಸಂಪೂರ್ಣವಾಗಿ ಆಹಾರವನ್ನು ತ್ಯಜಿಸಿ ಯಾವಾಗಲೂ ನೆಲದ ಮೇಲೆ ಮಲಗಿರಬೇಕು. ಸಮಯ ಸಿಕ್ಕಾಗ ಜೈನ ದಾರ್ಶನಿಕ ಗ್ರಂಥಗಳನ್ನು ಅಧ್ಯಯನ ಮಾಡುತ್ತಿರಬೇಕು.

**ಪ್ರಾಣೋತ್ಕ್ರಮಣ:** ಈ ಮರಣ ವ್ರತವನ್ನು ಸ್ವೀಕರಿಸಿದವರು ದೂರದ ಗುಡ್ಡ ಬೆಟ್ಟಗಳಿಗೆ ತೆರಳಬೇಕು. ನಿರ್ಜನ ಪ್ರದೇಶದಲ್ಲಿ ಪ್ರಾಣವು ದೇಹ ಬಿಟ್ಟು ಹೋಗುವವರೆಗೆ ಅಲುಗಾಡದೆ ನಿಂತಿರಬೇಕು.

**ಸಲ್ಲೇಖನ ವ್ರತ:** ಈ ವ್ರತವನ್ನು ಸ್ವೀಕರಿಸಿದ ನಂತರ ಹಂತಹಂತವಾಗಿ ಆಹಾರವನ್ನು ತ್ಯಜಿಸಬೇಕು. ಉಪವಾಸದ ದಿನಗಳನ್ನು ನಿಧಾನವಾಗಿ ಹೆಚ್ಚಿಸಬೇಕು. ಕೊನೆಕೊನೆಗೆ ಹೆಚ್ಚು ಉಪವಾಸ ಕೈಗೊಂಡು ಪ್ರಾಣತ್ಯಾಗ ಮಾಡಬೇಕು. ಪದವಿ ಯೋಗಗೊಂಡ ಸ್ತ್ರೀಯರು ಹೆಚ್ಚಾಗಿ ಈ ವ್ರತವನ್ನು ಕೈಕೊಳ್ಳುತ್ತಾರೆ."[೬೯] ಹೀಗೆ ಸಲ್ಲೇಖನ ವ್ರತವನ್ನು ಕೈಗೊಂಡು ದೇಹತ್ಯಾಗ ಮಾಡಿದವರ ಬಗ್ಗೆ ಕರ್ನಾಟಕದಾದ್ಯಂತ ಅನೇಕ ನಿಸಿದಿ ಕಲ್ಲುಗಳು ಸಿಗುತ್ತವೆ.

ಶ್ರವಣ ಬೆಳಗೊಳದಂತಹ ಜೈನ ಧಾರ್ಮಿಕ ಕ್ಷೇತ್ರದಲ್ಲಿ ಸಲ್ಲೇಖನ ವ್ರತ ಕೈಗೊಂಡು ಸಮಾಧಿಮರಣ ಹೊಂದಿದವರ ಪುರಾವೆಗಳು ಸಿಗುತ್ತವೆ. ಇಂತಹ ಆಚರಣೆಯಗಳನ್ನು ಜೈನಹಾಡುಗಳಲ್ಲಿ ಸಮಾಧಿ ಮರಣದ ಪಾವಿತ್ರ್ಯತೆಯನ್ನು ಕೊಂಡಾಡಲಾಗಿದೆ. "ಸಿಂಹ ವಿಕ್ರೀಡಿತ ಘೋರ ತಪದೊಳಿರ್ದು ಸಿಂಹ ಸಮಾಧಿ ವಿಧಿಗಳ ತನುವ ಬಿಟ್ಟು; ಮುಕ್ತಿಗೆ ಹೋಗಲು ಸಿದ್ಧರಾಗಲು ತಿಳಿಸಲಾಗಿದೆ"[೭೦] ತನ್ನ ಭವವನ್ನು ಕೇಳಿ ವೈರಾಗ್ಯವನ್ನು ತಾಳಿ ಧರ್ಮತತ್ವವನ್ನು ಲಾಲಿಸುತ್ತ ಸನ್ಯಾಸನ ವಿಧಿಯಿಂದ ದೇಹ ಬಿಟ್ಟರೆ ಮೋಕ್ಷ ಲಭಿಸುವುದು ಎಂಬುದು ಜೈನರ ಬಹು ದೊಡ್ಡ ಧಾರ್ಮಿಕ ನಂಬಿಕೆಯಾಗಿದೆ. ಜೈನಧರ್ಮದ ಕ್ರಿಯೆಯನ್ನು ಈ ಹಾಡಿನಲ್ಲಿ ಹಾಡುಗಾರ ಕಟ್ಟಿಕೊಟ್ಟಿರುವುದು ವಿಶೇಷ. ಜೈನಧರ್ಮದಲ್ಲಿ ಇಂತಹ ಧಾರ್ಮಿಕ ಆಚರಣೆಗಳು ಕೇವಲ ಆಚರಣೆಗಳಾಗದೇ ಮಾನವನ ಸರ್ವತೋಮುಖ ವಿಕಸನಕ್ಕೆ ದಾರಿಯಾಗಿವೆ. ಇವು ಮಾನವನ ಆತ್ಮಕಲ್ಯಾಣಕ್ಕಾಗಿಯೇ ಸ್ಥಾಪಿಸಿ ದಂತಹ ವೈಚಾರಿಕ ದೃಷ್ಟಿಯಿಂದ ಕೂಡಿದ ಆಚರಣೆಗಳಾಗಿ ಕಂಡುಬರುತ್ತವೆ.

ಜೈನ ಧರ್ಮದ ಕ್ರಿಯಾ ಹೇಳತೇನ ಡಗದ ಬಾಯಾ
ನನ್ನ ಮ್ಯಾಲ ನಿಮ್ಮ ದಯಾ ಇರಬೇಕು ಪೂರ್ಣ
ಶಾಂತದಿಂದ ಕೇಳಿರಿ ಸರ್ವಜನ ||

## ೫.೫. ಸಾಮಾಜಿಕ ಸ್ಥಿತ್ಯಂತರಗಳು

ಜೈನಧರ್ಮ ತನ್ನ ಹುಟ್ಟಿನಿಂದ ಇಂದಿನವರೆಗೂ ತನ್ನ ಧರ್ಮದ ಸಾಂಪ್ರದಾಯಿಕ ಮೂಲ ಆಚಾರ ವಿಚಾರ ತತ್ತ್ವ ಸಿದ್ಧಾಂತಗಳನ್ನು ಸರಳಗೊಳಿಸುವುದರ ಮುಖಾಂತರ ಸ್ಥಿತ್ಯಂತರಕ್ಕೆ ಒಳಗಾಗಿವೆ. ಅಹಿಂಸೆಯನ್ನು ತನ್ನ ಮೂಲ ಪ್ರಣಾಳಿಕೆಯನ್ನಾಗಿಟ್ಟುಕೊಂಡು ಸದಾ ಅದನ್ನು ಪಾಲಿಸುವಂತೆ ಜೈನರಿಗೆ ಉಪದೇಶ ಮಾಡುತ್ತ ಬಂದಿದೆ. ಧರ್ಮದ ತಿರುಳು ಹೇಗೋ ಹಾಗೇ ಧರ್ಮದ ಅನುಯಾಯಿಗಳು ತನ್ನ ಕ್ರಿಯಾಚರಣೆಗಳನ್ನು ನಡೆಸಿಕೊಂಡು ಹೋಗಬೇಕೆಂದು ಧರ್ಮ ಅಪೇಕ್ಷಿಸುತ್ತದೆ. ಆದರೆ ಇಂದು ಜೈನಧರ್ಮ ಆಧುನಿಕ ಮತ್ತು ಜಾಗತೀಕರಣಗಳ ಪ್ರಭಾವದಿಂದ ತನ್ನ ಮೂಲ ಸಾಂಪ್ರದಾಯಿಕ ಆಚರಣೆಯ ಸ್ವರೂಪಗಳನ್ನು ಕಳೆದುಕೊಂಡು ಆಧುನಿಕ ಬದುಕಿಗೆ ಒಗ್ಗಿಕೊಂಡಿವೆ. ಜೈನರ ಬಸದಿ, ಮಠ ಮಾನ್ಯಗಳಲ್ಲಿ ಜೈನಧರ್ಮದ ತತ್ತ್ವ ಸಿದ್ಧಾಂತ ಹಾಗೂ ಆಚರಣೆಗಳಲ್ಲಿ ಸಾಂಪ್ರದಾಯಿಕ ಮೂಲ ಸ್ವರೂಪಗಳು ಕಂಡುಬರುವುದಿಲ್ಲ. ಅದರ ಬದಲಾಗಿ ವೈದಿಕ ಪರಂಪರೆಯ ಆಚರಣೆಗಳನ್ನು ಮೈಗೂಡಿಸಿಕೊಂಡಿದೆ. ಬಹುತೇಕ ಕರ್ನಾಟಕದಲ್ಲಿರುವಂತಹ ಎಲ್ಲ ಜೈನಕೇಂದ್ರಗಳಲ್ಲೂ ತನ್ನ ಧರ್ಮದ ಮೂಲ ಪ್ರಣಾಳಿಕೆಗಳು ಹಾಗೂ ಆಚರಣೆಗಳೆಲ್ಲವೂ ಸ್ಥಿತ್ಯಂತರಗೊಂಡಿರುವುದು ಕಂಡುಬರುತ್ತದೆ. ತೀರ್ಥಂಕರರನ್ನು ಆರಾಧಿಸುವ, ಪೂಜಿಸುವ ಹಂತದಿಂದ ಹಿಡಿದು ಹಬ್ಬಹರಿದಿನಗಳು, ರಥೋತ್ಸವ, ಮಠಮಾನ್ಯಗಳ ತಾತ್ವಿಕತೆಯಲ್ಲಿ ವೈದಿಕೀಕರಣಗೊಂಡಿರುವುದು ಕಂಡುಬರುತ್ತದೆ.

"ಜೈನರು ಜಿನಭಕ್ತರು ಎಂಬುದಕ್ಕಿಂತ ಜಿನನ ಹಿಂಬಾಲಕರು ಎಂಬುದು ಸಮರ್ಪಕವಾಗಿದೆ. ಈ ಅರ್ಥದಲ್ಲಿ ಬಸದಿ ಎಂಬುದು ಸಮಸವರಣದ ಅನುಕರಣ. ಬಸದಿಯೊಳಗೆ ಪೂಜಾ ಸಾಮಗ್ರಿಯಿಡುವುದು, ಅದನ್ನು ಸ್ವೀಕರಿಸಿ ಜಿನನು ಪ್ರಸನ್ನನಾಗುತ್ತಾನೆ ಎಂದಲ್ಲ. ರಿಕ್ತಹಸ್ತರಾಗಿ ಗೌರವ ತೋರುವುದು ಸರಿಯಲ್ಲವೆಂಬ ಲೌಕಿಕ ಕಾರಣಕ್ಕಾಗಿ ಮತ್ತು ಈ ಪೂಜಾದಿ ವಿಧಾನದ ಹಾಡು ಆ ಜೈನರ ಪ್ರಭಾವದಿಂದ ಬಂದಿದ್ದು. ಜೈನತತ್ವದಲ್ಲಿ ಮೂಲತಃ ಫಲಕಾಪ್ಪುದಿಗಳ ಇಡದೆಯೇ ಭಾವಪೂಜೆ ಮಾಡುವುದು ಸಾಕೆಂದು ಶಾಸ್ತ್ರಗ್ರಂಥಗಳು ಸ್ಪಷ್ಟಪಡಿಸುತ್ತವೆ. ಜಿನಗ್ರಹ ಹಿಂದೂ ಗುಡಿಗಳಂತೆ ಕಂಡುಬರುತ್ತವೆ. ಪ್ರಸಾದ ಪುಳಿಯೋಗರೆ ವಿತರಣೆ ಪರಿಪಾಟವಿಲ್ಲ. ಜೈನರು ಮೂಲ ಆಗಮ ನಿಯಮದಂತೆಯೇ ಮೂರ್ತಿ ಪೂಜೆಯೇ ಮಾಡುವಂತಿಲ್ಲ. ಈ ಬಸದಿಗಳನ್ನು ಕಟ್ಟುವ, ಜಿನಬಿಂಬ ಮೂಡಿಸುವ ಪದ್ಧತಿ ಕ್ರಿ.ಪೂ. ಮೂರನೇ, ಎರಡನೇ ಶತಮಾನದಿಂದ ಈಚೆಗೆ ರೂಢಿಗೆ ಬಂದಿದೆ. ಕ್ರಿ.ಶ. ಮೂರನೆಯ ಶತಮಾನದ ತರುವಾಯ ಯಕ್ಷ-ಯಕ್ಷಿಣಿಯರನ್ನು ಪೂಜಿಸುವ ಪರಂಪರೆ ಪ್ರಾರಂಭವಾಗಿದೆ."[೨೮] ಇದರಿಂದ ಜೈನಧರ್ಮದ ಮೂಲ ಆಚರಣೆಗಳು, ಸಿದ್ಧಾಂತಗಳ ಹಿಂದಿರುವ ಸಾರ್ವತ್ರಿಕ ಮಾನವ ವಿಕಾಸದ ದೃಷ್ಟಿ ಅಥವಾ ವೈಚಾರಿಕ ದೃಷ್ಟಿಕೋನ ಆಚರಣೆಗಳಲ್ಲಿ ಈಗ ಕಂಡು ಬರುವುದಿಲ್ಲ.

ಜೈನಧರ್ಮದ ಪ್ರತಿಯೊಂದು ಸಿದ್ಧಾಂತ ಹಾಗೂ ಆಚರಣೆಗಳು ಸಕಲಮಾನವನ ಕಲ್ಯಾಣದ ದಾರಿಯಾಗಿದೆ. ಆಧುನಿಕತೆಯ ಸೋಂಕಿನಿಂದ ಅಥವಾ ಅನಿವಾರ್ಯತೆಯಿಂದ ಜೈನಧರ್ಮದ ಕೆಲವೊಂದು ದಿನನಿತ್ಯದ ಆಚರಣೆಗಳು ಅನಿವಾರ್ಯವಾಗಿ ಬದಲಾವಣೆಗೊಂಡಿವೆ. ಇಂತಹ ಸ್ಥಿತ್ಯಂತರಗಳನ್ನು ಕನ್ನಡ ಜೈನಹಾಡುಗಳಲ್ಲಿ ಅಧ್ಯಯನ ಮಾಡುವುದರೊಂದಿಗೆ, ಹಾಡುಗಳಲ್ಲಿ ವ್ಯಕ್ತವಾದ ಸಾಮಾಜಿಕ ಪರಿಸ್ಥಿತಿಯನ್ನು

ಅವಲೋಕಿಸುವುದು ಅವಶ್ಯಕ. ಹಾಡುಗಳ ವಸ್ತು-ವಿಷಯಗಳು ಸಮಾಜಕ್ಕೆ ಮುಖಾಮುಖಿಯಾಗುತ್ತವೆಯೇ? ಒಂದು ವೇಳೆ ಆಗಿದ್ದಲ್ಲಿ ಸಮಾಜದ ಮೇಲೆ ಈ ಹಾಡುಗಳು ಬೀರಿದ ಪ್ರಭಾವವೇನು? ಸ್ಥಿತ್ಯಂತರಕ್ಕೊಳಗಾದ ಜೈನ ಸಮಾಜದ ಧೋರಣೆಯನ್ನು ಈ ಹಾಡುಗಳು ಬಿಂಬಿಸುತ್ತವೆಂಬ ಮಹತ್ವದಿಂದ ಕೆಲವು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಾಗಿದೆ. ಕಾರಣ ಸಾಮಾಜಿಕ ಸ್ಥಿತಿಗತಿ, ವರ್ಣವ್ಯವಸ್ಥೆ, ಸಾಮಾಜಿಕ ಹೊಣೆ ನಿವಾರಣೆ, ಜೀವನ ಮಾರ್ಗ, ಕೌಟುಂಬಿಕ ವ್ಯವಸ್ಥೆ, ಸಂಘಸಂಸ್ಥೆ, ಹಣಕಾಸಿನ ವ್ಯವಹಾರ, ಮೌಲ್ಯಶಿಕ್ಷಣ ಮೊದಲಾದ ವಿಷಯಗಳನ್ನಿಟ್ಟುಕೊಂಡು ಚರ್ಚೆ ಮಾಡುವುದಾಗಿದೆ. ಇಂತಹ ಕೆಲವೊಂದು ಸಂಪ್ರದಾಯಗಳು ಪ್ರಾಚೀನ ಕಾಲದಿಂದ ಜೈನಧರ್ಮದ ಆಚರಣೆಗಳಲ್ಲಿ ಸೇರಿಕೊಂಡಿವೆ. "ಜೈನರಲ್ಲಿ ಮೂಲತಃ ಕ್ರಿ.ಪೂ.ದಿಂದ ಕ್ರಿ.ಶ.ದವರೆಗೆ ವರ್ಣವ್ಯವಸ್ಥೆ ಇರಲಿಲ್ಲ."[೨೨] ಕ್ರಿ.ಶ. ೫-೬ನೇ ಶತಮಾನದ ವೇಳೆಗೆ ಬ್ರಾಹ್ಮಣ ಧರ್ಮವು ಸೇರಿಕೊಂಡಿತು. ಹಿಂದುಗಳ ಪ್ರಕಾರ ಶ್ರೀಕೃಷ್ಣನಿಂದ ವರ್ಣವ್ಯವಸ್ಥೆ ರೂಪಿತಗೊಂಡರೆ. ಜೈನ ಪರಂಪರೆಯಲ್ಲಿ ಆದಿತೀರ್ಥಂಕರ ವೃಷಭನಾಥನಿಂದ ವಿಂಗಡನೆಯಾಗಿದೆ. ವೃಷಭನಾಥನು ವೃತ್ತಿಗಳ ಆಧಾರದ ಮೇಲೆ ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಮೂರು ವರ್ಣಗಳಾಗಿ ವಿಂಗಡಿಸಿದನೆಂಬುದು ಅವರ ಪರಂಪರಾಗತವಾದ ನಂಬಿಕೆ "ಆದಿ ತೀರ್ಥಂಕರನು ಸಾಮಾಜಿಕ ಜೀವನವನ್ನು ಸುಗಮಗೊಳಿಸುವ ಸಲುವಾಗಿ ವರ್ಣವ್ಯವಸ್ಥೆಯನ್ನು ಜಾರಿಗೆ ತಂದು ಒಕ್ಕಲುತನ, ವ್ಯಾಪಾರ ಮಾಡುವವರು ವೈಶ್ಯರು, ಸಮಾಜದ ಸೇವೆಯ ಹೊಣೆ ಹೊತ್ತವರು ಶೂದ್ರರು, ಈ ಸಮಾಜವನ್ನು ರಕ್ಷಿಸುವ ಹೊಣೆ ಹೊತ್ತವರು ಕ್ಷತ್ರಿಯರೆಂಬ ವರ್ಗೀಕರಣ ಮಾಡಿದವನು ಆದಿನಾಥನಾಗಿದ್ದನು."[೨೩]

ಇಲ್ಲಿ ಆದಿನಾಥನು ಈ ವರ್ಣವ್ಯವಸ್ಥೆಯನ್ನು ವ್ಯಾವಹಾರಿಕ ಅನುಕೂಲತೆಯಿಂದ ಕೂಡಿದ ವ್ಯಕ್ತಿ ಮೂಲವನ್ನಾಧಾರಿಸಿದ ವ್ಯವಸ್ಥೆಯಾಗಿತ್ತೇ ವಿನಃ ಇಂದು ನಮ್ಮಲ್ಲಿ ಅನೇಕ ಜನರು ಭಾವಿಸಿಕೊಂಡಿರುವಂತೆ ಜಾತಿಯಾಧಾರಿತ ಸಮಾಜದ ವರ್ಗೀಕರಣವಾಗಿರಲಿಲ್ಲ. ಮುಂದೆ ಕೊನೆಯ ತೀರ್ಥಂಕರನಾದ ಮಹಾವೀರನ ಕಾಲಕ್ಕೆ ಪ್ರಾಚೀನ ವರ್ಣವ್ಯವಸ್ಥೆ ಹದಗೆಟ್ಟಿತು ಎಂಬುದನ್ನು ಹಲವಾರು ಪುರಾಣ, ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಿಸಲಾಗಿದೆ.

ಜೈನಹಾಡುಗಳು ರಚನೆಯಾಗುವ ಕಾಲಕ್ಕಾಗಲೇ ವರ್ಣವ್ಯವಸ್ಥೆ ತನ್ನ ಮೊದಲಿನ ಸ್ವರೂಪವನ್ನು ಕಳೆದುಕೊಂಡಿತ್ತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳು ಪ್ರಾಸಂಗಿಕವಾಗಿ ಉಲ್ಲೇಖವಾಗಿದ್ದರೂ, ಕಸಬುಗಳನ್ನಾಧಾರಿಸಿ ಜಾತಿಯನ್ನು ಗುರುತಿಸುವ ಪದ್ಧತಿ ಸಮಾಜದಲ್ಲಿತ್ತು. ಹಿಂದೂ ಧರ್ಮದಿಂದ ಪ್ರತಿಸಂಸ್ಕೃತಿಗಳಾಗಿ ಹುಟ್ಟಿಕೊಂಡ ಜೈನ, ಬೌದ್ಧಧರ್ಮಗಳು ಪ್ರಚಾರದ ಕೊರತೆ, ಕಟ್ಟುನಿಟ್ಟಾದ ಆಚಾರಗಳಿಂದ ಅಸ್ತಿತ್ವಕ್ಕಾಗಿ ಹೆಣಗಾಡುತ್ತಿದ್ದವು. ದಾಸರ ಪ್ರಭಾವದಿಂದ ಬ್ರಾಹ್ಮಣ ಸಮಾಜ ಗಟ್ಟಿಗೊಳ್ಳುತ್ತಿದ್ದರೆ. ಶರಣರ ಪ್ರಭಾವದಿಂದ ಎಲ್ಲ ಜನಾಂಗದವರೂ ಲಿಂಗಾಯತ ಧರ್ಮದ ತೆಕ್ಕೆಗೆ ಜಾರುತ್ತಿದ್ದರು. ಆದರೂ ಉಪಪಂಗಡಗಳ ಸೃಷ್ಟಿಯಿಂದ ಜಾತಿ ವ್ಯವಸ್ಥೆಯಲ್ಲಿ ಗೊಂದಲಗಳಿದ್ದವು. ಆರ್ಯಸೂಚಕವಾಗಿ ಬಿಳುಪು, ದ್ರಾವಿಡ ಸೂಚಕವಾಗಿ ಕಪ್ಪು ಎಂದು ವ್ಯವಸ್ಥೆಗೊಂಡಿದ್ದ ವರ್ಣ ಪದ್ಧತಿ ನಂತರದಲ್ಲಿ ಜಾತಿಸೂಚಕವಾಯಿತು. ತಮ್ಮ ವೃತ್ತಿಗಳಿಂದಾಗಿ ಬೇರೆ ಬೇರೆಯಾದ ಪಂಗಡಗಳು ತಮ್ಮ ಪ್ರಾಚೀನತೆಯನ್ನು ಸ್ಥಾಪಿಸಲು

ಹವಣಿಸುತ್ತಿದ್ದವು. ತಮ್ಮ ಗುಂಪಿನ ವೈಶಿಷ್ಟ್ಯವನ್ನು ಕಾಪಾಡಿಕೊಳ್ಳಲು ಪ್ರಾರಂಭಿಸಿದಂತೆ ಸಮಾಜದಲ್ಲಿ ತಾರತಮ್ಯಭಾವನೆ ಸೃಷ್ಟಿಯಾಯಿತು. ಮತಾಂತರಗೊಂಡ ಜೈನರು ಬೇರೆ ಧರ್ಮದಲ್ಲಿ ಪ್ರತ್ಯೇಕ ಗುಂಪುಗಳಾಗಿ ಗುರುತಿಸಿಕೊಳ್ಳುವಂತಾಯಿತು. ಧರ್ಮದಲ್ಲಿರುವ ಇಲ್ಲವೇ ಹೊರ ಹೋಗುವ ವಿಚಾರದಲ್ಲಿ ಅವರು ಗೊಂದಲಕ್ಕೊಳಗಾದರು. ಅಂತಹವರನ್ನು ಲೇವಡಿ ಮಾಡಿ ಧರ್ಮದಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ಹಾಡುಗಳಲ್ಲಿ ವ್ಯಕ್ತಗೊಂಡಿದೆ. "ಬೇಕಿದೊಡೆ ಗುಣಲಾದ ಕಕಲಾರಿ ಜಿನಗಲ್ಲದೆ ನಾಡಾದಿ ದೈವಗಳೆಲ್ಲ ತಾವು ಮಿಕ್ಕ ಕೊಡಬಲ್ಲವೇನು ಎಪ್ಪತ್ತೆರಡು ತೀರ್ಥಂಕರ ಬಿಡು ತಪ್ಪದಾಗಿ ಮುಕ್ಕರು"[೨೪] ಮೊದಲಾದ ಹೇಳಿಕೆಗಳಿಂದ ಧರ್ಮದಲ್ಲಿ ಹಿಡಿದಿಡಲು ಪ್ರಭಾವ ಬೀರಿರುವುದನ್ನು ನೋಡಬಹುದು. ಈ ಮೇಲಿನ ಹಾಡುಗಳನ್ನು ಗಮನಿಸಿದರೆ ಮತಾಂತರ ಆಗುತ್ತಿದ್ದರೇನು? ಅಂತಹವರನ್ನು ತಡೆದು ಜೈನಧರ್ಮವೇ ಶ್ರೇಷ್ಠವೆಂದು ಹೇಳುವ ಧ್ವನಿ ಅರ್ಥಪೂರ್ಣವಾಗಿದೆ.

ಹಿಂದೂ ಧರ್ಮದಲ್ಲಿ ವರ್ಣಪದ್ಧತಿ, ಜಾತಿ ಪದ್ಧತಿಗಳಿಗೆ ಹೆಚ್ಚು ಆದ್ಯತೆ ದೊರಕಿ ಜಾತಿವಾರು ಕಸುಬುಗಳು ವಿಂಗಡನೆಯಾಯಿತು. ಇತರ ಮತಧರ್ಮಗಳು ಹಿಂದೂಧರ್ಮದಲ್ಲಿನ ಈ ನಿಷ್ಠುರತೆಯನ್ನು ಬಂಡವಾಳವಾಗಿಸಿ ತಮ್ಮ ಧರ್ಮಗಳ ಪ್ರಚಾರಕ್ಕೆ ಬಳಸಿಕೊಂಡರು. ಹಿಂದೂ ಧರ್ಮದವರಿಂದ ಜಾತಿಪದ್ಧತಿ ನಿಷೇಧದ ಮಾತುಗಳು ಅಲ್ಲಲ್ಲಿ ಕೇಳಿ ಬಂದರೂ ಅದು ಸಾರ್ವತ್ರಿಕತೆಯನ್ನು ಪಡೆಯಲಿಲ್ಲ. ಲಿಂಗಾಯತ ಸಮುದಾಯದಂತೆ ಜೈನಧರ್ಮವು ಜಾತಿಪದ್ಧತಿಯನ್ನು ಖಂಡಿಸಿ ತಮ್ಮ ಧರ್ಮಕ್ಕೆ ಸೇರಿದರೆ ಸಮಾನತೆ ದೊರೆಯುವುದೆಂದು ವಾದಿಸಿತು. ಹಾಗೆಯೇ ಲಿಂಗಾಯತ ಧರ್ಮವೂ ಹುಟ್ಟುವ ಮುನ್ನವೇ ಜೈನಧರ್ಮ ಶೂದ್ರರಿಗೆ ಮತ್ತು ಅಸ್ಪೃಶ್ಯರಿಗೆ ಒಳ್ಳೆಯ ಮಾನ್ಯತೆಯನ್ನು ನೀಡಿತ್ತು.

ಸಮಾಜದಲ್ಲಿ ಕೀಳೆನ್ನಿಸಿಕೊಂಡ ವ್ಯಕ್ತಿಗೂ ತಮ್ಮ ಧರ್ಮದಿಂದ ಸಾಮಾಜಿಕ ಮನ್ನಣೆ, ಪ್ರತಿಷ್ಠೆ ದೊರೆಯುವುದೆಂದು ಆಮಿಷ ತೋರಿತು. "ಪೊಲೆಯಂ ಶ್ರಾವಕನಾದೊಡೆ ಪಲರೊಳವಂ ಮಾನ್ಯನಪ್ಪೊನ್"[೨೫] ಎಂದು ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಬರುತ್ತದೆ. ಜೈನಧರ್ಮದ ಶ್ರೇಷ್ಠತೆಯನ್ನು ಸಾರುವ ಇಂತಹ ಮಾತುಗಳು ವಚನಕಾಲದಿಂದಲೂ ಅಭಿವ್ಯಕ್ತಗೊಳ್ಳುತ್ತಿದ್ದರೂ ಅದು ಜಾತಿ ಪದ್ಧತಿಯನ್ನು ವಿರೋಧಿಸುವ ಪ್ರಬಲ ಚಳುವಳಿಯಾಗಿ ರೂಪಗೊಳ್ಳಲಿಲ್ಲ. ಬಹುಶಃ ಜೈನಧರ್ಮ ಮುಂದುವರೆದಿದ್ದರೆ ಜೈನಧರ್ಮದಲ್ಲೂ ಸಹ ಜಾತಿಪದ್ಧತಿ ಸ್ತ್ರೀ ಸಮಾನತೆ ಕೆಲವೊಂದು ವೈಚಾರಿಕ ಸಂಗತಿಗಳು ಆಚರಣೆಗೆ ಬರುತ್ತಿದ್ದವು ಎಂಬುವುದನ್ನು ನೋಡಬೇಕಾಗುತ್ತಿತ್ತು.

ಜೈನಹಾಡುಗಳಲ್ಲಿ ಜೈನಧರ್ಮಕ್ಕೆ ಮತಾಂತರಗೊಳಿಸುವ ಒತ್ತಾಯದ ಮಾತುಗಳು ಬರುವುದಿಲ್ಲ. ಆದರೆ ಬೇರೆ ಮತಧರ್ಮಗಳಿಗೆ ಹೋಗದಂತೆ, ತನ್ನ ಧರ್ಮದಲ್ಲಿ ಆಚರಣೆ ಸುಲಭವೆಂದು ಹೇಳುವುದರ ಮೂಲಕ ಜೈನಧರ್ಮಿಯರಿಗೆ ತನ್ನ ಧರ್ಮದ ಶ್ರೇಷ್ಠತೆಯನ್ನು ಮನಗಾಣಿಸುವುದು ಹಾಡುಗಳಲ್ಲಿ ಕಂಡು ಬರುತ್ತದೆ. ಆತ್ಮಕ್ಕೆ ಹುಟ್ಟು, ಸಾವು ಜಾತಿಯಲ್ಲ. ಹುಟ್ಟು, ಮುಪ್ಪು, ಸಾವು ಜಾತಿಯೇನಿದ್ದರೂ ತನುವಿಗೆ ಮಾತ್ರ ಎಂದು ರತ್ನಾಕರವರ್ಣಿ ಹೇಳುತ್ತಾನೆ. ಜಾತಿ ಜಾರ, ಮರಣಗಳನ್ನು ಪಾತಕಗಳೆಂದು ದೂಷಿಸಿ,

ಅವುಗಳನ್ನು ಸುಟ್ಟು ಮೂಲೋಕ ವಂದ್ಯನೆನಿಸುವ ವಿಚಾರ ಹಾಡೊಂದರಲ್ಲಿ ಬರುತ್ತದೆ. "ಹುಸಿಯ ಜಾತಿಗಳ ಮುಟ್ಟ ಮುಸಿಯ ಬರಲೀವ ಬಿಟ್ಟು"[೬೬] ಸಕಲರಿಗೂ ಮನ್ನಣೆ ತೋರಬೇಕೆಂದು ತಿಳಿಸಲಾಗಿದೆ. ಜಾತಿಯೇ ಬಹುದೊಡ್ಡ ತೊಡಕಾಗಿ ಕಾಡುತ್ತಲಿರುವ ಇಂದಿನ ಸಮಾಜಕ್ಕೆ ಇಂತಹ ಬೋಧನೆಗಳ ಅವಶ್ಯಕತೆ ಹೆಚ್ಚು ಇದೆ.

**ಜೀವನ ಮಾರ್ಗ ಯಾವುದೇ**

ಧರ್ಮದಲ್ಲಿ ವ್ಯಕ್ತಿಯಾಗಿರಲಿ. ಆ ವ್ಯಕ್ತಿಯ ಏಳಿಗೆ ಅವನತಿಗಳು ಅವನ ನಡುವಳಿಕೆಯಿಂದ ನಿರ್ಧರಿತ ವಾಗುತ್ತವೆ. ಆಸೆ ಆಮಿಷಗಳಿಗೆ ಬಲಿಯಾಗಿ ಜೀವನದಲ್ಲಿ ಅವನತಿಯನ್ನು ಕಂಡರೆ ತ್ಯಾಗ, ಸಮಾನತೆ ಮೊದಲಾದ ಧರ್ಮಾಚರಣೆಗಳಿಂದ ಉನ್ನತಿಯನ್ನು ಕಾಣಬಹುದು. ಮನುಷ್ಯನ ನೀತಿ ಅನೀತಿಯ ನಡವಳಿಕೆಗಳು ಸಮಾಜದ ಮೇಲೆ ಪ್ರಭಾವ ಬೀರುತ್ತದೆ. ಸನ್ಮಾರ್ಗ ಪ್ರವೃತ್ತರಾದ ಮಾನವ ಜನಾಂಗದಿಂದ ಕೂಡಿದ ಸಮಾಜವು ಸುಖ ಸಂಪಾದವಾಗಿರುತ್ತದೆ. ಆದ್ದರಿಂದ ಎಲ್ಲ ಧರ್ಮಗಳು ಸಾಮಾಜಿಕ ಕಾರಣಗಳಿಗಾಗಿ ಮನುಷ್ಯನ ಒಳಿತು ಕೆಡಕುಗಳನ್ನು ನಿಷ್ಕರ್ಷೆ ಮಾಡಿವೆ. ತನ್ಮೂಲಕ ಮಾನವನಿಗೆ ಜೀವನ ಮಾರ್ಗವನ್ನು ತೋರಿಸಿವೆ. ಆ ಮಾರ್ಗದಂತೆ ನಡೆದಾಗ ಅಂತ್ಯದಲ್ಲಿ ಫಲಗಳು ಲಭಿಸಿ ಜೀವನ ಸಾರ್ಥಕವಾಗುತ್ತದೆ. ಮೋಕ್ಷ ಲಭಿಸುತ್ತದೆ. ಮನುಷ್ಯನನ್ನು ಸನ್ಮಾರ್ಗದಲ್ಲಿ ಪ್ರವೃತ್ತನಾಗಲು ಭೋಧಿಸುವ ಧರ್ಮದ ವಿಧಿವಿಧಾನಗಳು ಧರ್ಮದಿಂದ ಧರ್ಮಕ್ಕೆ ಭಿನ್ನವಾಗಿವೆ. ಆದರೂ ಅವುಗಳ ಅಂತಿಮ ಗುರಿ ಮನುಷ್ಯನ ಚಾರಿತ್ರ್ಯವನ್ನು ತಿದ್ದಿ ಅವನ ಬದಕನ್ನು ಉನ್ನತೀಕರಿಸುವುದೇ ಆಗಿದೆ.

ಮನುಷ್ಯ ತನ್ನ ಜೀವನದಲ್ಲಿ ಸೌಖ್ಯವನ್ನು ಅಪೇಕ್ಷಿಸುತ್ತಾನೆ. ಚರಾಚರ ವಸ್ತುಗಳಿಗೆ ಕಾರಣವಾದ ಒಂದು ಶಕ್ತಿಯಿದ್ದು, ಅದರಿಂದ ಮಾತ್ರ ಶಾಶ್ವತವಾದ ಸುಖ ಲಭಿಸುತ್ತದೆಯೆಂದು ನಂಬುತ್ತಾನೆ. ಈ ಜಾಡನ್ನು ಹಿಡಿದ, ಧರ್ಮಗಳು ಸುಖ-ದುಃಖ, ಸ್ವರ್ಗ-ನರಕಗಳ ಬಗ್ಗೆ ಹೇಳುವುದರ ಮೂಲಕ ಅಂದಿನ ಸಮಾಜದಲ್ಲಿರುವ ನ್ಯೂನತೆಗಳನ್ನು ತಿದ್ದಲು ಪ್ರಯತ್ನಿಸಿರುವುದು ಈ ಹಾಡುಗಳ ಮುಖಾಂತರ ಮನದಟ್ಟಾ ಗುತ್ತದೆ. ಹಾಗೆಯೇ ಸುಖ ಹಾಗೂ ಸ್ವರ್ಗ ಸಂಪಾದನೆಗೆ ಅನುಕೂಲವಾಗುವ ನೈತಿಕ ಜೀವನ ಮಾರ್ಗವನ್ನು ವಿವರಿಸಿರುವುದು ಕಂಡುಬರುತ್ತದೆ.

ಜೈನಧರ್ಮದ ತತ್ವ ನೀತಿಗಳು ಹಾಡುಗಳಲ್ಲಿ ಪ್ರಧಾನವಾಗಿರುವುದನ್ನು ಕಾಣಬಹುದು. ಅವುಗಳನ್ನು ಅಳವಡಿಸಿಕೊಳ್ಳಲು ಜನತೆಗೆ ಪೂರ್ವ ನಿದರ್ಶನಗಳೊಂದಿಗೆ ವಿವರಿಸಿ ಹೇಳಲಾಗಿದೆ. ತೀರ್ಥಂಕರರ ಚರಿತ್ರೆ, ತೀರ್ಥಕ್ಷೇತ್ರಗಳ ಮಹಿಮೆಯ ವಿವರಣೆ ಜೊತೆಗೆ ಜೀವನ ಮಾರ್ಗವನ್ನು ಸಂದರ್ಭೋಚಿತವಾಗಿ ನಿರೂಪಿ ಸಲಾಗಿದೆ. ಲಿಂಗಾಯತ, ವೈದಿಕ ಸಾಹಿತ್ಯದಲ್ಲಿ ಹೆಣ್ಣು ಮಾಯೆಯಾಗಿರದೆ, ಬಯಸುವ ಮನಸ್ಸು ಮಾಯೆ ಯಾಗಿರುತ್ತದೆ. ಹೆಣ್ಣಿರುವುದರಿಂದ ಬಯಕೆ ಹುಟ್ಟುತ್ತದೆ ಎಂಬ ನಿಲುವು ಜೈನರದು. ಅವರ ಪ್ರಕಾರ ಹೆಣ್ಣೆಂಬುದು ಮಾಯೆ, ನಾರಿಯರನ್ನು ನಂಬದಿರುವಂತೆ, ಅವರ ವಾದಕ್ಕೆ ಬೀಳದಿರುವಂತೆ ಬುದ್ಧಿವಾದ ಹೇಳುತ್ತದೆ.

"ಹೆಂಗಳ ಮೋಹಕೆ ಮರುಳಾಗಿ ಕಡೆ
ಗಂಗಳ ನೋಟಕೆ ಮಾರುವೋಗಿ ನಸು

ಹಿಂಗಿರ ಬಾರದಂತಾಗಿ ನೊಂದೆ

ನಂಗಜ ಬಾಣವೆನ್ನ ತಾಗಿ||"[೭೭]

ಜೀವನದಲ್ಲಿ ಹೆಣ್ಣಿನಿಂದಾಗಿ ಸಂಕಟವುಂಟಾಗುತ್ತದೆ. ಮೋಕ್ಷ ದೂರವಾಗುತ್ತದೆ. ಆಯಾ ಮಾಯವೇಷ ವನ್ನು ದೂರ ಮಾಡಿ ಸುಜ್ಞಾನಿಯಾಗಬೇಕು. ಪರಸ್ತ್ರೀಯನ್ನು ಬಯಸಿ ಪಾಪಕೂಪಕ್ಕೆ ಬೀಳಬಾರದು. ವೇಶ್ಯೆಯ ಸಂಗದಿಂದ ದೂರವಿರಬೇಕು. ಕೆಟ್ಟೊಡಲ ಸುಖದ ಸವಿಯು ಕಡಲ ಹೀರುವ ತೃಷೆಯಪ್ಪಿರುತ್ತದೆ. ಭೋಗಿಸಿ ದಷ್ಟು ತೃಷೆ ಕಡಿಮೆಯಾಗುವುದಿಲ್ಲ. ಅಂಗನೆಯೊಂದಿಗೆ ಸರಸದೊಂದಿಗೆ ಇರುವ ಧರ್ಮ ಕಸವೇ ಹಿಂಗಿ ಹೋಗುತ್ತದೆ. ಮೋಹವನ್ನು ದೂರು ಮಾಡಿ ಜಿನಸ್ಮರಣೆಯಿಂದ ಭವನಾಶವಾಗುವಂತಹ ಜೀವನ ಸಾಗಿಸಬೇಕು. ಜಿನನ ಭಕ್ತಿಯಲ್ಲಿ ತಲ್ಲೀನನಾಗಿ ಸದಾ ಅರ್ಚನೆಯಿಂದ ಧ್ಯಾನದಿಂದ ಅನಿತ್ಯವಾದ ಸಂಸಾರದಿಂದ ಪಾರಾಗು ವುದೇ ನಿಜವಾದ ಜೀವನವೆಂದು ಉಪದೇಶಿಸಲಾಗಿದೆ.

ಜೈನರು ದಾನ ಧರ್ಮಕ್ಕೆ ಹೆಚ್ಚಿನ ಮಹತ್ವ ನೀಡುತ್ತಾರೆ. ದ್ರವ್ಯವನ್ನು ಸಂಗ್ರಹಿಸುತ್ತಾ ಹೋದಂತೆ ಇಹದ ಮೋಹ ಮೋಕ್ಷ ಸಂಪಾದಿಸುವ ವಿಚಾರವನ್ನು ಮನುಷ್ಯ ಮರೆಯುತ್ತಾನೆ. ಸಂಗ್ರಹಿಸಿದ ಸಂಪತ್ತನ್ನು ಸಮಾಜದಲ್ಲಿನ ಬಡವರಿಗೆ, ದೀನ ದಲಿತರಿಗೆ ದಾನ ಮಾಡಬೇಕು. ಇಲ್ಲದಿದ್ದಲ್ಲಿ ಆದರಿಂದ ವಿನಾಶವಾಗುತ್ತದೆ. ತೀರ್ಥಂಕರರು ಚರಿತ್ರೆಗಳಲ್ಲಿ ಸುಖ ಅನುಭೋಗಿಸಿದ ನಂತರ ಕೀರ್ತಿ, ಮನ್ನಣೆಗಳು ಸಿಗುವುದಲ್ಲದೆ ಪುಣ್ಯ ಲಭಿಸುತ್ತದೆ. ಹಸಿದು ಬಂದವನಿಗೆ ಅನ್ನದಾನ ಮಾಡುವುದರಿಂದ ಸಿಗುವ ಪುಣ್ಯ ಅನನ್ಯವಾದದು

'ತ್ರಿವಿಧ ಪಾವುಡಿ ನಾಲ್ಕು ದಾನ ಕೊಡು

ತ್ರಿವಿಧ ಕಾಲ ಜಿನ ಪೂಜೆಯ ಮಾಡು

ವಿವಿಧ ಪರ್ಯಂತದೊಳು ಆಸನವ ಬಿಡು'

ಎಂದು ದಾನ ನೀಡುವುದರ ಜೊತೆಗೆ ಆಗಿಂದಾಗ್ಗೆ ಉಪವಾಸ ಮಾಡಲು ಹೇಳಲಾಗಿದೆ. ಉಪವಾಸದಿಂದ ಆರೋಗ್ಯ ಲಭಿಸುವುದಲ್ಲದೇ ಆಹಾರ ಧಾನ್ಯವು ಉಳಿಯುತ್ತದೆ. ದಾನ ಮಾಡದೆ ಗಳಿಸುವುದನ್ನೇ ಮಾಡುವವನಿಗೆ ಚೆನ್ನಾಗಿ ಗಳಿಸಿಯೂ ಬದುಕುವೆ ನಾನೆಂಬ ಚೇಷ್ಟೆ ಬೇಡೆಚ್ಚರಿಕೆ ಎಂದು ಎಚ್ಚರಿಸಿ ಅದರಿಂದ ಕೇಡೇ ಹೊರತು ಒಳಿತಾಗುವದಿಲ್ಲವೆಂದು ಸಮಾನತೆಯ ತತ್ವವನ್ನು ಹೇಳಲಾಗಿದೆ.

ಮನುಷ್ಯನ ಅತ್ಯಂತ ದೌರ್ಬಲ್ಯವೆಂದರೆ 'ಆಸೆ.' ಅದು ಮನುಷ್ಯನ ದಾರಿಯನ್ನು ತಪ್ಪಿಸುತ್ತದೆ. ಆಸೆಗೆ ಬಲಿಯಾದವನು ತನ್ನ ಘನತೆ ಬಿಟ್ಟು ಮಾಡಬಾರದ್ದನ್ನೆಲ್ಲಾ ಮಾಡುತ್ತಾನೆ. ಆಸೆಯ ಬಂಧನಕ್ಕೆ ಸಿಲುಕಿದವನು ತನ್ನತನ ಮರೆತು ಸಂಕಷ್ಟಕ್ಕೆ ಗುರಿಯಾಗುವನು. "ಅತಿಕಾಂಕ್ಷೆ ಯಾವಂಗೆ ಅತಿಕ್ಲೇಶ ಅತಿಕಾಂಕ್ಷೆಯಾವಂಗೆ ಅತಿದುಃಖ ಆತಂಗೆ; ಆಸೆಯುಳ್ಳವನಿಗೆ ಕೊನೆಯಲ್ಲಿ ನರಕವೇ ಒಳಿತೆಂಬುದಿಲ್ಲ.[೭೮] ಕಂಡುದ ಕಣ್ಣಿಟ್ಟು ಬಾರದಿರ್ದುದ ಬಯಸಿ ಬೆಲೆ ಬೆಡೆಗೊಂಬುದು ಹೇಯ "ಸುಣ್ಣದ ಒಳುಪು ನೋಡಿ ಕೈದುಡುಕಿ ಹೊಸ ಬೆಣ್ಣೆಯೆಂದು ಮೆದ್ದು ಮೆರುಗುವ ಮಕ್ಕಳಂತೆ"[೭೯] ಕೊನೆಗೆ ವಿಷಾದ ಪಡಬೇಕಾಗುತ್ತದೆ. ಮನುಷ್ಯ ಎಷ್ಟಿದ್ದರೂ ಅಸುಖಿ. ಬಡತನವಿದ್ದಾಗ ಊಟದ ಆಸೆ. ಅದು ತೀರಿದ ಬಳಿಕ ಮಡದಿ ಮಕ್ಕಳೆಂಬ ಆಸೆ. ನಂತರ ಮಕ್ಕಳ ಮದುವೆಗೆ ಕೂಡಿಡುವ ಚಿಂತೆ. ಹೀಗೆ ಪರರಿಗೆ ಬದುಕುತ್ತ ವಯಸ್ಸು ಕಳೆಯುವ

ಬದಲು ತನ್ನ ಬಗ್ಗೆ ಚಿಂತಿಸಬೇಕು. ಆಶಾ ಮೋಹದಿಂದ ರೌದ್ರಾವೇಶರೋಳಘುಬಂಧ ಮೊಸದಿ ಹೇಸದೆ ಗಾಸಿಪಟ್ಟು ಬಹು ನಾಶವಾಗಿ ನರಳುವ ಬದಲು ಆತ್ಮನನ್ನು ಅರಿಯಬೇಕು. "ಆಸೆ ರೌದ್ರ ದುರ್ಮೋಹನಂಗಳ ಕಡೆಗೊತ್ತಿ ಸೂಸಿ ಸೂಸುವ ಸುಜ್ಞಾನ ರೂಪ ಶುದ್ಧವಾಗಿ ಕಂಡ ಮೇಲಿನ್ನೇನು ಬೇಕು"[೮೦] ಎಂದು ಆಸೆ ಮೋಹಗಳನ್ನು ಮೀರಿ ಸುಜ್ಞಾನಿಯಾಗುವುದು ನಿಜವಾದ ಜೀವನ ಮಾರ್ಗವಾಗಿದೆ.

ಸಮಾಜದಲ್ಲಿ ಮನುಷ್ಯನಿಗೆ ಗೌರವ ಸಿಗಬೇಕಾದರೆ ಗುಣ ಮುಖ್ಯ. ಹಣವುಳ್ಳವನಿಗೆ ಹಣವಿರುವ ತನಕ ಮಾತ್ರ ಮಾರ್ಯಾದೆ ಸಿಗುತ್ತದೆ. ಹಣ ತೀರಿದ ಬಳಿಕ ಯಾರು ತಿರುಗಿ ನೋಡುವುದಿಲ್ಲ. ಅಧಿಕವಲ್ಲದ ಗುಣವಿದ್ದು ಮದದಿಂದ ತನ್ನ ತಾನೆಂಬುದು ಹುಚ್ಚುತನ. ಹಣಕ್ಕಾಗಿ ಕೈ ಚಾಚುವ ಲಂಚದಾಸೆಯ ಭೂಪ ವ್ಯಾಘ್ರರೂಪನಾಗುವ ಬದಲು ಶೀಲ ಸುಗುಣವನಿತ್ತು ಸಲಹು. ಕೃಪಾಳು ನಾ ಶರಣನಾದೆನು ಎಂದು ಜಿನನಲ್ಲಿ ಪ್ರಾರ್ಥಿಸಬೇಕು. ಜೀವನದಲ್ಲಿ ಹದಿನೆಂಟು ದೋಷಗಳನ್ನು ಕಳೆದುಕೊಂಡು ಅಷ್ಟಗುಣ ಸಂಕಟಷ್ಟನಾಗಿ ಬದುಕಬೇಕು ಎಂದು ಆ ಮೂಲಕ ಸಮಾಜದಲ್ಲಿರುವ ಲಂಚ ಸಂಪತ್ತಿನ ವ್ಯಾಮೋಹ ನಡತೆಗಳ ಬಗ್ಗೆ ತೀವ್ರವಾಗಿ ಈ ಹಾಡುಗಳು ಟೀಕಿಸುತ್ತವೆ. ಹಾಗೆಯೇ ಸಮಾಜದಲ್ಲಿ ಆದರ್ಶವ್ಯಕ್ತಿಯಾಗಿ ಬದುಕಲು ಮಾರ್ಗವನ್ನು ತೋರಿಸುತ್ತವೆ. ದೇಹದ ಬಗ್ಗೆ ಮಮಕಾರವನ್ನು ಇಟ್ಟುಕೊಳ್ಳದೇ ಶಾಶ್ವತವಾದ ಸುಖದ ಕಡೆಗೆ ಹಂಬಲಿಸಿ ಎಂದು ಹೇಳುವ ಮೂಲಕ ದೇಹದ ಅನಿತ್ಯತೆಯನ್ನು ಈ ಹಾಡು ಹೇಳುತ್ತದೆ.

"ಪ್ರಾಯದಿಂದ ಮೋಹಿಸಿದ ತನ್ನಯ ಕಾಯವೆ ಮುಪ್ಪಾಗಿ
ಹೇಯದೋರುತಲ್ಲದೆ ಮುನ್ನಿನ ಸೊಬಗೆಲ್ಲ
ಮಾಯವಾಗುತದೆ ತಲೆ ಕೈ ನಡುಗಿ ಮಾಗುತ್ತಿದೆ."[೮೧]

ಇಂತಹ ಕ್ಷಣಿಕ ದೇಹದ ಬಗ್ಗೆ ಮೋಹಗೊಳ್ಳಬಾರದು. ಎಲುಬು ಚರ್ಮ ಮಾಂಸದ ಮೈಯೊಳನಿರ್ದು ಚೆಲುವನೆಂದು ಗರ್ವಿಸುವೇಕೆ ಎಂದು ದೇಹದ ಸಿರಿಗೆ ಆನಂದಪಡುವವನ್ನು ಪ್ರಶ್ನಿಸುತ್ತಾನೆ. ಯೌವನ ಕಳೆದ ಬಳಿಕ ದೇಹದ ಕಾಂತಿ ಕುಗ್ಗುತ್ತದೆ. ಅಂದ ಕೆಡುತ್ತದೆ. ಹೇಸಿಕೆಯ ಅಪವಿತ್ರ ವಾಸನೆಯ, ದುರ್ಗಂಧದ ಒಂಬತ್ತುವೆಜ್ಜರೊಳನಾಡುವ ಹೊಲಸಿನೊಳು ತುಂಬಿ ತುಂಬಿ ತುಳುಕುವ ಕಿಸುಕುಳದ ಹಂಗಿನ ದೇಹದಾಸೆ ಬಿಡಬೇಕು ಹಾಗೆ ಮಾಡದಿದ್ದಲ್ಲಿ ಹಲವು ಜನ್ಮಗಳಲ್ಲಿ ಕ್ರಿಮಿಕೀಟ ಖಗಮೃಗಗಳಾಗಿ ಜನ್ಮ ತಾಳಬೇಕಾಗುತ್ತದೆ. ಆದ್ದರಿಂದ ಈ ದೇಹವನು ಧರ್ಮಕ್ಕಾಗಿ ಮೀಸಲಿಡಬೇಕು ಕೋಪ, ಗರ್ವ, ಲೋಭ, ಮಾಯೆ, ಮೋಹ ಪಾಪವನ್ನೇ ಮಾಡುತ್ತದೆ. ಮನಸ್ಸನ್ನು ತಿಳಿದು ಒಳ್ಳೆಯತನದಲಿ ನಡೆದರೆ ಮನದಂತೆ ಮಾಡುತ್ತದೆ. ಮಲಗಲ ನೆಸಿದಂತೆ ಕಾರ್ಯಸಿದ್ಧಿಯೇ ಪುಣ್ಯ. ಮೋಕ್ಷ ಲಭಿಸುತ್ತದೆ. ಇದರಿಂದ ಸಮಾಜವು ಸುವ್ಯವಸ್ಥಿತವಾಗಿ ಸಾಗುತ್ತದೆ.

ಹೀಗೆ ಜೈನಹಾಡುಗಳಲ್ಲಿ ಜೀವನ ವಿಧಾನದ ಬಗ್ಗೆ ನೀತಿಯನ್ನು ಹೇಳಲಾಗಿದೆ. ಜನಸಾಮಾನ್ಯರ ಅಜ್ಞಾನವನ್ನು ಕಳೆದು, ಮನುಸ್ಸನ್ನು ಶುದ್ಧವಾಗಿಸಿ ಅವರ ಬದಕನ್ನು ಹಸನು ಮಾಡಲು ಮಾರ್ಗದರ್ಶನವನ್ನು ನೀಡಲಾಗಿದೆ. ಮನುಷ್ಯ ತನ್ನ ಸಹಜವಾದ ದೌರ್ಬಲ್ಯಗಳ ಬಗ್ಗೆ ಗಮನ ಹರಿಸಿ ನಾಶವಾಗುವುದನ್ನು ತಡೆಯಲು, ದೌರ್ಬಲ್ಯಗಳಿಂದಾಗುವ ಅನಾಹುತ ಅಪಾಯಗಳನ್ನು ಪರಿಣಾಮಕಾರಿಯಾಗಿ ಹೇಳಲಾಗಿದೆ.

ಜನತೆಗೆ ಅವುಗಳಿಂದಾಗುವ ಕೇಡನ್ನು ತಿಳಿಯಬಯಸಿ ದೌರ್ಬಲ್ಯಗಳಿಂದ ಮುಕ್ತರಾಗಿ ಧರ್ಮಾಚರಣೆ ಮಾಡುತ್ತಾ ಸದಾಚಾರ ಸಂಪನ್ನರಾಗಬೇಕೆಂದು ಉತ್ತೇಜನ ನೀಡಲಾಗಿದೆ. ಸಾಮೂಹಿಕ ಜಾಗೃತಿಯಿಂದ ಮಾತ್ರ ಸಮಾಜ ಸುಧಾರಣೆ ಸಾಧ್ಯ. ಆದರೆ ವ್ಯಕ್ತಿಕಲ್ಯಾಣ ಸಿದ್ಧಾಂತದ ಮೇಲೆ ಒತ್ತುಕೊಟ್ಟ "ಭಾರತೀಯ ಧರ್ಮಗಳು ಸಮಾಜಕಲ್ಯಾಣ ಸಿದ್ಧಾಂತವನ್ನು ಬಹುಮಟ್ಟಿಗೆ ಉಪೇಕ್ಷಿಸಿದವು. ಇದರಿಂದ ಭಾರತೀಯ ವ್ಯಕ್ತಿ ಸಬಲ ಭಾರತೀಯ ಸಮಾಜ ದುರ್ಬಲವೆನಿಸಿದವು"[೮] ಹೀಗಾಗಿ ಜೈನದರ್ಶನದಲ್ಲಿಯೂ ಸಮಾಜಕ್ಕಿಂತ ವ್ಯಕ್ತಿಗೆ ಆದ್ಯತೆ ನೀಡಲಾಗಿದೆ.

## ೫.೬. ಸಾಹಿತ್ಯಕ ಅಧ್ಯಯನ

ಜೈನಧರ್ಮಿಯರು ೧೨ನೆಯ ಶತಮಾನದ ಶಿವಶರಣರ ಕ್ರಾಂತಿಯ ಫಲವಾಗಿ, ಜನಸಾಮಾನ್ಯರ ಭಾಷೆಗೆ ಮನ್ನಣೆ ನೀಡುವ ವಚನ ಸಾಹಿತ್ಯದ ಒಲವು ಮುಂದಿನ ಅನೇಕ ಜೈನಕವಿಗಳಿಗೆ ವಸ್ತುವಿನ ಆಯ್ಕೆ, ನಿರೂಪಣಾ ಕ್ರಮವನ್ನು ನಿರ್ಧರಿಸಲು ಕಾರಣವಾಯಿತು. ಈ ಮೂಲಕ ಜೈನಕವಿಗಳು ಹಾಡುಗಳನ್ನು ರಚಿಸುವ ಮೂಲಕ ಸಾಹಿತ್ಯದಲ್ಲಿ ಮರುಹೊಂದಾಣಿಕೆ ಮಾಡಿಕೊಂಡರು. ಕನ್ನಡ ಸಾಹಿತ್ಯದಲ್ಲಿ ಮಾರ್ಗೀಯ ಕಾವ್ಯ ರಚನೆಯಾಗುತ್ತಿದ್ದ ಸಂದರ್ಭದಲ್ಲಿ ತಮ್ಮ ಎತ್ತರವನ್ನು ಕಂಡುಕೊಂಡಿದ್ದ ಜೈನಕವಿಗಳು, ಮುಂದಿನ ಕಾಲಘಟ್ಟದಲ್ಲಿ ದೇಸಿ ಪ್ರಕಾರದ ಕಾವ್ಯ ರಚನೆಯಾಗುತ್ತಿರುವಾಗ ಹೊಸ ವ್ಯವಸ್ಥೆಗೆ ಹೊಂದಿಕೊಳ್ಳಬೇಕಾಯಿತು. ಶರಣರು ಹಾಗೂ ದಾಸರು ತಮ್ಮ ಹಾಡುಗಳಿಂದಾಗಿ ಜನತೆಯ ಮೇಲೆ ಹಿಡಿತ ಸಾಧಿಸುತ್ತಿದ್ದಾಗ ಜೈನರಿಗೆ ತಮ್ಮ ಸಿದ್ಧಾಂತಗಳು ಏರುಪೇರಾದ್ದರಿಂದ ಹೊಸ ಅಳವಡಿಕೆ ಅಗತ್ಯವಾಯಿತು. "ಯಾವುದೇ ಒಂದು ಸಾಹಿತ್ಯ ಪ್ರಕಾರವೂ ಒಂದು ಉನ್ನತಿಯ ಮಟ್ಟವನ್ನು ಮುಟ್ಟಿದ ಮೇಲೆ ತನ್ನ ಶಕ್ತಿಗಳನ್ನೆಲ್ಲ ಉಪಯೋಗಿಸಿಕೊಂಡು ಸಾಧಿಸಬೇಕಾದುದನ್ನೆಲ್ಲ ಸಾಧಿಸಿ ತನ್ನಿಂದ ತಾನೇ ಸತ್ತ್ವಗುಂದಿ ಕೇವಲ ಆಕಾರ ಮಾತ್ರವಾಗಿ ಮುಂದುವರೆಯುವುದು ಒಂದು ಸಹಜ ಘಟನೆ."[೯] ಅದೇ ಪ್ರಕಾರಕ್ಕೆ, ವಸ್ತುವಿಗೆ ಜೋತು ಬಿದ್ದರೆ ಉದ್ದೇಶಿತ ಗುರಿ ಈಡೇರದೇ ಹೋಗುವ ಅಪಾಯವಿರುತ್ತದೆ. ಹೀಗಾಗಿ ಈ ಕಾಲದಲ್ಲಿ ಜೈನ ಸಾಹಿತ್ಯದಲ್ಲಿ ಕೆಲವು ದೇಸಿ ಪ್ರಕಾರದಲ್ಲಿ ರಚನೆಯಾದರೆ, ಹಾಡುಗಳು ಹೆಚ್ಚಿನ ರೀತಿಯಲ್ಲಿ ರಚನೆಯಾದವು. ವಸ್ತುಕ ಕಾವ್ಯಗಳ ರಚನೆ ನಿಂತೇ ಹೋಯಿತೆನ್ನುವಷ್ಟರ ಮಟ್ಟಿಗೆ ಕಡಿಮೆಯಾಯಿತು.

ಈ ಘಟ್ಟದಲ್ಲಿ ಮಾನವನ ಪರಿಪೂರ್ಣತೆಗೆ ಕಾರಣವಾಗುವ ಮಾರ್ಗವನ್ನು ನಿರ್ಮಿಸಲು ಜೈನ ಕವಿಗಳು ಸಾಹಸಪಟ್ಟರು. ಭಕ್ತಿಮಾರ್ಗದ ಮೂಲಕ ಮನುಷ್ಯ ಪರಿಪೂರ್ಣಗೊಂಡು ಮುಕ್ತಿ ಸಾಧಿಸಬೇಕೆಂಬುದು ಅವರ ಜೀವನದೃಷ್ಟಿ. ಅದನ್ನು ಹಾಡುಗಳ ಮೂಲಕ ಅಭಿವ್ಯಕ್ತಿಗೊಳಿಸಿದರು. "Literature is Fundamentally Language"(ಸಾಹಿತ್ಯವೆನ್ನುವುದು ಭಾಷೆಯ ಮೂಲಕ ಹೊರ ಹೊಮ್ಮಿದ ಜೀವನದ ಅಭಿವ್ಯಕ್ತಿ) ಎಂದು ಹಡ್ಸನ್ ಹೇಳುತ್ತಾನೆ. ವ್ಯಾಖ್ಯಾನ ಭಿನ್ನಭಿನ್ನ ರೀತಿಯಲ್ಲದಿದ್ದರೂ, ಎಲ್ಲಾ ಹಾಡುಗಳಲ್ಲಿ ಆಚರಣೆಗೆ ಒತ್ತು ನೀಡಲಾಗಿದೆ. ಜನಸಾಮಾನ್ಯರಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳನ್ನುಂಟು ಮಾಡಿ ಅವರ ಜೀವನ ಮೋಹ, ಲೋಭ, ಮತ್ಸರಾದಿಗಳಿಂದ ಮುಕ್ತರಾಗಿ ಪರಮ ಪರದತ್ತ ಕೊಂಡೊಯ್ಯುವ ಗುರಿಯನ್ನು ಈ ಹಾಡುಗಳು ಹೊಂದಿವೆ.

ಇಲ್ಲಿಯ ಆಶಯ ಸಾಹಿತ್ಯ ಶೋಧನೆಯಲ್ಲ. ವ್ಯಕ್ತಿಯನ್ನು ಸಾಧನೆಗೆ ಪ್ರೇರೇಪಿಸುವುದು, ಜಿನನನ್ನು ಧ್ಯಾನಿಸುವುದು, ಮತೀಯ ಪರಿಮಿತಿಯೊಳಗೆ ಅವನ ಉದ್ಧಾರವನ್ನು ಬಯಸುವುದು, ಆಸೆ, ಆಮಿಷ, ಮೋಹ, ಕಾಮ, ವಿಷಯ ವಾಸನೆಗಳು ಅವನಲ್ಲಿ ಉಳಿದರೆ ಅವನು ಸಾಧಿಸುವುದಾದರೂ ಏನನ್ನು? ಅವುಗಳಿಂದ ಹೊರಬಂದಾಗಲೇ ಆಧ್ಯಾತ್ಮಿಕ ಸಾಧನೆ ಸಾಧ್ಯವಲ್ಲವೆ? ಹಾಗಾಗಿ ಅವರಿಗೆ ಸಿದ್ಧಪುರುಷರ ಚರಿತ್ರೆ, ಜೀವನ, ತೀರ್ಥಕ್ಷೇತ್ರಗಳ ಮಹಾತ್ಮೆ, ಕ್ಷಣಿಕ ಸುಖದ ಬಗ್ಗೆ ಅರಿವು, ಧ್ಯಾನದ ಮಹತ್ವ ತಿಳಿಸಿಕೊಡಬೇಕೆಂಬುದೇ ಮುಖ್ಯವಾಯಿತು. ಅಂದರೆ ಧರ್ಮವನ್ನು ಸುಲಭಗೊಳಿಸಿ ಜನಪ್ರಿಯ ಮಟ್ಟಕ್ಕೆ ಇಳಿಸಿದರೆಂದು ಭಾವಿಸಬೇಕಿಲ್ಲ. ಅದರ ಮೌಲ್ಯವನ್ನು ಜನತೆಗೆ ತಿಳಿಸಲು ಸರಳಮಾರ್ಗ ಹಿಡಿದರು. ಇಲ್ಲಿ ಧರ್ಮ ಪ್ರತಿಪಾದನೆಯೇ ಮುಖ್ಯವಾಗಿರುವುದರಿಂದ ಸಾಹಿತ್ಯ ಸಾಧನೆಯನ್ನು ನಿಷ್ಕರ್ಷೆ ಮಾಡುವಂತಿಲ್ಲ. ಇದ್ದುದರಲ್ಲಿಯೇ ವಸ್ತುನಿಷ್ಠವಾಗಿ ಸಾಹಿತ್ಯಕ ಮೌಲ್ಯಗಳನ್ನು ಗುರುತಿಸುವ ಪ್ರಯತ್ನವನ್ನಷ್ಟೇ ಮಾಡಬೇಕಾಗಿದೆ. ಧಾರ್ಮಿಕ ದೃಷ್ಟಿಕೋನದ ಹಿನ್ನೆಲೆಯಲ್ಲಿ ಸಾಹಿತ್ಯಿಕ ಅಂಶಗಳನ್ನು ಕಟ್ಟಿಕೊಡಲಾಗಿದೆ.

೧. ಭಾಷೆ

ಹಾಡುಗಳ ರಚನಕಾರರು ತಮ್ಮ ಅನುಭವದ ಅಭಿವ್ಯಕ್ತಿಯ ಮಾಧ್ಯಮವಾಗಿ ಭಾಷೆಯನ್ನು ಬಳಸಿಕೊಂಡ ರೀತಿಯನ್ನು ಗಮನಿಸಬಹುದು. ಅವರಿಗೆ ಭಾಷೆಯ ಬಂಧಕ್ಕಿಂತ ಜನತೆಯ ಜೊತೆಗಿನ ಅನುಬಂಧ ಮುಖ್ಯವಾಯಿತು. ಸಾಮಾನ್ಯನಿಗೆ ತಮ್ಮ ಧರ್ಮದ ತತ್ವಗಳನ್ನು ಮುಟ್ಟಿಸುತ್ತಾ ಅವರ ಜೀವನ ವಿಧಾನಗಳನ್ನು ಬದಲಾಯಿಸುವ ಗುರಿಯನ್ನು ಅವರು ಹೊಂದಿದ್ದರು. ಅದಕ್ಕನುಗುಣವಾಗಿ ಭಾಷೆಯನ್ನು ಪಳಗಿಸಿಕೊಂಡು ಸರಳವಾಗಿ, ಆದರೂ ಲಯ, ಭಾವ, ಸೌಂದರ್ಯ ಮಿಡಿಯುವಂತೆ ಹಾಡುಗಳನ್ನು ರಚಿಸಿದರು.

"ಉದಯ ಕಾಲದೊಳೆದ್ದು ಮುದದಿ ಸ್ನಾನವ ಮಾಡಿ
ಮೃದುವಚನದಿಂದ ಶ್ರೀ ಜಿನರ ಪಾದದ ನೆನೆಯೈ
ಸದಮಲ ಯೋಗ್ಯ ಸಂಪದವಿತ್ತು ಕಡೆಯಲ್ಲಿ
ಮುಕ್ತಿಮಾರ್ಗವ ತೋರುವಾ"[೮೪]

ಕೌಟುಂಬಿಕ ವ್ಯವಹಾರದಲ್ಲಿ ಮುಳುಗಿ, ಸಂಪತ್ತಿಗಾಗಿ ಕರುಬುವವರಿಗೆ ಜಿನನ ನೆನೆಕೆಯಿಂದ ಇಹ ಪರಗಳೆರಡರ ಸುಖ ಲಭಿಸುವ ಸರಳ ವಿಧಾನವನ್ನು ಈ ಹಾಡಿನಲ್ಲಿ ಹೇಳಲಾಗಿದೆ.

ಜೈನಕವಿಗಳು ಆರಂಭದಲ್ಲಿ ಕಾವ್ಯ ರಚಿಸುವಾಗ ಸಂಸ್ಕೃತಭೂಯಿಷ್ಟವಾದ ಶಿಷ್ಟಭಾಷೆಯನ್ನು ಹೆಚ್ಚು ಬಳಸಿದರು. ನಡುಗನ್ನಡ ಕಾಲದಲ್ಲಿ ಚಂಪೂ ಕಾವ್ಯಭಾಷೆ ಜನರಿಗೆ ಒಗ್ಗುವಂತಿರಲಿಲ್ಲ. ಕಾಲದ ಜಾಯಮಾನಕ್ಕೆ ತಕ್ಕಂತೆ ಭಾಷೆಯ ಹೊಸ ಸಾಧ್ಯತೆಯನ್ನು ಕಂಡುಕೊಳ್ಳುವುದು ಅನ್ಯಧರ್ಮಗಳ ಕವಿಗಳಂತೆ ಜೈನರಿಗೂ ಅನಿವಾರ್ಯವಾಯಿತು. ತಮ್ಮ ಧರ್ಮವನ್ನು ಜನತೆಯ ಬಳಿ ಕೊಂಡೊಯ್ಯಬೇಕೆಂಬ ಆಕಾಂಕ್ಷೆಯಿಂದ ಜನರಿಗೆ ಸುಲಭವಾಗಿ ಅರ್ಥವಾಗುವಂತಹ ಅಚ್ಚಗನ್ನಡದ ಪದಗಳ ಕಡೆ ವಾಲಿದೆ. ಬಾಳ್ವೆ, ಬಸ್ತಿ. ಪುಣ್ಯ, ಸಿದ್ದೆ, ಕೆಟ್ಟರ‍್ಯಾಗೆಲ್ಪ, ಬಿದ್ದರಲ್ಲೂ ಇಂತಹ ನೂರಾರು ದೇಸಿ ಪದಗಳು ಹಾಡುಗಳಲ್ಲಿ ಕಂಡುಬರುತ್ತವೆ.

"ಉಂಡು ದಣಿಯಬಹುದಲ್ಲದೆ ಸುಖವ
ಕೊಂಡು ಸುಯಲರಿದು
ಕಂಡವರ್ಗವಲ್ಲದೆ ಬಾರದು ಒಬ್ಬಸು
ಪಂಡಿತನಿಗೆ ಬಹುದು ದೇಹ
ಮಂಡಲಗೊಳಗಿಹುದು ಸ್ವರ್ಗ
ಖಾಂಡ ತಾನಾಗುತಿಹುದು"||[೮೫]

ಸ್ವರ್ಗಕ್ಕೆ ಬಾಧ್ಯವಾಗಬೇಕಾದರೆ ಅಧ್ಯಾತ್ಮದ ಅನಿವಾರ್ಯತೆ ಆಚರಣೆಯನ್ನು ತಾನೇ ಮಾಡಬೇಕಾದ ಅವಶ್ಯಕತೆಯನ್ನು ಈ ಹಾಡಿನಲ್ಲಿ ಹೇಳಲಾಗಿದೆ.

ಹಾಗೆಯೇ ಕೆಲವು ಸಂದರ್ಭಗಳಲ್ಲಿ ಆಧ್ಯಾತ್ಮಿಕವಾದ ವಿಚಾರಗಳನ್ನು ಹೇಳುವಾಗ ಅನಿವಾರ್ಯವಾಗಿ "ಸಂಸ್ಕೃತದ ರೂಪಗಳನ್ನು ಬಳಸುತ್ತಾರೆ. ಹಾಡುಗಳ ಆಶಯವನ್ನು ಅನುಲಕ್ಷಿಸಿ ಸಂದರ್ಭಕ್ಕೆ ತೆರವು ಕೊಡಲು, ಭಾವತೀವ್ರತೆಯನ್ನು ಸೂಚಿಸಲು ಭಾಷೆಯ ಏಕತಾನತೆಯನ್ನು ಮುರಿಯಲು ಸಂಸ್ಕೃತಕ್ಕೆ ಶರಣು ಹೋಗುತ್ತಾರೆ."[೮೬] ತೀರ್ಥಂಕರರನ್ನು, ಯಕ್ಷಿಣಿಯರನ್ನು ವರ್ಣಿಸುವಾಗ ಸುಂದರವಾದ ಉಪಮೆಗಳನ್ನು ಬಳಸಿರುವುದನ್ನು ನೋಡಬಹುದು.

"ಕಡಲು ಹೆಚ್ಚಿ ಗಾಳಿ ಘುಮ್ಮನೆ ತೀಡಲು
ಒಡನೆ ದಿಕ್ಕು ಚೊಕ್ಕವ ಮೊಗೆ
ಬಿಡದೆ ಕಲ್ಪತರು ಪುಗೆದೊರಲು ಜಗ
ದೊಡೆಯೆನು ಪಡೆದಳು ಶಿವದೇವಿ"||[೮೭]

ಇಂತಹ ವರ್ಣನೆಗಳು, ಹಾಡುಗಳ ತುಂಬ ಹರಿದುಹೋಗಿವೆ. ಪ್ರತಿ ಹಾಡು ಹಾಡಿಗೂ ಕುತೂಹಲವನ್ನು ಕೆರಳಿಸುವ ವರ್ಣನೆಗಳು, ಹೋಲಿಕೆಗಳು ಈ ಹಾಡುಗಳಲ್ಲಿ ಕಂಡುಬರುತ್ತದೆ.

ಶರಣರ, ದಾಸರ ಭಾಷೆಯಂತೆಯೇ ಇವರ ಭಾಷಾ ಬಳಕೆಯು ಆಕರ್ಷಕವಾಗಿದೆ. ಇಲ್ಲಿ ತಾತ್ವಿಕ, ಆಧ್ಯಾತ್ಮಿಕ ಆತ್ಮಾನುಭವ ನಿಲುವುಗಳನ್ನು ನಿದರ್ಶನಪೂರ್ವಕವಾಗಿ ಪ್ರದರ್ಶಿಸುವ ಭಾಷಾ ಮಾಧ್ಯಮವನ್ನು ಸ್ವೀಕರಿಸಲಾಗಿದೆ. ಜೈನ ಧಾರ್ಮಿಕ ಸಿದ್ಧಾಂತಗಳ ಶುಷ್ಕ ಶಾಸ್ತ್ರೀಯ ವಿವೇಚನೆಯಲ್ಲಿಯೂ ಸಾಹಿತ್ಯ ಮಾಧ್ಯಮವಾಗಿ ಹಾಡುಗಳು ಮಹತ್ವವನ್ನು ಪಡೆಯುತ್ತವೆ. ಪ್ರಯೋಗಶೀಲತೆ ಈ ಹಾಡುಗಳಲ್ಲಿ ಕಂಡುಬರುತ್ತವೆ.

"ಹೊಲೆಯನೆಂದೊಬ್ಬನು ಬೈದರೆ ನಿನಗದು
ಬಲದೋಷವೆಂದು ನೋವೆ
ಹೊಲೆಗೊಂಡ ತಾಯಗರ್ಭದಲ್ಲಿ ಜನಿಸಿ ಮುನ್ನ
ಹೊಲಿಸಿನೊಳಿರ್ದೆಯಲ್ಲೋ

ಮಲದ ಕುಳಿಯೊಳಿರ್ದೆಯಲ್ಲೋ ಜವನ
ಕೊಲೆಗೆ ನೀ ಸಂದೆಯಲ್ಲೋ ಆತ್ಮ||"[೮೮]

ಮಾಂಸ ಪಿಂಡದಿಂದ ಜನಿಸಿದ್ದು ತಾನು ತನ್ನಂತೆಯೇ ಜನಿಸಿದ ವ್ಯಕ್ತಿಯೊಬ್ಬನು ಜಾತಿ ಹಿಡಿದು ಕರೆದರೆ ನೋವು ಪಡುವುದೇಕೆ? ಎಲ್ಲರ ಆತ್ಮ ಒಂದೇ ಎಂಬುದನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ಕುಮಾರವ್ಯಾಸ, ರತ್ನಾಕರವರ್ಣಿ ಮೊದಲಾದ ಕವಿಗಳು ಸಮಕಾಲೀನ ಭಾಷೆ ಬಳಕೆ ಉಗಮಗಳನ್ನು ಕಾವ್ಯದಲ್ಲಿ ಯಥೇಚ್ಛವಾಗಿ ಪ್ರಯೋಗಿಸಿದರು. ದೇಸಿ ಕಾವ್ಯಗಳ ಜೊತೆಗೆ ಶರಣರ ದಾಸರ ಪ್ರಭಾವವನ್ನು ಜಾನಪದ ಸಾಹಿತ್ಯದ ಬನಿಯನ್ನು ಈ ಹಾಡುಗಳು ಒಳಗೊಂಡಿವೆ.

ಆಂತರಂಗಿಕ ತಳಮಳ, ಅಧ್ಯಾತ್ಮ ಸಾಧನೆ, ಧಾರ್ಮಿಕ ಸ್ವರೂಪ, ಅನುಭಾವ ನಿಲುವನ್ನು ತಮ್ಮ ಪರಿಸರದ ಭಾಷೆಯಲ್ಲಿ ಅಭಿವ್ಯಕ್ತಿಗೊಳಿಸಿ, ಧಾರ್ಮಿಕ ತತ್ವಗಳಿಂದ ಜನಜೀವನವನ್ನು ಜಾಗೃತಗೊಳಿಸಿ ಕನ್ನಡ ಸಾಹಿತ್ಯದ ಅಂತಃಸತ್ವವನ್ನು ಈ ಹಾಡುಗಳಲ್ಲಿ ತುಂಬಿದರು. ತಮ್ಮ ಧರ್ಮದ ಕಡೆ ಜನತೆಯನ್ನು ಆಕರ್ಷಿಸಿ, ಅವರನ್ನು ತಿದ್ದುವ ಆಶಯ ಇವರದ್ದಾಗಿದ್ದರೂ ಸಾಹಿತ್ಯವನ್ನು ಗೌಣವಾಗಿಸಲಿಲ್ಲ.

### ೨. ಅಲಂಕಾರ

ಭಾವಪ್ರಧಾನವಾದ ವಚನಗಳಲ್ಲಿ ಲಯ, ಪ್ರಾಸ, ಗಣ, ಯತಿ ಮೊದಲಾದ ಛಂದೋನಿಯಮಗಳನ್ನು ಯಾಂತ್ರಿಕವಾಗಿ ಅನುಸರಿಸಲಿಲ್ಲ. ಆದರೂ ಅವುಗಳಲ್ಲಿ ಭಾವಗೀತೆಯ ಲಕ್ಷಣಗಳುಳ್ಳ ಅನೇಕ ವಚನಗಳು ಸಿಗುತ್ತವೆ. ಸ್ವರವಚನ ಮತ್ತು ತತ್ವಪದಗಳು ಹಾಡಲು ಅನುಕೂಲವಾಗುವಂತೆ ರಚನೆಯಾಗಿವೆ. ಕಲಾತ್ಮಕವಾದ ಕೀರ್ತನೆಗಳಲ್ಲಿ ರಾಗ, ತಾಳಗಳು ಪ್ರಧಾನವಾಗಿವೆ. ಉಗಾಭೋಗ-ಸುಳಾದಿಗಳಿಗೆ ಸಂಗೀತವೇ ಜೀವಾಳ. ಜೈನಹಾಡುಗಳಲ್ಲಿ ಪ್ರಾಸ, ಲಯಗಳನ್ನೊಳಗೊಂಡ ಗೇಯತೆ ಮುಖ್ಯವಾಗಿದ್ದು ಭಾವಸಂಗೀತಗಳನ್ನು ಗೇಯತೆಗೆ ಅನುಗುಣವಾಗಿ ದುಡಿಸಿಕೊಂಡಿರುವುದನ್ನು ಕಾಣಬಹುದು. ಕೆಲವು ಹಾಡುಗಳು ಭಾವಪ್ರಧಾನವಾದರೆ ಕೆಲವು ಸಂಗೀತ ಪ್ರಧಾನವಾಗಿವೆ.

"ಮುಕ್ತಿಯೆಂಬೆ ಮುಕ್ತಿಯ ದಾರಿಯೆಂಬೆ
ಮುಕ್ತಿಯ ಸುಖವೆಂಬೆ ಶಕ್ತಿ
ಯುಕ್ತಿಯ ನೆಲೆಯೆಂಬೆ ತಾ ಬಳಿಕ ನನ್ನ
ಭಕ್ತಿಯಿಂದ ನಿನ್ನನೆ ನಾಥನೆಂಬೆ ||
ಜ್ಞಾನನೆಂಬೆ ಜ್ಞಾನದರುಶನವೆಂಬೆ
ಜ್ಞಾನದರುಶನ ಚಾರಿತ್ರ ನೀನೆಂಬೆ
ಜ್ಞಾನ ದರುಶನ ಚಾರಿತ್ರ ತಪಂಗಳ ನೀನೆಂಬೆ
ನೀನೆ ನಾನೆಂಬೆ ಗುರುವೇ ||"[೮೯]

ಇಲ್ಲಿ ಪುನರುಕ್ತಿಯಿಂದಾಗಿ ಲಯ ಸಿದ್ಧಿಸಿದೆ. ಸಹಜ ಪ್ರಾಸ, ಸರಳ ನುಡಿಗಳಿಂದಾಗಿ ಅಗಾಧವಾದ ಪರಿಣಾಮವನ್ನು ಉಂಟುಮಾಡುತ್ತವೆ. ವಿಶಿಷ್ಟ ಪದರಚನೆ ಹಾಡುಗಳ ಓಘವನ್ನು ಹೆಚ್ಚಿಸಿ, ಕಿರಿದರಲ್ಲಿ ಹಿರಿದನ್ನು ಹೇಳುವ ಪ್ರಾಸ ಸ್ಪರ್ಶದಿಂದ ಕಾವ್ಯಸೌಂದರ್ಯ ಇಮ್ಮಡಿಗೊಳ್ಳುವ ಪರಿಯನ್ನು ನೋಡಬಹುದು.

ಜೈನಹಾಡುಗಳಲ್ಲಿ ಶಬ್ದಾಲಂಕಾರಗಳು, ಅನುಪ್ರಾಸ, ಯಮಕ ಈ ಎರಡೂ ಬಗೆಯ ಅಲಂಕಾರಗಳು ಹೆಚ್ಚಾಗಿ ಬಳಕೆಯಾಗಿವೆ.

"ಆತ್ಮವನರಿದು ಭೋಗಿಪಭೋಗ ಸಂಭೋಗ
ಆತ್ಮನನರಿಯದ ಭೋಗದುಬ್ಬೇಗ
ಆತ್ಮನನರಿದು ಕೂಡುವ ಯೋಗ ಸಂಯೋಗ
ಆತ್ಮನನರಿಯದ ಯೋಗ ಕುಂಯೋಗ ||"[೬೦]

ಇಲ್ಲಿ ಶಬ್ದಾಲಂಕಾರಗಳು ಅತಿ ಸುಂದರವಾಗಿ ನಾದದಂತೆ ಬಂದು ಕಾವ್ಯಸೌಂದರ್ಯಕ್ಕೆ ಕಾರಣವಾಗಿವೆ. ಈ ಹಾಡುಗಳಲ್ಲಿ ಸಹಜವಾಗಿ ಬರುವ ಜೋ, ಜೋ, ಲಾಲಿ, ಲಾಲಿ, ಇಂತಹ ದ್ವಿರುಕ್ತಿಗಳು ಭಾವತೀವ್ರತೆಗೆ ಕಾರಣವಾಗಿವೆ. ಹಾಡುಗಳಲ್ಲಿ ಪ್ರಾಣಿಗಳ ಸಾದೃಶ್ಯವನ್ನು ಬಳಸಿಕೊಂಡು ಮಾನವನ ಗುಣಗಳನ್ನು ಚಿತ್ರಿಸಲಾಗಿದೆ. ಜನಮಾನಸದಲ್ಲಿರುವ ಪಂಚತಂತ್ರ ಕಥೆಗಳು ಪ್ರಾಣಿಗಳ ಗುಣ ಚೇಷ್ಟೆಗಳನ್ನು ಮನುಷ್ಯರೊಂದಿಗೆ ಸಮೀಕರಿಸುವುದರಿಂದ ಈ ಸಾದೃಶ್ಯಗಳು ಮನಮುಟ್ಟುತ್ತವೆ.

"ಕತ್ತೆ ಬಲ್ಲುದೆ ಹೊತ್ತ ವಸ್ತುಗಳ ಬೆಲೆಗಳನು?
ಹೇನು ಬಲ್ಲದೇ ಮುಡಿದ ಪರಿಮಳ ವಾಸನೆಯ?
ಶ್ವಾನ ಬಲ್ಲುದೇ ತಾನು ರಾಗಂ ಭೇದಂಗಳನ್ನು
ಮೀನು ಬಲ್ಲುದೇ ನೀರ ಸವಿ ಸ್ವಾದವೆಂಬುದನು
ಮಾನ ಹೀನಬಲ್ಲನೇ ಭಕ್ತಿ ವಿಶ್ವಾಸವನು?"[೬೧]

ಈ ಮೊದಲಾದ ಚಿತ್ರಣಗಳು ದೊರೆಯುತ್ತವೆ. ಈ ಪ್ರಾಣಿಗಳ ಉಪಮೆ ಅತ್ಯಂತ ಸಮರ್ಥವಾಗಿರದಿದ್ದರೂ ಮಾತಿಗೆ ಮೀರಿದ ಅಭಿಪ್ರಾಯವನ್ನು ಸಹಜವಾಗಿ ಕಟ್ಟಿಕೊಡುವಲ್ಲಿ ಯಶಸ್ವಿಯಾಗುತ್ತದೆ. ಕತ್ತೆ, ಶ್ವಾನ, ಕೋಡಗ, ಬೆಕ್ಕು, ಮೀನು, ಸಿಂಹ, ಆನೆ, ಗೂಳಿ, ಹೋತ, ಮೊದಲಾದ ಪ್ರಾಣಿಗಳ ಉಪಮೆಯನ್ನು ಸಂದರ್ಭಕ್ಕೆ ತಕ್ಕಂತೆ ಅರ್ಥವತ್ತಾಗಿ ಬಳಸಿಕೊಳ್ಳಲಾಗಿದೆ. ಇಲ್ಲಿ ಉಪಮೆಗಳನ್ನು ಸೃಷ್ಟಿಸಲೇಬೇಕೆಂಬ ಹಠವಿಲ್ಲ. ಅವು ಸಂದರ್ಭಸಹಜವಾಗಿ ಹಾಡುಗಳಲ್ಲಿ ಸೃಷ್ಟಿಯಾದವುಗಳಾಗಿವೆ.

"ಚಿಂತೆವೆರಸಿದ ರಾಜ್ಯವಿದ್ದೇನು? ಇಲ್ಲದೇನು? ಕಾಮ
ತಂತ್ರಕೊಳಗಾದ ವಿದ್ಯೆ ಇದ್ದೇನು? ಇಲ್ಲದೇನು?
ಭ್ರಾಂತರೊಳಗಣ ಗೋಷ್ಠಿ ಇದ್ದೇನು? ಇಲ್ಲದೇನು? ಅನ್ಯ
ಕಾಂತೆಗೊಲಿದನ ಬಾಳ ಇದ್ದೇನು? ಇಲ್ಲದೇನು?"[೬೨]

ಹೀಗೆ ಈ ಹಾಡಿನಲ್ಲಿ ಒಂದಾದ ಮೇಲೊಂದರಂತೆ ಸಾದೃಶ್ಯಗಳು ಬೆಳೆದು ವಸ್ತುವೊಂದು ಯಾವ ಪ್ರಯೋಜನಕ್ಕೆ ಬೇಕೋ ಅದು ಆ ವಸ್ತುವಿನಿಂದ ಲಭಿಸಬೇಕು. ಇಲ್ಲದಿಲ್ಲಲ್ಲಿ ಅದು ಇದ್ದೂ ವ್ಯರ್ಥ ಎಂಬ ಭಾವವನ್ನು ವ್ಯಕ್ತಪಡಿಸುತ್ತದೆ. ಅದರಂತೆ ನಿರ್ಮಲಭಾವದ ನಿನ್ನ ಚಿನ್ಮಯ ರೂಪವೆತ್ತ ಮಾಂಸ ಚರ್ಮಮಯವಾಗಿ ನಿಂದ ನಿಲುವಿದೆತ್ತ.

"ಕಾಡು ಕಥೆಗೆ ಕಿವಿಗೊಡದಿರು ವಾಸಲೋಕದ ಕಥೆಯ ಕೇಳು

ಪೊಸ ಮಡಿವಾಳನು ಕೊಳೆಯಾತ್ಮನ ತಾಮಸವಿಲ್ಲದೆ ಬಗೆವನು ನೋಡೆಲ್ಲ

ತನುವೆಂಬುದಿ ಮನೆ ಜೀವ ನೀನೊಬ್ಬ ಸತ್ಪುರುಷ ಕಂಡಾ||"[೯೩]

ದಾಹವೆಂಬ ಸೆರೆಮನೆಗೆನ್ನ ಕೂಡಿ ಮಾಯ ಮೋಹವೆಂಬ ಸೊಕ್ಕ ಸವಿಗೆ ಮಾಡಿಮಾಡಿ ಮುಂತಾಗಿ ಸಂದರ್ಭ ಸನ್ನಿವೇಶಗಳಿಗೆ ತಕ್ಕಂತೆ ಸಾದೃಶ್ಯಗಳನ್ನು ಬಳಸಲಾಗಿದೆ. ಕವಿಯ ಮನದಾಳದ ಅನಿಸಿಕೆಗಳಿಗೆ ಇವು ಮೂರ್ತರೂಪ ಕೊಡುತ್ತವೆ. ಕೇಳುಗನಿಗೆ ಅನಾವರಣಗೊಂಡು ವಿಷಯದ ಮಹತ್ವ ಮನದಟ್ಟಾಗುತ್ತದೆ.

ರತ್ನಾಕರವರ್ಣಿ ಅನುಭವ ಪಡೆದ ಕವಿ. ಇದರ ಫಲವಾಗಿ ಅವನ ಹಾಡುಗಳಲ್ಲಿ ವೈವಿಧ್ಯತೆ ಸಹಜವಾಗಿಯೇ ಸಿದ್ಧಿಸಿದೆ. ತನ್ನ ಅನುಭವಗಳನ್ನು ಆಧರಿಸಿ, ಅಲಂಕಾರಗಳನ್ನು ಸೃಷ್ಟಿಸಿ ಉದ್ದೇಶಿತ ಪರಿಣಾಮವನ್ನು ಸಾಧಿಸಿದ್ದಾನೆ. ಈ ಕವಿಗೆ ಅಲಂಕಾರ ತಾನಾಗಿಯೇ ಒಲಿದು ಬಂದಿದೆ.

"ಭಾಷೆಯ ಕೊಟ್ಟು ತಪ್ಪುವ ಪ್ರಭುವಿನೊಳಿನ್ನಾಸೆ ಏಕೋ ?

ವೇಶ್ಯೆಯ ನೆಚ್ಚಿ ವರನಾರಿಯ ಬಿಡುವಂಥ ಪುರುಷನೇಕೋ ?

ಕಾಸಿಗೆ ಕಷ್ಟಪಡುವ ಲೋಭಿಯೊಡನುಂಬ ಗೆಳೆಯನೇಕೋ ತನ್ನ ?

ಹಾಸಿಗೆಯರಿತು ಕಾಲುಗಳನೀಡಲರಿಯದ ಮನುಜನೇಕೋ"||[೯೪]

ಎಂದು ಸರಿಯಾದುದನ್ನು ಅರಿಸಿಕೊಳ್ಳದ ರೀತಿಯ ಬಗ್ಗೆ ವಿಷಾದ ವ್ಯಕ್ತಪಡಿಸುತ್ತಾನೆ. ಯಾರೇ ಆಗಲಿ ಚೆನ್ನಾಗಿರುವಾಗಲೇ ಧರ್ಮವನ್ನಾಚರಿಸಿ, ಧ್ಯಾನದ ಮೂಲಕ ಜಿನನ ಕೃಪೆಗೆ ಪಾತ್ರರಾಗಬೇಕು ಎಂದು ಪರಿಣಾಮಕಾರಿಯಾಗಿ ಹೇಳುತ್ತಾನೆ. ಇಲ್ಲಿ ಅಲಂಕಾರಗಳು ಭಾವನೆಗಳ ಸಂವಹನಕ್ಕೆ ಅನುಕೂಲವಾಗುವಂತೆ ಬರುತ್ತವೆ. 'ಬಿದಿಗೆಯ ಚಂದ್ರನಂದದಿ ಕಳೆ ಬರಲು' ಮಾಗಿಯ ನೀಗಿದ ಕೋಗಿಲೆಯಂದದಿರಾಗರಸದಿ ಪಾಡುವ ನಾಗಿಣಿಯರು' ಈ ಮೊದಲಾದ ಹೋಲಿಕೆಯಲ್ಲಿ ಅಲಂಕಾರವಾಗಿ ಮಾತ್ರ ಸಿದ್ಧಿಸದೆ ಅನುಭವದಿಂದ ಮಾಡಿದ ಸಹಜೋಕ್ತಿಗಳಾಗಿ ಕಾಣುತ್ತವೆ. ಅಗಸದ ಪ್ರತಿಮೆಯೊಡನೆ ಆರಂಭವಾಗುವ ಈ ಹಾಡು ಹೀಗಿದೆ.

"ಅಗಸನಾಡನಲ್ಲ ಕರ್ಮವ

ಕುಸುರಿ ಬಗೆಯ ಬಲ್ಲ

ಆರು ತಪದೊಳದಿ ಪಂಚಾ

ಚಾರದೊಳಗೆ ಹೊದ್ದಿ

ತೋರುವ ಚತುರಾರಾಧನೆಗಳು ಚೌ

ಗಾರಸುಪದ ಬಸಿಲಾಯಿಸುತಿಹ||"[೯೫]

ಎಂಬ ಪದ್ಯ ಬಳಸಿಕೊಂಡಿರುವ ವಸ್ತು ಪ್ರತಿಮೆಯ ಕಾರಣದಿಂದ ಚೆನ್ನಾಗಿದೆ. ಕರ್ಮವ ತೊಳೆದು ಮಡಿ ಮಾಡುವ ಚಿತ್ರವಿದು. ಪ್ರತಿಮೆ ಕ್ರಿಯಾಶೀಲವಾಗುತ್ತ ಬೆಳೆಯುವುದೇನೋ ನಿಜ, ಆದರೆ ಈ ಒಗೆಯುವ ಮತ್ತು ಶುದ್ಧಿ ಮಾಡುವ ಕ್ರಿಯೆಗಳನ್ನು ಪರಿಚಿತ ಧಾರ್ಮಿಕ(ಜೈನ) 'ನುಡಿಗಟ್ಟು'ಗಳ ಮೂಲಕವೇ

ಹೇಳುವುದರಿಂದ ಹೊಸ ಅನುಭವವನ್ನು ಮೂಡಿಸುವುದರಲ್ಲಿ ವಿಫಲಗೊಳ್ಳುತ್ತದೆ. ಕಲ್ಪನೆಯನ್ನು ಶತಕಗಳಲ್ಲಿ ವರ್ಣಿಸಿರುವಂತೆಯೇ ಇಲ್ಲಿಯೂ ಇದೆ. ಕಲ್ಲಿನಲ್ಲಿ ಕನಕ, ಕಟ್ಟಿಗೆಯಲ್ಲಿ ಅಗ್ನಿ, ಹಾಲಿನಲ್ಲಿ ತುಪ್ಪ ಇವೇ ಇಲ್ಲಿಯೂ ಕೂಡ ಹೋಲಿಕೆಗಳು. ದೇಹವನ್ನು ಸೋಂಕಿಯೂ ಸೋಂಕದಂತಿರುವ ಇವನನ್ನು 'ಪಳುಕಿನ ಬೊಂಬೆ' 'ಬೆಳಕಿನ ಬಿಂಬ' ಎಂದು ವರ್ಣಿಸುವುದು ಚೆನ್ನಾಗಿದೆ. ಹಾಗೆಯೇ ತನುವನ್ನು 'ಚೈತ್ಯಾಲಯ' ಎಂದು ಹೇಳಿರುವುದು 'ದೇಹವೇ ದೇಗುಲ'ವೆಂಬ ಬಸವಣ್ಣನವರ ಮಾತನ್ನು ನೆನಪಿಗೆ ತರುತ್ತದೆ.

ಹಾಡುಗಳಲ್ಲಿ ಲೋಕಾನುಭವದ ಮಾತುಗಳು ಆಕರ್ಷಕ ಅಲಂಕಾರ ರೂಪ ತಾಳುತ್ತವೆ. ಮನದಲ್ಲಿನ ಆಸೆ ಮನುಷ್ಯನನ್ನೇ ನಾಶ ಮಾಡುತ್ತದೆ ಎಂಬುದಕ್ಕೆ 'ಮರದೊಳಗ್ನಿ ಹೊಸೆದರೆ ಮರವ ತಾ ಸುಡುವಂತೆ' ಆತ್ಮ ಮಾತ್ರ ಶಾಶ್ವತ ಎಂದು ಹೇಳಲು ಮನೆಯೊಳಗಣ ಗೋಡೆ ಚೀವುದೆ ಬೆಂಕಿಯಿಂದ, ಸಂಸಾರ ಸುಖ ಕ್ಷಣಿಕ ಎಂಬುದನ್ನು ನೆಲ್ಲಿಯ ಕಾಯಿ ಸವಿದು ನೀರ್ಗುಡಿದರೆ ಬೆಲ್ಲವೆನಿಸುವಂದದಿ ಮುಂತಾಗಿ ಸಹಜ ಚಿತ್ರಣಗಳು ಮೂಡಿ ಬರುತ್ತವೆ. ರತ್ನಾಕರವರ್ಣಿ ಹಾಡೊಂದರಲ್ಲಿ ದೇಹಾತ್ಮ ಸಂಬಂಧವನ್ನು ಯಾವ ಅಲಂಕಾರವೂ ಇಲ್ಲದೆ ನೇರವಾಗಿ ಮನಮುಟ್ಟುವಂತೆ ಹೇಳುತ್ತಾನೆ.

"ದೇಹವೆಂಬ ಚೋಹ ತೊಟ್ಟಿದರಿದು ಬದುಕೆಂಬುರು
ದೇಹದ ಬಿಟ್ಟರೆ ಸಾವೆಂಬುದು ಮತ್ತೊಂದು
ದೇಹವೆ ತೊಟ್ಟರೆ ಹುಟ್ಟೆಂಬುರಾತ್ಮನೊಂದ ಮೈಯ
ಚೋಹವ ಹೋಗದೆ ನಿಂದರರದು ಮುಕ್ತಿಯೆಂಬರಣ್ಣ"[೯೬]

ಆತ್ಮ ಮಾನವ ದೇಹದಲ್ಲಿದ್ದರೆ ಅದು ಇಹದ ಬದುಕು. ಆತ್ಮ ದೇಹ ಬಿಟ್ಟರೆ ಸಾವು. ಮತ್ತೊಂದು ದೇಹ ಧರಿಸಿದರೆ ದೇಹದ ಆಸೆ. ಚಿರಂತನ ಪದವಿ ಹೊಂದಿದರೆ ಮುಕ್ತಿ. ಹೀಗೆ ದೇಹಾತ್ಮ ಸಂಬಂಧವನ್ನು ಸರಳವಾಗಿ ಸೊಗಸಾಗಿ ವರ್ಣಿಸಿದ್ದಾನೆ.

"ತುಂಬಿಯನರಸ ಹೋದವರಾರು ಮಂದಿಯ ಹೊಟ್ಟೆ ತುಂಬಿ
ತುಂಬಿಗಲ್ಲದೆ ಮತ್ತಾರಿಗೂ ತಿಳಿಯದೂ ಪ್ರಾಣ ತುಂಬಿ
ತುಂಬಿಯನರಿವರೆ ಶ್ರೀ ಮಂದರೇಶನವೊಲಿದೆ ತುಂಬಿ
ತುಂಬಿಯ ನರಸುವ ಹಂಬಲ ಮರೆಯಿರೊ ನೀವೆಲ್ಲಾ
ನಡುವೆ ತುಂಬಿ||"[೯೭]

ಈ ಪದ್ಯದಲ್ಲಿ ಪದಗಳ ಮೇಲಿರುವ ಶ್ಲೇಷೆಯನ್ನು ಪಾಂಡಿತ್ಯಪೂರ್ಣವಾಗಿ ಸಾಧಿಸಿದ್ದಾನೆ. ಹಾಗೆಯೇ

"ರತ್ನನಿವಾಳಿ ಪುಷ್ಪಂ ಜಾಜಿಗಳ ಯೋಗಿ
ರತ್ನರಂ ನಿನಗೆ ಭಾವದಲ್ಲಿ ಮಾಡುವರು
ರತ್ನ ಮೂರು ನೀನೆ ನಿನಗೆ ನೀ ಜಯ ಜಯ
ರತ್ನಾಕರ ಸ್ವಾಮಿ ನಿಜಂ ಪರಂಜ್ಯೋತಿ||"[೯೮]

ಮೊದಲಾದ ಪದ್ಯಗಳನ್ನು ಚಮತ್ಕಾರ ಪೂರ್ವಕವಾಗಿ ಬಳಸಿ ಕಾವ್ಯ ಸೌಂದರ್ಯವನ್ನು ಹೆಚ್ಚಿಸಿದ್ದಾನೆ.

ಇನ್ನುಳಿದ ಹಾಡುಗಳಲ್ಲಿ ದಾರ(ದಾರವೆ ಸಕಲ ಸಂಹಾರ ಕಾರಣವು), ಪದ್ಮ(ನಾದೇ ಪದ್ಮಲ ಸಮಲೋಚನೇ), ಮಹಾ(ಮಹಾಮಾರಿ ಜೈನೆಮಹಾ ದೇವನೆಂದೆನಿಸಿದ) ಮೊದಲಾದ ಪದಗಳ ಬಳಕೆ ವಿಶೇಷ ಅನುಭವ ನೀಡುತ್ತವೆ. ಪದದಲ್ಲಿನ ಧ್ವನಿ ಹೊಸ ಆಯಾಮದನ್ನು ಪಡೆಯುತ್ತಾ ಹೋಗುತ್ತದೆ. ಹಾಲು ಸಮುದ್ರವ ಕಂಡ ಮೇಲೆ ಪಶುಜಾಲವ ಕಾಯ್ವದೇನಣ್ಣ ವಿಷಯದ ಸೊಕ್ಕೆಂಬ ವಿಷವನೇರಿದವರಿಗೆ ವಿಷಹಾರಕಿರಣ ನಿರ್ವಿಷ ಮಾಡಲಿಲ್ಲವೆ ಎಂಬುದು ಮಣ್ಣಿನ ವಿಶ್ಲೇಷಣೆಗೆ ಸಹಕಾರಿಯಾಗಿ ಬಂದಿವೆ. ಸಂದರ್ಭಕ್ಕನುಗುಣವಾಗಿ ಬರುವ ಇಂತಹ ಅಭಿವ್ಯಕ್ತಿಗಳು ಸಹಜ ಶೋಭೆಯಿಂದ ಕೂಡಿವೆ.

ಜೈನಹಾಡುಗಳು ಅನುಭವದ ಅಭಿವ್ಯಕ್ತಿಯ ದೃಷ್ಟಿಯಿಂದ ವ್ಯಾಪಕವೂ, ವಿಸ್ತಾರವೂ ಆಗಿವೆ. ಅಲ್ಲಿ ಜಿನಸ್ಮರಣೆ, ಭಜನೆ, ತೀರ್ಥಕ್ಷೇತ್ರ ಮಹಾತ್ಮೆ, ಧರ್ಮ ನಿಷ್ಕರ್ಷೆಯೇ ಮುಖ್ಯವಾಗಿರುವುದರಿಂದ ಸಾಹಿತ್ಯ ಮಾಧ್ಯಮವಾಗಿ ಯಶಸ್ವಿಯಾಗಿವೆಯೇ ಎಂದು ಹುಡುಕುವುದು ಅಸಮಂಜಸವಾಗುತ್ತದೆ.

ಗುರಿಯೊಂದರ ಸಾಧನೆಗೆ ನಿಷ್ಕಾಮ ಪ್ರಯತ್ನಕ್ಕಾಗಿ ಒಂದು ಮಾರ್ಗವಾಗಿ ಇಲ್ಲಿ ಸಾಹಿತ್ಯವನ್ನು ಸ್ವೀಕರಿಸಲಾಗಿದೆ. ಹಾಗಾಗಿ ಇಡೀ ಹಾಡುಗಳಲ್ಲಿ ಬಳಕೆಯಾದ ಅಲಂಕಾರ ಉಕ್ತಿವಿನ್ಯಾಸವನ್ನು ಹುಡುಕಾಡಬೇಕು. ಜಗತ್ತು-ಜೀವ-ಜಿನ-ಜೀವವಿಮೋಚನೆಯ ವಿವೇಚನೆ ಈ ಹಾಡುಗಳಲ್ಲಿ ವ್ಯಾಪಿಸಿದೆ. ಮಾನವ ಜೀವನ ಮುಕ್ತಿಯ ಕಡೆಗೆ ತಿರುದು ಸುಲಭವಲ್ಲ. ಆ ದಾರಿ ಕಷ್ಟಕರವಾದುದರಿಂದ ಆ ಕಡೆ ವಿಮುಖರಾಗುವವರು ಬಹಳ. ಮುಕ್ತಿ ಸಂಪಾದಿಸುವ ಕಡೆಗೆ ಅವರನ್ನು ಸೆಳೆಯುವ ಒತ್ತಾಯ, ಒತ್ತಾಸೆ ಈ ಹಾಡುಗಳಲ್ಲಿದೆ. ಇದರಿಂದಾಗಿ ಪುನರುಕ್ತಿ ಸಹಜವಾಗಿ ಬರುತ್ತವೆ. ಇದ್ದುದರಲ್ಲಿಯೇ ಈ ಹಾಡುಗಳ ಸಾಹಿತ್ಯಕ ಮಹತ್ವವನ್ನು ಗುರುತಿಸುವುದಾಗಿದೆ.

**೩. ಪ್ರತಿಮಾ ವಿಧಾನ**

ಶರಣರ, ದಾಸರ ಹಾಡುಗಳಿಗೆ ಹೋಲಿಸಿದಲ್ಲಿ ಜೈನಹಾಡುಗಳಲ್ಲಿ ಕಾವ್ಯಪ್ರತಿಮೆಗಳು ಕಡಿಮೆಯೆಂದೇ ಹೇಳಬೇಕು. ಪ್ರತಿಮೆಗಳು ಅಲಂಕಾರದ ಒಂದು ಭಾಗವಾದರೂ ಶಬ್ದಗಳಿಂದಲೇ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವುದನ್ನು ಕಾಣಬಹುದು. ಅವುಗಳನ್ನು ಕೇಳುವಾಗ ವಿಶೇಷವಾದ ಅನುಭವವನ್ನು ಉಂಟುಮಾಡುವ ಈ ಸ್ವಭಾವೋಕ್ತಿಗಳನ್ನು ಪ್ರತ್ಯೇಕವಾಗಿಯೇ ನೋಡಬೇಕು. ಸಂಕೀರ್ಣವಾದ ಅನುಭವಗಳಿಗೆ ವ್ಯಾಪಕವಾದ ಅರ್ಥವನ್ನು ಕೊಡುವ ಇಂತಹ ಪ್ರತಿಮೆಗಳು ಕಾವ್ಯಧ್ವನಿಯನ್ನು ಖಚಿತವಾಗಿ ಬೆಳೆಸುತ್ತವೆ. ಪ್ರತಿಮೆಗಳನ್ನು ಮೀರಿದ ರೂಪಕಾತ್ಮಕವಾದ ಶಬ್ದಚಿತ್ರಗಳು ಪರಿಣಾಮಕಾರಿಯಾಗಿರುತ್ತವೆ. ಸಾಮಾಜಿಕ ಪ್ರಜ್ಞೆ ಸಮಕಾಲೀನ ಜೀವನದ ಅರಿವು ಸಮೃದ್ಧವಾದ ಪ್ರತಿಮಾನಿರ್ಮಾಣಕ್ಕೆ ಕಾರಣವಾಗುತ್ತದೆ.

"ವಸಂತವಾಡಿರಿ ಶಶಿ ಮುಖಿಯರು ಕೂಡಿ
ವಸುಧೆಗೊಡೆಯ ಜಿನರಾಜರಿಗೆ
ಬಿಸಜಮುಖಿಯರೆಲ್ಲ ನಸುನಗೆಯಿಂದಲಿ
ಎಸೆವೆಷ್ಟು ಗಂಧದ ಓಕುಳಿಯಾಡಿರಿ||"[೯]

ವಸುಧೆಯೊಡೆಯನಾದ ಜಿನನಾಥನಿಗೆ ಶಶಿಮುಖಿಯರು ಬಿಸಜಮುಖಿಯರು ಕೂಡಿಕೊಂಡು ವಸಂತಕಾಲದ ಅಷ್ಟಗಂಧದ ಓಕುಳಿಯಾಡಲು ಹೇಳುವ ಈ ಮಾತುಗಳಲ್ಲಿರುವ ಪ್ರತಿಮೆ ವಿಶೇಷ ಅರ್ಥವನ್ನೇ

ಸೃಷ್ಟಿಸುತ್ತದೆ. ಇಹದ ವ್ಯಾಮೋಹವನ್ನು ಮೀರಿದ ಜಿನ, ಮೀರಬೇಕಾದ ಜನ ವೈಭವದಿಂದ ಆತನನ್ನು ಭಜಿಸುತ್ತ, ಭವವನ್ನು ದಾಟಬೇಕಾದ ಅನಿವಾರ್ಯತೆಯನ್ನು ಧ್ವನಿಪೂರ್ಣವಾಗಿ ಹೇಳಲಾಗಿದೆ.

ಆತ್ಮದರ್ಶನದ ಅರಿವುಂಟುಮಾಡುವ ಸಶಕ್ತ ಪ್ರತಿಮೆಗಳು ರತ್ನಾಕರವರ್ಣಿಯ ಹಾಡುಗಳಲ್ಲಿ ಕಂಡುಬರುತ್ತವೆ.

"ಕ್ರೋಧ ದಾವಾಗ್ನಿ ಹತ್ತಿಹುದು ಮುಂದೆ
ಹೋದರೆ ಮಾನಪರ್ವತ ಕಾಣಗೊಡದು
ಬಾಧಿಪ ಕಾಮೇಭವಿಹುದು ಬಂದು ತಾ
ಕಾದಿಕೊಲ್ಲುವ ಮಾಯಾಮೃಗವಿಹುದು ||"[೧೦೦]

ಆತ್ಮಾನುಭವಕ್ಕೆ ತೆರಳುವವನಿಗೆ ಅಡ್ಡಿಯುಂಟುಮಾಡುವ ಕಾಮ ಕ್ರೋಧಾದಿಗಳನ್ನು ಪ್ರತಿಮೆಯ ಮೂಲಕ ಕವಿ ಹಿಡಿದಿಟ್ಟಿದ್ದಾನೆ. ಮಾನವ ಪರ್ವತ ಕಾಣದಂತೆ ಮಾಡುವ ಹತ್ತಿ ಉರಿಯುವ ಕ್ರೋಧ ಹಾಗೂ ಕಾಮವನ್ನು ಗೆಲ್ಲಲು ಸಹಕರಿಸುವ ಜಿನರನ್ನು ಸಾದೃಶ್ಯಗಳ ಮೂಲಕ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. ಹೆಚ್ಚು ಮಾತುಗಳಲ್ಲಿ ಹೇಳಬಹುದಾದುದನ್ನು ಸಂಕ್ಷಿಪ್ತವಾಗಿ ಪ್ರತಿಮೆಗಳ ಮೂಲಕ ಹೇಳಿರುವುದನ್ನು ಈ ಹಾಡುಗಳಲ್ಲಿ ಕಾಣುತ್ತೇವೆ.

ಹೀಗೆ ಹೇಳುವಾಗ ಕೆಲವು ಕಡೆ ಸಂದಿಗ್ಧತೆ ಉಂಟಾಗಬಹುದಾದರೂ ಹಾಡಿನ ಮುಂದುವರೆದ ಭಾಗದಲ್ಲಿ ಸ್ಪಷ್ಟತೆ ಕಾಣಿಸಿಕೊಳ್ಳುತ್ತದೆ. ತಾನು ಕಂಡುಕೊಂಡ ಸುಸಂಗಾತಿಯನ್ನು ಸೂತ್ರರೂಪವಾಗಿ ಪ್ರತಿಮೆಯ ಮೂಲಕ ಹೇಳಿದಾಗ ಯಥಾರ್ಥತೆಯನ್ನು ಕಂಡುಕೊಳ್ಳಬಹುದು. ಆತನ ಅನುಭವದ ಹಿನ್ನೆಲೆಯನ್ನು ಓದುಗನು ಕೂಡ ಅರ್ಥೈಸಿಕೊಂಡು ಅಂತರದರ್ಶನವನ್ನು ಪಡೆಯಬೇಕು. ಏಕೆಂದರೆ ಪ್ರತಿಮೆಗಳು ಧ್ವನಿಸುವ ಅರ್ಥವನ್ನು ಬೇರೆ ಮಾತುಗಳಿಂದ ವಿವರಿಸುವುದು ಅಸಾಧ್ಯ. ಹಾಗೆ ವಿವರಿಸಲು ಯತ್ನಿಸಿದರೆ ಅದು ವಾಚ್ಯವಾಗಿಬಿಡುತ್ತದೆ. ಪ್ರತಿಮೆಯ ಮೂಲಕ ಅಭಿವ್ಯಕ್ತಗೊಂಡ ಧ್ವನಿಯನ್ನು ಗುರುತಿಸಿದಾಗಲೆ ನಿಜವಾದ ಕಾವ್ಯಾನಂದ ಸಿಗುತ್ತದೆ. ಧಾರ್ಮಿಕ ಸ್ವರೂಪದ ಸೌಂದರ್ಯ ಲಭಿಸುತ್ತದೆ.

**೪. ಮೌಲ್ಯವಿವೇಚನೆ**

ಜೈನಹಾಡುಗಳ ಮೌಲ್ಯವಿವೇಚನೆಯನ್ನು ಕೇವಲ ರೂಪ ಸ್ವರೂಪದಿಂದ ಅಳೆಯಬಾರದು. ಅವು ಜನತೆಗೆ ಸಂವಹನಗೊಳ್ಳುವ ವಿಧಾನದಿಂದ ಮೌಲ್ಯವಿವೇಚನೆ ಮಾಡಬೇಕು. ಯಾವುದೇ ಸಾಹಿತ್ಯ ಕೃತಿಯು ಲಕ್ಷಣಪ್ರಧಾನವಾಗಿದ್ದರಷ್ಟೆ ಸಾಲದು. ಸಂವಹನಪ್ರಧಾನವಾಗಿರಬೇಕು. ಜೈನಹಾಡುಗಳು ಕಾವ್ಯ ಲಕ್ಷಣಗಳನ್ನು ಉಳಿಸಿಕೊಂಡು ಜಟಿಲವಾಗಿರದೆ ಸರಳವಾಗಿವೆ.

"ಕೋಪಕ್ಕೆ ಗರ್ವಕ್ಕೆ ಹಾನಿಬಹುದು ಲೋಭ
ರೂಪಿಗೆ ಮಾಯಕ್ಕೆ ನಾಶವಹುದು
ಪಾಪ ಪುಣ್ಯವೆರಡಕ್ಕೆ ಕೇಡಹುದು ಜ್ಞಾನ
ದೀಪವೊಂದೆ ಅರದಿರುತಿಹುದು"[೧೦೧]

ಎಂದು ಜ್ಞಾನದ ಮಹತ್ವವನ್ನು ಅತ್ಯಂತ ಸರಳವಾಗಿ ರಚಿಸಲಾಗಿದೆ. ಜ್ಞಾನವೆಂಬ ಬೆಳಕಿನಲ್ಲಿ ನಾವು ಸಾಗುವ ಮಾರ್ಗ ಸುಲಭವಾಗಿ ಗೋಚರವಾಗುತ್ತದೆ.

ಜೈನಹಾಡುಗಳಲ್ಲಿ ಅನುಭಾವವೇ ಸ್ಥಾಯೀಭಾವ. ಅಂತರಂಗದ ಅಭೀಪ್ಸೆ, ಜಿನನ ಹಂಬಲ, ಆಧ್ಯಾತ್ಮಿಕ ಮುನ್ನಡೆ, ಮುಕ್ತಿ ನಿರೀಕ್ಷೆ ಈ ಹಾಡುಗಳ ಮುಖ್ಯ ಆಶಯವಾಗಿದೆ. ಇವು ಜೀವನದ ವಿವಿಧ ಸಮಸ್ಯೆಗಳನ್ನು ಬಿಂಬಿಸುತ್ತವಾದರೂ ಸಾಮಾಜಿಕ ಕಳಕಳಿ, ಸಮಾಜ ಪರಿವರ್ತನೆಯ ತೀವ್ರತೆಯನ್ನು ಕಾಣುವುದಿಲ್ಲ. ವಚನ-ಕೀರ್ತನೆಗಳಂತೆ ಇಲ್ಲಿ ಸಾಮಾಜಿಕ ಅಭಿವ್ಯಕ್ತಿಯ ತೀವ್ರಸಂವೇದನೆ ಇಲ್ಲಿಲ್ಲವಾದರೂ ಲೋಕಜ್ಞಾನವನ್ನೊಳಗೊಂಡ ಅನುಭಾವದ ಮಾತುಗಳಿಂದ ಧಾರ್ಮಿಕತೆಯ ಕಡೆಗೆ ನಮ್ಮ ಬಲವನ್ನು ಕೇಂದ್ರೀಕರಿಸುವುದು ಪ್ರಸ್ತುತ ಹಾಡುಗಳ ಆಶಯವಾಗಿದೆ.

"ಕೆರೆಯ ಮೇಗಣ ವೃಕ್ಷದ ಪಕ್ಷಿಗೆ
ಮರದ ಕೂಡೊಡೆ ಮರಣವೇ
ಕರಗಿ ಬೀಳುವ ಕಷ್ಟದ ಮೈಯೊಳು
ಪರಮ ನಾ ನಿನ್ನಗೆಲ್ಬುದು ಬೆರೆದು"[೧೦೨]

ಕೆರೆಯ ಮೇಲಿನ ವೃಕ್ಷ ಮುರಿದು ಬೀಳುವಾಗ ಮರದಲ್ಲಿ ಕುಳಿತ ಪಕ್ಷಿಯೂ ಅದರೊಂದಿಗೆ ನೀರಿಗೆ ಬೀಳುವುದಿಲ್ಲ. ಮರ ನೀರನ್ನು ತಲುಪುವ ವೇಳೆಗೆ ಅದು ಮತ್ತೊಂದು ಮರವನ್ನು ಆಶ್ರಯಿಸುತ್ತದೆ. ಹಾಗೆಯೇ ಆತ್ಮ ದೇಹದೊಂದಿಗೆ ಮಣ್ಣು ಸೇರುವುದಿಲ್ಲ ಶರೀರದ ಉಸಿರು ನಿಂತೊಡನೆ ಮತ್ತೊಂದು ಶರೀರವನ್ನು ಅರಸಿ ಹೊರಡುತ್ತದೆ. ಹೀಗೆ ಅತ್ಯಂತ ಪರಿಣಾಮಕಾರಿಯಾದ ಚಿತ್ರಣದಿಂದ ಮನುಷ್ಯನನ್ನು ಪರಿವರ್ತನೆಗೊಳಿಸುವ ಪ್ರಯತ್ನವನ್ನು ನೋಡಬಹುದು.

ಜೈನಸಿದ್ಧಾಂತದ ಪ್ರತಿಪಾದನೆಯ ಈ ಹಾಡುಗಳಲ್ಲಿ ಅನುಭಾವದ ಪ್ರಧಾನತೆ, ಭಕ್ತಿತೀವ್ರತೆಯಿದ್ದರೂ ಮಾನವ ಸ್ವಭಾವವನ್ನು ಸ್ಥಗಿತಗೊಳಿಸಿ ಅವು ಸಮತೋಲನ ಕಾಯ್ದುಕೊಂಡಿವೆ. ಸಾಮಾನ್ಯ ಅಭಿವ್ಯಕ್ತಿಯ ಈ ಹಾಡುಗಳ ಜೊತೆಗೆ ಕಾವ್ಯದ ಜೀವಂತಿಕೆಯುಳ್ಳ ಹಾಡುಗಳಿವೆ. ಕೇವಲ ಭಾವುಕತೆಯಷ್ಟೇ ಈ ಹಾಡುಗಳಲ್ಲಿರದೆ ಸಂಸಾರದ ಅನಿವಾರ್ಯತೆ, ನಿಸ್ಸಾರತೆ, ಮನಸ್ಸಿನ ಚಂಚಲತೆ, ಅಧೋಮುಖವಾದ ಆಕರ್ಷಣೆ ಈ ಮೊದಲಾದ ಸಾಧಕನಿಗಿರುವ ಅಡೆತಡೆಗಳನ್ನು ತಿಳಿಸುತ್ತವೆ. ಮನಸ್ಸಿನ ತಳಮಳ ಅದನ್ನು ಮೀರಿ ಮುನ್ನಡೆಯ ಸಾಧ್ಯತೆಗಿರುವ ಸಮೃದ್ಧ ಅವಕಾಶಗಳನ್ನು ಈ ಹಾಡುಗಳಲ್ಲಿ ಕಾಣಬಹುದು.

"ನೀರ ಬೊಬ್ಬುಳಿಯಂತೆ ತೋರಿಯಡಗುವ
ಶರೀರವ ತಪಸಿಗೆ ಮಾರುಗೊಂಡು
ಓರಂತೆ ಕೆಡದ ಮುಕ್ತಿ ಕೊಂಬವನ ವ್ಯವ
ಹಾರವೆಂಬುದು ಮಹಾಲಾಭವೋ ನಷ್ಟವೋ||"[೧೦೩]

ಅಶಾಶ್ವತವಾದ ಶರೀರವನ್ನು ನಂಬಿ ಕೆಡದೆ ತಪಸ್ಸನ್ನು ಕೈಗೊಂಡು ಮುಕ್ತಿ ಪಡೆದು ಶಾಶ್ವತ ಪದವಿ ಪಡೆಯುವ ಲಾಭ ಒಂದು ಕಡೆ, ನೀರುಗುಳ್ಳೆಯಂತೆ. ಕೆಲಕಾಲವಷ್ಟೇ ನಿಲ್ಲುವ ಈ ಶರೀರದ ಮಮಕಾರದಿಂದ

ಪುನಃ ಪುನಃ ಭವಕ್ಕೆ ಬರುವ ನಷ್ಟ ಮತ್ತೊಂದು ಕಡೆ-ಇವೆರಡರ ನಡುವಿನ ಆಯ್ಕೆ ಸ್ಪಷ್ಟವಾಗಿದೆ. ಇಂತಹ ಇನ್ನೊಂದು ಹಾಡು ನೋಡಬಹುದು.

"ಆಯುಷ್ಯದಂತ್ಯದೊಳು ಮುಪ್ಪು ತಬ್ಬುತ
ನೋಯಿಸುತ ನಿನ್ನ ಕೊಲ್ಲುವ ಮುನ್ನ
ಒಯ್ಯಾರದಿ ದಿನ ನೂಂಕದೆ ನಿಲುತಾರು ತಪದಲ್ಲಿ
ಕಾಯ ದಂಡನೆಗರಳೆಂಬ ಕರ್ಮವ ಗೆಲುಮಲ್ಲ||"೧೦೪

ಇಂತಹ ಈ ದೇಹ ಶಾಶ್ವತವಲ್ಲ. ಇರುವಾಗಲೇ ಕರ್ಮವನ್ನು ಗೆದ್ದು ಮುಕ್ತಿಯನ್ನು ಸಾಧಿಸು ಎಂಬ ಧ್ವನಿಯಿದೆ.

ಸಾಧಕನಿಗೆ ತಮ್ಮ ಆತ್ಮ ಶೋಧಿಸಿಕೊಳ್ಳುವಾಗ ಆರಂಭದ ಸ್ಥಿತಿಯಲ್ಲಿ ಸಂಸಾರವೂ ಸಾಧನೆಗೆ ತೊಡಕಾಗಿ ಪರಿಣಮಿಸುವುದನ್ನು ಈ ಹಾಡುಗಳಲ್ಲಿ ವ್ಯಕ್ತಪಡಿಸಲಾಗಿದೆ. 'ಸಾಕಿನ್ನು, ಸಂಸಾರ ನಾನೊಲ್ಲೆನು, ನಾನು ಚಂದ್ರನಾಥನ ಪರಾಕು ಮಾಡದೆ ಎನ್ನ ಸಂಶಯ ಬಿಡಿಸಯ್ಯ ಚಂದ್ರನಾಥ, 'ಸತಿಸುತ ಪಿತರೆಂದು ಮತಿಗೆಟ್ಟು ನಿನ್ನಿಂದ ಗತಿಗತಿಯೊಳು ದುಃಖವತಿಯೊಳು ನೊಂದು 'ಸುಮ್ಮನೇತಕೆ ಸಂಸಾರದೊಳು ತೊಳಲಲ್ವೆ' 'ತಂದೆ-ತಾಯಿಗಳ ಬಂಧು ಬಳಗವೆಲ್ಲ ಎಂದಿಗೂ ಸ್ಥಿರವಲ್ಲ. ಕಂದನು ನಿಮ್ಮಯ ನಿಂದು ನಾ ಬೇಡುವೆ. ಈ ಮೊದಲಾದ ಮಾತುಗಳಲ್ಲಿ ಸಂಸಾರ ನಿಸ್ಸಾರವೆಂಬುವುದನ್ನು ಚಿತ್ರಿಸಲಾಗಿದೆ. ಆದ್ದರಿಂದ ನಿರ್ವೇಗ ಹೊಂದಲೇ ಬೇಕಾದ ಅನಿವಾರ್ಯತೆಯನ್ನು ಪ್ರತಿಪಾದಿಸಲಾಗಿದೆ. ಸಂಸಾರವನ್ನು ನಂಜು ನೆಲ್ಲಿಕಾಯಿ, ಈ ಮೊದಲಾಗಿ ವ್ಯಾಪಕವಾದ ರೀತಿಯಲ್ಲಿ ಚಿತ್ರಿಸಲಾಗಿದೆ.

ಅಂದಿನ ಸಾಮಾಜಿಕ ಸಂದರ್ಭದಿಂದ ಪ್ರೇರಿತವಾದ ಇವರು ಮಾನವನನ್ನು ವೈಯಕ್ತಿಕವಾಗಿ ಉದ್ಧರಿಸುವ ಅದಮ್ಯ ಬಯಕೆಯೊಂದಿಗೆ ತಮ್ಮ ಧರ್ಮವನ್ನು ಉಳಿಸಿಕೊಳ್ಳಬೇಕೆಂದು ಹಾಡುಗಳನ್ನು ರಚಿಸತೊಡಗಿದರು. ಈ ಸಾಹಿತ್ಯ ಮಾಧ್ಯಮ ಸಂಸಾರದ ಜನತೆ ಜಂಜಡದಲ್ಲಿ ಸಿಕ್ಕಿದವರ ಉದ್ಧಾರಕ್ಕೆಂದು ಅವರು ಭಾವಿಸಿದರು. ಅವರ ಧಾರ್ಮಿಕತೆ ಸಾಮಾಜಿಕ ಜೀವನದಿಂದ ಪ್ರತ್ಯೇಕವಾಗಿ ನಿಲ್ಲುತ್ತದೆ. ಧರ್ಮವನ್ನು ಆಚರಿಸುವವನು ಸಾಮಾಜಿಕ ಬದುಕಿನಿಂದ ಹೊರಬರಬೇಕೆಂಬ ದೃಢ ಅಭಿಪ್ರಾಯ ಅವರದು. ಹೀಗಾಗಿ ಅನೇಕ ಹಾಡುಗಳಲ್ಲಿ ಸಿದ್ಧಾಂತವೆನ್ನುವುದು ಶುಷ್ಕ ತಾರ್ಕಿಕವಾಗಿ ಕಾಣುತ್ತದೆ. ಅದನ್ನು ಮೀರಿ ಈ ಹಾಡುಗಳಲ್ಲಿರುವ ಸಾಹಿತ್ಯಕ ಮೌಲ್ಯ ಮಾನವಪರ ಇರುವ ತುಮುಲವನ್ನು ಅರಸಬೇಕು. 'ಕೇಡುಳ್ಳ ಸಂಸಾರವನು ನಂಬಿ ಕೆಡಬೇಡ ಪಾಡೆಳಿದು ಭಯ ಭಕ್ತಿಯಲ್ಲಿ ನಂಬು ಜೀವನ ನಿನಗೆ ಮತ್ತೊಂದು ಶರಣಲ್ಲವೈ' ಬಂಧು ಬಳಗವನು ತ್ಯಜಿಸಿ ತಂದೆ ಆದಿಜಿನನ ಸ್ಮರಿಸಿ ಬಾಳು. ಸಂಸಾರವನು ನಂಬಿ ನಿರಾಳವಿಲ್ಲದೆ ಕೆಟ್ಟೆನು ಎಂದು ಸಂಸಾರದ ಅನಿತ್ಯತೆಯನ್ನು ಸಾರಿ ಅದರಿಂದ ಹೊರಬಂದು ಮುಕ್ತಿ ಪಡೆಯಲು ತಿಳಿಸುತ್ತಾರೆ. ಉರಿವರು ಸಿರಿಯಿರಲು ದುಃಖದಿ ನರಳುವರೆಡರಿನೊಳು ಎರಡರೊಳೊಂದೆ ಭಾವದಿ ಸಂತ ಪರಮ ನಿರಂಜನ ಸಿದ್ಧನ ಧ್ಯಾನವ ಮಾಡಿ ಸಕಲ ಸಂಪತ್ತು ತೊರೆದು ಮುಕ್ತಿ ಸಂಪದ ಬಯಸಬೇಕೆಂಬ ಹಂಬಲವನ್ನು ಈ ಹಾಡು ವ್ಯಕ್ತಪಡಿಸುತ್ತದೆ.

"ಸತಿಸುತ ಧನಕನಕಾದಿ ಸಂಪದದೊಳು
ಕ್ಷಿತಿ ಮೆಚ್ಚುತವೊಲು ತಾನು ಬಾಳುತಲಿದ್ದು
ಯತಿ ಸನಿಹವ ಸಾರಿ ದೀಕ್ಷೆಗೊಂಡವ ಬಾ
ಳುತ ಬಸ್ತಿಯ ಹೊಕ್ಕನವ ಮುಕ್ತಿ||"೧೦೫

ಎಂದು ಯತಿಯ ಸಂಗವ ಮಾಡಿ ಭವದಿಂದ ಮುಕ್ತನಾಗಬೇಕೆಂದು ಉಪದೇಶಿಸಲಾಗಿದೆ. ಸಂಸಾರ ಎಷ್ಟೇ ಸಾರವತ್ತಾಗಿದ್ದರೂ, ಜಿನದೀಕ್ಷೆ ಕೊಟ್ಟಾಗಲೇ ಮನುಜ ಜೀವನ ಸಾರ್ಥಕವಾಗುತ್ತದೆ. ಅದೇ ಅವನ ಪರಮಗುರಿಯಾಗಬೇಕು ಎಂಬ ಆಶಯ ಈ ಹಾಡುಗಳಲ್ಲಿದೆ.

೫. ವರ್ಣನೆಗಳು

ಕಾವ್ಯಗಳನ್ನು ವಸ್ತುಕ ಹಾಗೂ ವರ್ಣಕಗಳೆಂದು ಎರಡು ಪ್ರಕಾರಗಳಾಗಿ ವಿಂಗಡಿಸುತ್ತಾರೆ. ವಸ್ತುಕದಲ್ಲಿ ವಸ್ತು ಪ್ರಧಾನವಾದರೆ; ವರ್ಣಕದಲ್ಲಿ ವರ್ಣನೆಗೆ ಪ್ರಾಧಾನ್ಯತೆ. ಆದರೂ ಮನಸ್ಸಿನ ಭಾವನೆಗಳನ್ನು ಕಾವ್ಯದಲ್ಲಿ ರಚನಾತ್ಮಕವಾಗಿ ಹೇಳುವುದೇ ವರ್ಣನೆ. ಕಾವ್ಯದ ಉದ್ದೇಶಗಳಲ್ಲಿ ಮನರಂಜನೆಯೂ ಒಂದು. ಯಾವುದೇ ಕಾವ್ಯ ಪ್ರಕಾರವಾದರೂ ಓದುಗನ ಮನಸ್ಸನ್ನು ಸೆಳೆಯುವ ದೃಷ್ಟಿಯಿಂದ ಹಾಗೂ ಬೇಸರಿಸದೆ ಕೃತಿಯನ್ನು ಸ್ವೀಕರಿಸಬೇಕೆಂಬ ಕಾರಣದಿಂದಲೂ ಕವಿಗಳು ಕಾವ್ಯಗಳಲ್ಲಿ ವರ್ಣನೆಯನ್ನು ತಂದರು.

ವರ್ಣನೆಯಲ್ಲಿ ಅಷ್ಟಾದಶ ವರ್ಣನೆಗಳಿರಬೇಕೆಂಬ ನಿಯಮವಿದೆ. ಆದರೆ ಹಾಡುಗಳಲ್ಲಿ ಎಲ್ಲ ಬಗೆಯ ವರ್ಣನೆಗಳು ನಿಯಮಿತವಾಗಿ ಬರಲು ಸಾಧ್ಯವಿಲ್ಲ. ವಿಷಯವನ್ನು ಅರ್ಥಗರ್ಭಿತವಾಗಿ ಪ್ರತಿಪಾದಿಸಲು ಅಲ್ಲಲ್ಲಿ ಪ್ರಾಸಂಗಿಕವಾಗಿ ಬಂದಿವೆ. ಅವುಗಳಲ್ಲಿ ಕೆಲವು ವರ್ಣನೆಗಳನ್ನು ಜೈನಹಾಡುಗಳಲ್ಲಿ ನೋಡಬಹುದು.

ರಸ ಪ್ರಾಶಸ್ತ್ಯ

ಭಾರತೀಯ ಕಾವ್ಯ ಪ್ರಸ್ಥಾನಗಳಲ್ಲಿ "ರಸ ಪ್ರಸ್ಥಾನ"ಕ್ಕೆ ಪ್ರಮುಖ ಸ್ಥಾನವಿದೆ. ಯಾವುದೇ ಕಾವ್ಯದ ಉದ್ದೇಶ ಸಹೃದಯನ ಹೃದಯವನ್ನು ಆರ್ದ್ರಗೊಳಿಸುವುದು. ಅಂದರೆ ಕಾವ್ಯ ಪ್ರಯೋಜನಗಳಲ್ಲಿ "ಸದ್ಯಃ ಪರನಿವೃರ್ತಯೇ" ಮುಖ್ಯ ಅಂದರೆ ತತ್‌ಕ್ಷಣದ ಆನಂದ. ಈ ಆನಂದವೇ ರಸಾನುಭವ ಹೀಗಾಗಿ ರಸಾನುಭವದ ದೃಷ್ಟಿಯಿಂದ ಕನ್ನಡ ಜೈನಹಾಡುಗಳಲ್ಲಿ ಮೇಲ್ನೋಟಕ್ಕೆ ಶೃಂಗಾರರಸ ಪ್ರಾಧಾನ್ಯತೆ ಕಂಡು ಬಂದರೂ; ಈ ಹಾಡುಗಳ ಸ್ಥಾಯೀಭಾವ "ಶಮ." ಅಂದರೆ "ಶಾಂತರಸ" ಪ್ರತಿಪಾದನೆ ಈ ಹಾಡುಗಳ ಫಲಶ್ರುತಿ. ಕವಿ ನಾಗಚಂದ್ರ "ಎನಗೆ ರಸಮೊಂದೇ ಶಾಂತಮೇ ಜಿನೇಂದ್ರಾ!" ಎಂದು ಹೇಳಿರುವುದನ್ನು ಗಮನಿಸಿದರೆ ಶಾಂತರಸದ ಕೊಡುಗೆ ಜೈನಧರ್ಮೀಯರದು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಹಾಗಾಗಿ ಇಲ್ಲಿಯ ಹಾಡುಗಳಲ್ಲಿ ಜೀವನದ ನಶ್ವರತೆಯನ್ನು ಹೇಳುವಂತಿಲ್ಲ. ಇಂಥ ಬದುಕಿನ ಆಕರ್ಷಣೆಗಳಂತೆ ಶೃಂಗಾರ ಪ್ರಧಾನ ವರ್ಣನೆಗಳು ಮೇಲ್ನೋಟಕ್ಕೆ ಕಂಡುಬರುತ್ತವೆ. ಇದು ಎಲ್ಲ ಕಾವ್ಯಗಳಲ್ಲಿ ಅನಿವಾರ್ಯವೆಂಬಂತೆ ಶೃಂಗಾರರಸವು ಬಂದಿರುತ್ತದೆ. ಶೃಂಗಾರ ಸಾರ್ವತ್ರಿಕವಾಗಿ ಹೆಚ್ಚು ಇಷ್ಟವಾಗುವಂತಹದ್ದು. ರತ್ನಾಕರವರ್ಣಿಯೇ ತನ್ನ ಭರತೇಶ ವೈಭವದಲ್ಲಿ 'ಹೆಣ್ಣು ಬಣ್ಣಿಲಿದದಂವೆತು ಲೇಸೆಂದದೆ ಹೆಣ್ಣಾಗಿ ಕೇಳುವರುಂಟು ಬಣ್ಣಿಸಲಾತ್ಮ ತತ್ವಕ್ಕೆ ಮೆಚ್ಚಿ ಕಿವಿಗೊಡು ಎಂದು ಜನರ ಮನಸ್ಥಿತಿಯನ್ನು ಹೇಳಿದ್ದಾನೆ. ಕಾವ್ಯಗಳಲ್ಲಿ ಕೌಟುಂಬಿಕ ಶೃಂಗಾರದ

ಜೊತೆಗೆ ರಾತ್ರಿಯ ವೇಶ್ಯಾ ಬೀದಿಯ ಹಾಗೂ ವಿಲಾಸಿನಿಯರ ಶೃಂಗಾರ ಚಟುವಟಿಕೆಗಳನ್ನು ವರ್ಣಿಸಲಾಗಿದೆ. ಹಾಡುಗಳಲ್ಲಿ ಇಂತಹ ಹಾವಭಾವ ವಿಲಾಸ ಚೇಷ್ಟೆಗಳಿಗೆ ಸ್ಥಾನವಿಲ್ಲ. ಕಹಿ ಗುಳಿಗೆಗೆ ಸಿಹಿ ಲೇಪನ ಮಾಡಿದಂತೆ ಧರ್ಮಶ್ರವಣಕ್ಕೆ ಜನರನ್ನು ಆಕರ್ಷಿಸಲು ಮಾತ್ರ ಏಕಪ್ಷತರವಾಗಿದೆ. ಶೃಂಗಾರ ಮನುಷ್ಯರನ್ನು ಅಧೋಗತಿಗೆ ಕೊಂಡ್ಯೊಯುವ ಅಂಶವಾಗಿ ಹಾಡುಗಳಲ್ಲಿ ನಿರೂಪಿತವಾಗಿದೆ.

**ಕೊನೆ ಟಿಪ್ಪಣಿಗಳು**


೧. ಜೈನ ಸಿದ್ಧಾಂತ ಸಾರ ಸಂಗ್ರಹ, ಸಂಗ್ರಹ-ಧರಣೇಂದ್ರಪ್ಪ, ಪುಟ ೧೭೪-೧೭೫.

೨. ಆದಿಪುರಾಣ ಸಂಗ್ರಹ, ಗುಂಡಪ್ಪ ಎಲ್, ಪುಟ ೩೨.

೩. ಅದೇ ಪುಟ ೩೨.

೪. ಕರ್ನಾಟಕ ಸಾಂಸ್ಕೃತಿಕ ಸಂಘರ್ಷ: ಒಂದು ಅಧ್ಯಯನ, ಗೀತಾ ಬಿ.ಎಸ್, ಪುಟ ೧೨.

೫. ಅನಂತನಾಥಪುರಾಣ ಕಾವ್ಯ ಸಂಗ್ರಹ, ಹಂಪ ನಾಗರಾಜಯ್ಯ, ಪುಟ ೮.

೬. ಪಂಪ ಸಂಪುಟ, ವೆಂಕಟಾಚಲಶಾಸ್ತ್ರಿ ಟಿ.ವಿ., ಪ್ರಸ್ತಾವನೆ ಪುಟ XXXVI.

೭. ಕನ್ನಡ ಜೈನಹಾಡುಗಳು(ಸಂಪಾದಕರು), ಎಫ್.ಟಿ.ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೨೬೩-೨೬೪.

೮. ಅದೇ ಪುಟ ೩೧೭-೩೧೮.

೯. ಅದೇ ಪುಟ ೩೨೬.

೧೦. ಅದೇ ಪುಟ ೨೧೪-೨೧೫.

೧೧. ಅದೇ, ಪುಟ ೩೩೪-೩೩೫.

೧೨. ನೇಮಿಚಂದ್ರ ಸಂಪುಟ, ಜವರೇಗೌಡ, ಪುಟ ೨೦, ೨೧, ೨೨.

೧೩. ಕನ್ನಡ ಜೈನಹಾಡುಗಳು(ಸಂ) ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ., ಪುಟ ೧೭೮.

೧೪. ಅದೇ ಪುಟ ೧೭೯.

೧೫. ಅದೇ ಪುಟ ೧೯೯.

೧೬. ಅದೇ ಪುಟ ೩೦೭.

೧೭. ಅದೇ ಪುಟ ೩೦೯.

೧೮. ಅದೇ ಪುಟ ೩೦೨.

೧೯. ಅದೇ ಪುಟ ೩೧೦.

೨೦. ಅದೇ ಪುಟ ೧೫೫, ೧೫೬, ೧೫೭.

೨೧. ಅದೇ ಪುಟ ೨೬೦

೨೨. ಪಾರ್ಶ್ವಪಂಡಿತ ಸಂಪುಟ, ಭಾನುಮತಿ ವೈ.ಸಿ, ಪುಟ XXVಗ

೨೩. ಕನ್ನಡ ಜೈನಹಾಡುಗಳು(ಸಂ). ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೨೯೯.

೨೪. ಅದೇ ಪುಟ ೧೬೫, ೧೬೬.

೨೫. ಅದೇ ಪುಟ ೩೦೮.

೨೬. ಅದೇ ಪುಟ ೨೨೯-೨೮೨.

೨೭. ಅದೇ ಪುಟ ೨೪೨.

೨೮. ಕನ್ನಡ ದಾಖಲು ಸಾಹಿತ್ಯ, ರವೀಂದ್ರನಾಥ ಕೆ, ಪುಟ ೧೫೨.

೨೯. ಕನ್ನಡ ಜೈನಹಾಡುಗಳು, ಎಫ್.ಟಿ.ಹಳ್ಳಿಕೇರಿ, ರವೀಂದ್ರನಾಥ, ಪುಟ ೨೪೪.

೩೦. ಅದೇ ಪುಟ ೩೫೮.

೩೧. ಅದೇ ಪುಟ ೩೪೪.

೩೨. ಅದೇ ಪುಟ ೨೧೦.

೩೩. ವೇಣೂರು ಕ್ಷೇತ್ರ ಪರಿಚಯ ಸಂಗ್ರಹ, ಪ್ರಶಾಂತ ಬಾಳಂಜ ಟಿ, ಪುಟ ೩.

೩೪. ಕನ್ನಡ ಜೈನಹಾಡುಗಳು(ಸಂ), ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೨೮೭.

೩೫. ಅದೇ ಪುಟ ೩೮೮.

೩೬. ಅದೇ ಪುಟ ೨೮೭.

೩೭. ಅದೇ ಪುಟ ೨೨೪.

೩೮. ಸಂಸ್ಕೃತಿಯ ಅಂತರ್‌ಶಿಸ್ತೀಯ ನೆಲೆಗಳು, ಕೃಷ್ಣಪ್ಪ ಕೆ, ಪುಟ ೨೬೩.

೩೯. ಕನ್ನಡ ಜೈನಹಾಡುಗಳು(ಸಂ), ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೨೧೯.

೪೦. ಅದೇ ಪುಟ ೪೧೯.

೪೧. ಅದೇ ಪುಟ ೮೨.

೪೨. ಅದೇ ಪುಟ ೭೪.

೪೩. ಅದೇ ಪುಟ ೧೦೦.

೪೪. ಅದೇ ಪುಟ ೭೪.

೪೫. ರತ್ನಕರಂಡಕ, ಶ್ರಾವಕಚಾರ, ಪುಟ ೫೭.

೪೬. ಕನ್ನಡ ಜೈನಹಾಡುಗಳು(ಸಂ), ಎಫ್. ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೭೪.

೪೭. ಅದೇ ಪುಟ ೭೪-೭೫.

೪೮. ಅದೇ ಪುಟ ೫೬.

೪೯. ರತ್ನಾಕರನ ಹಾಡುಗಳು(ಸಂ) ಹಂಪ ನಾಗರಾಜಯ್ಯ, ಪುಟ ೮೩.

೫೦. ಕನ್ನಡ ಜೈನಹಾಡುಗಳು, ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೮೪.

೫೧. ಜೈನ ವೈದ್ಯಕೀಯ ಪರಂಪರೆ, ದನ್ಯಕುಮಾರಿ ಇಜಾ, ಪುಟ ೧೧.

೫೨. ಕನ್ನಡ ಜೈನಹಾಡುಗಳು, ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೨೦೨.

೫೩. ಅದೇ ಪುಟ ೨೦೨-೨೦೩.

೫೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಡಾ.ಚಿದಾನಂದಮೂರ್ತಿ ಎಂ, ಪುಟ ೧೦೩.

೫೫. ಕನ್ನಡ ಜೈನಹಾಡುಗಳು ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ. ಪುಟ ೭೪.

೫೬. ಅದೇ ಪುಟ ೨೦೩.

೫೭. ರತ್ನಾಕರನ ಹಾಡುಗಳು(ಸಂ), ಹಂಪನಾಗರಾಜಯ್ಯ, ಪುಟ ೮೩.

೫೮. ಕನ್ನಡ ಜೈನಹಾಡುಗಳು(ಸಂ), ಎಫ್.ಟಿ.ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ.೨೦೩

೫೯. ಅದೇ ಪುಟ ೨೦೩.

೬೦. ಅದೇ ಪುಟ ೨೦೩.

೬೧. ಅದೇ ಪುಟ ೭.

೬೨. ರತ್ನಾಕರನ ಹಾಡುಗಳು(ಸಂ), ಹಂಪ ನಾಗರಾಜಯ್ಯ, ಪುಟ ೭೭.

೬೩. ಕನ್ನಡ ಜೈನಹಾಡುಗಳು(ಸಂ), ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೧೧೪.

೬೪. ರತ್ನಾಕರನ ಹಾಡುಗಳು(ಸಂ), ಹಂಪ ನಾಗರಾಜಯ್ಯ, ಪುಟ ೧೭೧.

೬೫. ಅದೇ ಪುಟ ೬೭.

೬೬. ಆಧುನಿಕ ಕನ್ನಡ ಕಥನ ಸಾಹಿತ್ಯದಲ್ಲಿ ಜೈನ ಸಂವೇದನೆ, ಬಾಳಾಸಾಹೇಬ ಲೋಕಾಪುರ, ಪುಟ ೫೦.

೬೭. ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚಿದಾನಂದಮೂರ್ತಿ ಎಂ, ಪುಟ ೯೧.

೬೮. ಜೈನ ವೈದ್ಯಕೀಯ ಪರಂಪರೆ, ಧನ್ಯಕುಮಾರ ಇಜಾರಿ, ಪುಟ ೧೬.

೬೯. ಜೈನಧರ್ಮ, ಮಿರ್ಜಿ ಅಣ್ಣಾರಾಯ, ಪುಟ ೪೮೦.

೭೦. ಕನ್ನಡ ಜೈನಹಾಡುಗಳು(ಸಂ), ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ,. ಪುಟ ೧೮೫.

೭೧. ಚಂದ್ರಕೊಡೆ, ಹಂಪ ನಾಗರಾಜಯ್ಯ, ಪುಟ ೩೯೯

೭೨. ಅದೇ, ಪುಟ ೩೯೭

೭೩. ಜೈನ ಸಂಸ್ಕೃತಿ ಮತ್ತು ಸಿದ್ಧಾಂತ(ಸಂ), ಪಿ.ಕೆ.ಖಂಡೋಬ, ಪುಟ ೨೬.

೭೪. ಕನ್ನಡ ಜೈನಹಾಡುಗಳು, ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೧೩೩.

೭೫. ಬ್ರಹ್ಮಶಿವನ ಸಮಯ ಪರೀಕ್ಷೆ, ಪುಟ ೨೪೧.

೭೬. ಕನ್ನಡ ಜೈನಹಾಡುಗಳು, ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೨೨೦.

೭೭. ಅದೇ ಪುಟ ೭೧.

೭೮. ಅದೇ ಪುಟ ೭೫.

೭೯. ಅದೇ ಪುಟ ೧೦೪.

೮೦. ಅದೇ ಪುಟ ೭೭.

೮೧. ಅದೇ ಪುಟ ೧೫.

೮೨. ಜೈನ ಧರ್ಮ ಮತ್ತು ಸಿದ್ಧಾಂತಗಳು, ಪಿ.ಕೆ.ಖಂಡೋಬಾ, ಡಾ.ಸಂಗಮೇಶ ಸವದತ್ತಿಮಠ, ಪುಟ ೧೩.

೮೩. ಉತ್ತರೋತ್ತರಕಾಲೀನ ಹರಿದಾಸರು ಮತ್ತು ಅನುಭವದ ಕವಿಗಳು, ಸಂ., ಸೀತಾರಾಮಯ್ಯ ಎಂ.ವೀ, ಪುಟ ೪.

೮೪. ಕನ್ನಡ ಜೈನಹಾಡುಗಳು(ಸಂ), ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ, ಪುಟ ೧೪೧

೮೫. ಅದೇ ಪುಟ ೧೩

೮೬. ಜನಪದ ಸಾಹಿತ್ಯ ಭಾಷೆ, ಅಂಗಡಿ ಎಸ್.ಎಸ್. ಪುಟ ೧೦೨.

೮೭. ರತ್ನಾಕರನ ಹಾಡುಗಳು, ಹಂಪ ನಾಗರಾಜಯ್ಯ, ಪುಟ ೧೭೬.

೮೮. ಕನ್ನಡ ಜೈನಹಾಡುಗಳು, ಹಳ್ಳಿಕೇರಿ ಎಫ್.ಟಿ. ರವೀಂದ್ರನಾಥ ಕೆ, ಪುಟ ೯೩.

೮೯. ಅದೇ ಪುಟ ೨೨.

೯೦. ಅದೇ ಪುಟ ೫೩.

೯೧. ಅದೇ ಪುಟ ೧೨೫.

೯೨. ಅದೇ ಪುಟ ೧೨೪.

೯೩. ಅದೇ ಪುಟ ೩೭೧.

೯೪. ಅದೇ ಪುಟ ೧೧೯.

೯೫. ರತ್ನಾಕರನ ಹಾಡುಗಳು(ಸಂ), ಹಂಪ ನಾಗರಾಜಯ್ಯ, ಪುಟ ೧೨.

೯೬. ಕನ್ನಡ ಜೈನಹಾಡುಗಳು(ಸಂ), ಹಳ್ಳಿಕೇರಿ ಎಫ್.ಟಿ., ರವೀಂದ್ರನಾಥ ಕೆ, ಪುಟ ೨೩.

೯೭. ಅದೇ ಪುಟ ೭೮.

೯೮. ಅದೇ ಪುಟ ೧೩೫.

೯೯. ಅದೇ ಪುಟ ೩೮೯.

೧೦೦. ಅದೇ ಪುಟ ೧೧೭, ೧೧೮.

೧೦೧. ಅದೇ ಪುಟ ೧೧೨.

೧೦೨. ಅದೇ ಪುಟ ೩೬೯.

೧೦೩. ಅದೇ ಪುಟ ೨೦.

೧೦೪. ಅದೇ ಪುಟ ೭.

೧೦೫. ಅದೇ ಪುಟ ೮.

□□□

# ಅಧ್ಯಾಯ : ಆರು

# ಸಮಾರೋಪ

ಜೈನಧರ್ಮವು ಕನ್ನಡ ನಾಡಿನೊಂದಿಗೆ ತುಂಬ ಪ್ರಾಚೀನವಾದ ನಿಕಟಸಂಬಂಧ ಹೊಂದಿದೆ. ಈ ನಾಡಿಗೆ ಜೈನಧರ್ಮ ಕೊಟ್ಟಂತಹ ಕೊಡುಗೆ ಅತ್ಯಮೂಲ್ಯವಾದುದು. ಸಾವಿರಾರು ವರ್ಷಗಳ ಸುದೀರ್ಘವಾದ ಇತಿಹಾಸವನ್ನು ಹೊಂದಿರುವಂತಹ ಮತ್ತು ತನ್ನದೇ ಆದ ಸಾಂಸ್ಕೃತಿಕ ಪರಂಪರೆಯನ್ನು ಒಳಗೊಂಡಂತಹ ಧರ್ಮವಾಗಿದೆ. ಕನ್ನಡ ಸಾಹಿತ್ಯದ ನಿರ್ಮಾಣದಲ್ಲಿ ಆಸ್ತಿಭಾರವನ್ನು ಹಾಕಿ ಅದಮ್ಯ ಉನ್ನತ ಶಿಖರಕ್ಕೆ ಏರಿಸಿದವರು ಜೈನಧರ್ಮೀಯರು. ಅಷ್ಟೇ ಅಲ್ಲದೇ ಕಲೆ, ಸಂಸ್ಕೃತಿ, ವಾಸ್ತುಶಿಲ್ಪ ಮುಂತಾದ ಕ್ಷೇತ್ರಗಳಲ್ಲಿ ಇವರು ನೀಡಿದಂತಹ ಕೊಡುಗೆಗಳು ಅವಿಸ್ಮರಣೀಯವಾಗಿವೆ. ಇಂತಹ ಜೈನಧರ್ಮ ತಾನು ಬೆಳೆದುಬಂದ ಕಾಲಾವಧಿಯಲ್ಲಿ ಅನೇಕ ಧರ್ಮಗಳೊಂದಿಗೆ ಸಂಘರ್ಷದ ಹಾದಿಯನ್ನು ತುಳಿಯಬೇಕಾಯಿತು. ಹಾಗೆಯೇ ಸಾಹಿತ್ಯದಲ್ಲಿಯೂ ಸಹ ಕಾಲಕ್ಕೆ ಅನುಗುಣವಾಗಿ ಹೊಸ ಸಾಧ್ಯತೆಗಳನ್ನು ದುಡಿಸಿಕೊಂಡಿತು. ಜೈನಧರ್ಮವನ್ನು ಕುರಿತಂತೆ ಚರಿತ್ರೆ, ಸಾಹಿತ್ಯ, ಕಲೆ, ಸಂಸ್ಕೃತಿಯ ಬಗ್ಗೆ ಸಾಕಷ್ಟು ಸಂಶೋಧನೆಗಳನ್ನು ಅನೇಕ ವಿದ್ವಾಂಸರು ಮಾಡಿದ್ದಾರೆ. ಆದರೆ ಜೈನಧರ್ಮದ ಕವಿಗಳೇ ರಚಿಸಿರುವಂತಹ ಕನ್ನಡ ಜೈನ ಹಾಡುಗಳ ಬಗ್ಗೆ ಯಾವುದೇ ಅಧ್ಯಯನಗಳು ನಡೆದಿಲ್ಲ. ವಚನಕಾರರಲ್ಲಿ ಸ್ವರವಚನಗಳ ಕುರಿತು, ದಾಸರ ಕೀರ್ತನೆಗಳೂ ಹಾಗೂ ಅನುಭಾವಿಗಳ ತತ್ವಪದಗಳ ಕುರಿತು ಅಧ್ಯಯನಗಳು ನಡೆದಿವೆ. ಆದರೆ ಒಂದು ಕಾಲಕ್ಕೆ ಜೈನಧರ್ಮದ ಸಾಹಿತ್ಯದ ಬರವಣಿಗೆ ನಿಂತೇ ಹೋಯಿತು ಎನ್ನುವ ಸಂದರ್ಭದಲ್ಲಿ ಈ ಜೈನ ಹಾಡುಗಳು ಜೈನಧರ್ಮದ ಸಾಹಿತ್ಯದ ನಿರಂತರತೆಯನ್ನು ಕಾಪಾಡಿದಂತಹವು. ಅಷ್ಟೇ ಅಲ್ಲದೆ ಜೈನರ ಧಾರ್ಮಿಕ ಚರಿತ್ರೆ ಸಂಸ್ಕೃತಿಯನ್ನು ಸಶಕ್ತವಾಗಿ ಬಿಂಬಿಸುವ ಗುಣವುಳ್ಳ ಹಾಡುಗಳಾಗಿ ಕಂಡುಬರುತ್ತವೆ.

"ಕನ್ನಡ ಜೈನ ಹಾಡುಗಳು" ಇದು ಸಂಶೋಧನಾ ಮಹಾಪ್ರಬಂಧದ ಶೀರ್ಷಿಕೆ. 'ಜಿನ'ನನ್ನು ದೇವರೆಂದು ಪೂಜಿಸುವ ಜೈನರಿಗೆ ಜಿನಸ್ತುತಿಗಳೇ ಮುಖ್ಯ. ಇಂಥ ಸ್ತುತಿಪರ ಗುಣ ಜೈನ ಹಾಡುಗಳ ಪ್ರಧಾನ ಅಂಶ. ಹೀಗಾಗಿ ಜೈನ ವಾಙ್ಮಯದಲ್ಲಿ ಹಾಡುಗಳಿಗೆ ತುಂಬ ಮಹತ್ವವಿದೆ. ಆದರೆ ನಮ್ಮ ವಿದ್ವಾಂಸರ ಗಮನ ಪ್ರಾಚೀನ ಮಹಾಕಾವ್ಯಗಳ ಕಡೆಗೆ ಹೊರಳಿತೇ ವಿನಃ ಇಂತಹ ಹಾಡುಗಳ ಕಡೆಗೆ ಹೊರಳಲಿಲ್ಲ. ಈ ಕಾರಣಕ್ಕಾಗಿ ಮಹಾಪ್ರಬಂಧ ಉಪೇಕ್ಷಿತ ಸಾಹಿತ್ಯ ಪ್ರಕಾರವಾದ ಹಾಡುಗಳ ಸಂಗ್ರಹ, ಸಂಪಾದನ ಮತ್ತು ಅಧ್ಯಯನ ಕುರಿತು ದಾಖಲಿಸಿದ ಪ್ರಯತ್ನವಾಗಿದೆ.

**ಅಧ್ಯಯನದ ಫಲಿತಗಳು**

ಒಂದು ಕಾಲಕ್ಕೆ ಮಧುರ ಕವಿ

"ಪಂಡಿತರುಂ ವಿವಿಧಕಳ್

ಮಂಡಿತನಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್

ಕಂಡರ್ ಕೇಳ್ವೊಡೆ ಗೊರವರ

ದುಂಡುಚಿಯೇ ಬೀದಿವರೆಯ ಬೀರನಕತೆಯೇ?"

ಎಂದು ಜನಪದ ಸಾಹಿತ್ಯವನ್ನು ಪರಿಹಾಸ್ಯ ಮಾಡಿದ್ದಾನೆ. ಅಂದರೆ ಶಾಸ್ತ್ರ ಮತ್ತು ಸಂಸ್ಕೃತ ಪ್ರತಿಭೆಯಿಂದ ರಚಿತವಾದ ಪ್ರೌಢ ಸಾಹಿತ್ಯವೇ ಸಾಹಿತ್ಯವೆಂದು ಭಾವಿಸಿರುವ ಸಂದರ್ಭದಲ್ಲಿ ಹಳ್ಳಿಯ ಜನಸಾಮಾನ್ಯರ ಹಾಡುಗಳು ಪಂಡಿತರಿಂದ ತಿರಸ್ಕೃತವಾಗಿದ್ದವು. ಹಾಗೇ ನೋಡಿದರೆ ರಾಗಬದ್ಧ ಸಾಹಿತ್ಯಕ್ಕೆ ಮೊದಲಿನಿಂದಲೂ ಆದ್ಯತೆ ಹೆಚ್ಚು. ಇಂತಹ ಹಾಡುಗಳು ಒಂದು ಭಾವವನ್ನು ಸನ್ನಿವೇಶವನ್ನು ತಿಳಿಸುವ ಪ್ರಯತ್ನವಾಗಿ ಹುಟ್ಟಿಕೊಂಡಿರುತ್ತವೆ. ಅಂದರೆ ಒಂದು ಪದ್ಯದಲ್ಲಿ ಕಥೆಯಿರುತ್ತದೆ. ಒಂದು ಸಮುದಾಯದ ಆಚಾರ-ವಿಚಾರ ಮತ್ತು ನಂಬಿಕೆ ಸಂಪ್ರದಾಯಗಳನ್ನು ವರ್ಣನೆ ಮಾಡಲಾಗಿರುತ್ತದೆ. ಅಂದರೆ ಇತಿಹಾಸ-ಪುರಾಣಗಳ ಸಾರವನ್ನು ಜನರ ಮಟ್ಟಕ್ಕೆ ಇಳಿಸುವುದು; ಚರಿತ್ರೆಯಲ್ಲಿ ನಡೆದು ಮರೆಯಾಗಿದ್ದ ಸಂಗತಿಗಳನ್ನು ಜನರಿಗೆ ನೆನಪಿಗೆ ತರುವುದು. ಆ ಮೂಲಕ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಪ್ರತಿಪಾದಿಸುವುದು ಈ ಹಾಡುಗಳ ಕೆಲಸ. ಈ ಸಂಗತಿಯನ್ನು ಮಹಾಪ್ರಬಂಧದಲ್ಲಿ ನಿರೂಪಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕನ್ನಡ ಹಾಡುಗಬ್ಬ ಸಾಹಿತ್ಯಕ್ಕೆ ಪ್ರಾಚೀನ ಇತಿಹಾಸವಿದೆ. ಕನ್ನಡದ ಮೊದಲ ಲಾಕ್ಷಣಿಕ ಗ್ರಂಥ ಕವಿರಾಜಮಾರ್ಗದಲ್ಲಿ ಇದರ ಸುಳಿವುಗಳು ಸಿಗುತ್ತವೆ. ವಿದ್ವಾಂಸರು ಚತ್ತಾಣ-ಬೆದಂಡೆ ಓನಕೆವಾಡು, ಓವನಿಗೆ, ವಸ್ತುಕ-ವರ್ಣಕ ಎಂದು ಉಲ್ಲೇಖಿತವಾಗಿರುವ ಅಂಶಗಳನ್ನು ಗೇಯಗುಣದಿಂದ ಕೂಡಿದ ಹಾಡುಗಬ್ಬ ಸಾಹಿತ್ಯವೆಂದು ಅಭಿಪ್ರಾಯ ಪಡುತ್ತಾರೆ. ಇದಕ್ಕೆ ಪ್ರೇರಣೆ ಪ್ರಾಯಶಃ ಜನಪದ ಪದ್ಯ ಸಾಹಿತ್ಯವಾಗಿರಬೇಕು. ಮುಂದೆ ದೇಶಿ ಛಂದೋಲಯಗಳ ನೆಪದಲ್ಲಿ ವಚನ, ತ್ರಿಪದಿ, ಸಾಂಗತ್ಯ, ಕೀರ್ತನ, ತತ್ವಪದಗಳು, ಶಿಷ್ಟಸಾಹಿತ್ಯದ ಪ್ರಕಾರಗಳಿಗೆ ಅಧ್ಯಯನ ಮಾಡುತ್ತ ಬಂದಿವೆ. ವಿದ್ವಾಂಸರು ಇಂತಹ ಹಾಡುಗಬ್ಬದ ಸಾಹಿತ್ಯದ ಅರ್ಥ, ಉಗಮ, ವಿಕಾಸ ಹಾಗೂ ಲಕ್ಷಣಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಮಹಾಪ್ರಬಂಧಕ್ಕೆ ಪೂರಕವಾಗಿ ಈ ಎಲ್ಲ ಅಂಶಗಳನ್ನು ಅಧ್ಯಾಯ ಎರಡರಲ್ಲಿ ಚರ್ಚಿಸಲಾಗಿದೆ.

ವಿಶೇಷವಾಗಿ ನಾವು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಕನ್ನಡ ಜೈನ ಹಾಡುಗಳ ಉಗಮ-ವಿಕಾಸ ಕುರಿತಂತೆ ಮತ್ತು ಹಾಡುಗಳ ಪ್ರಕಟಣ ಇತಿಹಾಸ ಕುರಿತಂತೆ ಇದುವರೆಗೆ ಸಂಗ್ರಹಿತವಾದ ಮತ್ತು ಪ್ರಕಟವಾದ ಜೈನ ಹಾಡುಗಳನ್ನು ಅನುಲಕ್ಷಿಸಿ ಚರ್ಚಿಸಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಜೈನಕವಿಗಳು ಮಹಾಕಾವ್ಯ ಪರಂಪರೆಗೆ ಆದಿಯಾದಂತೆ ಬಹುಶಃ ಹಾಡುಗಬ್ಬ ಸಾಹಿತ್ಯ ಪರಂಪರೆಗೂ ಅವರೇ ಆದ್ಯರೆಂಬಂತೆ ತೋರುತ್ತದೆ. ಆದರೂ ಸೂಕ್ತ ಪುರಾವೆಗಳು ಲಭಿಸುವುದಿಲ್ಲ. ಅಂದರೆ ಜೈನ ಹಾಡುಗಳ ೧೫-೧೬ನೇ ಶತಮಾನದ ಕಾಲಘಟ್ಟದಲ್ಲಿ ರತ್ನಾಕರನ ಪದಗಳು ಅಥವಾ ಅಣ್ಣನ ಪದಗಳು ಹೆಸರಿನಲ್ಲಿ ಬೆಳಕು ಕಂಡಿರುವುದನ್ನು

ಗಮನಿಸಬಹುದು. ಹೀಗಾಗಿ ಕರ್ನಾಟಕದಲ್ಲಿ ಸ್ವರವಚನಕಾರರು, ತತ್ವಪದಕಾರರು, ಕೀರ್ತನಕಾರರು ಉದಯಸಿದ ಕಾಲಘಟ್ಟದಲ್ಲಿ ಜೈನ ಹಾಡುಗಾರರು ಉದಯಿಸಿರಬೇಕು. ಅದು ಏನೇ ಇದ್ದರೂ ಕನ್ನಡ ಜೈನ ಹಾಡುಗಳಿಗೆ ಚಂದ್ರಸಾಗರ ವರ್ಣಿ, ಕವಿ ಪದ್ಮರಾಜ ಪಂಡಿತ, ಕವಿ ದ್ವಾರಪಾಲ, ರತ್ನಾಕರವರ್ಣಿಯಂತಹ ಕವಿಗಳ ಕೊಡುಗೆಯನ್ನು ಮರೆಯುವಂತಿಲ್ಲ. ಇಂತಹ ಹಾಡುಗಳನ್ನು ಶೋಧಿಸಿ ೧೯ನೇ ಶತಮಾನದ ಆದಿಭಾಗದಲ್ಲಿ ಹಾಡುಗಳ ಪ್ರಕಟಣೆಗೆ ನೂರು ವರ್ಷಗಳ ಇತಿಹಾಸವಿದೆ. ಈ ಇತಿಹಾಸವನ್ನು ಉಪಲಬ್ಧ ಆಕರಗಳ ಹಿನ್ನಲೆಯಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಜಿನಭಜನಸಾರ, (ಎರ್ತೂರು ಶಾಂತರಾಜಶಾಸ್ತ್ರಿ, ೧೯೧೩), ಜಿನಭಜನಸಂಗ್ರಹ (ವಿ.ಲೋಕನಾಥಶಾಸ್ತ್ರಿ, ೧೯೪೮), ರತ್ನಾಕರನ ಕೀರ್ತನೆಗಳು (ಭುವನಹಳ್ಳಿ ಡಿ. ಶ್ರೀಪತಿ ಜೋಯಿಸ್, ೧೯೬೬), ಆಧ್ಯಾತ್ಮರಸ ಗೀತಾಮಂಜರಿ (ಜ್ಯೋತಿಷಿಯಂ ಜಗತ್ಪಾಲಯ, ೧೯೬೬), ರತ್ನಾಕರನ ಹಾಡುಗಳು (ಹಂಪನಾ, ೧೯೭೪) ಮುಂತಾದ ವಿದ್ವಾಂಸರ ಪ್ರಯತ್ನಗಳನ್ನು ಅಧ್ಯಾಯ ಮೂರರಲ್ಲಿ ವಿವರಿಸಲಾಗಿದೆ.

ಕನ್ನಡ ಜೈನ ಹಾಡುಗಳ ವಸ್ತು-ವೈವಿಧ್ಯತೆ ಪ್ರಸ್ತುತ ಮಹಾಪ್ರಬಂಧದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಮೂರು ಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ. ಅವುಗಳಲ್ಲಿ ಆತ್ಮ ಪರಿಕಲ್ಪನೆ, ಜಿನದರ್ಶನ, ಲೋಕನೀತಿ ಮುಂತಾದ ತತ್ವಗಳನ್ನು ಪ್ರತಿಪಾದಿಸುವ ಧಾರ್ಮಿಕ ಪರಿಕಲ್ಪನೆಯ ಹಾಡುಗಳು ಹೇರಳವಾಗಿ ದೊರೆಯುತ್ತವೆ. ಅವುಗಳನ್ನು ಒಂದು ಕಡೆ ಚರ್ಚಿಸಲಾಗಿದೆ. ಇನ್ನೂ ಜಿನ ಹಾಗೂ ಜಿನಪರಿವಾರದ ಸ್ತುತಿಗಳು ಅಂದರೆ ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಸರಿ-ಸುಮಾರು ೧೦ಜನ ತೀರ್ಥಂಕರರನ್ನು ಸ್ತುತಿಸುವ ಅವರ ಆಧ್ಯಾತ್ಮ ಸಾಧನೆಯನ್ನು ವರ್ಣಿಸುವ ಹಾಡುಗಳು ಸಿಗುತ್ತವೆ. ಹಾಗೆಯೇ ಜಿನಪರಿವಾರದವರಾದ ಯಕ್ಷ-ಯಕ್ಷಿಣಿಯರ ಸ್ತುತಿ ಪದ್ಯಗಳನ್ನು ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಮೂರನೇಯ ಭಾಗವಾಗಿ ಜನಪದ ಆಚರಣೆಗೆ ಸಂಬಂಧಿಸಿದ ಹಾಡುಗಳಲ್ಲಿ ಜೋಗುಳದ ಹಾಡುಗಳು, ಶೋಭಾನದ ಹಾಡುಗಳು, ಮಂಗಳಾರತಿಯ ಹಾಡು ಗಳನ್ನು ಅಧ್ಯಾಯ ನಾಲ್ಕರಲ್ಲಿ ವಿಶ್ಲೇಷಿಸಲಾಗಿದೆ.

ಯಾವುದೇ ಸಾಹಿತ್ಯಕ್ಕೆ ರಾಚನಿಕ ಮುಖದ ಜೊತೆಗೆ ಸಾಂಸ್ಕೃತಿಕ ಮುಖವಿರುತ್ತದೆ. ಹೀಗಾಗಿ ಕನ್ನಡ ಜೈನ ಹಾಡುಗಳಲ್ಲಿ ಕರ್ನಾಟಕದ ಜೈನ ಸಂಸ್ಕೃತಿ, ಕರ್ನಾಟಕದ ಸ್ಥಳಪುರಾಣ ಮಹಾತ್ಮೆಗಳು, ತೀರ್ಥಂಕರರ ಚರಿತ್ರೆಗಳು, ಮತ್ತು ಧಾರ್ಮಿಕ ಆಚರಣೆಗಳನ್ನು, ಪ್ರತಿಪಾದಿಸಲಾಗಿರುತ್ತವೆ. ಈ ಎಲ್ಲ ಅಂಶಗಳನ್ನು ಅಧ್ಯಾಯ ಐದರಲ್ಲಿ ಸಮಾಲೋಚಿಸಲಾಗಿದೆ.

ಶ್ರವಣಬೆಳಗೊಳದ ಹಾಗೂ ಕಾರ್ಕಳದ ಬಾಹುಬಲಿ ಮತ್ತು ಜೈನ ಬಸದಿಗಳು-ಚೈತ್ಯಾಲಯಗಳು ನಮ್ಮ ನಾಡಿನ ಪುರಾತತ್ವ ಸಂಸ್ಕೃತಿಗೆ ನೀಡಿದ ಅಮೂಲ್ಯ ಕೊಡುಗೆಗಳು. ಹೀಗೆ ಹಾಡಿನಲ್ಲಿ ಪ್ರಸ್ತಾಪಿಸಲಾದ ಈ ಅವಶೇಷಗಳನ್ನು ಕರ್ನಾಟಕ ಜೈನ ಸಂಸ್ಕೃತಿ ಅಡಿಯಲ್ಲಿ ಚರ್ಚಿಸಲಾಗಿದೆ. ವಿಶೇಷವಾಗಿ ಭಕ್ತಿ ಪ್ರಧಾನವಾದ ಹಾಡುಗಳಲ್ಲಿ ಜಿನಭಕ್ತಿಗೆ ಮೇಲುಗೈ. ಇಂತಹ ತೀರ್ಥಂಕರರ ಚರಿತ್ರೆಗಳು ಹೇರಳವಾಗಿ ಲಭ್ಯವಿವೆ. ಮಹಾಕವಿ ಪಂಪನ ಮಹಾಕಾವ್ಯವಾದ ಆದಿ ಪುರಾಣದಲ್ಲಿ ಭರತ-ಬಾಹುಬಲಿಗಳ ಪ್ರಸಂಗ ಒಂದು ರಸಘಟ್ಟ. ಆ ಸನ್ನಿವೇಶವನ್ನು ಒಂದು ಸಣ್ಣ ಹಾಡಿನ ಮೂಲಕ ನಿರೂಪಿಸುವ ಹಾಡುಗಾರನ ಸಾಂಸ್ಕೃತಿಕ ಅನನ್ಯತೆಯನ್ನು

ಮರೆಯುವಂತಿಲ್ಲ. ಇಂತಹ ಹತ್ತಾರು ತೀರ್ಥಂಕರರ ಹುಟ್ಟು-ಬೆಳವಣಿಗೆ ಸಾಧನೆಯನ್ನು ನಿರೂಪಿಸುವ ಹಾಡುಗಳನ್ನು ಅನುಲಕ್ಷಿಸಬಹುದು. ಜೈನ ತೀರ್ಥಂಕರರು ಒಬ್ಬೊಬ್ಬ ಕವಿಯ ಒಂದು ಮಹಾಕಾವ್ಯದ ವಸ್ತುವಾಗಿ ವರ್ಣಿತವಾಗಿದ್ದಾರೆ. ಹೀಗೆ ಒಂದು ಕಾವ್ಯ, ವಸ್ತುವನ್ನು ಹಾಡಿನಲ್ಲಿ ನಿರೂಪಿಸುವ ಶೈಲಿ 'ಕಿರಿದೊಳು ಪಿರಿದಾರ್ಥ ನೀಡುವ' ಪರಿಯಲ್ಲಿ ತೀರ್ಥಂಕರರ ಸಮಗ್ರ ಬದುಕನ್ನು ಒಂದು ಹಾಡಿನಲ್ಲಿ ನಿರೂಪಿಸಿರುವುದು. ಆ ಹಾಡಿನ ಕಥಾ ಸಂಗ್ರಹದ ಗುಣಕ್ಕೆ ಉತ್ತಮ ನಿದರ್ಶನವೆನಿಸಿದೆ.

ತೀರ್ಥಂಕರರಂತೆ ಪುಣ್ಯಸ್ಥಳಗಳು ಕರ್ನಾಟಕದಲ್ಲಿ ಕಂಡುಬರುತ್ತವೆ. ಅದರಲ್ಲೂ ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸವೆಂದರೆ ಜೈನಧರ್ಮದ ಇತಿಹಾಸ ಎನ್ನುವಷ್ಟು ಪ್ರಖರವಾಗಿ, ಈ ಧರ್ಮದ ತೀರ್ಥಕ್ಷೇತ್ರಗಳಿವೆ. ಶ್ರವಣಬೆಳಗೊಳ, ಕಾರ್ಕಳ, ವೇಣೂರು, ಮೂಡಬಿದ್ರೆ, ಧರ್ಮಸ್ಥಳ, ಪೆನೆಗೊಂಡೆ, ತೋವಿನಕೆರೆ, ರತ್ನಗಿರಿ, ನಿಡಗಲ್ಲು, ಹೊಂಬುಜ ಮುಂತಾದ ಸ್ಥಳಪುರಾಣ ಮಹಾತ್ಮೆಗಳನ್ನು ನಿರೂಪಿಸುವ ಹಾಡುಗಳು ಸಿಗುತ್ತವೆ. ಇದರ ಜೊತೆಗೆ ಜೈನರ ಧಾರ್ಮಿಕ ಆಚರಣೆಗಳಾದ ಪಂಚಾಣುವ್ರತಗಳ, ಸಪ್ತವ್ಯಸನಗಳು, ಸಲ್ಲೇಖನವ್ರತ, ನೋಂಪಿ ಸಾಮಾಜಿಕ ಸ್ಥಿತ್ಯಂತರಗಳನ್ನು ನಿರೂಪಿಸುವ ಹಾಡುಗಳನ್ನು ಸಾಂಸ್ಕೃತಿಕ ನಿರ್ವಾಚನದ ಹಿನ್ನಲೆಯಲ್ಲಿ ಚರ್ಚಿಸಲಾಗಿದೆ.

ಒಟ್ಟಿನಲ್ಲಿ ಕರ್ನಾಟಕ ಜೈನಧರ್ಮ ಸಾಧನೆಗಳಲ್ಲಿ ಶಾಸನಸಾಹಿತ್ಯ, ಶಿಲ್ಪಕಲೆಗಳಂತೆ ಮತ್ತೊಂದು ಭಾಷಾ ಸಾಮಗ್ರಿಯಾದ ಜೈನ ಹಾಡುಗಳು ಕನ್ನಡ ಸ್ವರವಚನ ಸಾಹಿತ್ಯದ ಕ್ಷಿತಿಜವನ್ನು ವಿಸ್ತರಿಸುತ್ತದೆ. ಈ ಹಾಡುಗಳನ್ನು ರಚಿಸಿದವನು ಕವಿಯೋ? ಅಥವಾ ಪ್ರತಿಕಾರನೋ? ಹಸ್ತಪ್ರತಿಗಳು ಕವಿ ನಿರ್ಮಿತ ಕೃತಿಗಳಲ್ಲ! ಬದಲಾಗಿ ಲಿಪಿಕಾರ ನಿರ್ಮಿತ ಪ್ರತಿಗಳು. ಅದರಲ್ಲೂ ಹಾಡುಗಳ ಭಾಷೆ-ಭಾವಗಳನ್ನು ಗಮನಿಸಿದರೆ ಚಂಪೂ ಸಾಹಿತ್ಯ ಪ್ರಕಾರದಂಥ ಕಾವ್ಯಪ್ರತಿಯ ಕೊನೆಯಲ್ಲಿ ದೊರೆಯುವ ಈ ಹಾಡುಗಳು ಶುದ್ಧ ದೇಶಿಮಟ್ಟು ಮತ್ತು ಶುದ್ಧ ದೇಶೀಭಾಷೆಯಿಂದಾಗಿ ಇವು ಲಿಪಿಕಾರ ನಿರ್ಮಿತ ಪಠ್ಯಗಳೆಂದು ಹೇಳಬಹುದು. ಅದೇ ರೀತಿ ಹೀಗೆ ಬಿಡಿಹಾಡುಗಳನ್ನು ಹೊರತುಪಡಿಸಿದರೆ "ರತ್ನಾಕರನ ಹಾಡುಗಳು" ಹೆಸರಿನ ಈ ಕಟ್ಟು ಸ್ವತಃ ಕವಿಯಿಂದಲೇ ರಚನೆಯಾಗಿದೆ. ಈ ಅಂಶವನ್ನು ಹೇಳುವ ಕಾರಣವಿಷ್ಟೇ. ಕನ್ನಡ ಜೈನ ಹಾಡುಗಳ ರಚನೆಕಾರರು ಹಸ್ತಪ್ರತಿಗಳನ್ನು ಲಿಪಿಮಾಡುವ ಲಿಪಿಕಾರರು ಆಗಿದ್ದಲ್ಲಿ ಅವರು ಸ್ವತಃ ಕವಿಹೃದಯ ಸಹೃದಯರೆಂಬುದನ್ನು ಹೇಳಬೇಕಾಗುತ್ತದೆ. ಈ ಕುರಿತು ವಿದ್ವಾಂಸರು ಚರ್ಚಿಸಲು ಇನ್ನೂ ಈ ಹಾಡುಗಳಲ್ಲಿ ಅವಕಾಶವಿದೆ.

ಒಟ್ಟಿನಲ್ಲಿ ಕನ್ನಡ ಜೈನ ಹಾಡುಗಳ ಸಾಂಸ್ಕೃತಿಕ ಅಧ್ಯಯನವೆಂದರೆ ಕರ್ನಾಟಕ ಜೈನ ಧರ್ಮೀಯರ ಸಮಗ್ರ ಮುಖಗಳ ಅಧ್ಯಯನವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

❑❑❑

# ಅನುಬಂಧಗಳು

೧. ವಕ್ತ್ರವಿವರ

೨. ಜೈನ ಹಾಡುಗಳ ಪಾರಿಭಾಷಿಕ ಪದಕೋಶ

೩. ಪರಾಮರ್ಶನ ಗ್ರಂಥಗಳು

೪. ಛಾಯಾಚಿತ್ರಗಳು

## ೧. ವಕ್ತೃವಿವರ

| ಕ್ರ.ಸಂ. | ಹೆಸರು | ಊರು | ಜಾತಿ | ವೃತ್ತಿ | ವಯಸ್ಸು |
|---|---|---|---|---|---|
| ೧. | ಬ್ರಹ್ಮದೇವಯ್ಯ | ರತ್ನಗಿರಿ | ಜೈನ | ದೇವರಪೂಜೆ/ ವ್ಯವಸಾಯ | ೬೦ |
| ೨. | ರವಿಕುಮಾರ ಬಿ. | ಅಗಳಿ | ಜೈನ | ಅರ್ಚಕರು | ೩೫ |
| ೩. | ಜ್ವಾಲೇಂದ್ರಕುಮಾರ | ಮಿಡಿಗೇಶಿ | ಜೈನ | ಅರ್ಚಕರು | ೫೩ |
| ೪. | ಧನ್ಯಕುಮಾರ ಬಿ.ಪಿ. | ಬಿದರೆ | ಜೈನ | ಅರ್ಚಕರು | ೪೮ |
| ೫. | ಧರಣೇಂದ್ರಕುಮಾರ | ನಿಟ್ಟೂರು | ಜೈನ | ಪುರೋಹಿತರು | ೨೪ |
| ೬. | ಕನಕರತ್ನಮ್ಮ | ಕುಚ್ಚಂಗಿ | ಜೈನ | ಅರ್ಚಕರು | ೫೫ |
| ೭. | ಪದ್ಮರಾಜು ಎಚ್.ಜೆ. | ತೋವಿನಕೆರೆ | ಜೈನ | ಕೃಷಿ | ೫೨ |
| ೮. | ಅನಂತರಾಜು | ಅಕ್ಕಿರಾಂಪುರ | ಜೈನ | ಸಂಚಾಲಕರು | ೪೫ |
| ೯. | ಯುವರಾಜ್ | ವರಾಂಗ | ಜೈನ | ಅರ್ಚಕರು | ೫೪ |
| ೧೦. | ಪೃಥ್ವಿರಾಜ್ | ವೇಣೂರು | ಜೈನ | ವ್ಯವಸ್ಥಾಪಕರು | ೫೭ |
| ೧೧. | ಶ್ರೀಪಾಲಿಂದ್ರ ಬಿ.ಎಸ್. | ಭಂಗವಾಡಿ | ಜೈನ | ಅರ್ಚಕರು | ೮೩ |
| ೧೨. | ಸಂಪತ್ತುಕುಮಾರ | ಪೆನುಗೊಂಡ | ಜೈನ | ಅರ್ಚಕರು | ೫೮ |
| ೧೩. | ರಂಗನಾಥ | ನಿಡಗಲ್ಲು | ಜೈನ | ಅರ್ಚಕರು | ೫೫ |
| ೧೪. | ಕುಮಾರ್ | ಶ್ರವಣಬೆಳಗೊಳ | ಜೈನ | ಮಾರ್ಗದರ್ಶಕರು | ೪೫ |
| ೧೫. | ದರ್ಶನ | ಹೊಂಬುಜ | ಜೈನ | ವೇದ ಅಧ್ಯಯನ ವಿದ್ಯಾರ್ಥಿ | ೨೦ |
| ೧೬. | ಅಗ್ನಿರಾಜು | ಮೂಡಬಿದ್ರೆ | ಜೈನ | ವ್ಯವಸ್ಥಾಪಕರು | ೫೦ |
| ೧೭. | ಚಂದ್ರನಾಥ | ಭಂಗವಾಡಿ | ಜೈನ | ಅರ್ಚಕರು | ೭೫ |
| ೧೮. | ರಾಮಕೃಷ್ಣ | ಹೊಂಬುಜ | ಜೈನ | ಅರ್ಚಕರು | ೮೧ |

□□□

## ೨. ಜೈನ ಹಾಡುಗಳ ಪಾರಿಭಾಷಿಕ ಪದಕೋಶ

೧. **ಅರಹಂತರು:** ಜಿನ, ತೀರ್ಥಂಕರ, ಕರ್ಮಬಂಧನವನ್ನು ಹರಿದೊಗೆದು ಭವ್ಯಬಂಧದಿಂದ ಮುಕ್ತರಾಗಿ ಸಂಸಾರ ನಿಸ್ತಾರಣೋಪಾಯವನ್ನು 'ಭವ್ಯ'ರಿಗೆ ಬೋಧಿಸಿ ಮೋಕ್ಷಕ್ಕೆ ಸಂದ ಮಹಾನ್ ಆತ್ಮರು.

೨. **ಅಣುವ್ರತ:** ಅಹಿಂಸೆ, ಸತ್ಯ, ಅಚಾರ್ಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ. ಪರಿಗ್ರಹ ಪರಿಮಾಣು ವ್ರತಗಳನ್ನು ಶ್ರಾವಕರು ಸ್ಥೂಲವಾಗಿ ಆಚರಿಸಿದಾಗ ಇವು ಅಣುವ್ರತವಾಗುವವು. ಮುನಿಗಳು ಇದನ್ನು ಸೂಕ್ಷ್ಮವಾಗಿ ಆಚರಿಸುವಾಗ ಇವು ಮಹಾನ್ ವ್ರತಗಳಾಗುನುವು.

೩. **ಅಧರ್ಮ:** ಜೀವ ಪುದ್ಗಲಗಳು ತಂಗಲು ನೆರವಾಗುವ ಒಂದು ದ್ರವ್ಯ. ಷಡ್‌ದ್ರವ್ಯಗಳಲ್ಲಿ ಇದೂ ಒಂದು.

೪. **ಅನುಪ್ರೇಕ್ಷೆ:** ಇದರಲ್ಲಿ ಹನ್ನೆರಡು ಬಗೆ. ಅನಿತ್ಯ, ಅಶರಣ್ಯ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿತ್ವ, ಆಸ್ರವ, ಸಂವರ, ನಿರ್ಜರ, ಲೋಕಸ್ವರೂಪ, ಬೋಧಿದುರ್ಲಭ, ಧರ್ಮ ಇವನ್ನು ವೈರಾಗ್ಯ ಬಲಪಡಿಸಿಕೊಳ್ಳಲು ಸಾಧಕ ಮತ್ತೆ ಮತ್ತೆ ಮೆಲುಕು ಹಾಕುವರು.

೫. **ಅಷ್ಟಾಂಗಯೋಗ:** ತನ್ನ ಸತ್ಯಮಾರ್ಗಾವಲಂಬನೆಯಲ್ಲಿ ಸಂಶಯವಿಲ್ಲದಿರುವುದು ೧. ನಿಶಂಕಯೋಗ, ೨. ಯಾವ ವಿಧದ ತಾರ್ಕಿಕ ಸುಖದ ಆಶೆಯೂ ಇಲ್ಲದಿರುವುದು ನಿಕಾಂಕ್ಷಿತ ಯೋಗ, ೩. ಅತ್ಯರಲ್ಲಿ ಹೇಸಿಕೆ ತೋರದಿರುವುದು, ಅಪವಿತ್ರತೆಯನ್ನು ಕಾಣದಿರುವುದು ನಿರ್ವಿಚಿಕಿತ್ಸಾಯೋಗ, ೪. ಅಸತ್ಯಾಚರಣೆಯುಳ್ಳವನೊಡನೆ ಸಹಕರಿಸಿರುವುದು ಅಮೂಢ ದೃಷ್ಟಿಯೋಗ, ೫. ಸನ್ಮಾರ್ಗದಿಂದ ಬೇರೆ ಯಾಗುವವರಿಗೆ ಯೋಗ್ಯದಾರಿ ತೋರುವುದು ಸ್ಥಿರೀಕರಣಯೋಗ, ೬. ಸತ್ಯ ರೂಪಾದಿಗಳನ್ನು ಸ್ನೇಹದಿಂದ ಕಾಣುವುದು ವಾತ್ಸಲ್ಯಯೋಗ, ೮. ದೂರಮಾಡಲು ಯತ್ನಿಸುವುದು ಪ್ರಭಾವಯೋಗ.

೬. **ಅನಿಆಉಸ:** ಅರಿಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು ಮತ್ತು ಸರ್ವ ಸಾಧುಗಳೆಂಬ ಪಂಚಪರಮೇಷ್ಠಿಗಳು.

೭. **ಆರು ದ್ರವ್ಯಗಳು:** ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ.

೮. **ಅಸ್ತಿಕಾಯಗಳು:** ಜೀವಾಸ್ತಿಕಾಯ, ಪುದ್ಗಲಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ ಮತ್ತು ಆಕಾಶಾಸ್ತಿಕಾಯ.

೯. ಅಘಾತಿಕರ್ಮ: ಇದು ಜೀವದ ಸ್ವಭಾವವನ್ನು ಮಂಕುಗೊಳಿಸುವುದಿಲ್ಲ. ಇದರಲ್ಲಿ ನಾಲ್ಕು ಬಗೆ. ಆಯು, ನಾಮ, ಗೋತ್ರ, ವೇದನೀಯ.

೧೦. ಅನುಭೋಗ: ಜಿನವಾಣಿಯನ್ನು ವಿಷಯಾನುಕ್ರಮವಾಗಿ ಚರಣಾನುಯೋಗ, ಕರಣಾನುಯೋಗ, ದ್ರವ್ಯಾನುಯೋಗ, ಪ್ರಥಮಾನುಯೋಗವೆಂದು ನಾಲ್ಕು ಬಗೆಯ ವಿಂಗಡಣೆಯಾಗಿ ಅನುಯೋಗವೆನಿಸಿತು.

೧೧. ಅಭವ್ಯ: ಧರ್ಮಾನುರಾಗವಿಲ್ಲದೆ ಪಶುವಿನಂತೆ ಬಾಳುವ ಜೀವ, ಈ ಜೀವಕ್ಕೆ ಮೋಕ್ಷ ಅಲಭ್ಯವಾಗುವುದು.

೧೨. ಅವಧಿಜ್ಞಾನ: ಕಾಲದೇಶಗಳ ನಿರ್ಬಂಧವಿಲ್ಲದೆ, ವಿಷಯವನ್ನು ಗ್ರಹಿಸುವ ಜ್ಞಾನ. ದೇವತೆಗಳಿಗೂ ನಾರಕಿಗಳಿಗೂ ಇದು ಸಹಜವಾಗಿರುತ್ತದೆ. ಸಾಧಕರು ತಪಸ್ಸಿನಿಂದ ಈ ಜ್ಞಾನ ಪಡೆಯುವರು.

೧೩. ಅತಿಶಯಗಳು: ಹತ್ತು ಅತಿಶಯಗಳು. ೧. ಬೆವರು ಇಲ್ಲದ ಶರೀರವುಳ್ಳ ೨. ಮಲ ಮೂತ್ರರಹಿತ, ೩. ರಕ್ತವು ಹಾಲಿನಂತೆ, ೪. ಸಮಚತುರ ಸಂಸ್ಥಾನವುಳ್ಳ, ೫. ವಜ್ರ, ವೃಷಭ, ನಾರಾಚ, ಸಂವಹನವುಳ್ಳ, ೬. ಸುಂದರ, ೭. ಸುಗಂಧಿ, ೮. ೧೦೦೮ ಶುಭಲಕ್ಷಣ ಗಳುಳ್ಳ, ೯. ವಿಶೇಷಬಲ ೧೦. ಪ್ರಿಯಹಿತವಾದಿ.

೧೪. ಅನಂತಚತುಷ್ಟಯ: ೧. ಅನಂತದರ್ಶನ, ೨. ಅನಂತ ಜ್ಞಾನ, ೩.ಅನಂತಸುಖ, ೪. ಅನಂತವೀರ್ಯ.

೧೫. ಅವಸರ್ಪಿಣಿ: ಆಯಸ್ಸು, ಬಲ, ಎತ್ತರ, ಸುಖಸೌಭಾಗ್ಯ, ಧರ್ಮಾನುರಾಗ ಕ್ರಮವಾಗಿ ತಗ್ಗುವ ಕಾಲ.

೧೬. ಅಷ್ಟಕರ್ಮ: ನಾಲ್ಕು ಘಾತಿಕರ್ಮಗಳು, ನಾಲ್ಕು ಅಘಾತಿಕರ್ಮಗಳು.

೧೭. ಅಷ್ಟ ಗುಣಗಳು: ಸಂವೇಗ, ನಿರ್ವೇಗ, ಆತ್ಮನಿಂದಾ, ಗರ್ಹಣ, ಉಪಶಮ, ಅರ್ಹದ್‌ಭಕ್ತಿ ಅನುಕಂಪ ಮತ್ತು ಅಸ್ತಿತ್ವ ಇವು ಸಮ್ಯಕ್ತದ ಎಂಬ ಗುಣಗಳು.

೧೮. ಅಷ್ಟ ಜ್ಞಾನಗಳು: ಶ್ರುತಿ, ಮತಿ, ಅವಧಿ, ಕುಶ್ರುತಿ, ಕುಮತಿ, ಕುವಧಿ(ವಿಭಂಗಜ್ಞಾನ) ಮನಃಪರ್ಯಯ, ಕೇವಲಜ್ಞಾನ.

೧೯. ಅಷ್ಟಮಂಗಳ: ಛತ್ರ, ಧ್ವಜ, ಕಳಶ, ಚಾಮರ, ಗಿಂಡೀ(ಸುಪ್ರರೆಷ್ಟಿಕ), ಬಂಗಾರದ ಕಲಶ, ಕನ್ನಡಿ, ಬೀಸಣಿಗೆ.

೨೦. ಅಷ್ಟಾಹ್ನಿಕ: ಈ ಪರ್ವವನ್ನು ಪ್ರತಿವರ್ಷ ಆಷಾಢ, ಕಾರ್ತಿಕ ಮತ್ತು ಪಾಲ್ಗುಣದಲ್ಲಿ ಆಚರಿಸುವರು. ನಂದೀಶ್ವರ ಅಷ್ಟಾಹ್ನಿಕವನ್ನು ಕಾರ್ತೀಕದಲ್ಲಿ ಪಂಚಮರ ಅಷ್ಟಾಹ್ನಿಕವನ್ನು ಆಚರಿಸುವರು. ಈ ಕ್ಷೇತ್ರಗಳಲ್ಲಿರುವ ಅಕೃತಿಮಾ ಜಿನಾಲಯಗಳನ್ನು ಗಮನದಲ್ಲಿಟ್ಟು ಕೊಂಡು ಶ್ರಾವಕರು ಈ ಪರ್ವವನ್ನು ಆಚರಿಸುವರು.

೨೧. ಆದಿಬ್ರಹ್ಮ: ಪ್ರಥಮ ತೀರ್ಥಂಕರ ವೃಷಭದೇವ ಕರ್ಮ ಭೂಮಿಯಲ್ಲಿ ಕಾಯಕ ಮಾಡಿ ಬದುಕುವ ಕ್ರಮ ತಿಳಿಸಿ ಆದಿ ಬ್ರಹ್ಮನಾದನು.

೨೨. **ಅಸ್ತಿಕಾಯ:** ಬಹುಪ್ರದೇಶೀ ದ್ರವ್ಯವನ್ನು ಅಸ್ತಿಕಾಯವೆನ್ನುವರು. ಷಡ್‌ದ್ರವ್ಯಗಳಲ್ಲಿ ಕಾಲದ್ರವ್ಯವನ್ನು ಬಿಟ್ಟು ಮಿಕ್ಕ ಐದು ದ್ರವ್ಯಗಳು ಅಸ್ತಿಕಾಯಗಳಾಗಿವೆ.

೨೩. **ಅಹಮಿಂದ್ರ:** ಕಲ್ಪಾತೀತ ಸ್ವರ್ಗದಲ್ಲಿ ಆಳು, ಅರಸ ಭೇದವಿಲ್ಲ. ಅಲ್ಲಿರುವವರೆಲ್ಲರೂ ಅಹಮಿಂದ್ರರೇ.

೨೪. **ಆಸನ್ನ ಭವ್ಯ:** ಕೈವಲ್ಯಕ್ಕೆ ಹತ್ತಿರವಾಗಿರುವ ಸಾತ್ವಿಕ ಪ್ರಕೃತಿಯ ಜೀವ.

೨೫. **ಆಸ್ರವ:** ಮನ, ವಚನ, ಕಾಯಗಳ ಶುಭಾಶುಭ ಪರಿಣಾಮಕ್ಕೆ ಅನುಸಾರವಾಗಿ ಶುಭಾಶುಭ ಕರ್ಮಗಳ ಆತ್ಮದ ಕಥೆ ಹರಿಯುತ್ತಿರುವುದು.

೨೬. **ಅಷ್ಟಾಂಗಭೋಗ:** ಅನ್ನ, ನೀರು, ತಾಂಬೂಲ, ವೃಷ್ಪ, ಚಂದನ, ವಸ್ತ್ರ, ಶಯ್ಯ, ಅಲಂಕಾರ ಈ ಎಂಟು ಬಗೆಯ ಸುಖಗಳು.

೨೭. **ಅಷ್ಟಮದ:** ಕುಲ, ರೂಪ, ವಯಸ್ಸು, ತೋಳು, ತಪಸ್ಸು, ಕಲೆ, ದೈವಬಲ, ರಾಜ್ಯ ಈ ಎಂಟರಿಂದ ಉಂಟಾಗುವ ಸೊಕ್ಕು.

೨೮. **ಅಷ್ಟಮಲ:** ಶಂಕೆ, ಆಕಾಂಕ್ಷೆ, ವಿಚಿಕಿತ್ಸೆ, ಅನ್ಯದೃಷ್ಟಿ, ಪ್ರಶಂಸೆ, ಸಂಸ್ತವ, ಸಮ್ಯಗ್‌ದೃಷ್ಟಿ, ಅತಿಚಾರ ಈ ಎಂಟು ದೋಷಗಳು.

೨೯. **ಅಂಜನಾ:** ಸಂಕಪ್ರಭೆಯೆಂಬ ನರಕ.

೩೦. **ಅಂತರಾತ್ಮ:** ಪಾರಮಾರ್ಥಿಕ ಸುಖದಲ್ಲಿ ಆಸಕ್ತ, ಶರೀರ ಭಿನ್ನವಾದ ನಿಜ ಶುದ್ಧಾತ್ಮನನ್ನೇ ಆತ್ಮನೆಂದು ತಿಳಿಯುವವನು.

೩೧. **ಅಚ್ಯುತಕಲ್ಪ:** ಊರ್ಧ್ವಲೋಕದಲ್ಲಿ ಕಡೆಯದಾದ ಹದಿನಾರನೆಯ ಸ್ವರ್ಗ, ಇದರ ಒಡೆಯ ಅಚ್ಯುತೇಂದ್ರ.

೩೨. **ಅಜೀವ:** ಜೀವವಿಲ್ಲದ್ದು, ಚೈತನ್ಯವಿಲ್ಲದ್ದು, ದಶಪ್ರಾಣಗಳಿಲ್ಲದ ಚೈತನ್ಯರಹಿತವಾದ ದ್ರವ್ಯ.

೩೩. **ಅನಗಾರ:** ಗೃಹತ್ಯಾಗಿಯಾದ ಮುನಿ.

೩೪. **ಅನಂತ ಜ್ಞಾನ:** ಅಖಂಡ ಜ್ಞಾನ, ಪರಿಪೂರ್ಣ ಜ್ಞಾನ. ಇದು ಕೇವಲಜ್ಞಾನಿಗೆ ಒದಗುವಂತಹುದು.

೩೫. **ಅನಂತ ವೀರ್ಯ:** ಕೊನೆಯಿಲ್ಲದ ಅಖಂಡವಾದ ವೀರ್ಯ. ಇದು ಕೇವಲಜ್ಞಾನಿಗೆ ಒದಗುವಂತಹುದು.

೩೬. **ಅನಂತದರ್ಶನ:** ಕೊನೆಯಿಲ್ಲದ ಅಖಂಡವಾದ ದರ್ಶನ. ಇದು ಕೇವಲಜ್ಞಾನಿಗೆ ಒದಗುವಂತಹುದು.

೩೭. **ಅಪರಾಜಿತ:** ಪಂಚಾಣೋತ್ತರ ವಿಮಾನಗಳಲ್ಲಿ ಉತ್ತರ ದಿಕ್ಕಿಗೆ ಇರುವುದು.

೩೮. **ಅಮೂರ್ತ:** ಜೀವ ಶುದ್ಧವಾದ ಜೀವ.

೩೯. **ಅಯೋಗ ಕೇವಲಿ:** ಕಾಯಯೋಗದಿಂದ ಮುಕ್ತನಾಗಿ ೧೪ನೇ ಗುಣಸ್ಥಾನವನ್ನು ಹೊಂದಿದ ಜೀವಿ.

೪೦. **ಅಸ್ತೇಯ:** ಪಂಚಾಣುವ್ರತಗಳಲ್ಲಿ ಒಂದು. ಯಾವ ರೀತಿಯಿಂದಲೂ ಪರರ ದ್ರವ್ಯವನ್ನು ಅಪಹರಿಸದಿರುವುದು, ಇತರರಿಗೆ ಎತ್ತಿ ಕೊಡದಿರುವುದು ಅಥವಾ ಬಯಸದಿರುವುದು.

೪೧. **ಅಹಿಂಸಾವ್ರತ:** ಧರ್ಮ ಲಕ್ಷಣ ಆರಂಭವೂ ಸಂಗ್ರಹವೂ ಇಲ್ಲದಿರುವ ದಯಾಮಯ ಧರ್ಮ.

೪೨. ಇಂಗಿಣೀ ಮರಣ: ಅನ್ನ, ಪಾನ, ಖಾದ್ಯ, ಲೇಹ ನಾಲ್ಕು ವಿಧದ ಆಹಾರವನ್ನು ಬಿಟ್ಟು, ಪಸರ್ಗ ಗಳನ್ನು ಸಹಿಸುವುದು.

೪೩. ಇಪ್ಪತ್ತೆರಡು ಪರೀಷಹಗಳು: ಹಸಿವು, ಬಾಯಾರಿಕೆ, ಚಳಿ, ಬಿಸಿ, ಕ್ರಿಮಿ, ಕೀಟಗಳ ಕಡಿತ, ಬತ್ತಲೆಯಿಂದಾದ ತೊಂದರೆ, ಅರತಿಯ ಬಾಧೆ, ಸ್ತ್ರೀಯರಿಂದ ತೊಂದರೆ, ಓಡಾಡುವಾಗ ಆಗುವ ತೊಂದರೆ, ಮಲಗುವಾಗ ಆಗುವ ಬಾಧೆ, ಕುಳಿತಿರುವಾಗ ಆಗುವ ಬಾಧೆ, ಬೈಗುಳು, ಪೆಟ್ಟು, ಭಿಕ್ಷೆ ಬೇಡುವಾಗ ಬರುವ ಕಷ್ಟನಿಷ್ಠುರ, ಭಿಕ್ಷೆ ದೊರೆಯದ ದುಃಖ, ತಪೋ ಮಹಿಮೆಗಳ ಕಾಣದಿರುವುದರಿಂದ ಆದ ವ್ಯಥೆ, ರೋಗ, ಕಲ್ಲುಮುಳ್ಳಿನ ಬಾಧೆ, ತನ್ನ ಪ್ರಜ್ಞೆಗಾಗಿ ಅಹಂಕಾರ ಪಡುವಿಕೆ, ಉತ್ತಮಜ್ಞಾನವನ್ನು ಅಪೇಕ್ಷಿಸಿ ಅಜ್ಞಾನಕ್ಕಾಗಿ ಕೊರಗುವುದು, ಸ್ನಾನ ಮಾಡದಿರುವುದರಿಂದ ಆಗುವ ಬಾಧೆ, ಜನರು ಗೌರವಿಸಲಿಲ್ಲವೆಂಬ ಕೊರಗು ಇವು ಇಪ್ಪತ್ತೆರಡು ಬಗೆಯ ತೊಂದರೆಗಳು.

೪೪. ಇಂದ್ರ: ಕಲ್ಪಲೋಕದ ಸರ್ವೋತ್ತಮ ದೇವತೆ. ಇವನು ದೇವತೆಗಳ ಪ್ರಭು. ಇವನಿಗೆ ಅಣಿಮಾದ್ಯಷ್ಟ ಐಶ್ವರ್ಯಗಳಿರುತ್ತವೆ.

೪೫. ಈರ್ಯಾ ಸಮಿತಿ: ನಿರ್ಮಲವಾದ ಮಾರ್ಗದಲ್ಲಿ ಸೂಕ್ಷ್ಮ ಪ್ರಾಣಿಗಳಿಗೂ ಕೂಡ ಬಾಧೆಯಾಗದಂತೆ ಅವನ್ನು ಪರಿಹರಿಸಿಕೊಂಡು ನಡೆಯುವುದು.

೪೬. ಉಪಸರ್ಗಗಳು: ದೇವ, ಮಾನವ, ತಿರ್ಯಕ್, ನಾರಕ ಎಂಬ ನಾಲ್ಕು ಬಗೆಯಿಂದ ಬರುವ ತಪೋವಿಘ್ನಗಳು.

೪೭. ಉತ್ಸರ್ಪಿಣಿ: ಕಲ್ಪಕಾಲದ ಅರ್ಧಭಾಗ. ದಿನದಿಂದ ದಿನಕ್ಕೆ ಜೀವದ ಆಯಸ್ಸು, ಬಲ, ಎತ್ತರ, ಸುಖ, ಸೌಭಾಗ್ಯ ಮತ್ತು ಪರಿಣಾಮ.

೪೮. ಉಪಾಧ್ಯಾಯರು: ರತ್ನತ್ರಯ ಧರ್ಮಮುಕ್ತರಾಗಿ, ಮಹಾವ್ರತಗಳನ್ನು ಆಚರಿಸುತ್ತ ನಿಜ ಶುದ್ಧ ಆತ್ಮಾನುಭವ ಆನಂದದಲ್ಲಿರುವವರು. ಭವ್ಯರಿಗೆ ಧರ್ಮೋಪದೇಶ, ಶಾಸ್ತ್ರಜ್ಞಾನ ಮಾಡಿಗೆಡುವವರು.

೪೯. ಉಗ್ರತಪ್ತ: ತಪೋಋದ್ಧಿ ಭೇದ, ದೀಕ್ಷೋಪವಾಸದ ಪಾರಣೆ ಏಕಾಂತರವನ್ನು ಮಾಡುತ್ತಿರುವಾಗ ಯಾವುದಾದರೂ ಕಾರಣ ಪ್ರಾಪ್ತವಾದರೆ ಉಪವಾಸವನ್ನು ಮೂರು ರಾತ್ರಿಗಳಿಗೆ ಮುಂದುವರಿಸುವುದು.

೫೦. ಉಪಭೋಗ: ಮತ್ತೆ ಮತ್ತೆ ಭೋಗಿಸಲು ಸಾಧ್ಯವಿರುವ ವಸ್ತು. ಇಂದ್ರಿಯಗಳ ಮೂಲಕ ಶಬ್ದಾದಿ ವಿಷಯಗಳನ್ನು ಗ್ರಹಣ ಮಾಡುವುದು.

೫೧. ಊರ್ಧ್ವಲೋಕ: ಮೇರುಪರ್ವತದ ಶಿಖರವನ್ನು ದಾಟಿ ಮೇಲೆ ಹೋದರೆ ಊರ್ಧ್ವಲೋಕ ಪ್ರಾರಂಭ ವಾಗುವುದು. ಇದರಲ್ಲಿ ಕಲ್ಪಲೋಕ ಹಾಗೂ ಕಲ್ಪಾತೀತ ವಿಭಾಗಗಳಿವೆ.

೫೨. ಊರ್ಜಯಂತ ಗಿರಿ: ಸೌರಾಷ್ಟ್ರದ ಮಹಾನ್ ತೀರ್ಥಕ್ಷೇತ್ರ. ಇದರ ಕೆಳಗೆ ಇರುವ ನಗರದ ಹೆಸರು ಗಿರಿನಗರ ಎಂದಿದ್ದಿರಬೇಕು. ಇದರ ಹೆಸರಿನಿಂದ ಸ್ವತಃ ಪರ್ವತವೇ ಈಗಿನ ಗಿರಿನಾರ ಗಿರ್ನಾರ್ ಎಂಬ ಹೆಸರನ್ನು ಹೊಂದಿದೆ. ಇದು ನೇಮಿತೀರ್ಥಂಕರರ ನಿರ್ವಾಣಭೂಮಿ.

೫೩. ಋಷಭ: ಮೊದಲನೆಯ ತೀರ್ಥಂಕರ ಜನ್ಮಾಭಿಷೇಕಕ್ಕೋಸ್ಕರ ಮಹಾಮೇರು ಪರ್ವತಕ್ಕೆ ಹೋಗಿರುವುದರಿಂದ ಋಷಭ.

೫೪. ಏಳು ಗುಣಗಳು: ಶ್ರದ್ಧೆ, ಭಕ್ತಿ, ಪ್ರೇಮ, ದಯೆ, ಉದಾತ್ತಶೀಲ, ಕ್ಷಮೆ, ಶೌಚ.

೫೫. ಐರಾವತ: ದೇವೇಂದ್ರನ ವಾಹನವಾದ ಆನೆ. ಇದಕ್ಕೆ ವೈಕುರ್ವಾಣಶಕ್ತಿ ಇದೆ.

೫೬. ಒಂಬತ್ತು ಸತ್ಕಾರಗಳು: ಎದುರುಗೊಳ್ಳುವುದು, ಏರಲಿಕ್ಕುವುದು, ಪಾದ, ಪ್ರಕ್ಷಾಳನ, ಅರ್ಚನೆ, ಭಕ್ತಿ, ನಮಸ್ಕಾರ, ಮನಶುದ್ಧಿ, ಮೃದುವಾದ ಮಾತು, ಶುದ್ಧವಾದ ಮಾತು ಇವುಗಳಿಂದ ಕೂಡಿದ ಶುದ್ಧವಾದ ಆಹಾರವನ್ನು ಕೊಡುವುದು. ಇವು ಒಂಬತ್ತು ಸತ್ಕಾರಗಳು.

೫೭. ಕಲ್ಪಗಳು: ಸ್ವರ್ಗಗಳು, ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಲಾಂಛನ, ಮಹಾಶುಕ್ರ, ಸಹಸ್ರಾರ, ಅನತ ಪ್ರಾಣತ್, ಆರಣ, ಅಚ್ಯುತ ಹೀಗೆ ಹನ್ನೆರಡು ಬಗೆಯವು.

೫೮. ಕಂದರ್ಪ: ಕಾಮದಿಂದ ಸುಳ್ಳು, ಗರ್ವ ಉತ್ಪನ್ನವಾಗುವುದು.

೫೯. ಕನಕಾಚಲ: ಬಂಗಾರದ ಪರ್ವತ, ಮೇರುಪರ್ವತ

೬೦. ಕರ್ಮ: ರಾಗದ್ವೇಷ ನಿಮಿತ್ತದಿಂದ ಕಾರ್ಮಣ ವರ್ಗಾಣ ರೂಪ ಪುದ್ಗಲ ಸ್ಕಂದಗಳು ಜೀವದೊಡನೆ ಬಂಧವನ್ನು ಹೊಂದುವುದು. ಜೀವ ಆ ಜೀವದೊಡನೆ ಕೂಡಿ ಮಾಡುವ ಕೆಲಸ. ಮನ ವಚನ ಕಾಯಗಳ ವ್ಯಾಪಾರ.

೬೧. ಕರ್ಮ ನಿರ್ಜರೆ: ಹರಿದು ಬರುತ್ತಿರುವ ಕರ್ಮ ಹರಿದು ಬೀಳುವುದು.

೬೨. ಕಲ್ಪಾತೀತ: ಕಲ್ಪಗಳಿಂದ ಮೇಲಿನ ಭಾಗ ನವಗ್ರೈವೇಯಕಾದಿ ವಿಮಾನಗಳು. ಇಲ್ಲಿನ ವಾಸಿಗಳು ಕಲ್ಪಾತೀತ ದೇವತೆಗಳು. ಇವರಲ್ಲಿ ಭೇದಗಳಿಲ್ಲ. ಎಲ್ಲರೂ ಇಂದ್ರರೆ. ಆದುದರಿಂದ ಇವರಿಗೆ ಅಹಮಿಂದ್ರ ಎಂಬ ಹೆಸರು.

೬೩. ಕೇವಲಬೋಧ: ಕೇವಲ ಜ್ಞಾನ, ಸರ್ವಜ್ಞತ್ವ, ಜ್ಞಾನಗಳಲ್ಲಿ ಮತಿ, ಶ್ರುತಿ, ಅವಧಿ, ಮನಃ ಪರ್ಯಾಯ, ಕೇವಲ ಐದು ಪ್ರಕಾರ ಕೇವಲಜ್ಞಾನದಿಂದ ಮೋಕ್ಷ ಲಭ್ಯ. ಇದು ತೀರ್ಥಂಕರರ ನಾಲ್ಕನೇ ಕಲ್ಯಾಣ.

೬೪. ಕರ್ಮಭೂಮಿ: ಭರತಖಂಡದಲ್ಲಿ ಕೆಲಕಾಲ ಕಲ್ಪವೃಕ್ಷಗಳು ಬೇಡಿದ್ದನ್ನು ನೀಡುವವು. ಆಗ ಭೋಗ ಭೂಮಿಯಿರುವುದು. ಇವು ನಿರ್ವೇದ್ಯವಾದಾಗ ಮಾನವರು ಬೆವರು ಸುರಿಸಿ ಬದುಕುವ ಅವಸ್ಥೆ ಬರುವುದು. ಇದನ್ನು ಕರ್ಮಭೂಮಿ ಎನ್ನುವರು. ಜೀವ ಕೈವಲ್ಯ ಪಡೆಯಲು ಕರ್ಮಭೂಮಿಯಲ್ಲೇ ಜನಿಸಬೇಕು.

೬೫. ಕಾಲಲಬ್ಧಿ: ಸಮ್ಯಗ್ದೃಷ್ಟಿ ದೊರೆಯುವ ಕಾಲ ಕೂಡಿಬರುವುದು. ಊರ್ಧ್ವಗತಿಯನ್ನು ಉಂಟು ಮಾಡಲು ಸನ್ನಿಹಿತವಾಗುವ ಕಾಲ.

೬೬. ಕಿಂಪುರುಷ: ವ್ಯಂತರ ದೇವತೆಗಳಲ್ಲೊಂದು.

೬೭. ಕಿನ್ನರ: ಹಾಡುವುದರಲ್ಲಿ ದಕ್ಷರಾದ ಸ್ವರ್ಗವಾಸಿಗಳು.

೬೮. ಕೇವಲಜ್ಞಾನ: ಪರಿಶುದ್ಧವಾದ ಪರಿಪೂರ್ಣವಾದ ಮತ್ತು ಸರ್ವವ್ಯಾಪಿಯಾದ ಅನಂತಜ್ಞಾನ. ಕರ್ಮಬಂಧನವನ್ನು ಕಳಚಿ ಬಿಸುಟ ಮುಕ್ತ ಜೀವಕ್ಕೆ ಸಹಜವಾಗಿರುವ ಜ್ಞಾನ.

೨೯. ಕೇವಲಜ್ಞಾನ ಕಲ್ಯಾಣ: ತೀರ್ಥಂಕರ ಪಂಚಕಲ್ಯಾಣಗಳಲ್ಲೊಂದು.

೭೦. ಕ್ಷೇಮಂಕರ: ಮೂರನೆಯ ಮನು ದುಷ್ಟಮೃಗಗಳ ಬಾಧೆಯಿಂದ ರಕ್ಷಿಸಿಕೊಳ್ಳುವ ರೀತಿಯನ್ನು ಜನರಿಗೆ ತಿಳಿಸಿದವ.

೭೧. ಕ್ಷೇಮಂಧರ: ನಾಲ್ಕನೆಯ ಮನು. ಆಯುಧಗಳಿಂದ ದುಷ್ಟಮೃಗಗಳನ್ನು ಅಡಗಿಸುವ ಉಪಾಯವನ್ನು ಹೇಳಿಕೊಟ್ಟವ.

೭೨. ಕೇವಲಿ: ಘಾತಿಕರ್ಮಗಳನ್ನು ದಹಿಸಿದ ಜಿನೇಂದ್ರ ಇವರು ಕೇವಲ ಜ್ಞಾನಿಗಳು.

೭೩. ಕಷಾಯಗಳು: ಕ್ರೋಧ, ಮಾನ, ಮಾಯಾ, ಲೋಭ ಎಂಬ ನಾಲ್ಕು ಬಗೆಯ ಕಲುಷಿತಗಳು.

೭೪. ಗತಿ: ಕರ್ಮಫಲದಿಂದ ಜೀವಿಯು ಅಲೆದಾಡುವ ನೆಲೆ. ಇದರಲ್ಲಿ ನಾಲ್ಕು ವಿಧ. ೧. ದೇವಗತಿ, ೨. ಮನುಷ್ಯಗತಿ, ೩. ತಿರ್ಯಗ್ಗತಿ, ೪. ನಾರಕಗತಿ.

೭೫. ಗರ್ಭಾವತರಣ: ಈ ಕಲ್ಯಾಣವು ತೀರ್ಥಂಕರ ತನ್ನ ತಾಯಿಯ ಗರ್ಭವನ್ನು ಧರಿಸುವಾಗ ನಡೆಯುವ ಒಂದು ಕಲ್ಯಾಣ. ಇದನ್ನು ಇಂದ್ರನು ಅವನ ಹೆಂಡತಿ ಶಚಿದೇವಿ ಬಂದು ನೆರವೇರಿಸುತ್ತಾರೆ. ಇದನ್ನು ಗರ್ಭಾತವರಣ ಕಲ್ಯಾಣವೆಂದು ಕರೆಯುತ್ತಾರೆ.

೭೬. ಗಣಧರ: ಯತಿ ಮೊದಲಾದ ಹನ್ನೆರಡು ಗುಣಗಳನ್ನು ಮಿಥ್ಯಾತ್ವಾಗಳಿಂದ ಬಿಡಿಸಿ ರತ್ನತ್ರಯ ಗಳಲ್ಲಿ ಸ್ಥಾಪನ ಮಾಡುವ ಧರ್ಮಾಚಾರ್ಯರು. ಇವರು ಸಪ್ತಾರ್ಧಿಯುಕ್ತರು ಮತ್ತು ತೀರ್ಥಂಕರರ ಮುಖ್ಯ ಶಿಷ್ಯರಾಗಿದ್ದು ಅವರ ದಿವ್ಯಧ್ವನಿಯನ್ನು ಅರ್ಥೈಸುವವರು.

೭೭. ಗುಣವ್ರತ: ಶೀಲವ್ರತ ಜೈನಗೃಹಸ್ಥರು ಆಚರಿಸಬೇಕಾದ ಮೂರು ವ್ರತಗಳು, ೧. ದಿಗ್ವ್ರತ, ೨. ದೇಶವ್ರತ, ೩. ದಂಡವಿರತಿವ್ರತ ಅಥವಾ ಅನರ್ಥದಂಡವ್ರತ.

೭೮. ಗುಪ್ತಿ: ಮನವಚನಕಾಯಗಳ ನಿಯಂತ್ರಣಕ್ಕೆ ಗುಪ್ತಿ ಎನ್ನುವರು.

೭೯. ಗಂಧಕುಟಿ: ಜಿನೇಂದ್ರನು ತಂಗುವ ಮಂಟಪ. ಇದನ್ನು ದೇವತೆಗಳು ನಿರ್ಮಿಸುವರು.

೮೦. ಚಕ್ರರತ್ನ: ಚತುರ್ದಶ ರತ್ನಗಳಲ್ಲಿ ಒಂದು. ಚಕ್ರವರ್ತಿಯ ಪದವಿಯ ಸೂಚಕವಾಗಿ ಆಯುಧಾಗಾರದಲ್ಲಿ ಉದಯಿಸುವ ಆಯುಧ. ಚಕ್ರವರ್ತಿಯ ದಂಡಯಾತ್ರೆಯಲ್ಲಿ ಮಾರ್ಗದರ್ಶ ಕವಾದ ಈ ರತ್ನ ನಿಂತಲ್ಲಿ ಶತ್ರುವಿನ ಸೂಚನೆಯಾಗುತ್ತದೆ. ಚಕ್ರವರ್ತಿಯ ಆಜ್ಞೆಯಂತೆ ಇದು ಶತ್ರುಸಂಹಾರದೊಡನೆ ಮಾರ್ಗದಲ್ಲಿ ಮುಂದುವರೆಯುತ್ತದೆ.

೮೧. ಚತುರ್ಗತಿ: ದೇವಗತಿ, ನಾರಕಗತಿ, ಮನುಷ್ಯಗತಿ ಮತ್ತು ತೀರ್ಯಗತಿ ಈ ನಾಲ್ಕು ಗತಿಗಳು ಉದಯದಿಂದ ಜೀವನ ದೇವಾದಿ ಜನ್ಮ ಪಡೆಯುತ್ತಾನೆ. ಈ ಚರ್ತುಗತಿಗಳಿಂದ ಬಿಡುಗಡೆ ಹೊಂದಿದಾಗಲೆ ಮುಕ್ತಿ.

೮೨. ಚರಣಾನುಯೋಗ: ಮುನಿಗಳ ಆಚರಣೆಯನ್ನು ವಿವರಿಸುವ ವಿಭಾಗ. ಇದರಲ್ಲಿ ಶ್ರಾವಕಧರ್ಮವನ್ನು ಹೇಳಿರುವರು.

೮೩. ಚತುರ್ದಶ ರತ್ನಗಳು: ಇವು ಚಕ್ರವರ್ತಿಗೆ ಒಲಿದ ರತ್ನಗಳು ೧. ಚಕ್ರರತ್ನ, ೨. ಖಡ್ಗರತ್ನ, ೩. ದಂಡರತ್ನ, ೪. ಛತ್ರರತ್ನ, ೫. ಮಣಿರತ್ನ, ೬. ಚರ್ಮರತ್ನ, ೭. ಕಾರ್ಕಿಣಿ, ೮. ಗೃಹಪತಿ,

೯. ಸೇನಾಪತಿ ೧೦. ಸ್ಥಪತಿ, ೧೧. ಅಶ್ವ, ೧೨. ಗಜ, ೧೩. ಪುರೋಹಿತ, ೧೪. ಸ್ತ್ರೀರತ್ನ

೮೪. ಚಂದ್ರಗತಿ: ಚರಿಗೆಗೆ ಹೊರಟ ಮುನಿ ಹಾನಿಯ ಅಂತಸ್ತನ್ನು ಗಮನಿಸದೆ ಪಡೆದವರ ಮನೆಯಲ್ಲಿ ಆಹಾರ ಸ್ವೀಕರಿಸಿರುವುದು.

೮೫. ಚತುರ್ಮುಖ ಪೂಜೆ: ರಾಜಮಹಾರಾಜರು ಅದ್ದೂರಿಯಾಗಿ ಮಾಡುವ ಜಿನಪೂಜೆ.

೮೬. ಚರಮದೇಹಿ: ಮತ್ತೆ ಹುಟ್ಟದವ ಆ ಭವದಲ್ಲೇ ಮುಕ್ತನಾಗುವಾತ.

೮೭. ಚಾರಣ: ತಪಸ್ಸಿನ ಪ್ರಭಾವದಿಂದ ಆಕಾಶದಲ್ಲಿ ಸಂಚಾರ ಮಾಡುವ ಸಾಮರ್ಥ್ಯ ಉಂಟಾಗುತ್ತದೆ. ಈ ಸಾಮರ್ಥ್ಯವುಳ್ಳ ಮುನಿ.

೮೮. ಜನ್ಮಾಭಿಷೇಕ ಕಲ್ಯಾಣ: ಪಂಚಕಲ್ಯಾಣಗಳಲ್ಲಿ ಒಂದು. ಜಿನಶಿಶುವನ್ನು ದೇವೇಂದ್ರನು ಮಂದರ ಪರ್ವತದ ನೆತ್ತಿಯಲ್ಲಿರುವ ಪಾಂಡುಕಶಿಲೆಯ ಮೇಲೆ ಪೂರ್ವಾಭಿಮುಖವಾಗಿ ಕೂರಿಸಿ, ದೇವತೆಗಳಿಂದ ಕ್ಷೀರಸಮುದ್ರದ ಹಾಲನ್ನು ತರಿಸಿ ಅಭಿಷೇಕ ಮಾಡಿಸುವುದು ಮತ್ತು ಜಿನಶಿಶುವನ್ನು ತಾಯಿ ತಂದೆಯರಿಗೆ ಒಪ್ಪಿಸಿ ಅದಕ್ಕೆ ನಾಯಕರ ಮಾಡಿ ಆನಂದತ್ವವನ್ನಾಡುವುದು.

೮೯. ಜಿನಕಲ್ಪ: ಏಕವಿಹಾರಿಯಾದ ಜೈನ ಸಾಧು ಸಂಪ್ರದಾಯ.

೯೦. ಜಿನ ಜನನಿ: ಜಿನೇಶ್ವರನ ತಾಯಿ. ವಿಶ್ವೇಶ್ವರಾ, ಜಗನ್ಮಾತಾ, ಮಹಾದೇವಿ, ಮಹಾಸತೀ ಪೂಜ್ಯಾ, ಸುಮಂಗಲಾ ಇವು ಜಿನಮಾತೆಗೆ ರೂಢಿಯಲ್ಲಿರುವ ಹೆಸರುಗಳು.

೯೧. ಜಿನಪತಿ: ಅರಹಂತ, ಅರಿಹಂತ

೯೨. ಜಿನಮಾತೃಕೆಯರು: ಕುಲಪರ್ವತಗಳಲ್ಲಿ ವಾಸಮಾಡುವವರಾದ ಶ್ರೀ, ಹ್ರೀ, ಧೀ(ಬುದ್ಧಿ) ಧೃತಿ, ಕೀರ್ತಿ, ಲಕ್ಷ್ಮಿಯೆಂಬ ಆರು ಮಂದಿ ದೇವಿಯರು.

೯೩. ಜಿನವಾಣಿ: ಸಮಸವರಣದಲ್ಲಿ ತೀರ್ಥಂಕರ ಬಾಯಿಂದ ಹೊರಡುವ ಧ್ವನಿಮಾತು. ಇದು ಚತುರ್ಗತಿಯಲ್ಲಿರುವ ವಿವಿಧ ಪ್ರಾಣಿಗಳಿಗೆ ಅವುಗಳ ಭಾಷೆಯಲ್ಲಿಯೇ ಅರ್ಥ ವಾಗುತ್ತದೆ.

೯೪. ಜಿನಶಾಸನ: ಜಿನನ ಅಪ್ಪಣೆ, ಜಿನನ ಅಪ್ಪಣೆಯಂತಿರುವ ಜೈನಾಗಮ.

೯೫. ಜಿನೇಂದ್ರ: ಜಿನಶ್ರೇಷ್ಠ ತೀರ್ಥಂಕರ.

೯೬. ಜಿನಾಗಮ: ಜೈನ ಧರ್ಮಶಾಸ್ತ್ರ.

೯೭. ಜಿನೇಂದ್ರವಾಣಿ: ಜಿನವಾಣಿ.

೯೮. ತಪಸ್ಸು: ಕರ್ಮನಿರ್ಜರೆಯಾಗಿ ಮಾಡುವ ಸಾಧನೆ. ಇದರಿಂದ ಕರ್ಮನಿರ್ಜರೆ ಮತ್ತು ಸಂವರೆಗಳೆರಡೂ ಆಗುತ್ತವೆ. ಕರ್ಮನಿರ್ಜರೆ ಅದರ ಪ್ರಧಾನ ಫಲ, ತಪಸ್ಸಿನ ಪುಣ್ಯ ಬಂಧ. ಗೌಣಫಲ. ಇದರಲ್ಲಿ ಎರಡು ವಿಧ. ೧. ಬಾಹ್ಯ ತಪಸ್ಸು, ೨. ಅಭ್ಯಂತರ ತಪಸ್ಸು.

೯೯. ತೀರ್ಥಂಕರ: ಧರ್ಮತೀರ್ಥವನ್ನು ಪ್ರಚಾರ ಮಾಡುತ್ತ ಜಗತ್ತನ್ನು ಉದ್ಧರಿಸುವವ, ತೀರ್ಥವನ್ನು ಸಂಸಾರ ನಿಸ್ತರಣೋಪಾಯವನ್ನು ಮಾಡುವವ. ಇವರಿಗೆ ಜಿನ, ಅರ್ಹತ್, ಅರ್ಹಂತ್ ಅರಿಹಂತ ಇತ್ಯಾದಿ ಹೆಸರುಗಳು ಇವೆ. ಈಗೆ ಭೂತ, ವರ್ತಮಾನ, ಭವಿಷ್ಯಕಾಲದಲ್ಲಿ ತಲಾ ೨೪ ಮಂದಿ ತೀರ್ಥಂಕರರು ಇರುವರು.

೧೦೦. ತ್ರಿಗುಪ್ತಿ: ಮನವಚನ ಕಾಯಗಳ ನಿಯಂತ್ರಣವನ್ನು ಗುಪ್ತಿಯೆನ್ನುವರು.

೧೦೧. ತ್ರಿಜ್ಞಾನಧರ : ಮತಿ, ಶ್ರೂತಿ, ಅವಧಿಜ್ಞಾನಗಳು, ಹುಟ್ಟುವಾಗಲೇ ತೀರ್ಥಂಕರನಿಗೆ ಇರುತ್ತವೆ.

೧೦೨. ತ್ರಿಷಷ್ಠಿ ಶಲಾಕಪುರುಷರು: ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು, ಹನ್ನೆರಡು ಮಂದಿ ಚಕ್ರವರ್ತಿಗಳು, ಒಂಬತ್ತು ಮಂದಿ ನಾರಾಯಣರು, ಒಂಭತ್ತು ಪ್ರತಿ ನಾರಾಯಣರು ಒಂಬತ್ತು ಮಂದಿ ಪ್ರತಿ ಬಲದೇವರು.

೧೦೩. ತ್ರಿಮೂಢ: ದೇವಮೂಢ, ಲೋಕಮೂಢ, ಪಾಷಂಡಿಮೂಢ, ಕ್ಷುದ್ರದೇವತೆಗಳು, ಪೂಜೆದೇವ ಮೂಢ, ಗಂಗಸ್ನಾನದಿಂದ ಪಾಪ ವಿಮೋಚನೆ ಎಂದು ನಂಬುವುದು ಲೋಕಮೂಢ. ಪರಿಗ್ರಹದಲ್ಲಿ ಮುಳುಗಿದವರನ್ನು ಗುರಿಯೆನ್ನುವುದು ಪಾಷಂಡಿಮೂಢ.

೧೦೪. ದಶಭಕ್ತಿ: ಹತ್ತು ಬಗೆಯಾದ ಭಕ್ತಿಗಳು. ೧. ಸಿದ್ಧಭಕ್ತಿ, ೨. ಶತ್ರುಭಕ್ತಿ, ೩. ಚಾರಿತ್ರ ಭಕ್ತಿ, ೪. ಯೋಗಿಭಕ್ತಿ, ೫. ಆಚಾರ್ಯಭಕ್ತಿ, ೬. ನಿರ್ವಾಣಭಕ್ತಿ, ೭. ನಂದೀಶ್ವರ ಭಕ್ತಿ, ೮. ಚೈತ್ಯಭಕ್ತಿ, ೯. ಶಾಂತಿಭಕ್ತಿ, ೧೦. ಪಂಚಗುರು ಭಕ್ತಿ.

೧೦೫. ದಿಕ್ಪಾಲಕ: ದಿಕ್ಕುಗಳನ್ನು ರಕ್ಷಿಸುವ ದೇವರು, ಇವರು ಹತ್ತು ಮಂದಿ, ೧. ಇಂದ್ರ, ೨. ಅಗ್ನಿ, ೩. ಯಮ, ೪. ನೈರುತಿ, ೫. ವರುಣ, ೬. ವಾಯವ್ಯ, ೭. ಕುಬೇರ, ೮. ಈಶಾನ, ೯. ಧರಣೇಂದ್ರ, ೧೦. ಚಂದ್ರ.

೧೦೬. ದ್ವಾದಶ ತಪಸ್ಸುಗಳು: ಅನಶನ, ಅವಪೋದರ್ಯ, ವೃತ್ತಿಸಂಖ್ಯಾತ, ರಸತ್ಯಾಗ, ಕಾರ್ಯಕ್ಲೇಷ, ವಿಭಕ್ತ ಶಯಶಾಸನ ಇವು ಬಾಹ್ಯ ತಪಸ್ಸುಗಳು. ಪ್ರಾಯಶ್ಚಿತ್ತ, ವಿನಯ, ವೈಯಾವೃತ್ತ, ಸ್ವಾಧ್ಯಾಯ ಉತ್ಸರ್ಗ, ಧ್ಯಾನ ಇವು ಅಂತರಂಗ ತಪಸ್ಸುಗಳು.

೧೦೭. ದ್ವಾದಶಗಣ : ಸಮವಸರಣದಲ್ಲಿ ಜಿನವಾಣಿಗೆ ಮೈಯೆಲ್ಲ ಕಿವಿಯಾಗಿ ಕುಳಿತ ೧೨ ಬಗೆ ಭವ್ಯ ಜೀವಿಗಳು. ೧. ಗಣಧರರು, ಮುನಿಗಳು, ೨. ಕಲ್ಪವಾಸಿದೇವಿಯರು, ೩. ಆಯಿರ್ಕೆ ಯರು, ೪. ಶ್ರಾವಿಕೆಯರು, ೫. ಚಕ್ರವರ್ತಿಗಳು ಇವರು ಪುರುಷರು. ೬. ಜ್ಯೋತಿಷ್ಯ ದೇವಿಯರು, ೭. ವ್ಯಂಪರದೇವಿಯರು, ೭. ಭವನವಾಸಿ ದೇವಿಯರು, ೮. ವ್ಯಂತರ ದೇವರು, ೯. ಜ್ಯೋತಿಷ್ಯ ದೇವರು, ೧೦. ಕಲ್ಪವಾಸಿದೇವರು, ೧೧. ಮೂಕ ಪ್ರಾಣಿಗಳು.

೧೦೮. ನರಕಗಳು : ಸಪ್ತನರಕಗಳು: ರತ್ನಪ್ರಭೆ, ಶರ್ಕಾರಪ್ರಭೆ, ವಾಳುಕಾಪ್ರಭೆ, ಪರಿಕಪ್ರಭೆ, ಧೂಮಪ್ರಭೆ, ತಮಃಪ್ರಭೆ, ಮಹಾತಮಃಪ್ರಭೆ ಇವು ಏಳು ನರಕಗಳು.

೧೦೯. ನವ ಪದಾರ್ಥಗಳು: ಜೀವ, ಅಜೀವ, ಪುಣ್ಯ, ಪಾಪ, ಅಸ್ರವ, ಸಂವರ, ನಿರ್ಜರ, ಬಂಧ, ಮೋಕ್ಷ ಈ ಒಂಬತ್ತು ನವಪದಾರ್ಥಗಳು.

೧೧೦. ನಂದೀಶ್ವರ: ಕಾರ್ತಿಕ, ಫಾಲ್ಗುಣ, ಆಷಾಢಗಳ ಅಂತ್ಯದ ವಾರಗಳಲ್ಲಿ ಸೌಧರ್ಮಾದಿ ಇಂದ್ರರು ಸಾನಿಧ್ಯದಲ್ಲಿ ಮಾಡುವ ಪೂಜೆ.

೧೧೧. ನಾರಕಿ: ನರಕದಲ್ಲಿ ಒದ್ದಾಡುವ ಜೀವ.

೧೧೨. ನಾಭಿರಾಜ: ಹದಿನಾಲ್ಕನೆಯ ಮನು. ಹುಟ್ಟಿದ ಮಕ್ಕಳು ಹೊಕ್ಕುಳ ಹುರಿ ಕತ್ತರಿಸುವುದನ್ನು ಹೇಳಿ ಕೊಟ್ಟವನು. ತಾವಾಗಿಯೇ ಬೆಳೆಯುತ್ತಿದ್ದ ಧಾನ್ಯಾದಿಗಳನ್ನು ಬಳಸಿಕೊಂಡು ಅಡಿಗೆ ಮಾಡುವುದನ್ನು ಹೇಳಿಕೊಟ್ಟವನು.

೧೧೩. ನಿರ್ಗ್ರಂಥ : ದಿಗಂಬರ ಜೈನಮುನಿ. ಇದರಲ್ಲಿ ಐದು ಭೇದಗಳಿವೆ. ೧. ಪುಲಾಕ, ೨. ಬಕುಶ
೩. ಕುಶೀಲ, ೪. ಸ್ನಾತಕ, ೫. ನಿರ್ಗ್ರಂಥ.

೧೧೪. ನಿರ್ವೇಗ : ಸಮ್ಯಕ್ತ ಗುಣವೈರಾಗ್ಯ. ಇದರಲ್ಲಿ ಮೂರು ವಿಧ. ೧. ಸಂಸಾರ ನಿರ್ವೇಗ, ೨. ಶರೀರ ನಿರ್ವೇಗ, ೩. ಭೋಗ ನಿರ್ವೇಗ.

೧೧೫. ನಿರ್ವಾಣ ಕಲ್ಯಾಣ : ಪಂಚಕಲ್ಯಾಣಗಳಲ್ಲಿ ಒಂದು. ತೀರ್ಥಂಕರನ ಆಯುಷ್ಯ ತೀರಿದಂದು ಅಘಾತಿ ಕರ್ಮಗಳನ್ನು ಶುಕ್ಲಧ್ಯಾನದಿಂದ ನಾಶ ಮಾಡಿ ದೇಹವನ್ನು ತೊರೆದು ಮುಕ್ತಿ ಹೊಂದುತ್ತಾನೆ. ಆಗ ದೇವತೆಗಳು ತೀರ್ಥಂಕರನ ದೇಹವನ್ನು ದಹನ ಮಾಡಿ ಚಿತಾಭಸ್ಮವನ್ನು ಹಣೆಗಿಟ್ಟುಕೊಂಡು ಅನಂತನೃತ್ಯ ಮಾಡುತ್ತಾರೆ. ಇದೇ ನಿರ್ವಾಣ ಕಲ್ಯಾಣ. ಇದಕ್ಕೆ ಪರಿನಿರ್ವಾಣ ಕಲ್ಯಾಣ, ಪರಿನಿರ್ವಾಣ ಮಹೋತ್ಸವ ಮೋಕ್ಷ ಕಲ್ಯಾಣ ಎಂದೂ ಹೆಸರುಗಳಿವೆ.

೧೧೬. ನಿರ್ವಾಣ ಭೂಮಿ: ತೀರ್ಥಂಕರನು ನಿರ್ವಾಣ ಮೋಕ್ಷವನ್ನು ಹೊಂದುವ ಸ್ಥಳ.

೧೧೭. ಪಂಚಕಲ್ಯಾಣ: ತೀರ್ಥಂಕರನಾಗುವ ಭವ್ಯ ಜೀವನ. ತನ್ನ ಕಡೆಯ ಜನ್ಮಕ್ಕಾಗಿ ತಾಯಿಯ ಗರ್ಭಕ್ಕೆ ಅವತರಿಸಿದಾಗಿನಿಂದ ನಡೆಯುವ ಐದು ಮಹಾ ಮಂಗಳಗಳು. ತೀರ್ಥಂಕರನ ಜೀವ ತಾಯಿಗರ್ಭಕ್ಕೆ ಬರುವಾಗ ಗರ್ಭಾಕಲ್ಯಾಣ, ಜನಿಸಿದಾಗ ಜನ್ಮಾಭಿಷೇಕ ಕಲ್ಯಾಣ, ವೈರಾಗ್ಯಬಂದಾಗ ಪರಿನಿಷ್ಕ್ರಮಣ ಕಲ್ಯಾಣ, ಕೇವಲ ಜ್ಞಾನ ಪಡೆದಾಗ ಕೇವಲಜ್ಞಾನ ಕಲ್ಯಾಣ, ಮುಕ್ತನಾದಾಗ ನಿರ್ವಾಣ ಕಲ್ಯಾಣ ಹೀಗೆ ಐದು ರೀತಿಯ ಕಲ್ಯಾಣಗಳನ್ನು ಇಂದ್ರಾದಿ ದೇವತೆಗಳು ತೀರ್ಥಂಕರನಿಗೆ ಸಂಭ್ರಮದಿಂದ ನೆರವೇರಿಸುವರು.

೧೧೮. ಪಂಚಪರಮೇಷ್ಠಿಗಳು: ೧. ಅರಹಂತರು, ೨. ಸಿದ್ಧರು, ೩. ಆಚಾರ್ಯರು, ೪. ಉಪಾಧ್ಯಾಯರು, ೫. ಸಾಧುಗಳು, ಇವರನ್ನು ಭಜಿಸುವುದೇ ಪಂಚಣಮೋಕಂದವಾಗಿದೆ.

೧೧೯. ಪಂಚ ಸಮಿತಿ: ಈರ್ಯ ಸಮಿತಿ, ಭಾಷಾ ಸಮಿತಿ, ಏಷಣಾ ಸಮಿ, ಆದಾನಸಮಿತಿ, ಅದಾಸನಿಕ್ಷೇಪ ಸಮಿತಿ, ಪ್ರತಿಷ್ಠಾನ ಸಮಿತಿ, ಮುನಿಗಳು ಮನ ವಚನ ಕಾಯಗಳ ಮೇಲೆ ನಿಯಂತ್ರಣ ಸಾಧಿಸಲು ಈ ಸಮಿತಿಗಳನ್ನು ಆಚರಿಸುವವರು. ತಮ್ಮಿಂದ ಅನ್ಯ ಜೀವಿಗೆ ತೊಂದರೆಯಾಗದಂತೆ ಎಚ್ಚರ ವಹಿಸುವುದೇ ಸಮಿತಿಯಾಗಿದೆ.

೧೨೦. ಪಂಚಾಚಾರ: ಆಚಾರ್ಯರು ಇವನ್ನು ಆಚರಿಸುವವರು. ೧. ದರ್ಶನಾಚಾರ, ೨. ಜ್ಞಾನಾಚಾರ, ೩. ಚಾರಿತ್ರಾಚಾರ, ೪. ತಪಾಚಾರ, ೫. ವೀರ್ಯಾಚಾರ. ಇವು ಸ್ವ ಸ್ವಭಾವ ಪಡೆಯಲು ನೆರವಾಗುವುವು.

೧೨೧. ಪಂಚಾಶ್ಚರ್ಯ: ಜೈನ ಮುನಿಗಳಿಗೆ ಆಹಾರ ದಾನ ಮಾಡುವಾಗ ೧. ದೇವದುಂಧುಬಿ ಮೊಳಗುವುದು ೨. ಕುಸುಮವೃಷ್ಟಿಯಾಗುವುದು. ೩. ಸುವರ್ಣವೃಷ್ಟಿ ಯಾಗುವುದು ೪. ತಂಗಾಳಿ ಬೀಸುವುದು ೫. ದೇವತೆಗಳು ಕೊಂಡಾಡುವರು.

೧೨೨. ಪಂಚಮಹಾಶಬ್ದ: ಶೃಂಗ(ಕೊಂಬು) ತಂಮಟೆ, ಶಂಖ, ಭೇರಿ, ಜಯಘಂಟೇ(ಜಾಗಟೆ) ಎಂಬ ಐದು ವಾದ್ಯಗಳ ಶಬ್ದ.

೧೨೩. ಪಂಚರತ್ನ: ನೀಲ, ವಜ್ರ, ಪದ್ಮರಾಗ, ಮುತ್ತು, ಹವಳ ಇವು ಐದು ಬಗೆಯ ರತ್ನಗಳು.

೧೨೪. ಪರಿಗ್ರಹಗಳು: ಇವು ಇಪ್ಪತ್ತನಾಲ್ಕು. ಅವುಗಳಲ್ಲಿ ಕ್ಷೇತ್ರ, ವಸ್ತು, ಹಿರಣ್ಯ, ಸುವರ್ಣ, ಧನ, ಧಾನ್ಯ, ದಾಸ, ದಾಸಿ, ಕುತ್ಯಭಾಂಡ ಎಂಬ ಹತ್ತು ಬಾಹ್ಯ ಪರಿಗ್ರಹಗಳು. ಮಿಥ್ಯತ್ವ, ಮೋದ (ಸ್ತ್ರೀ ಪುರುಷ ನಂಪಂಸಕರೊಡನೆ ಕಾಮಕ್ರೀಡೆಯ ಅಭಿಲಾಷೆ) ರಾಗ, ದ್ವೇಷ, ಹಾಸ್ಯ, ರತಿ, ಆರತಿ, ಶೋಕ, ಭಯ, ಜಿಗುಪ್ಸೆ, ಕ್ರೋಧ, ಮಾನ, ಮಾಯಾ, ಲೋಭ ಇವು ಹದಿನಾಲ್ಕು ಅಂತರಂಗ ಪರಿಗ್ರಹಗಳು.

೧೨೫. ಪುದ್ಗಲ: ರೂಪ, ರಸ, ಗಂಧ ಮತ್ತು ಸ್ಪರ್ಶವಿರುವ ದ್ರವ್ಯ. ಇದು ಜೀವದೊಡನೆ ಸೇರಿ ಸಂಸಾರ ನಾಟಕದಲ್ಲಿ ಪಾಲ್ಗೊಳ್ಳುವುದು. ನುಡಿಯುವುದು ಪುದ್ಗಲ.

೧೨೬. ಪರಿನಿಷ್ಕ್ರಮಣ ಕಲ್ಯಾಣ: ತೀರ್ಥಂಕರರಿಗೆ ಜರುಗುವ ಐದು ಕಲ್ಯಾಣಗಳಲ್ಲಿ ಮೂರನೇ ಕಲ್ಯಾಣವೇ ಪರಿನಿಷ್ಕ್ರಮಣ ಕಲ್ಯಾಣ.

೧೨೭. ಪ್ರತಿಮಾಯೋಗ: ನೆಟ್ಟಕಲ್ಲಂತೆ ತಪಸ್ಸಿಗೆ ನಿಲ್ಲುವುದು.

೧೨೮. ಪಾಂಡುಕ ಶಿಲೆ: ಮೇರು ಪರ್ವತದ ಮೇಲಿರುವ ಅರ್ಧ ಚಂದ್ರಾಕೃತಿಯ ಒಂದು ಶಿಲೆ. ಇಲ್ಲಿ ತೀರ್ಥಂಕರರ ಜನ್ಮಾಭಿಷೇಕ ನಡೆಯುವುದು.

೧೨೯. ಬಂಧ: ಸಪ್ತತತ್ವಗಳಲ್ಲಿ ಒಂದು. ಪುದ್ಗಲದ್ರವ್ಯದ ವಿಕಾರರೂಪ ಕರ್ಮಪರಮಾಣುಗಳು ಆತ್ಮ ಪ್ರದೇಶದೊಡನೆ ಸೇರುವುದು. ಇದರಲ್ಲಿ ಎರಡು ವಿಧ. ೧. ಭಾವಬಂಧ, ೨. ದ್ರವ್ಯಬಂಧ.

೧೩೦. ಭವ್ಯ: ಮೋಕ್ಷಕ್ಕೆ ಹೋಗುವ ಪರಿಣಾಮವುಳ್ಳವ.

೧೩೦. ಭವ ವಿಚಯ: ಸಂಸಾರದ ಬಗ್ಗೆ ಕೊಕ್ಕರಿಸುವುದು.

೧೩೧. ಭವನವಾಸಿ: ಮಂದರ ಪರ್ವತದ ಅಡಿಯಲ್ಲಿರುವ ಖರಭಾಗದಲ್ಲಿ ಒಂಬತ್ತು ಬಗೆ ಭವನವಾಸಿ ದೇವತೆಗಳು ವಾಸಿಸುವರು. ತೀರ್ಥಂಕರರ ಪಂಚಕಲ್ಯಾಣಗಳಲ್ಲಿ ಇವರು ಭಾಗವಹಿಸುವವರು.

೧೩೨. ಬ್ರಹ್ಮಕಲ್ಪ: ಬ್ರಹ್ಮ ಎಂಬ ಹೆಸರಿನ ಸ್ವರ್ಗ.

೧೩೩. ಬೋಧಿ: ರತ್ನತ್ರಯ

೧೩೪. ಭೋಗಭೂಮಿ: ಬೆವರು ಸುರಿಸದೆ ಬದುಕಲು ಕಲ್ಪವೃಕ್ಷಗಳು ಆತಿಥ್ಯವಿರುವ ವಾತಾವರಣವುಳ್ಳ ಪ್ರದೇಶ. ಭರತ ಖಂಡದಲ್ಲಿ ಕೆಲಕಾಲ ಭೋಗಭೂಮಿ, ಕೆಲಕಾಲ ಕರ್ಮಭೂಮಿ, ವಾತಾವರಣ ಚಕ್ರಾಕಾರವಾಗಿ ಸುತ್ತುವುದು.

೧೩೫. ಭಟ್ಟಾರಕ: ಮುನಿ, ಋಷಿ, ಗೌರವಯೋಗ್ಯ ಪುರುಷ.

೧೩೬. ಭವಾವಳಿ: ಜನ್ಮಾಂತರಗಳ ಹುಟ್ಟು ಸಾವುಗಳ ಪರಂಪರೆ, ಭವ್ಯಾಭವ್ಯ ಜೀವಿಗಳ ಬೇರೆ ಬೇರೆ ಜನ್ಮಗಳಲ್ಲಿರುವ ಕಥೆ. ಪೂರ್ವಜನ್ಮಗಳ ಕಥನ.

೧೩೭. ಭವ್ಯಜನ: ಸಿದ್ಧಿ ಹೊಂದುವ ಸಾಮರ್ಥ್ಯವನ್ನು ಹೊಂದಿರುವ ಜನ.

೧೩೮. ಭವ್ಯಜೀವ: ಸಂಸಾರಿ ಜೀವ ಭೇದ.

೧೩೯. ಮಂದರ ಪರ್ವತ: ವಿದೇಹ ಕ್ಷೇತ್ರದ ನಡುವೆ ಇರುವ ಪರ್ವತ ಸುಮೇರು ಪರ್ವತದ ಇನ್ನೊಂದು ಹೆಸರು.

೧೪೦. ಮಂದರ ಗಿರಿಗಳು: ಇವು ಐದು. ೧. ಸುದರ್ಶನ, ೨. ವಿಜಯಾಚಲ, ೩. ವಿದ್ಯುನ್ಮಾಲಿ,

೧೪೧. ಮನುಗಳು: ತೀರ್ಥಂಕರರಿಗೆ ಪೂರ್ವಭಾವಿಯಾಗಿ ೧೪ ಜನ ಮಹಾಪುರುಷರೇ ಮನುಗಳಾಗುವರು.

೧೪೨. ಮಾನಸ್ತಂಭ: ಮಾನವನ್ನು ಸ್ತಂಭನ ಮಾಡುವಂತಹ ಕಂಭ. ಸಮವಸರಣ ಮಾರ್ಗಗಳಲ್ಲಿ ನಟ್ಟನಡುವೆ ಗೋಳಾಂಕರದಲ್ಲಿ ಕಂಭ. ಇದು ಕ್ರಮವಾಗಿ ಚಿಕ್ಕ ಚಿಕ್ಕದಾಗುತ್ತಾ ಹೋಗುವ ಮೂರು ಗೋಳಾಕಾರದ ಪೀಠಗಳ ಮೇಲೆ ಸ್ಥಾಪಿತವಾಗಿರುತ್ತದೆ. ಇದರ ಎತ್ತರ ತೀರ್ಥಂಕರ ಶರೀರಾಕೃತಿಯ ಹನ್ನೆರಡು ಪಟ್ಟು ಇರುತ್ತದೆ. ಇದರ ದರ್ಶನದಿಂದ ನೋಡಿದವನ ಅಹಂಕಾರ ದೂರವಾಗಿ ಧಾರ್ಮಿಕ ಶ್ರದ್ಧೆ ಮೂಡುತ್ತದೆ.

೧೪೩. ಮುಕ್ತಿ: ಮೋಕ್ಷ ಹುಟ್ಟು ಸಾವುಗಳಿಂದ ಬಿಡುಗಡೆ. ಘಾತಿ, ಅಘಾತಿ ಕರ್ಮಗಳೆಲ್ಲವನ್ನು ಸಂಪೂರ್ಣವಾಗಿ ಕಳೆದುಕೊಂಡು ಜೀವ ಬಿಡುಗಡೆ ಹೊಂದುವುದು.

೧೪೪. ಯಕ್ಷ: ತೀರ್ಥಂಕರ ತಪೋರಕ್ಷಣೆಯನ್ನು ಮಾಡುತ್ತ ಸೇವೆ ಸಲ್ಲಿಸುವ ಭಕ್ತ. ಈತನ ಪತ್ನಿ ಯಕ್ಷಿ.

೧೪೫. ಯಕ್ಷಿ: ತೀರ್ಥಂಕರ ತಪೋರಕ್ಷಣೆಯನ್ನು ಮಾಡುವ ಸೇವ ಭಕ್ತ. ಶಾಸನ ದೇವತೆ.

೧೪೬. ರಜತಾದ್ರಿ: ಬೆಳ್ಳಿಬೆಟ್ಟ. ವಿಜಯಾರ್ಧಪರ್ವತ.

೧೪೭. ರತ್ನತ್ರಯ: ಮೋಕ್ಷ ಪಡೆಯಲು ಸಾಧನವಾದ ಮೂರು ರತ್ನಗಳು. ೧. ಸಮ್ಯಗ್ದರ್ಶನ ೨. ಸಮ್ಯಗ್‌ಜ್ಞಾನ, ೩. ಸಮ್ಯಗ್‌ಚಾರಿತ್ರ್ಯ.

೧೪೮. ಲಕ್ಷ್ಮೀಮಂಟಪ: ಸಮಸವರಣದಲ್ಲಿ ಜಿನೇಂದ್ರನು ಕೂರುವ ಮಂಟಪ.

೧೪೯. ಲೋಕಾಕಾರ: ಆಕಾಶದ ಮಧ್ಯದಲ್ಲಿ ಲೋಕವಿದೆ. ಎಲ್ಲ ಜೀವಿಗಳ ಪರಿವರ್ತನೆಗೂ ಇದೇ ನೆಲೆ. ಲೋಕಕ್ಕೆ ಆದಿ ಇಲ್ಲ, ಅಂತ್ಯವಿಲ್ಲ. ಅದು ಯಾರೂ ಮಾಡಿದ್ದಲ್ಲ, ಕಿಸು ಗಾಳು ಹಾಕಿ ಸೊಂಟದ ಮೇಲೆ ಕೈಯಿಟ್ಟುಗೊಂಡು ನಿಂತ ಮನುಷ್ಯನಂತೆ ಲೋಕಾಕರವಿದೆ.

೧೫೦. ಲೇಶ್ಯೆ: ಜೀವದ ಪರಿಣಾಮಕ್ಕೆ ಅನುಸಾರವಾದ ಮಾನಸಿಕ ವರ್ಣ. ೧. ಕೃಷ್ಣ, ೨. ನೀಲ, ೩. ಕಾಪೋತ ಇವು ಅಶುಭ ಲೇಶ್ಯೆಗಳು ೪. ಪದ್ಮ, ೫. ಪೀತ, ಶುಕ್ಲ ಇವು ಶುಭ ಲೇಶ್ಯಗಳು.

೧೫೧. ಲೋಭ: ಪರಿಗ್ರಹ ಪರಿಮಾಣ ವ್ರಚಾತಿಚಾರ ಲಾಭವಿದ್ದರೂ ಅತಿಯಾದ ಆಸೆ ಮಾಡುವುದು.

೧೫೨. ವಿದೇಹ ಕ್ಷೇತ್ರ: ಜೈನಧರ್ಮಾಚಾರದಿಂದ ಮನುಷ್ಯನಿಗೆ ಮೋಕ್ಷವು ದೊರೆಯುವ ಕ್ಷೇತ್ರ. ವಿದೇಹ ಕ್ಷೇತ್ರ. ಇಲ್ಲಿ ಸೀತಾ, ಸೀತೋದಾನದಿಗಳು, ನೂರಹನ್ನೆರಡು ಸಾವಿರ ಉಪನದಿ ಗಳು ಹರಿಯುತ್ತವೆ.

೧೫೩. ವೀತರಾಗ: ಎಲ್ಲ ಮೋಹ ಕರ್ಮಗಳ ನಾಶವಾಗಿರುವ ಯಥಾಖ್ಯಾತ ಚಾರಿತ್ರ್ಯಧಾರಕವಾದ ಮತ್ತು ಕೇವಲ ಜ್ಞಾನವುಂಟಾಗದಿರುವ ಮುನಿಗಳು(ರಾಗದ್ವೇಷಾದಿಗಳಿಲ್ಲದವ. ಅಪ್ರಜಿನ).

೧೫೪. ವಿಮಲವಾಹನ: ಏಳನೆಯ ಮನು. ಆನೆ, ಕುದುರೆ ಮೊದಲಾದವನ್ನು ವಾಹನಗಳನ್ನಾಗಿ ಉಪಯೋಗಿಸುವುದನ್ನು ಹೇಳಿಕೊಟ್ಟವ.

೧೫೫. ವ್ಯಂತರ: ಮಹಾಮೇರು ಪರ್ವತದ ತುದಿಯಿಂದ ಭವನ ಲೋಕದವರೆಗೆ ಇರುವ ದೇವತೆಗಳು ಇದರಲ್ಲಿ ಎಂಟು ವಿಧ. ೧. ಕಿನ್ನರ, ೨. ಕಿಂಪುರಷ, ೩. ಮಹೋರಗ, ೪. ಗಂಧರ್ವ, ೫. ಯಕ್ಷ, ೬. ರಾಕ್ಷಸ, ೭. ಭೂತ, ೮. ಪಿಶಾಚ.

೧೫೬. ವ್ರತ: ಪಾಪನಿವಾರಣೆಗಾಗಿಯೂ ಪುಣ್ಯ-ಮೋಕ್ಷ ಪ್ರಾಪ್ತಿಗಾಗಿಯೂ ಮಾನವನು ಆಚರಿಸ ಬೇಕಾದ ಧಾರ್ಮಿಕ ಕ್ರಿಯೆ. ಪಂಚ ಪಾಪಗಳಿಂದ ಬುದ್ಧಿಪೂರ್ವಕವಾಗಿ ವಿರಕ್ತನಾಗು ವುದು. ಇದರಲ್ಲಿ ಮೂರು ವಿಧ. ೧. ಅಣುವ್ರತ, ೨. ಗುಣವ್ರತ, ೩. ಶಿಕ್ಷಾವ್ರತ.

೧೫೭. ಶ್ರಮಣ: ಜೈನಸಂನ್ಯಾಸಿ.

೧೫೮. ಶ್ರಾವಕ: ಜೈನ ಗೃಹಸ್ಥ ಉಪಾಸಕ.

೧೫೯. ಶ್ರಾವಕ ಭಾವನೆ: ಧರ್ಮಿಷ್ಠನಾದ ಶ್ರಾವಕನು ಸದಾ ನೆನೆಯಬೇಕಾದ ಭಾವನೆಗಳು ನಾಲ್ಕು ವಿಧ. ೧. ಮೈತ್ರಿ, ೨. ಪ್ರಮೋದ, ೩. ಕಾರುಣ್ಯ, ೪. ಮಾಧ್ಯಸ್ಥ.

೧೬೦. ಶ್ರಾವಕಿ: ಜೈನಗೃಹಸ್ಥೆ, ಉಪಾಸಕಿ.

೧೬೧. ಶ್ರುತ ಕೇವಲಿ: ಜೈನಾಗಮರಾಶಿಯನ್ನೆಲ್ಲ ರಕ್ತಗತ ಮಾಡಿಕೊಂಡು ಆಗಮದ ಮುಖೇನ ಆತ್ಮವನ್ನು ಅರಿತವರು.

೧೬೨. ಶ್ರುತಸ್ಕಂಧ: ಧರ್ಮಶಾಸ್ತ್ರ ಗ್ರಂಥಗಳ ಸಮೂಹ. ನಾಲ್ಕು ಮಹಾಧಿಕಾರಗಳು.

೧೬೩. ಷಡಂಗಗಳು: ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ್ಯ. ಇವು ಆರು ವಿಧದ ಅಂಗಗಳಾಗಿವೆ.

೧೬೪. ಸತ್ಯ-ಅಣುವ್ರತ : ಅಣುವ್ರತಗಳಲ್ಲೊಂದು-ಯಾವಾಗಲೂ ನಿಜವನ್ನೇ ನುಡಿಯುವುದು.

೧೬೫. ಷಟ್ಕರ್ಮ: ದೇವಪೂಜೆ, ಗುರೂಪಾಸನೆ, ಸ್ವಾಧ್ಯಾಯ, ಸಂಯಮ, ತಪ ಮತ್ತು ಧ್ಯಾನ ಇವು ಶ್ರಾವಕರ ದಿನಚರಿಯಾಗಿದೆ.

೧೬೬. ಷೋಡಶಭಾವನೆ: ತೀರ್ಥಂಕರನಾಗಲು ಈ ಭಾವನೆಗಳು ಬುನಾದಿಯಾಗುವವು. ಇವನ್ನು ಕಾರಣ ಭಾವನೆಗಳು ಎಂದು ಕರೆಯುವರು. ಅವು ೧. ದರ್ಶನಶುದ್ಧಿ, ೨. ವಿನಯ ಸಂಪನ್ನತಿ, ೩. ಶೀಲವ್ರತೇಶ್ಯಾನಾತಿಚಾರ, ೪. ಅಭೀಕ್ಷ್ಣ ಜ್ಞಾನೋಪಯೋಗ, ೫. ಸಂವೇಗ, ೬. ಶಿಕ್ಷಿತಃತ್ಯಾಗ, ೭. ಶಕ್ತಿತಃತಪ, ೮. ಸಾಧುಸಮಾಧಿ, ೯. ವೈಯಾವೃತ್ಯಕರಣ-ಸಜ್ಜನರ ಕಷ್ಟವನ್ನು ಪರಿಹರಿಸುವ ಹಂಬಲ, ೧೦. ಆರ್ಹದ್ಭಕ್ತಿ , ೧೧. ಆಚಾರ್ಯಭಕ್ತಿ, ೧೨. ಬಹುಶ್ರುತಭಕ್ತಿ, ೧೩. ಪ್ರವಚನಭಕ್ತಿ, ೧೪. ಅವಶ್ಯಕಪರಿ, ಹಾಗೆ, ೧೫. ಧರ್ಮಪ್ರಭಾವನೆ, ೧೬. ಪ್ರವಚನ ವಾತ್ಸಲ್ಯ.

೧೬೭. ಸಪ್ತತತ್ವ: ಏಳು ತತ್ವಗಳು. ೧. ಜೀವ, ೨. ಅಜೀವ, ೩. ಅಸ್ರವ, ೪. ಬಂಧ, ೫. ಸಂವರ, ೬. ನಿರ್ಜರಾ, ೭. ಮೋಕ್ಷ.

೧೬೮. ಸಪ್ತಧಾತು: ದೇಹದಲ್ಲಿರುವ ಏಳು ಧರ್ಮಗಳು. ೧. ರಸ, ೨. ರಕ್ತ, ೩. ಮಾಂಸ, ೪. ಮೇದಸ್ಸು, ೫. ಮಜ್ಜೆ, ೬. ಅಸ್ತಿ, ೭. ಶುಕ್ಲ.

೧೬೯. ಸಪ್ತವ್ಯಸನ: ೧. ದ್ಯೂತ, ೨. ವೇಶ್ಯಾಗಮನ, ೩. ಪರಸ್ತ್ರೀಗಮನ, ೪. ಚೌರ್ಯ, ೫. ಮಾಂಸ ಸೇವನೆ, ೬. ಮದ್ಯಪಾನ, ೭. ಮೃಗಯಾ ವಿಹಾರ.

೧೭೦. ಸಮವಸರಣ: ತೀರ್ಥಂಕರ ಧರ್ಮೋಪದೇಶ ಮಾಡುವುದಕ್ಕೆ ಇಂದ್ರನ ಅಪ್ಪಣೆಯಂತೆ ಕುಬೇರನ ನಿರ್ಮಿಸಿದ ಮಂಟಪ. ಸಮಾನವಾಗಿ ಎಲ್ಲರಿಗೂ ಆಶ್ರಯ ಕೊಡುವುದು ಜಿನಸಭೆ.

೧೭೧. ಸಮಾಧಿ ಮರಣ: ಸಮಾಧಾನದಿಂದ ಸಾವನ್ನಪ್ಪುವುದು. ನಿವೃತ್ತಿಪೂರ್ವಕವಾಗಿ ಶರೀರ ಭಾರವನ್ನಿಳಿಸುವುದು.

೧೭೨. ಸಮ್ಯಕ್ತ್ವ: ಅಹಿಂಸಾ ಧರ್ಮದಲ್ಲಿ ಶ್ರದ್ಧೆಯಿಡುವುದು. ೧. ಅಜ್ಞಾರುಚಿ, ೨. ಮಾರ್ಗರುಚಿ, ೩. ಉಪದೇಶರುಚಿ, ೪. ಸೂತ್ರರುಚಿ, ೫. ಬೀಜರುಚಿ, ೬. ಸಂಕ್ಷೇಪರುಚಿ, ೭. ವಿಸ್ತಾರ ರುಚಿ, ೮. ಅರ್ಥರುಚಿ, ೯. ಅವಗಾಢರುಚಿ, ೧೦. ಪರಮಾತಗಾಢರುಚಿ.

೧೭೩. ಸಲ್ಲೇಖನ: ಆಪತ್ತುಗಳು, ಬರಗಾಲ, ಮುಪ್ಪು, ರೋಗ(ಪೂರ್ವಕವಾಗಿ ಸಲ್ಲೇಖನ) ಇವುಗಳಿಂದ ಮರಣದ ಹೊರೆತು ಬೇರೆ ಗತಿ ಇಲ್ಲವೆನಿಸಿದಾಗ ವಿಧಿಪೂರ್ವಕವಾಗಿ ಸಲ್ಲೇಖನ ಎಂಬ ವ್ರತವನ್ನು ಸ್ವೀಕರಿಸಿ ಆಹಾರ ನೀರು ತ್ಯಜಿಸಿ ಸಮಾಧಾನದಿಂದ ಸಮಾಧಿ ಮರಣ ಹೊಂದುವುದು. ಶ್ರಾವಕ ಸನ್ಯಾಸಿಗಳಿಗೆ ಆದರ್ಶವಾಗಿದೆ.

೧೭೪. ಸಂಯೋಗ ಕೇವಲಿ: ದೇಹಧಾರಿಯಾದ ಜಿನೇಂದ್ರ.

೧೭೫. ಸರ್ವಾರ್ಥಸಿದ್ಧ: ಕಲ್ಪಾತೀತ ವಿಭಾಗದ ಪಂಚಾನುತ್ತರ ವಿಮಾನಗಳಲ್ಲಿ ಸರ್ವೋತ್ಕೃಷ್ಟವಾದ ವಿಮಾನ. ಇಲ್ಲಿ ಜನಿಸಿದ ದೇವತೆಗಳು ಬಹುಮಟ್ಟಿಗೆ ಮರುಭವದಲ್ಲೇ ಮುಕ್ತರಾಗುವರು.

೧೮೦. ಸಂವರ: ಆತ್ಮನ ಕಡೆ ಕರ್ಮ ಹರಿದು ಬರುವುದನ್ನು ಮನ ವಚನ ಕಾಯಗಳ ನಿಯಂತ್ರಣದಿಂದ ತಡೆಯುವುದು.

೧೮೧. ಸಿದ್ಧರು: ಅಷ್ಟಕರ್ಮದಿಂದ ಮುಕ್ತರಾಗಿ ಅಷ್ಟಗುಣಗಳನ್ನು ಹೊಂದಿ ಸಿದ್ಧಶಿಲೆಯಲ್ಲಿ ವಿರಾಜಮಾನವಾದ ಪರಮ ಆಪ್ತರು.

೧೮೨. ಸಿದ್ಧಶಿಲೆ: ಲೋಕಾಂತಿಕ ಅನುತ್ತರ ವಿಮಾನಗಳ ಮೇಲೆ "ಈಷತ್ ಪ್ರಾಗ್ಭಾರ್" ಎಂಬ ಸಿದ್ಧಕ್ಷೇತ್ರವಿದೆ. ಇದರ ಮಧ್ಯಭಾಗದಲ್ಲಿ ಶುದ್ಧ ಸ್ಫಟಿಕವಾದ ಸಿದ್ಧ ಶಿಲೆ ಇದೆ. ಇದು ಬಿಚ್ಚಿದ ಕೊಡೆಯಂತಿದೆ. ಇದರ ನೆಲೆಯಲ್ಲಿ ತನುವಾತ ವಲಯದ ಮೇಲೆ ಮುಕ್ತವಾದ ಸಿದ್ಧರು ನೆಲೆಸುತ್ತಾರೆ.

೧೮೩. ಸೀಮಂಕರ: ಮನುಗಳಲ್ಲಿ ಒಬ್ಬ. ಜನರು ಕಲ್ಪವೃಕ್ಷಾದಿಗಳಿಗಾಗಿ ಜಗಳವಾಡದಂತೆ ಅವರಿಗೆ ಕ್ಷೇತ್ರ ಮೊದಲಾದವುಗಳ ಎಲ್ಲೆಗಳನ್ನು ವಚನದಿಂದಲೇ ವಿಭಾಗ ಮಾಡಿದ ಐದನೆಯ ಮನು.

೧೮೪. ಸೀಮಂಧರ: ಮನುಗಳಲ್ಲಿ ಒಬ್ಬ. ಸೀಮಂಕರನು ಗೊತ್ತುಮಾಡಿದ ಎಲ್ಲೆಕಟ್ಟನ್ನು ಸ್ಥಿರಗೊಳಿಸಿ ವೃಕ್ಷಗಳನ್ನು ಎಲ್ಲೆ ಮಾಡಿ ಸ್ಥಿರಗೊಳಿಸಿದವನು.

೧೮೫. ಸೌಧರ್ಮೇದ್ರ: ದೇವೇಂದ್ರರಲ್ಲಿ ಪ್ರಮುಖ. ಸೌಧರ್ಮಕಲ್ಪರ ಇಂದ್ರ.

೧೮೬. ಸ್ಯಾದ್ವಾದ: ಒಂದು ಗುಣವನ್ನು ಒಂದು ಪದಾರ್ಥದಲ್ಲಿ ಆರೋಪಿಸಲು ಆ ಪದಾರ್ಥವನ್ನು ನಿರೂಪಿಸಬಹುದಾದ ಏಳು ಪ್ರಕಾರಗಳು. ಇದಕ್ಕೆ ಸಪ್ತಭಂಗೀನಯ, ಅನೇಕಾಂತವಾದ ಎಂದು ಹೆಸರು.

೧೮೭. ಸ್ತ್ರೀರತ್ನ: ಜೀವ ಜೀವರತ್ನಗಳಲ್ಲೊಂದು. ವಿದ್ಯಾಧರ ಕುಲದಲ್ಲಿ ಹುಟ್ಟಿದ ಸುಂದರ ಯುವತಿ. ಚಕ್ರವರ್ತಿಯ ಪಟ್ಟದರಸಿಯಾಗುವವಳು. ಪೂರ್ವಯಾಮದಿಂದ ಪಶ್ಚಿಮದವರೆಗೆ ತೊಂಬತ್ತಾರು ಸಾವಿರ ಸ್ತ್ರೀಯರಲ್ಲಿ ವಿಗಧ್ವಣಿಯಂತೆ ಕ್ರೀಡಿಸುತ್ತ ಮದಂಗದ ಕಾಮ ಸಂತಾಪನೆಯನ್ನು ಅಡಗಿಸುವ ಸ್ತ್ರೀರತ್ನ.

೧೮೮. ಹಿಮವಂತ: ಕುಲಪರ್ವತಗಳಲ್ಲೊಂದು. ಇದು ಚಿನ್ನದ ಪರ್ವತ ಸಾವಿರ ಯೋಜನ ಉದ್ದ, ಐವತ್ತು ಯೋಜನ ಅಗಲ, ಹತ್ತು ಯೋಜನ ಆಳದ ಪದ್ಮ ಸರೋವರ ಇಲ್ಲಿದೆ. ಒಂದು ಮಹಾಕಮಲ ಈ ಸರೋವರದಲ್ಲಿದೆ. ಈ ಕಮಲ ಶ್ರೀದೇವಿಯ ಆವಾಸಸ್ಥಾನ. ಇವಳ ಆಯುಷ್ಯ ಒಂದು ಪಲ್ಯಕಾಲ. ಇವಳ ಬಳಿ ಸಭಾಸದ, ಸಮಾನಿಕ ಎಂಬ ದೇವತೆಗಳು ಸುತ್ತಲಿನ ಕಮಲಗಳ ಮೇಲಿದ್ದಾರೆ.

❑❑❑

# ೩. ಪರಾಮರ್ಶನ ಗ್ರಂಥಗಳು

೧. ಅಕ್ಕಿ ಡಿ.ಎನ್. ಮತ್ತು ಸುಮಂಗಲ ಡಿ.(ಸಂಪಾದಕರು), ೧೯೯೯, **ಜೈನ ಜನಪದ ಹಾಡುಗಳು**, ರತ್ನತ್ರಯ ಪ್ರಕಾಶನ, ಮೈಸೂರು.

೨. ಅಮ್ಮಾಜಿ ಅಮ್ಮ(ಸಂಪಾದಕರು), ೨೦೦೭, **ಜೈನ ಶೋಭಾನೆ ಹಾಡುಗಳು**, ಧವಲಾತ್ರಯ ಟ್ರಸ್ಟ್ ಶ್ರೀ ಜೈನ್‌ಮಠ, ಮೂಡಬಿದರೆ.

೩. ಅಂಗಡಿ ಎಸ್.ಎಸ್, ೨೦೦೮, **ಜನಪದ ಸಾಹಿತ್ಯ ಭಾಷೆ**, ವಿಕಾಸ ಪ್ರಕಾಶನ, ಹೊಸಪೇಟೆ.

೪. ಆರ್ಬ್ಬಿಯಸ್ ಸುಂದರಂ, **ದೇಶೀಯತೆ(ದೇಶಿವಾದ)**, ಅರವಿಂದ ಪ್ರಿಂಟರ್ಸ್, ಮೈಸೂರು.

೫. ಉಮಾನಾಥ ಶೇಣೈ, ೨೦೦೮, **ಮೂಡಬಿದರೆ**, ಧವಲಾತ್ರಯ ಟ್ರಸ್ಟ್, ಮೂಡಬಿದರೆ.

೬. **ಕರ್ನಾಟಕ ಭಾರತೀ, ತ್ರೈಮಾಸಿಕ ಪತ್ರಿಕೆ, ಸಂಚಿಕೆ ೨, ಸಂಪುಟ ೩೦**, ಪ್ರಧಾನ ಸಂಪಾದಕರು, ವೃಷಭೇಂದ್ರಸ್ವಾಮಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭. ಕಲಬುರ್ಗಿ ಎಂ.ಎಂ., ೧೯೭೩, **ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೮. ಕಮಲಾಹಂಪನಾ(ಸಂಪಾದಕರು), ೨೦೦೭, **ಶಿವಕೋಟ್ಯಾಚಾರ್ಯ ಚಾವುಂಡರಾಯ ಸಂಪುಟ ೭**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಕಮಲಾಹಂಪನಾ, ಪದ್ಮಪ್ರಸಾದ್ ಎಸ್.ಪಿ.(ಸಂಪಾದಕರು), ೨೦೦೮, **ಸುವರ್ಣ ಭಾರತಿ ಸಂಪುಟ ೭**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦. ಕಮಲಾಹಂಪನಾ(ಸಂಪಾದಕರು), ೧೯೯೭, **ಜೈನಧರ್ಮ ಸಾಹಿತ್ಯ ಚಿಂತನೆ ಮತ್ತು ಅತ್ತಿಮಬ್ಬೆ ಸ್ಮರಣೆ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೧. ಕಲಘಟಗಿ, ೧೯೭೯, **ಕರ್ನಾಟಕದಲ್ಲಿ ಜೈನ ಧರ್ಮ : ಒಂದು ಅಧ್ಯಯನ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೨. ಕಾಳೇಗೌಡ ನಾಗವಾರ, ೨೦೧೧, **ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ**, ಸಪ್ನ ಬುಕ್ ಹೌಸ್, ಬೆಂಗಳೂರು.

೧೩. ಕೃಷ್ಣಪ್ಪ ಕೆ, ೨೦೦೮, **ಸಂಸ್ಕೃತಿಯ ಅಂತರ್‌ಶಿಸ್ತೀಯ ನೆಲೆಗಳು**, ಸಂಯಮ ಪ್ರಕಾಶನ, ಬೆಂಗಳೂರು.

೧೪. ಖಂಡೋಬ ಪಿ.ಕೆ, ಸಂಗಮೇಶ ಸವದತ್ತಿಮಠ(ಸಂಪಾದಕರು) ೧೯೯೬, **ಜೈನ ಸಂಸ್ಕೃತಿ ಮತ್ತು ಸಿದ್ಧಾಂತಗಳು**, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

೧೫. ಗಣಪತಿ ಬಾಳಗೋಡು, ೨೦೧೦, ಪ್ರಾಚೀನ ಕನ್ನಡ ಗದ್ಯ ಕೃತಿಗಳ ಸಾಂಸ್ಕೃತಿಕ ಅಧ್ಯಯನ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೬. ಗದ್ದಗಿಮಠ ಬಿ.ಎಸ್, ೧೯೮೮, ಗದ್ದಿಗಿಮಠರ ಬರಹಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೭. ಗೀತಾ ಬಿ.ಎಸ್, ೨೦೦೮, ಕರ್ನಾಟಕ ಸಾಂಸ್ಕೃತಿಕ ಸಂಘರ್ಷ : ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೮. ಗುಂಡಪ್ಪ ಎಲ್, ೧೯೬೯, ಆದಿಪುರಾಣ ಸಂಗ್ರಹ, ಮೈಸೂರು ವಿಶ್ವವಿದ್ಯಾನಿಲಯ, ಪ್ರಸಾರಾಂಗ, ಮೈಸೂರು.

೧೯. ಚಾರುಶ್ರೀ, ೨೦೦೦, ಗೊಮ್ಮಟ, ಜಿನ ಸ್ತುತಿ, ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ.

೨೦. ಚಿದಾನಂದಮೂರ್ತಿ, ೨೦೧೧, ವಚನ ಸಾಹಿತ್ಯ, ಸಪ್ನ ಬುಕ್ ಹೌಸ್, ಬೆಂಗಳೂರು.

೨೧. ಚಿದಾನಂದಮೂರ್ತಿ, ೧೯೬೬, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೨. ಜವರೇಗೌಡ(ಸಂಪಾದಕರು), ೨೦೦೭, ನೇಮಿಚಂದ್ರ ಸಂಪುಟ, ಸಂಪುಟ ೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೩. ಜವರೇಗೌಡ(ಸಂಪಾದಕರು), ೨೦೦೯, ಜನಪದ ಗೀತಾಂಜಲಿ, ಕನ್ನಡ ಜಾನಪದ ಗೀತೆಗಳ ಸಂಕಲನ ಸಪ್ನಬುಕ್ ಹೌಸ್, ಬೆಂಗಳೂರು.

೨೪. ಜಯಚಂದ್ರ ಎಂ.ಎ., ೧೯೯೫, ಜೈನ ಧರ್ಮದಲ್ಲಿ ಮಹಾವೀರನ ಮೌಲ್ಯಗಳು, ಮಹಾವೀರ ಜೈನ ಸಮಿತಿ, ಬೆಂಗಳೂರು.

೨೫. ತಪಸ್ವಿಕುಮಾರ್, ೧೯೯೭, ರತ್ನಾಕರವರ್ಣಿ ಮತ್ತು ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨೬. ತ.ಸು.ಶಾಮರಾವ್ ಮತ್ತು ಹಂಪ ನಾಗರಾಜಯ್ಯ(ಸಂಪಾದಕರು), ೧೯೮೧, ಜೈನ ಪರಿಭಾಷಾ ರತ್ನಕೋಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೭. ತಿಪ್ಪೇರುದ್ರಸ್ವಾಮಿ ಎಚ್, ೧೯೬೮, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು.

೨೮. ತಿಪ್ಪೇಸ್ವಾಮಿ ಜಿ.ಆರ್, ೧೯೯೭, ದಾಸ ಸಾಹಿತ್ಯ ಮತ್ತು ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨೯. ತಿಪ್ಪೇರುದ್ರಸ್ವಾಮಿ ಎಚ್, ೧೯೮೩, ಕನ್ನಡದಲ್ಲಿ ಕೈವಲ್ಯ ಸಾಹಿತ್ಯ, ಚಿತ್ರರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಕಾಶನ ಮಂಡಲ, ಇಲಕಲ್ಲ.

೩೦. ಧರಣೇಂದ್ರಪ್ಪ ಹನುಮಂತಪ್ಪ ಗುಗ್ಗರಿ, ೧೯೮೪, ಜೈನ ಸಿದ್ಧಾಂತದ ಸಾರಸಂಗ್ರಹ, ಸಂಸ್ಕೃತಿ ಪ್ರಕಾಶನ, ಮುಂಬಯಿ.

೩೧. ಧರ್ಮರಾಜ ಇಂದ್ರ(ಸಂಪಾದಕರು), ೨೦೧೦, ಶ್ರೀ ಪದ್ಮಾವತಿ ಮಹಾತ್ಮೆ, ಶ್ರೀ ಜಿನದತ್ತರಾಯ ಚರಿತ್ರೆ, ಆರಾಧನಾ ಸಾಹಿತ್ಯ ಅಮ್ಮನವರ ಬಸದಿ, ಮೂಡಬಿದರೆ(ದಕ್ಷಿಣ ಕನ್ನಡ ಜಿಲ್ಲೆ).

೩೨. ನರಸಿಂಹಶಾಸ್ತ್ರಿ ಕೆ.ಎಲ್, ೨೦೦೪, ಆದಿಪುರಾಣಂ ಗದ್ಯಾನುವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೩. ನಾರಾಯಣ ಪಿ.ವಿ. ೨೦೧೧, **ಚಂಪೂ ಕವಿಗಳು,** ಸಪ್ನಬುಕ್ ಹೌಸ್, ಬೆಂಗಳೂರು.

೩೪. ನಾವಡ ಎ.ವಿ ಮತ್ತು ಗಾಯತ್ರೀ ನಾವಡ(ಸಂಪಾದಕರು), ೨೦೦೦ **ಸಾವಿರ ಕೀರ್ತನೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ನಾಗರಾಜು ಟಿ.ಎನ್ ಮತ್ತು ಮಂದಾಕಿನಿ(ಸಂಪಾದಕರು), ೧೯೯೬, **ಹರಿದಾಸರ ಜನಪ್ರಿಯ ಹಾಡುಗಳು,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೩೬. ನಾರಾಯಣ ಪಿ.ವಿ, ೨೦೦೭, **ಶಾಂತಿನಾಥ ಆಂಡಯ್ಯ ಪುರಾಣ, ಸಂಪುಟ ೬,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೭. ಪದ್ಮಪ್ರಸಾದ್ ಎಸ್.ಪಿ., ೨೦೦೯, **ಜೈನ ಜನಪದ ಸಾಹಿತ್ಯ,** ಸತ್ಯಶ್ರೀ ಪ್ರಿಂಟರ್ಸ್, ಬೆಂಗಳೂರು.

೩೮. ಪಾಟೀಲ ಎಫ್.ವಿ (ಸಂಪಾದಕರು), ೨೦೦೭, **ನಯಸೇನ ಸಂಪುಟ ೮,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ಶಿವರುದ್ರಪ್ಪ ಜಿ.ಎಸ್.,(ಸಂಪಾದಕರು), ೧೯೮೯, **ಕನ್ನಡ ಕವಿಗಳ ಕಾವ್ಯ ಕಲ್ಪನೆ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು.

೪೦. ಪ್ರಶಾಂತ ಬಾಳಂಜ, ೨೦೦೦, **ಶ್ರೀಕ್ಷೇತ್ರ ವೇಣೂರು ಪರಿಚಯ, ವೇಣೂರು ಮಹಾಮಸ್ತಾಭಿಷೇಕ ಸಮಿತಿ,** ವೇಣೂರು.

೪೧. ಶಾಮರಾವ್ ಟಿ.ಎಸ್. ಸಂ. ೧೯೮೫, **ಭರತೇಶ ವೈಭವ ಸಂಗ್ರಹ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪೨. ಬಿರಾದಾರ್ ಎಂ.ಜಿ., ೨೦೦೬, **ರತ್ನಾಕರವರ್ಣಿ ಸಂಪುಟ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ಬಸವರಾಜು ಎಲ್., **ಶಿವದಾಸ ಗೀತಾಂಜಲಿ,** ಜೆ.ಎಸ್.ಎಸ್. ಗ್ರಂಥಮಾಲೆ, ಮೈಸೂರು.

೪೪. ಬಸವಾರಾಧ್ಯ ಎನ್.,(ಸಂಪಾದಕರು), ೨೦೦೭, **ಬಾಹುಬಲಿ ಮಧುರ ಸಂಪುಟ ೧೫,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ಬಾಳಾಸಾಹೇಬ ಲೋಕಾಪುರ, ೨೦೦೫, **ಆಧುನಿಕ ಕನ್ನಡ ಸಾಹಿತ್ಯದಲ್ಲಿ ಜೈನ ಸಂವೇದನೆ,** ಬ್ಯಾಲದಕೆರೆ ಪ್ರಕಾಶನ, ಬ್ಯಾಲದಕೆರೆ.

೪೬. ಭಾನುಮತಿ ವೈ.ಸಿ.,(ಸಂಪಾದಕರು), ೨೦೦೭, **ಇಮ್ಮಡಿ ಗುಣವರ್ಮ ಪಾರ್ಶ್ವಪಂಡಿತ, ಸಂಪುಟ ೧೪,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೭. ಬೊಮ್ಮರಸ ಪಂಡಿತ ಎಸ್, ೧೯೭೯, **ಜೈನ ಸಾಹಿತ್ಯ ಸಂಸ್ಕೃತಿ,** ವೈಶಾಲಿ ಪ್ರಕಾಶನ, ಧಾರವಾಡ

೪೮. ಬ್ರಹ್ಮಪ್ಪ ಜಿ(ಸಂಪಾದಕರು), ೨೦೦೩, **ಭರತೇಶ ವೈಭವ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೪೯. ಬ್ರಹ್ಮಪ್ಪ ಜಿ(ಅನುವಾದ), ೧೯೯೬, **ಚಾವುಂಡರಾಯ ಪುರಾಣ(ತಿಳಿಗನ್ನಡ),** ಸಿದ್ಧಾಂತ ಕೀರ್ತಿ ಗ್ರಂಥಮಾಲೆ ಶ್ರೀ ಹೊಂಬುಜ ಜೈನಮಠ, ಶಿವಮೊಗ್ಗ.

೫೦. ಮಹಾದೇವ ಪ್ರಭಾಕರ ಪೂಜಾರ ೧೯೭೬, **ಜೈನಧರ್ಮ ಪರಿಭಾಷೆ,** ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ.

೫೧. ಮಹೇಶವಾಡಿ ಬಿ.ಬಿ, ೧೯೭೭, **ಕನ್ನಡ ಜೈನ ವಾಙ್ಮಯ ವಿಚಾರ,** ಚಂದ್ರಗಂಗ ಪ್ರಕಾಶನ, ಸೇಡಬಾಳು.

೫೨. ಮಹೇಶವಾಡಿ ಬಿ.ಬಿ, ೧೯೭೯, **ಕವಿಮುಂಗರಸ ವಿರಚಿತ ನೇಮಿಜಿನೇಶ ಸಂಗತಿ,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೩. ಮಾರ್ನಾಡು ವರ್ಧಮಾನ ಹೆಗಡೆ(ಸಂಪಾದಕರು), ೨೦೧೦, **ಬಾಹುಬಲಿ ಗೀತಾಂಜಲಿ,** ಧರ್ಮಸ್ಥಳ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ, ಧರ್ಮಸ್ಥಳ

೫೪. ಮಲ್ಲೇಪುರಂ ಜಿ.ವೆಂಕಟೇಶ(ಸಂಪಾದಕರು), ೨೦೦೬, **ನಾಗವರ್ಮ ಸಂಪುಟ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೫. ಮರುಳಯ್ಯ ಸಾ.ಶಿ, ತ್ರಿವೇಣಿ ಶಿವಕುಮಾರ(ಸಂಪಾದಕರು), ೨೦೦೦, **ಕನ್ನಡ ಛಂದೋಪ್ರಬಂಧಗಳು,** ರಾಗಿಣಿ ಶಿಕ್ಷಣ ಪ್ರತಿಷ್ಠಾನ, ಬೆಂಗಳೂರು.

೫೬. ಮಿರ್ಜಿ ಅಣ್ಣಾರಾಯ, ೧೯೫೪, **ಜೈನಧರ್ಮ,** ಶಾಂತಿಸೇವಾ ಸದನ ಸೇಡಬಾಳ, ಬೆಳಗಾವಿ.

೫೭. ರಹಮತ್ ತರೀಕೆರೆ, ೨೦೦೮, **ಸಾಂಸ್ಕೃತಿಕ ಅಧ್ಯಯನ(ಸಾಹಿತ್ಯ ಪರಿಭಾಷೆ ಮಾಲೆ),** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೮. ರಹಮತ್ ತರೀಕೆರೆ(ಸಂಪಾದಕರು), ೨೦೦೦, **ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-ಧರ್ಮ ಸಂಪುಟ ೩,** ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೯. ರವೀಂದ್ರನಾಥ ಕೆ, ೨೦೦೦, **ಕನ್ನಡ ದಾಖಲು ಸಾಹಿತ್ಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೦. ರಂಗಸ್ವಾಮಿ ಎ., ೨೦೧೦, **ಕನ್ನಡದಲ್ಲಿ ತೀರ್ಥಂಕರರ ಕಾವ್ಯಗಳು,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೬೧. ರಂಗಸ್ವಾಮಿ ಎ.,(ಪ್ರಧಾನ ಸಂಪಾದಕರು)೨೦೧೦, **ಪ್ರಾಚೀನ ಕನ್ನಡ ಕಾವ್ಯ ಪ್ರಕಾರಗಳು,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೬೨. ವಸಂತಲಕ್ಷ್ಮಿ ಕೆ, ೨೦೦೬, **ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು,** ಸುಮುಖ ಪ್ರಕಾಶನ, ಬೆಂಗಳೂರು.

೬೩. ವಸಂತಮಾಲ ಜಿ.ಎನ್.(ಸಂಪಾದಕರು), ೨೦೦೫, **ಜನಪದ ಗೀತೆಗಳಲ್ಲಿ ಬಾಹುಬಲಿ,** ಚಂದ್ರಗಿಚಿಕವೆಧ ಮಹೋತ್ಸವ ಸಮಿತಿ, ಚಿಕ್ಕಬೆಟ್ಟ, ಶ್ರವಣಬೆಳಗೊಳ.

೬೪. ವಿಘ್ನರಾಜ ಎಸ್.ಆರ್, ೨೦೦೮, **ಕರ್ನಾಟಕದ ಸಾಂಸ್ಕೃತಿಕ ಜೈನಕವಿಗಳು(ಸಂಶೋಧನಾ ಮಾಲೆ),** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೫. ವಿವಿಧ ಲೇಖಕರು, ರತ್ನಾಕರವರ್ಣಿ, ೧೯೮೦, **ಕವಿ ಕಾವ್ಯ ವಿಚಾರ(ವಿಚಾರ ಸಂಕಿರಣ),** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೬. ವಿವಿಧ ಲೇಖಕರು, ೧೯೭೫, **ಕರ್ನಾಟಕ ಮತ್ತು ಜೈನ ಸಂಸ್ಕೃತಿ,** ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

೬೭. ವೆಂಕಟಾಚಲಶಾಸ್ತ್ರೀ ಟಿ.ವಿ.(ಸಂಪಾದಕರು), ೧೯೭೩, **ಕನ್ನಡ ನೇಮಿನಾಥ ಪುರಾಣ, ತೌಲನಿಕ ಅಧ್ಯಯನ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬೮. ವೆಂಕಟಾಚಲಾಶಾಸ್ತ್ರೀ ಟಿ.ವಿ.(ಸಂಪಾದಕರು), ೨೦೦೭, **ಪಂಪ ಸಂಪುಟ ೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೯. ವೆಂಕಟೇಶಮೂರ್ತಿ ಎಚ್.ಎಸ್, ೨೦೧೧, **ಕೀರ್ತನಕಾರರು**, ಸಪ್ನಬುಕ್ ಹೌಸ್, ಬೆಂಗಳೂರು.

೭೦. ವೀರಣ್ಣ ರಾಜೂರ, ೧೯೮೫, **ಕನ್ನಡ ಸಾಂಗತ್ಯ ಸಾಹಿತ್ಯ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭೧. ಶಿವಾನಂದ ಎಸ್., ೨೦೦೮, **ಕನ್ನಡ ಜೈನ ಪುರಾಣ: ಒಂದು ಸಮಗ್ರ ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭೨. ಶಿವರುದ್ರಪ್ಪ ಜಿ.ಎಸ್.(ಪ್ರಧಾನ ಸಂಪಾದಕರು), ೧೯೮೨, **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ**, ಪ್ರಸಾರಾಂಗ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭೩. ಶಿವರುದ್ರಪ್ಪ ಜಿ.ಎಸ್., ೧೯೭೪, **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟಗಳು**, ಪ್ರಸಾರಾಂಗ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

೭೪. ಶಾಮರಾಯ ತ.ಸು.(ಸಂಪಾದಕರು), **ಭರತೇಶ ವೈಭವ ಸಂಗ್ರಹ**, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ, ಮೈಸೂರು.

೭೫. ಶಿವಣ್ಣ(ಸಂಪಾದಕರು), ೧೯೯೫, **ಸ್ವರವಚನ ಸಂಪುಟ ೧**, ಶಿವರಾತ್ರೇಶ್ವರ ಧಾರ್ಮಿಕ ದತ್ತಿ ಪ್ರಕಟಣೆ, ಮೈಸೂರು.

೭೬. ಶಿವರುದ್ರಪ್ಪ ಜಿ.ಎಸ್. ೨೦೧೧ **ಕನ್ನಡ ಸಾಹಿತ್ಯ ಸಮೀಕ್ಷೆ**, ಸಪ್ನಬುಕ್ ಹೌಸ್, ಬೆಂಗಳೂರು.

೭೭. ಶಿರೂರ ಬಿ.ವಿ. ೧೯೭೬, **ಶ್ರವಣಬೆಳಗೊಳ, ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ ಮಹತ್ವ**, ಧಾರವಾಡ.

೭೮. ಶೆಟ್ಟರ್ ಎಸ್. ೧೯೮೧, **ಶ್ರವಣಬೆಳಗೊಳ**, ಮಿಥಿಕ್ ಸೊಸೈಟಿ, ಬೆಂಗಳೂರು.

೭೯. ಶಾಂತರಸ(ಪ್ರಧಾನ ಸಂಪಾದಕರು). **ತತ್ವಪದಗಳ ಪ್ರಾತಿನಿಧಿಕ ಸಂಕಲನ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮೦. ಶೆಟ್ಟರ್ ಷ, ೧೯೮೧, **ಶ್ರವಣಬೆಳಗೊಳ**, ರೂವಾರಿ ಪ್ರಕಾಶನ, ಧಾರವಾಡ

೮೧. ಶಾಂತಿನಾಥ ದಿಬ್ಬದ(ಸಂಪಾದಕರು), ೨೦೦೭, **ನಾಗಚಂದ್ರ ಸಂಪುಟ ೭**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೨. ಶಾಂತಿನಾಥ ದಿಬ್ಬದ ಮತ್ತು ಶಿವಾನಂದ(ಸಂಪಾದಕರು), **ಸಾಹಿತ್ಯ ಸಂಕಲನ ಮಾಲೆ**, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

೮೩. ಶ್ರೀಪಾದ, **ಪ್ರಸ್ತುತ ಕರ್ನಾಟಕ ಕಾವ್ಯವಿಚಾರ**, ಸಾಧನ ಪ್ರಕಾಶನ, ಶಿವಮೊಗ್ಗ.

೮೪. ಶ್ರೀಮತಿ ಎಚ್.ಎಸ್., ೧೯೯೩, **ಹಳಗನ್ನಡ ಸಾಹಿತ್ಯ ಅಧ್ಯಯನ ಸಮೀಕ್ಷೆ**, ಅಜಂತಾ ಪ್ರಕಾಶನ, ಬೆಂಗಳೂರು.

೮೫. ಸರಸ್ವತಿ ವಿಜಯಕುಮಾರ, ೧೯೯೭, **ರತ್ನತ್ರಯರು ಮತ್ತು ಜಾನಪದ**, ಬೆಂಗಳೂರು.

೮೬. ಸದಾಶಿವಪ್ಪ ಕುಂ.ಬಾ, ೨೦೦೯, **ಭಾರತೀಯ ಸಂಸ್ಕೃತಿಗೆ ಜೈನರ ಕೊಡುಗೆಗಳು**, ಕುಂ.ಬಾ. ಸುಲೋಚನಮ್ಮ ಮಾಲತೇಶ ಪ್ರಕಾಶನ, ಹರಪನಹಳ್ಳಿ.

೮೭. ಸತ್ಯವಿಠಲ್, ೨೦೦೮, **ಬಾಹುಬಲಿ(ಭಾಮಿನಿ ಷಟ್ಪದಿ)**, ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು.

೮೮. ಸಣ್ಣಯ್ಯ ಬಿ.ಎಸ್.(ಸಂಪಾದಕರು), ೨೦೦೪, **ರನ್ನಕವಿ ವಿರಚಿತ ಅಜಿತ ತೀರ್ಥಂಕರ ಪುರಾಣಂ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮೯. ಹಂದೂರ ಬಿ.ಆರ್, ೨೦೦೩, **ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ**, ತ್ವರಿತ ಮುದ್ರಣ, ಗದಗ.

೯೦. ಹಂಪ ನಾಗರಾಜಯ್ಯ, ೧೯೯೯, **ವಡ್ಡಾರಾಧನೆ ಸಮಗ್ರ ಅಧ್ಯಯನ**, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು.

೯೧. ಹಂಪ ನಾಗರಾಜಯ್ಯ, ೧೯೯೯, **ಯಾಪನೀಯ ಸಂಘ**, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೯೨. ಹಂಪ ನಾಗರಾಜಯ್ಯ, ೧೯೯೭, **ಚಂದ್ರಕೊಡೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೩. ಹಂಪ ನಾಗರಾಜಯ್ಯ, ೧೯೭೯, **ರತ್ನಾಕರನ ಹಾಡುಗಳು(ಜನಪ್ರಿಯ ಆವೃತ್ತಿ)**, ರವಿ ಮುದ್ರಣ.

೯೪. ಹಂಪ ನಾಗರಾಜಯ್ಯ, ೨೦೦೧, **ನೋಂಪಿಯ ಕಥೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೫. ಹಂಪ ನಾಗರಾಜಯ್ಯ, ೨೦೦೩, **ಅನನ್ಯ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೯೬. ಹಂಪ ನಾಗರಾಜಯ್ಯ(ಸಂಪಾದಕರು), ೨೦೦೭, **ಪೊನ್ನ-ಕಮಲಭವ ಸಂಪುಟ, ಸಂಪುಟ ೩**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೭. ಹಂಪ ನಾಗರಾಜಯ್ಯ (ಸಂಪಾದಕರು), ೨೦೦೭, **ರನ್ನ ಸಂಪುಟ, ಸಂಪುಟ ೪**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೮. ಹಂಪ ನಾಗರಾಜಯ್ಯ, ೨೦೦೮, **ಯಕ್ಷ-ಯಕ್ಷಿಯರು**, ಸಪ್ನಬುಕ್ ಹೌಸ್, ಬೆಂಗಳೂರು.

೯೯. ಹಂಪ ನಾಗರಾಜಯ್ಯ, ೨೦೧೧, **ಹೊಂಬುಜಕ್ಷೇತ್ರ ಅನುಸಂಧಾನ**, ವಿಶ್ರಾಂತ ಪ್ರಕಾಶನ, ಬೆಂಗಳೂರು.

೧೦೦. ಹಳ್ಳಿಕೇರಿ ಎಫ್.ಟಿ. ಮತ್ತು ರವೀಂದ್ರನಾಥ ಕೆ,(ಸಂಪಾದಕರು), ೨೦೦೧, **ಕನ್ನಡ ಜೈನಹಾಡುಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೧. ಹಿರೇಮಠ ಆರ್.ಸಿ.(ಸಂಪಾದಕರು), ೧೯೭೨, **ಸಕಲ ಪುರಾತನದ ವಚನಗಳು**, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೦೨. ಹಿರೇಮಠ ಆರ್.ಸಿ, ೧೯೭೩, **ಮೋಹನತರಂಗಿಣಿ**, ಕನ್ನಡ ಅಧ್ಯಯನ ಪೀಠ, ಧಾರವಾಡ

೧೦೩. ಹೆಗಡೆ ಎಲ್.ಆರ್., ೧೯೬೫, **ಹಳಗನ್ನಡ ಕವಿಗಳು**, ಜ್ಞಾನಸಾಧನ ಗ್ರಂಥಸೂಚಿ, ಉತ್ತರ ಕನ್ನಡ.

□□□



ಆದಿನಾಥ ಬಸದಿ, ಅಗಳಿ, ಅನಂತಪುರಂ ಜಿಲ್ಲೆ (ಆಂಧ್ರಪ್ರದೇಶ)



ನೇಮಿನಾಥ ಬಸದಿ, ಬಂಗವಾಡಿ, ದಕ್ಷಿಣ ಕನ್ನಡ ಜಿಲ್ಲೆ



ನೇಮಿನಾಥ ಬಸದಿ, ಬಿದರಿ, ತುಮಕೂರು ಜಿಲ್ಲೆ



ಚಂದ್ರಪ್ರಭ ಬಸದಿ, ಹಿರಿಯಂಗಡಿ, ಉಡುಪಿ ಜಿಲ್ಲೆ



ಚತುರ್ವಿಶಂತಿ ಬಸದಿ, ಕಾರ್ಕಳ



ಮಲ್ಲಿನಾಥಸ್ವಾಮಿ ಬಸದಿ, ಮಧುಗಿರಿ, ತುಮಕೂರು ಜಿಲ್ಲೆ



ಸುಪಾರ್ಶ್ವನಾಥ ಬಸದಿ, ಮಿಡಿಗೇಶಿ, ತುಮಕೂರು ಜಿಲ್ಲೆ



ಸಾವಿರ ಕಂಬದ ಬಸದಿ, ಮೂಡಬಿದರಿ



ಪಾರ್ಶ್ವನಾಥ ಬಸದಿ, ನಿಡುಗಲ್ಲು, ತುಮಕೂರು ಜಿಲ್ಲೆ



ಶಾಂತಿನಾಥ ಬಸದಿ, ನಿಟ್ಟೂರು, ತುಮಕೂರು ಜಿಲ್ಲೆ



ನೇಮಿನಾಥ ಬಸದಿ, ಪೆನುಗೊಂಡ, ಅನಂತಪುರಂ ಜಿಲ್ಲೆ (ಆಂಧ್ರಪ್ರದೇಶ)



ಪಾರ್ಶ್ವನಾಥ ಬಸದಿ, ರತ್ನಗಿರಿ, ಅನಂತಪುರಂ ಜಿಲ್ಲೆ (ಆಂಧ್ರಪ್ರದೇಶ)



ಬ್ರಹ್ಮದೇವರು, ಶ್ರವಣಗುಂಡ, ದಕ್ಷಿಣ ಕನ್ನಡ ಜಿಲ್ಲೆ



ತೇಲುಗುಂಡು ಬಸದಿ (ಬ್ರಹ್ಮದೇವರು), ಶ್ರವಣಗುಂಡ, ದಕ್ಷಿಣ ಕನ್ನಡ ಜಿಲ್ಲೆ




ಜೈನ ಮಠ, ಹೊಂಬುಜ, ಶಿವಮೊಗ್ಗ ಜಿಲ್ಲೆ



ನೇಮಿನಾಥ ಬಸದಿ. ವರಾಂಗ. ದಕ್ಷಿಣ ಕನ್ನಡ ಜಿಲ್ಲೆ

